# ಪ್ರಕಾಶಕರ ಬಿನ್ನಹ.



ಈ ಕಾದಂಬರಿಯು ರಾಜಕಾರಣ ಸಂಬಂಧದ್ದಿದ್ದರೂ ಇದರಲ್ಲಿ ಬಾರದ ವಿಷಯಗಳೇ ಇಲ್ಲೆನ್ನಬಹುದು. ಆದರಿಂದ ಇದು ಎಲ್ಲ ವಾಚಕರಿಗೂ ಪ್ರಿಯವಾಗಿರುವದು. ಅಂತೆಯೇ 'ನವಲಪುರದ ಸಂಸ್ಥಾನಿಕ' ಪುಸ್ತಕವು ಪುಣೆಯ ಕೇಸರೀ ಪತ್ರದಲ್ಲಿ ಭಾಗಶಃ ಮುದ್ರಣಗೊಂಡು ಮುಗಿಯುವಷ್ಟರಲ್ಲಿಯೇ ಪುಸ್ತಕ ರೂಪದಿಂದ ಸಿದ್ಧವಾದ ಕೂಡಲೆ ಕಳಿಸಬೇಕೆಂದು ಬಂದ ಅಗಣಿತ ಬೇಡಿಕೆಗಳನ್ನು ಪೂರೈಸುವದಕ್ಕೆಂದು ಶ್ರೀ ಕೇಳಕರರು ಈ ಪುಸ್ತಕವನ್ನು ಏಕಕಾಲಕ್ಕೆ ಸಾವಿರಗಟ್ಲೆ ಪ್ರತಿಗಳ ಎರಡು ಆವೃತ್ತಿಗಳನ್ನು ಮುದ್ರಿಸಿ ಪ್ರಕಟಿಸಬೇಕಾಯಿತು!! ಇದರ ಮೇಲಿಂದ ಈ ಪುಸ್ತಕದ ಮಹತ್ವವು ಚೆನ್ನಾಗಿ ಒಡೆದು ಕಾಣುತ್ತದೆ. ಈ ಪುಸ್ತಕದ ಬಗ್ಗೆ ಮಹಾನ್ ಮಹಾನ್ ವಿದ್ವಾಂಸರು ಸದಭಿಪ್ರಾಯ ಪಟ್ಟಿರುತ್ತಾರೆ.

ಇಂಥ ಉದ್ಬೋಧಕವಾದ ಈ ಕಾದಂಬರಿಯನ್ನು ಕನ್ನಡ ವಾಚಕರ ಸಲುವಾಗಿ ನಾವು ಶ್ರೀ ಕೇಳಕರರ ಅಪ್ಪಣೆ ಪಡೆದು ಕನ್ನಡಕ್ಕೆ ಪರಿವರ್ತಿಸಿ ಪ್ರಕಟಿಸಿರುತ್ತೇವೆ. ಈ ಮಾದರಿಯ ಕಾದಂಬರಿಯು ಕನ್ನಡದಲ್ಲಿ ಇದೇ ಮೊದಲನೆಯದೆನ್ನಬಹುದು. ಕಾರಣ ಇದನ್ನು ಪ್ರತಿಯೊಬ್ಬ ಕನ್ನಡಿಗರು, ಪ್ರಾಮುಖ್ಯವಾಗಿ ರಾಜಕೀಯ ಚಟುವಟಿಕೆಯವರು ಅತ್ಯವಶ್ಯ ಓದಬೇಕೆಂದು ಸೂಚಿಸುತ್ತೇವೆ; ಹಾಗು ಓದುಗರು ಎರಡೆರಡು ಸಾರೆ ಓದಿ ತಮ್ಮ ಪ್ರಾಂಜಲವಾದ ಅಭಿಪ್ರಾಯವನ್ನು ಬರೆದು ತಿಳಿಸಬೇಕೆಂದು ಕೋರುತ್ತೇವೆ.

ಆನಂದವನ,<br>
ತಾ|| ೨೦-೧೦-೩೫ } ಪ್ರಕಾಶಕ.



# ಅನುಕ್ರಮಣಿಕೆ.



# ಚೋದ್ಯಪುರದ ಚೋಜಿಗರಾಯ!

## ೧ ಗೆಳೆಯರ ಹಳೇ ನೆನಪು.

ಈ ಚೋದ್ಯಪುರ ಪಟ್ಟಣಕ್ಕೆ 'ಚೋದ್ಯಪುರ'ವೆಂಬ ಅಂಕಿತನಾಮವನ್ನು ಇಡುವಾಗ ಅದನ್ನು ಯಾರು, ಯಾವ ಚೋಜಿಗದ ಉದ್ದಿಶ್ಯವಾಗಿಟ್ಟಿರಬಹುದೆಂಬದು ತಿಳಿಯದಾಗಿದೆ; ಆದರೆ ಆ ಹೆಸರಿಟ್ಟ ನಂತರದ ಐತಿಹ್ಯದಲ್ಲಿ ಮಾತ್ರ ಒಂದು ಸೋಜಿಗವು ಉಂಟಾದದ್ದೇನೋ ನಿಜವು; ಮತ್ತು ಆ ಚೋಜಿಗದ ಕಥೆಯನ್ನೇ ನಾವೀಗ ನಮ್ಮ ವಾಚಕರಿಗೆ ತಿಳಿಸತಕ್ಕವರಿರುತ್ತೇವೆ. ಸೋಜಿಗವು ನಿಜವಾಗಿಯೂ ದೃಷ್ಟಿಯಲ್ಲಿರುತ್ತದೆ; ಅದು ಸೃಷ್ಟಿಯಲ್ಲಿರುವದಿಲ್ಲ. ಪ್ರತಿಭಾಸಂಪನ್ನ ಮನುಷ್ಯನಿಗೆ ನೋಡಿದತ್ತೆಲ್ಲ ಆಶ್ಚರ್ಯವೇ ಆಶ್ಚರ್ಯವಾಗಿ ಕಾಣುವದು. ಹಾಗಿರದಿದ್ದರೆ ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಕಂಡೂಕಂಡು ಯಾವನೊಬ್ಬ ಒಡಬಂಡೇಶ್ವರನು:—"ದೇವರೇ! ಇದೇ ಏನು, ನೀನೊಳ್ಳೇ ಸೋಜಿಗದ್ದೆಂದು ತೋರಿಸಿದುದು! ಚಿಕ್ಕಮಕ್ಕಳು ಕೂಡ ಇಂಥ ವಿಕ್ಷಿಪ್ತ ಚಿತ್ರಗಳನ್ನು ಪಾಟಿಯ ಮೇಲೆ ದಿನಾಲು ತೆಗೆಯುತ್ತಿರುತ್ತವೆ" ಎಂದಂದಾನು.

ಯಾವುದರ ಬಗ್ಗೆ ಚರ್ಚೆಯೇ ಆಗಿಲ್ಲವೋ ಅಂತಹ ಸಂಗತಿಯು ಲೋಕದಲ್ಲಿಲ್ಲವೇ ಇಲ್ಲ. ಈ ಚೋದ್ಯಪುರದ ಹೆಸರಿನ ಚರ್ಚೆಯು ಇತ್ತೀಚೆಗೊಮ್ಮೆ ನಡೆದಾಗ ಒಬ್ಬ ನಾಗರಿಕನು: "ಒಂದರ ಹಿಂದೊಂದರಂತೆ ಗತಿಸಿದ ಐದು ಪೀಳಿಗೆಯ ನಿಗ್ರಹದ ರಾಜಸತ್ತೆಯ ಕಷ್ಟಗಳನ್ನು ಸಹಿಸಿಯೂ ಇಲ್ಲಿಯ ಪ್ರಜೆಗಳು ಈ ಸಂಸ್ಥಾನವನ್ನು ಹೇಗೆ ಉಳಿಯಗೊಟ್ಟರೆಂಬ ಸಂಗತಿಯು ಆಶ್ಚರ್ಯಕರವೇ ಸರಿ" ಎನ್ನಲು, "ಐದು ಪೀಳಿಗೆಯ ಬಳಿಕಾದರೂ ಮಾನವ ಶೀಲದ ಆಶದೋರುವ ರಾಜನು ಈ ಪಟ್ಟಣದ ಜನರಿಗೆ ಲಭಿಸಿದ್ದೇ ಸೋಜಿಗವು!" ಎಂದು ಮತ್ತೊಬ್ಬನು ಹೇಳಿದನು. ಚೋದ್ಯಪುರ ಪಟ್ಟಣದ ಸುತ್ತುಮುತ್ತಲಿನ ಸೃಷ್ಟಿ ಸೌಂದರ್ಯವು ನಿಜವಾಗಿಯೂ ಆಶ್ಚರ್ಯಗೊಳಿಸುವಂತಹದಿದ್ದಿತು; ಆದರೆ ಪಟ್ಟಣದ ಜನರು ಮಾಡಿದ ಪಟ್ಟಣದ ಅಂತಃಸ್ವರೂಪದ ಹೊಲಸು ಮತ್ತು ದುರ್ಗಂಧಗಳು ಕೂಡ ಸೋಜಿಗಗೊಳಿಸುವಂಥವೇ ಆಗಿದ್ದವು. ಇಂತಹ ಚೋಜಿಗಗಳ ಬಗ್ಗೆ ನಾವು ಮಾತಾಡುವದಾದರೂ ಎಷ್ಟು? ಆದುದರಿಂದ ಇಂದು ಆ ಪಟ್ಟಣದಲ್ಲಿ ಪ್ರತ್ಯಕ್ಷವಾಗಿ ಏನು ನಡೆದಿದೆಯೆಂಬುದನ್ನೇ ನೋಡುವಾ ನಡೆಯಿರಿ.

ನಮ್ಮ ಕಡೆಯ ಸಂಸ್ಥಾನಿಕ ಜನರ ರಾಜಧಾನಿಯೆಂದರೆ, ಅದರ ರಚನೆಯು ಎಲ್ಲೆಲ್ಲಿಯೂ ಬಹುಶಃ ಒಂದೇ ಪಡಿಕಟ್ಟಿನದಾಗಿರುವದು. ಅರಮನೆಯ ಹೆಬ್ಬಾಗಿಲದೆದುರಿಗೆ ಹೆಚ್ಚಾಗಿ ಉದ್ದಗಲುಳ್ಳ ಒಂದು ಬೀದಿಯಿರುವದು. ಅದರ ಎಡಬಲಗಳಲ್ಲಿ ನಡುನಡುವೆ ಪಟ್ಟಣದೊಳಗಿನ ಪ್ರಸಿದ್ಧ ವ್ಯಕ್ತಿಗಳ ಮತ್ತು ಶೆಟ್ಟಿ ಸಾವುಕಾರರ ಮನೆಗಳಿರುತ್ತವೆ ಆ ಬೀದಿಯಲ್ಲೇ ಒಂದಾನೊಂದು ಕಾರಂಜಿಯಿರುವದು. ಊರೊಳಗಿನ ಪ್ರಸಿದ್ಧ ದೇವ-ದೇವಸ್ಥಾನವೂ ಅದೇ ಬೀದಿಯಲ್ಲಿ. ಪರಸ್ಥಳದ ಮನುಷ್ಯನು ಆ ಊರ ಬೇರೆ ಕಡೆಯ ಅಗಸೆಯಿಂದ ಈ ಬೀದಿಯಲ್ಲಿ ಹೊಕ್ಕು ಕೆಲ ಮಾರ್ಗವನ್ನು ಕ್ರಮಿಸಿದನೆಂದರೆ ಅವನಿಗೆ ಅದು ಬಹು ದೊಡ್ಡ ಪಟ್ಟಣವಿರುವದೆಂದು ಅನಿಸುವದು; ಆದರೆ ಆ ರಾಜಬೀದಿಯನ್ನು ಬಿಟ್ಟು ಆತನು ತುಸ ಬದಿಗಾದನೆಂದರೆ ಆತನಿಗೆ ಆ ಪಟ್ಟಣದ ನಿಜವಾದ ಸ್ವರೂಪವು ತಿಳಿದು ಬರುವದು. ರಾಜಬೀದಿಯು ೧೦೦ ಫೂಟು ಅಗಲಾಗಿದ್ದರೆ, ಅದಕ್ಕೆ ಬಂದು ಕೂಡುವ ಓಣಿಗಳು ಹದಿನೈದು ಫೂಟು ಕೂಡ ಅಗಲಿರಲಾರವು; ಎತ್ತು ಇಲ್ಲವೆ ಕುದುರೆಯ ಎರಡು ಗಾಡಿಗಳು ಎದರು-ಬದರಿನಿಂದ ಸರಿಯಾಗಿ ಹಾಯಲಾರವು. ಎದರು ಬದರಿನ ವಾಹನಗಳ ಪಶುಗಳು ತುಸ ಒಗರಿನ ಪ್ರಾಣಿಗಳಾಗಿದ್ದರೆ ಆ ಚಿಕ್ಕ ಓಣಿಯಲ್ಲಿ ಅವುಗಳ ಕಾಳಗಕ್ಕೇ ಪ್ರಾರಂಭವಾದೀತು. ರಾಜಬೀದಿಯು ಮಾತ್ರ ಉಡುಗಿ ಜಳಜಳ ಮಾಡಿರುವಂತಹದು. ಮಿಕ್ಕ ಓಣಿಗಳಲ್ಲಿ ಕಸದ ಗುಡ್ಡೆಗಳನ್ನು ತುಳಿಯುತ್ತ, ಹೇಸಿಗೆಯನ್ನೂ ಬಚ್ಚಲ ಹರಿಗಳನ್ನೂ ದಾಟುತ್ತ ಮೂಗು ಮುಚ್ಚಿಕೊಂಡೇ ಅಡ್ಡಾಡಬೇಕಾಗುತ್ತಿರುತ್ತದೆ. ಆ ಓಣಿಗಳನ್ನು ದಾಟಿ ಆಚೇ ಬದಿಗಾದರಂತೂ ಅಲ್ಲಿ ದಾರಿಯೇ ಇಲ್ಲ. ಕೇವಲ ಸಂದಿಗಳು! ಕಂಡ ಕಂಡ ಹಾಗೆ ಸೊಟ್ಟಡೊಂಕಾಗಿ ಕಟ್ಟಿದ ಮನೆಗಳು. ಅವುಗಳ ಮೂಲಿಗಳಿಂದ ಕೂಡಿದ ಸಮೂಹದೊಳಗಿಂದ ಇಲ್ಲವೆ ಚಕ್ರವ್ಯೂಹದೊಳಗಿಂದ ಹೇಗಾದರೂ ದಾರಿ ತೆಗೆಯುವದು. ಹಾಗೆ ಅದರೊಳಗಿಂದ ಪಾರಾಗಿ ಹೊರಬಿದ್ದ ಕೂಡಲೆ ಡಬಗಳ್ಳಿಯೇ ಡಬಗಳ್ಳಿಯು! ಸಂಸ್ಥಾನೀ ರಾಜಧಾನಿಯು ಒಂದೇ ಚಿಕ್ಕ ಪಟಾಂಗಣದಲ್ಲಿ ವಿಲಾಯತಿಯೊಳಗಿನ ರೋಲ್ಸ ರಾಯಿಸ ಮೋಟರು, ಒನಪಿನಿಂದ ನಡೆಯುವ ಆನೆ, ಕುಟುಂಬ ಸಹಿತವಾಗಿ ತಿಪ್ಪೆಯನ್ನು ಸ್ವಚ್ಛಗೊಳಿಸುವ ಸೂಕರ ಮತ್ತು ನಮ್ಮಲ್ಲಿಯವರ ಪ್ರೀತಿಯ ಡಬಗಳ್ಳಿ ಇವುಗಳ ಸಮಾವೇಶವು ಹೇಗೆ ಬೊಬ್ಬಾಟವಿಲ್ಲದಂತೆ-ಸಹೋದರರಂತೆಯೂ ಕಕ್ಕ ಮಕ್ಕಳಂತೆಯೂ-ಸುಖದಿಂದ ಆಗಿರುತ್ತದೆ.

ಜೋಧ್ಯಪುರ ಪಟ್ಟಣದ ಪೂರ್ವದಿಕ್ಕಿಗೆ ಮಾತ್ರ ಒಂದು ರಮ್ಯವೂ ಶೋಭಾಯಮಾನವೂ ಆದ ವಿಸ್ತೀರ್ಣ ಉದ್ಯಾನವಿದ್ದಿತು. ಅದರಲ್ಲಿ ಎರಡು ಪ್ರಾಕಾರಗಳಿದ್ದವು. ಒಳ್ಳೇ ದಟ್ಟವಾದ ಗಿಡಗಳಿಂದ ತುಂಬಿದ ಒಂದು ತೋಪು

ಇದ್ದು, ಅದರಲ್ಲಿ ತನ್ನಷ್ಟಕ್ಕೆ ತಾನೇ ಹುಟ್ಟಿದ ಹಲವು ಬಗೆಯ ಆಕಾಶಚುಂಬಿತ ವೃಕ್ಷಗಳಿದ್ದವು. ನಡುವಗಲಲ್ಲಿ ಕೂಡ ಸೂರ್ಯಕಿರಣಗಳು ಅದರಲ್ಲಿ ಬಹು ಪ್ರಯಾಸದಿಂದಲೇ ಸೇರುವಂತಿತ್ತು. ಇದರಂತೆ ಆ ತೋಪಿನ ಆಚೇಬದಿಗೆ ಕೆಲ ವಂತರದ ಮೇಲೆ ಒಂದು ಬಹು ದೊಡ್ಡ ಸಮನೆಲದ ಮೈದಾನವಿದ್ದಿತು. ಅದ ರಲ್ಲಿ ಪಟ್ಟಣದೊಳಗಿನ ನೂರಾರು ಸಣ್ಣ ದೊಡ್ಡ ಹುಡುಗರು ಎಲ್ಲ ಬಗೆಯ ಆಟವನ್ನಾಡುತ್ತಿದ್ದರು; ಹಾಗು ಯಾರಿಗೆ ಸ್ವಂತದ ಕುದುರೆಗಳಿದ್ದವೋ ಆ ತರು ಣರು ಆ ಮೈದಾನಿನಲ್ಲಿ ಕುದುರೆಯ ಸವಾರಿಯನ್ನು ಮಾಡುತ್ತಿದ್ದರು. ತೋಪು ಮೈದಾನುಗಳ ನಡುವಿನ ಪ್ರದೇಶದಲ್ಲಿ ಕುಶಲ ತೋಟಿಗನಿಂದ ನಿರ್ಮಿಸಲ್ಪಟ್ಟ ಚಿಕ್ಕದೇ, ಆದರೆ ಸುಂದರವಾದ ಉಪವನವಿದ್ದು, ಅದರಲ್ಲಿ ಹಳೇ ಪದ್ಧತಿಯ ಎಲ್ಲ ಬಗೆಯ ಹೂವಿನ ಗಿಡಗಳು ಯಾವ ಋತುವಿನಲ್ಲಿಯೂ ಸೌಂದರ್ಯ ಹಾಗು ಸುಗಂಧಗಳಿಗೆ ಕೊರತೆಯಾಗದಂತೆ ಹಚ್ಚಲ್ಪಟ್ಟಿದ್ದವು. ಆ ಉಪವನ ಪ್ರದೇಶದ ಮಧ್ಯದಲ್ಲಿ ಒಂದು ಪ್ರಾಚೀನ ಕಾಲದ ಶಿವಾಲಯವಿದ್ದಿತು. ಅದರ ಪ್ರಾಕಾರ ದೊಳಗಿನ ಬುರುಜಿನಂತಹ ಒಂದು ಎತ್ತರ ಸ್ಥಳದಲ್ಲಿ ಚಚ್ಚೌಕಾದ ಕಲ್ಲುಕಟ್ಟೆ ಯಿದ್ದಿತು. ಸಂಧ್ಯಾಕಾಲದ ವಾಯುಭಕ್ಷಣಕ್ಕೆಂದು ಬರುವ ಋಷಿ-ಮೋಜಿನ ಜನರು ಅದರ ಮೇಲೆ ಕುಳಿತು ಸಂಭಾಷಿಸುತ್ತಿದ್ದರು. ತಾತ್ಪರ್ಯವೇನಂದರೆ, ಆ ಹತ್ತೆಂಟು ಗುಂಠೆಯ ಭೂಪ್ರದೇಶವು ಊರೊಳಗಿನ ಚಿಕ್ಕ ದೊಡ್ಡ ಸ್ತ್ರೀ-ಪುರುಷರಿಗೆ ಎಲ್ಲ ಬಗೆಯಿಂದಲೂ ಪ್ರಿಯಕರವಾಗಿದ್ದಿತು. ಅದರಿಂದ ಬೆಳಗಿನ ಜಾವದಿಂದ ನಾಲ್ಕಾರು ಗಳಿಗೆ ರಾತ್ರಿಯ ವರೆಗೂ ಆ ಪ್ರದೇಶದ ಕಡೆಗೆ ಜನರ ರಹದಾರಿಯು ಸಂತತವಾಗಿರುತ್ತಿತ್ತು.

ಇಂದು ಆ ಶಿವಾಲಯದ ಬಳಿಯ ಕಲ್ಲುಕಟ್ಟೆಯ ಮೇಲೆ ಕುಳಿತು ಇಬ್ಬರು ತರುಣರು ಮೆಲ್ಲಮೆಲ್ಲನೆ ಮಾತನಾಡುತ್ತಿದ್ದರು. ಆಗ ಸೂರ್ಯನು ಅಸ್ತಮಿಸಿ ಚಂದ್ರನು ಉದಯಿಸತೊಡಗಿದ್ದನು. ವಾತಾವರಣದಲ್ಲಿ ಉಷ್ಣತೆಯು ಹೆಚ್ಚಾಗಿ ದ್ದಿತು; ಆದರೂ ಅದರಲ್ಲಿಯೇ ಯಾವ ಒಂದೊಂದು ನಸುಗಾಳಿಯ ತೆರೆಯು ನಡುನಡುವೆ ಬರುತ್ತಿತ್ತೋ, ಅದರೊಡನೆ ಆ ಉಪವನದೊಳಗಿನ ನಿಶಿಗಂಧದ ಹಾಗು ನಿಶೆಯಲ್ಲೇ ಅರಳುವ ಹೂವಿನ ಗಿಡಗಳಿಂದ ಆಗ ತಾನೆ ಅರಳುತ್ತಿದ್ದ ಹೂಗಳ ಮಾದಕ ಸುಗಂಧವೂ ಬಂದು ಮನಸ್ಸಿಗೆ ಆಹ್ಲಾದವುಂಟಾಗುತ್ತಿತ್ತು. ಆ ತರುಣರಲ್ಲಿ ಒಬ್ಬನು:—ಭಾನ್ಯಾ, ಇಂದು ನನ್ನ ನಿನ್ನ ಭೆಟ್ಟಿಯು ಈ ನಮ್ಮ ಅಕ್ಕರದ ಸ್ಥಳದಲ್ಲಿ ಆದ ಕೂಡಲೆ ನನಗೆ ನನ್ನ ಚಿಕ್ಕಂದಿನ ನೆನಪಾಯಿತು.

ಭಾ:—ನನಗೂ ಅದೇ ನೆನಪಾಯಿತೋ ಶಂಕರಾ! ಆದರೆ ಈಗ ನಮ್ಮ ಆ ನೆನಪು ಮಾತ್ರ ಉಳಿಯಿತು. ಆ ಬಾಲ್ಯತ್ವವು ಎಂದೋ ಹೊರಟು ಹೋ-

ಯಿತು. ಈ ಬಗ್ಗೆ ನಿನಗೆ ಕೆಡಕೆನಿಸುವದಿಲ್ಲವೇ?

ಶಂ:—ಆ ನೆನಪು ಮನಸ್ಸಿನಲ್ಲಿರುವವರೆಗೆ ಅಷ್ಟರಮಟ್ಟಿಗೆ ಅದು ಬಾಲ್ಯತ್ವವೇ ಅಲ್ಲವೇನು? ಇತ್ತ ನೋಡು, ಈಗ ನನ್ನ ಮನಃಚಕ್ಷುಗಳಿಗೆ ಕಾಣಿಸುವದೇನಂದರೆ—ನೀನೂ ನಾನೂ ನಮ್ಮ ನಮ್ಮ ಮನೆಯ ದೇವರಿಗೆ ಹೂಗಳನ್ನೆತ್ತುವ ಸಲುವಾಗಿ ಹೀಗೆ ಸಂಜೆಯ ಮುಂದೆ ಈ ಬದಿಯ ಉಪವನಕ್ಕೆ ಬಂದಿರುವೆವು.....

ಭಾ:—ನೆನಪಿನದೇ ಆದರೆ, ನಾನೂ ನಿನ್ನ ಜೊತೆಗೆ ಬೇಕಾದಷ್ಟು ಹೇಳಬಲ್ಲೆನು. ಈ ಬಗ್ಗೆ ನಿನ್ನ ಜಂಭವೇ ಬೇಡ.

ಶಂ:—ಹಾಗಾದರೆ ಹೇಳು ನೋಡೋಣ.

ಭಾ;—ನಾವು ಹೂವೆತ್ತಬಂದಿದ್ದೇವೆ; ಆದರೆ ಹೂವೆತ್ತುವ ಇಬ್ಬರ ಪಾಲಿನ ನಿರುಪದ್ರವೀ ಕೆಲಸವನ್ನು ನಾನೊಬ್ಬನೇ ಮಾಡುತ್ತಿರುವಾಗ, ಗಿಡಗಳಲ್ಲಡಗಿರುವ ಹಕ್ಕಿಗಳ ಹುಲ್ಲಿನ ಗೂಡುಗಳನ್ನು ಕೆಡವಿ, ಮಾವಿನ ಕಾಯಿಗಳನ್ನು ತೋಟಿಗನ ಕಣ್ಣುತಪ್ಪಿಸಿ ಕೊಯ್ದುಕೊಳ್ಳುವ ಇಬ್ಬರು ಪಾಲಿನ ಎದೆಗಾರಿಕೆಯ ಕೆಲಸವನ್ನು ನೀನೊಬ್ಬನೇ ಮಾಡುತ್ತಿರುವೆ.....

ಶಂ:--ಆದರೆ ಅವುಗಳನ್ನು ಕೊಯ್ದುಕೊಂಡ ಬಳಿಕ ನೀನು ನಿನ್ನ ಬಳಿಯ ಹೂಗಳೊಳಗಿನ ಅರ್ಧ ಹೂಗಳನ್ನು ನನಗೆ ಕೊಡುತ್ತಿರುವೆ; ಹಾಗು ನಾನು ನನ್ನ ಬಳಿಯ ಮಾವಿನ ಕಾಯಿಗಳಲ್ಲಿಯ ಅರ್ಧ ಕಾಯಿಗಳನ್ನು ನಿನಗೆ ಕೊಡುತ್ತಿರುವೆ....

ಭಾ:—ಮತ್ತು ತೋಟಿಗನು ಸಂಶಯದಿಂದ ಗದ್ದರಿಸಿದ ಕೂಡಲೆ, ನೀನು ಒಳ್ಳೇ ದಿಟ್ಟತನದಿಂದ ಇಮ್ಮಡಿ ಆವೇಶಗೊಂಡು ಅವನ ಮೇಲೆ ಏರಿ ಹೋಗಿ: "ಖಾಸಗೀ ಕಾರಭಾರಿಗಳಿಗೆ ಹೇಳಿ ನಿನ್ನ ಮೈಎಲವು ಸಡಲಿಸೇನು" ಎಂದು ಬಾಯಿಂದ ಅನ್ನುತ್ತಿರಲಿಕ್ಕೆ ಕೈಯಿಂದ ಜೇಬಿನೊಳಗಿನ ಮಾವಿನ ಕಾಯಿಗಳನ್ನು ಮೆಲ್ಲ ಮೆಲ್ಲನೆ ಹಿಚುಕಿ ನೋಡುತ್ತಿರುವೆ!

ಶಂ:—ಅಹುದೋ-ಅಹುದು. ಸರಕಾರೀ ತೋಟದೊಳಗಿನ ಮಾವಿನ ಕಾಯಿ ಕದಿಯಲಿಕ್ಕೆ ಪ್ರತಿಯೊಬ್ಬ ಚಿಕ್ಕಹುಡುಗನಿಗೆ ಹಕ್ಕೇ ಇರುತ್ತದೆ. ಆಗಿನ ಆ ಕಳವಿನ ಬಗ್ಗೆ ನನಗೆ ಇಂದಿಗೂ ಹೇಯವೆನಿಸುವದಿಲ್ಲ.

ಭಾ:—ಎಲಾ, ಆಗಲಾದರೂ ಅದು ಕಳವೆಂದು ಎಲ್ಲಿ ನಿರ್ಣಯಿಸಲ್ಪಟ್ಟಿತ್ತು? ನಿನಗೆ ಸ್ಮರಿಸುವದಿಲ್ಲವೇ ಅದು, ನಾನೂ ನೀನೂ ಆ ತೋಟಿಗನೊಡನೆ ನ್ಯಾಯಬಾಡಿ-ಕಡಿದಾಡುತ್ತಿರುವಷ್ಟರಲ್ಲಿ ಆಕಸ್ಮಿಕವಾಗಿ ಖಾಸಗೀ ಕಾರಭಾರಿಸಾಹೇಬರು ನಿಜವಾಗಿಯೇ ಆ ಉಪವನದ ಬಾಗಿಲಿಗೆ ಬಂದರೆಂಬದು?............

ಶಂ:-ಹೌದಲೇ-ಹೌದು; ಮತ್ತು ಅವರ ಜೊತೆಗೆ ಖುದ್ದ ಸಂಸ್ಥಾನಿಕರೂ ಇದ್ದರು! ನಾವು ಅವರ ಪರಿಚಯದವರೆಂದು ಅವರಿಬ್ಬರೂ ನಮ್ಮ ಬಗ್ಗೆ ಕೌತುಕ

ಪಟ್ಟರು.

ಭಾ:—ಆದರೆ ನಿಷ್ಣಾತ ಪತ್ತೇದಾರರಂತೆ "ರಾವಸಾಹೇಬ, ಇಂದು ಎಷ್ಟು ಮಾವಿನಕಾಯಿ ಕೆಡವಿದಿರಿ?" ಎಂದು ಅದೇ ವಿಷಯದ ಸವಾಲು ನನಗೂ ನಿನಗೂ ಕೂಡಿಯೇ ಅವರು ಹಾಕಿದರು! ಆ ಮೇಲೆ ಕೇಳುವದೇನು? ಆ ಧೂರ್ತ ತೋಟಿಗನು ಒಳ್ಳೇ ಹೊಯ್ಮಾಲಿತನದಿಂದ ಸಂಸ್ಥಾನಿಕರಿಗೆ ಮುಜುರೆ ಮಾಡುತ್ತ:—ಹುಡುಗರೇ ಅವರು! ಮಾವಿನ ಕಾಯಿ ತಿಂದರೆ ಅವರ ಹಲ್ಲುಗಳು ಇನ್ನೂ ಚಳಿಯುವದಿಲ್ಲವಲ್ಲ! ಅಂದಮೇಲೆ ಅವರೇ ಅವುಗಳನ್ನು ಕರಕರನೆ ತಿನ್ನಬೇಕು! ಮತ್ತು ಅದಕ್ಕಾಗಿ ಕದಿಯಲೂ ಬೇಕು! ನಮ್ಮಂತಹ ಮುದುಕರಿಗೆ ಯಾರಾದರೂ ಕರೆದು ಮಾವಿನಕಾಯಿ ಕೊಟ್ಟರೂ ನಮ್ಮಿಂದ ಅವುಗಳನ್ನು ತಿನ್ನುವದಾಗುವದೇ ಸರಕಾರ!" ಎಂದು ಹೇಳಿದನು.

ಶಂ:—ಬಳಿಕ ಅವರೆಲ್ಲರೂ ನಕ್ಕರು! ಮತ್ತು ನಾವೂ ಒಳ್ಳೇ ಸಂಭಾವಿತತನದ ವೇಷದಿಂದ ಸಂಸ್ಥಾನಿಕರಿಗೆ ನಮುಸ್ಕಾರ ಮಾಡಿ, ಅವರು ದೂರ ಹೊರಟು ಹೋದ ಬಳಿಕ ಅವರನ್ನಣಕಿಸುತ್ತ ಹೊರಟು ಹೋಗಲಿಲ್ಲವೇ?

ಭಾ:—ಅಹುದು. ಅದು ಸರಿಯೇ. ಸಂಸ್ಥಾನಿಕರಾದರೇನು? ಅವರು ಸಂಭಾವಿತತನದ ವೇಷತಾಳುವವರೇ ಆಗಿದ್ದರಲ್ಲವೇ? ಅವರ ಆ ಕುಂಬಾರನ ತಿಗರಿಯಂತಹ ಬಹು ದೊಡ್ಡ ಪಾವಾಡವೇನು?—

ಶಂ:—ತಲೆಶೂಲಿಯೆದ್ದಾಗ ಬಡಕೊಳ್ಳುವ ಶುಂಠಿಯ ಪಟ್ಟಿಯಂತಹ ಭವ್ಯವಾದ ಗಂಧದ ಬೊಟ್ಟೇನು?

ಭಾ:—ಅವರ ಆ ಉದ್ದಾದ ಕಲ್ಲಿಮೀಸೆಗಳೇನು? ಅವುಗಳ ಹುರಿಕಟ್ಟೇನು? ಅಯ್ಯಯ್ಯಪ್ಪಾ!

ಶಂ:—ಎಲೋ, ಆಗಿನ ಕಾಲದ ವೈಭವವೆಲ್ಲ ಕೂದಲು ಬೆಳಿಸುವದರಲ್ಲಿಯೇ ಇದ್ದಿತು. ಈಗಿನವರ ಕಲ್ಪನೆಗಳು ವಿಪರೀತವಾದವೆಂಬದನ್ನು ಬಿಟ್ಟುಬಿಡು. ನಮ್ಮ ಆಧುನಿಕ ಸಂಸ್ಥಾನಿಕರ ಮುಸುಡೆಯ ಮೇಲೆ ಒಂದಾದರೂ ಮೀಸೆಯು ಕೂದಲಿರುವದೇ? ಮತ್ತು ನನ್ನ ನಿನ್ನ ಮುಖಗಳ ಮೇಲಾದರೂ....

ಭಾ:—ಅದರಂತೆಯೇ ಬೇರೆ ರಿವಾಜುಗಳೂ. ಸಂಸ್ಥಾನಿಕರ ಮುಂದೆ ಮುಂದೆ ನಡೆಯುವ ಪಟ್ಟೇಯವನ ನಡುವಿಗೆ ಬಿಗಿದ ಶುದ್ಧ ಜರದ ಶೆಲ್ಲೆಯೂ, ಬೆಳ್ಳಿಯದಿದ್ದರೂ ಬಂಗಾರದ ಮುಲಾಮು ಮಾಡಿಸಿದ ಆತನ ಕೈಯೊಳಗಿನ ಕೋಲೂ,............

ಶಂ:—ಮತ್ತು ಬೆಳಕಿಗೆಂದು ತಂದ ದೀವಟಿಗೆಯಾದರೂ ಬೆಳ್ಳಿಯದೇ. ಅದರ ಎಣ್ಣೆಯ ಬುದ್ದಲಿಕೆಯಾದರೂ............

ಭಾ:—ಆದರೆ ನಿರ್ಭೀಡೆಯಿಂದ ಹೇಳು ನೋಡೋಣ. ಈಗ ನಾವು ಆ ಒಣ ವೈಭವವನ್ನು ಕುರಿತು ಚೇಷ್ಟೆ ಮಾಡೋಣವಂತೆ ಬೇಕಾದರೆ; ಆದರೆ ಆಗಲಂತೂ ಆ ವೈಭವವನ್ನು ಕಂಡು ನಮ್ಮ ಕಣ್ಣುಗಳು ಕುಕ್ಕುತ್ತಿರಲಿಲ್ಲವೇ? ಮತ್ತು ಆ ಆ ಆಶ್ಚರ್ಯದಿಂದ ನಮ್ಮ ಹುಬ್ಬುಗಳು ಹೇಗೆ ಎರಡೆರಡು ಬೊಟ್ಟು ಮೇಲೆ ಸರಿಯುತ್ತಿದ್ದವೆಂಬದು ನೆನಪಿಲ್ಲವೇ?...........

ಶಂ:—ಚಿಕ್ಕಂದಿನಲ್ಲಿ ದೃಷ್ಟಿಯು ಆಳತೆಯೇ ಹಾಗೆ ಚಿಕ್ಕದಿರುತ್ತದೆ. ಯಾವ ಮನುಷ್ಯನು ಇಂದಿಗೆ ನಮಗೆ ಕುಳ್ಳನಾಗಿ ತೋರುವನೋ, ಆಗ ಅವನು ಎರಡಾಳು ಎತ್ತರದವನೆಂದು ಕಾಣಿಸುತ್ತಿರುತ್ತಾನೆ.

ಭಾ:—ಅಲ್ಲದೆ ರಾಜವೈಭವವಿಷಯದ ನಮ್ಮ ಕಲ್ಪನೆಯೂ ಚಿಕ್ಕಂದಿನಲ್ಲಿ ಬೇರೆಯಾಗಿರುತ್ತದೆ.

ಶಂ:—ಸತ್ಯ; ಸತ್ಯವಿದು. ನನಗಂತೂ ಆಗ ನಮ್ಮ ಸಂಸ್ಥಾನಿಕರೆಂದರೆ, ಪುರಾಣಗಳ ವರ್ಣನಗಳಲ್ಲಿ ಕೇಳಿರುವ ಸ್ವರ್ಗದೊಳಗಿನ ಇಂದ್ರನೇ ಎಂದೆನಿಸುತ್ತಿತ್ತು.

ಭಾ:—ಹಾಗಾದರೆ ಈಗ ಅವರೇನು ಪಾತಾಳದೊಳಗಿನ ರಾಕ್ಷಸರಂತೆ ತೋರುವರೇ?

ಶಂ:—ಅಲ್ಲ, ಹಾಗಲ್ಲ. ಅವನು ಮನುಷ್ಯರೊಳಗಿನ ಮನುಷ್ಯನೇ; ಆದರೆ ಆತನು ಸಾಮಾನ್ಯ ಮನುಷ್ಯರಿಗಿಂತ ತುಸ ಮೇಲ್ತರಗತಿಯ ಮನುಷ್ಯನೆಂದೆನಿಸುತ್ತದೆಂಬದರಲ್ಲಿ ಸಂಶಯವಿಲ್ಲ.

ಭಾ:—"ನಾ ವಿಷ್ಣುಃ ಪೃಥಿವೀ ಪತಿಃ" ಎಂಬ ವಚನವು ನಿನ್ನ ಕಣ್ಣೆದುರಿಗಿಂದ ಇನ್ನೂ ದೂರ ಸರಿದಂತೆ ಕಾಣುವದಿಲ್ಲ.

ಶಂ:—ಅದು ಹೊರಟು ಹೋಗಿದೆ; ಆದರೆ "ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೆ'' ಎಂಬೀ ವಚನದ ಮೇಲಿನ ನಂಬಿಗೆಯು ಮಾತ್ರ ಸಂಪೂರ್ಣ ಹಾರಿ ಹೋಗಿರುವದಿಲ್ಲೆಂಬದು ನಿಜವು. ನಮ್ಮ ಹಿಂದೂ ತತ್ತ್ವಜ್ಞಾನದೊಳಗಿನ ಕರ್ಮವಿಪಾಕ ಸಿದ್ಧಾಂತವು ನನಗೆ ಹೆಚ್ಚಾಗಿ ಸಟಿಯೆನಿಸುತ್ತದೆ. ಅಂತೆಯೇ ಕೇವಲ ಜನ್ಮಮಾತ್ರದಿಂದ ರಾಜ್ಯಪದ ಪ್ರಾಪ್ತವಾಗುವದು ಪೂರ್ವಾರ್ಜಿತ ಸತ್ಕರ್ಮಗಳ ಫಲವೇ ಅಹುದೆಂದೆನಿಸುವದು; ಮತ್ತು ದತ್ತಕ ಆಗಿ ರಾಜ್ಯಪದ ಪ್ರಾಪ್ತವಾಗುವದಂತೂ ಅದಕ್ಕಿಂತಲೂ ಶ್ರೇಷ್ಠವು! ಹಾಗಿರದಿದ್ದರೆ ಜಗತ್ತಿನಲ್ಲಿ ರಾಜ್ಯಪದಕ್ಕಿಂತ ಬಡವರ ಮನೆತನಗಳೇ ಸಹಸ್ರ ದಶಸಹಸ್ರ ಪಟ್ಟಿನಿಂದ ಹೆಚ್ಚಾಗಿರುತ್ತವೆ; ಮತ್ತು "Theory of chance" ಅಂದರೆ 'ಸಂಭವ ಸಿದ್ಧಾಂತ'ದ ಮೇರೆಗೆ ರಾಜ್ಯಪದಪ್ರಾಪ್ತಿಗಿಂತ ಬಡವರ ವಾರಸಾ ಹಕ್ಕು

ದೊರೆಯುವ ಸಂಭವವೇ ಸಹಸ್ರ ದಶಸಹಸ್ರ ಪಟ್ಟಿನಿಂದ ಪ್ರಬಲವಾಗಿ ತೋರುವದಿಲ್ಲವೆ?

ಭಾ:—ಆದರೆ ರಾಜ್ಯಪದದೊಳಗಿನ ಜನರ ಚರಿತ್ರಗಳನ್ನವಲೋಕಿಸಿದರೆ 'ಯೋಗಭ್ರಷ್ಟ' ವೆಂಬದು ಸ್ತುತಿವಚನವಾಗಿ ಅನಿಸದೆ, ನನಗಂತೂ ಅದು ನಿಂದಾವ್ಯಂಜಕ ಶಬ್ದವಾಗಿಯೇ ತೋರುತ್ತದೆ. 'ಯೋಗ'ವೆಂಬ ಮೊದಲಿನ ಶಬ್ದವು ಮರೆತು ಹೋಗಿ, 'ಭ್ರಷ್ಟ'ವೆಂಬುದಿಷ್ಟೇ ಶಬ್ದವು ಅವರ ಸಂಬಂಧವಾಗಿ ನನ್ನ ಲಕ್ಷ್ಯದಲ್ಲುಳಿಯುತ್ತದೆ; ಮತ್ತು ಈ ಭ್ರಷ್ಟಯೋಗಿಗಳ ಸಂಪೂರ್ಣ ದುರ್ದೆಸೆಯಾಗಲೆಂದೋ ಏನೋ, ಹಲವು ಕುಕರ್ಮ ಮಾಡುವ ಸಂಧಿಯನ್ನು ದೇವರು ಅವರನ್ನು ರಾಜ್ಯಪದದ ಮೇಲೆ ಕೊಡ್ರಿಸಿ ಅವರಿಗೆ ತಂದುಕೊಡುತ್ತಿರಬಹುದೆಂದೂ ಅನಿಸುತ್ತದೆ.

ಶಂ:—ಆದರೆ ಅವರ ಕುಕರ್ಮಗಳ ಬೊಬ್ಬಾಟವಾಗಬೇಕು, ನಿಂದೆಯಾಗಬೇಕು ಇವುಗಳಿಗೆ ಕೇವಲ ಅವರ ದೊಡ್ಡಿಸ್ತಿಕೆಯೇ ಕಾರಣವಲ್ಲವೇ? ಸಂಸ್ಥಾನಿಕರ ಪ್ರಜೆಗಳಲ್ಲಿ ಆ ರಾಜರಂತಹ ದುಷ್ಟ-ನಷ್ಟ-ಕುಕರ್ಮದ ಜನರು ಗೋಚರವಾಗುವದಿಲ್ಲೇನು?

ಭಾ:—ಆದರೆ ತಮ್ಮ ಕುಕರ್ಮದ ವಿಷಯಕ್ಕೆ ಜನರು ಲಕ್ಷ್ಯಗೊಡಕೂಡದು; ಅಂದರೆ ಸಾಮಾನ್ಯ ಪ್ರಜಾಜನರಂತೆಯೇ ತಮ್ಮ ಕುಕರ್ಮಗಳ ಉಪೇಕ್ಷೆಯು ಜನರಿಂದಾಗಬೇಕೆಂದು ಆ ಸಂಸ್ಥಾನಿಕರಿಗೆ ಅನಿಸುತ್ತಿದ್ದರೆ ಅವರು ತಮ್ಮ ರಾಜ್ಯಪದದ ತ್ಯಾಗಮಾಡಿ, ಸಾಮಾನ್ಯ ಪ್ರಜಾಜನರಲ್ಲಿ ಬಂದು ಸೇರಿಕೊಂಡು ಬಿಡಬೇಕು. ಇದಕ್ಕೆ ಅವರಿಗೆ ಬೇಡವೆಂದಾರೆನ್ನುವರು? ರಾಜ್ಯಪದದ ತ್ಯಾಗ ಮಾಡಲಿಕ್ಕೆ ಪ್ರತಿಬಂಧವಾರದಿದೆ? ಆದರೆ ರಾಜ್ಯಪದ, ಆ ಪದದ ವೈಭವ ಮತ್ತು ಐಶ್ವರ್ಯ ಇವುಗಳೆಲ್ಲ ಲಭಿಸಬೇಕು; ಹಾಗು ಮರಳಿ ಅದೇ ರಾಜ್ಯಪದದಿಂದ ಲೋಕನಿಂದೆಯು ಮಾತ್ರ ಆಗಬಾರದು ಇವೆರಡೂ ಸಾಧಿಸುವದು ಹೇಗೋ!

ಶಂ:—ಆದರೆ ಭಾನ್ಯಾ, ರಾಜಧರ್ಮದಂತೆಯೇ ಪ್ರಜಾಧರ್ಮವೆಂಬುದೊಂದು ಏನಾದರೂ ಇದೆಯೋ ಇಲ್ಲವೋ? ಪ್ರಜೆಗಳು ಸ್ವತಃ ಅದನ್ನು ಪಾಲಿಸಿದರೆ ಮಾತ್ರ ಆ ಮೇಲೆ ರಾಜನಿಗೆ ಹೆಸರಿಡಲಿಕ್ಕೆ ಅವರುಗಳಿಗೆ ಅಧಿಕಾರವುಂಟಾದೀತು. ಧರ್ಮವೆಂಬುದು ಇಬ್ಬಣಗಳಿಗೂ ಕರ್ತವ್ಯವಾಗಿದೆ. ರಾಜನೇನು? ಪ್ರಜೆಯೇನು? ಇಬ್ಬರೂ ಒಂದೇ ಖಣಿಯೊಳಗಿನ ದ್ರವ್ಯಗಳಲ್ಲವೇನು? "Pot calling the cattle black" ಎಂಬ ಇಂಗ್ಲಿಷ ನಾಣ್ಣುಡಿಯು ಸುಪ್ರಸಿದ್ಧವೇ ಆಗಿದೆ. ಹಾಗೆ ಹಗಲೆಲ್ಲ ಸಂಸ್ಥಾನಿಕರಿಗೆ ಹೆಸರಿಡುವ ಮಹಾಶಯರಲ್ಲಿಯು ಒಬ್ಬ

ವ್ಯಕ್ತಿಗಾದರೂ ಮೂರೂವರೆಕ್ಕಾಲುಗಳಿಗೆಯು ಕೈಗಡದ ರಾಜ್ಯಪದವನ್ನು ಕೊಟ್ಟು ನೋಡಿದರೆ, ತಿಳಿದೀತು ರಾಜನಾಗುವದು ಎಷ್ಟು ಕಠಿಣ ಕೆಲಸವೆಂಬದು.

ಭಾ:—ಅಂದರೆ ರಾಜವೈಭವವನ್ನು ಅನುಭೋಗಿಸುವದು ಸುಲಭ; ಮತ್ತು ಅದನ್ನು ಮಾತ್ರ ಸಂಸ್ಥಾನಿಕರು ಬಹು ಚೆನ್ನಾಗಿ ಮಾಡುತ್ತಿರುವರೆಂಬದಿಷ್ಟೇ ಅಲ್ಲವೇ ನಿನ್ನ ಅಭಿಪ್ರಾಯವು?

ಶಂ:-ಮತ್ತೊಂದಿಲ್ಲ-ಮಗದೊಂದಿಲ್ಲ; ಸಂಸ್ಥಾನಿಕರ ವೈಭವದ ಹೊಟ್ಟೇ ಕಿಚ್ಚೇ ಹೊಟ್ಟೇಕಿಚ್ಚು! ತನ್ನ ವೈಭವವನ್ನು ಮಾತ್ರ ಯಾರೂ ಬಿಡಲಿಕ್ಕೆ ಸಿದ್ಧ ರಿಲ್ಲ. ಭಾವೀ ಪೀಳಿಗೆಯ ಜೀವದ ಸುತ್ತೇ ಎಲ್ಲ ಆರ್ಥಿಕ ಹಾಗು ರಾಜಕೀಯ ಪ್ರಯೋಗಗಳು! "ತಾನು ಮುಣುಗಿದರೆ ಮೂರು ಲೋಕವೇ ಮುಣುಗಿತೆ"ಂಬ ಗಾದೆಯಂತೆ ನಾವು ಸತ್ತ ಬಳಿಕ ಜಗತ್ತಿನ ಗತಿಯು ಏನಾದರೇನು? ಆದರೆ ನಾವು ಜೀವದಿಂದಿರುವ ವರೆಗೆ ವ್ಯಕ್ತಿಶಃ ಪ್ರಜೆಗಳಿಗೆ ಮಾತ್ರ ತಮ್ಮ ವೈಭವ ಮತ್ತು ಸಂಪತ್ತುಗಳನ್ನು ಉಪಭೋಗಿಸಲಿಕ್ಕೆ ಸಿಗಬೇಕು, ಅಂದರಾಯಿತು.

ಭಾ:—ಬಿಡೋ, ನಮಗೇಕೆ ಸಂಸ್ಥಾನಿಕರ ಆ ಇಲ್ಲದ ಉಸಾಬರಿಯು? ದೇವರು ನಿನ್ನನ್ನೂ ರಾಜನಾಗಿ ಮಾಡಿಲ್ಲ; ನನ್ನನ್ನೂ ರಾಜನಾಗಿ ಮಾಡಿಲ್ಲ. ಇಲ್ಲವೆ ಹಾಗೆ ಮನಸೋಕ್ತ ಉಪಭೋಗಿಸುವಂತಹ ವೈಭವವನ್ನೂ ಕೊಟ್ಟಿರುವದಿಲ್ಲ ರಟ್ಟೆ ಮುರಿದು ದುಡಿಯಬೇಕು; ಹೊಟ್ಟೆ ತುಂಬ ಉಣ್ಣಬೇಕು. ನಿಜವಾದ ಸುಖವು ಇದರಲ್ಲಿಯೇ ಇದೆ.

ಶಂ:—ಒಳ್ಳೇ ಮಾತನಾಡಿದೆ. ನಮ್ಮ ಮಾಸ್ತರಿಕೆಯೇ ರಾಜ್ಯವು ಮತ್ತು ಸೂಟಿಯೇ ಮೋಕ್ಷವು. ನಾನು ಇದೇ ಮತದವನಾಗಿದ್ದೇನೆ; ಹಾಗ ಆ ಮೋಕ್ಷವನ್ನುಪಭೋಗಿಸಲಿಕ್ಕೆಂದು ಈ ಸಾರೆ ಊರಿಗೆ ಬಂದಿರುತ್ತೇನೆ. ಅ ರಲಿ. ಈ ವರ್ಷವಾದರೂ ಈ ಸೂಟಿಯಲ್ಲಿ ನಮ್ಮ ನಿಮ್ಮ ಭೆಟ್ಟಿಯು ಇಲ್ಲಿಯೇ ಆಯಿತೆನ್ನಬೇಕು; ಮತ್ತು ಅದಕ್ಕಾದರೂ ನನ್ನಂತೆ ನಿನಗೂ ಈ ಸಾರೆಯ ಸೂ ಯನ್ನು ನಮ್ಮೂರಲ್ಲೇ ಕಳೆಯಬೇಕೆಂಬ ಅಕಲ್ಪಿತ ಇಚ್ಛೆಯು ಈಗ ಬಹು ದಿನಗ ತರುವಾಯ ಉಂಟಾಯಿತೆಂಬದೇ ಕಾರಣವು. ಎಂದಿನಂತೆ ನನಗೆ ಈ ಸಾರೆಯೂ ನನ್ನ ಛಾತ್ರವರ್ಗದೊಳಗಿನ ರಾಜಕುಮಾರನ ಸಂಗಡ ಮಹಾಬಳೇಶ್ವರಕ್ಕೆ ಹೋ ಡುವ ಆಹ್ವಾನವು ಬಂದಿತ್ತು; ಆದರೆ ಅದನ್ನು ಬಿಟ್ಟು ಇತ್ತಕಡೆಗೇ ಬರಬೇಕೆಂದ ನನಗೆ ಮತ್ತೆ ಮತ್ತೆ ಅನಿಸಿತು; ಯಾಕಂದರೆ ಜನ್ಮಭೂಮಿಯ ವಿಷಯದ ಆಕರ್ಷ ಣವೇ-ಪ್ರೇಮವೇ-ಒಂದು ವಿಧವಾಗಿದೆ. ಅದು ಮಹಾಬಳೇಶ್ವರದೊಳಗಿನ ಶೀತ ಸುಖಕ್ಕೂ ಮೋಹಿಸಶಕ್ಯದ್ದಲ್ಲ.

ಭಾ:—ನಿನಗೆ ಪ್ರತಿವರ್ಷ ಮಹಾಬಳೇಶ್ವರಕ್ಕೆ ಹೋಗುವ ನೆವವಾದರೂ

ಇರುತ್ತದೆ; ಆದರೆ ನನಗೆ ಅಂಥ ಯಾವ ಸೆವವೂ ಇರುವದಿಲ್ಲ ಇತ್ತ ಬಾರದಿರ ಲಿಕ್ಕೆ. ಇವು ವರ್ಷದ ಕೊನೆಯ ದಿವಸಗಳು. ನಾನು ಮಾಡಿದರೆ ಹೆಚ್ಚಿನ ಮನೆಗೆಲಸ, ಹೊಲಗೆಲಸ, ಕಚೇರಿ-ಕಟ್ಟೆಯ ಕೆಲಸಗಳು ಬೇಕಾದಷ್ಟಿದ್ದು, ಈ ಕೆಲಸಗಳ ಸಲು ವಾಗಿ ನಮ್ಮ ಚಿಕ್ಕಪ್ಪನಿಗೆ ನನ್ನ ನೆರವಿನ ಅವಶ್ಯಕತೆಯು ವಿಶೇಷವಾಗಿದೆ; ಆದರೆ ನನ್ನ ಮನಸ್ಸು ಇತ್ತೀಚೆಗೆ ಈ ಚೋದ್ಯಪುರಪಟ್ಟಣಕ್ಕೆ ಬರಲಿಕ್ಕೆ ಯಾವ ಒಂದು ಬಗೆಯ ಲಜ್ಜೆಯನ್ನು ತಾಳಿರುವದೋ, ಅದರಿಂದ ಮನೆ-ಮಾರುಗಳ ಬಾಬು ಗಳಲ್ಲಿ ಹೆಚ್ಚು-ಕಡಿಮೆ ಹಾನಿಯಾದರೂ ಇಲ್ಲವೆ ನಮ್ಮ ಚಿಕ್ಕಪ್ಪನು ನನ್ನನ್ನು ಮನಸೂಕರಾಯನೆಂದು ಆಡಿಕೊಂಡರೂ ನನಗೆ ಊರಿಗೆ ಬರಬೇಕೆಂದೆನಿಸುವ ದಿಲ್ಲ. ಅದಕ್ಕೆ ನಾನಾದರೂ ಏನು ಮಾಡಲಿ?

ಶಂ:—ಅಂದಬಳಿಕ ಇದೇ ಸಾರೆ ಅದೇತಕ್ಕೆ ಬಂದೆ?

ಭಾ: -ನಿನ್ನಂತೆಯೇ ಜನ್ಮಭೂಮಿಯ ಪ್ರೇಮಕ್ಕಾಗೆಂಬುದೇನೋ ನಿಜವೇ; ಅಲ್ಲದೆ ಇತ್ತ ಕಡೆಗೆ ಬರುವ ಸಂಬಂಧದಲ್ಲಿ ಮನಸ್ಸಿಗೆ ಸಂತತವಾಗಿ ಅನಿಸುವ ಲಜ್ಜೆಯು ನನ್ನನ್ನು ತೊಲಗುವ ಬಗ್ಗೆ ಯಾವ ಪ್ರಯತ್ನ ಮಾಡಬೇಕೆಂದು ನನಗೆ ಯಾವಾಗಲೂ ಅನಿಸುತ್ತಿದೆಯೋ, ಅದು ಈ ಸಾರೆ ಸಫಲವಾಗುವ ಯೋಗ ಬಂದಿತೆಂದು ಕಂಡು ಬಂದಿತು. ಅಂತೆಯೇ ನಾನೊಳ್ಳೇ ಸಂತೋಷದಿಂದ ಇಲ್ಲಿಗೆ ಬಂದಿರುತ್ತೇನೆ.

ಶಂ: —ಭಾನ್ಯಾ, ನೀನು ಈ ವಿಷಯದಲ್ಲಿ ನನಗೆಂದಾದರೂ ಏನಾದರೂ ಹೇಳಿದ್ದೆಯೇನೋ? ಹೇಳಿದರೂ ಕೂಡ ಅದು ನನಗೀಗ ಚೆನ್ನಾಗಿ ಸ್ಮರಿಸುವ ದಿಲ್ಲ. ಅಂತೆಯೇ ಅದನ್ನು ಮತ್ತೆ ಕೇಳಬೇಕೆಂದೆನಿಸುತ್ತದೆ; ಆದರೆ ಅದು ಹೇಳ ಬಹುದಾದ ಸಂಗತಿಯಾಗಿದ್ದರೆ ಮಾತ್ರ ಹೇಳು. ಇಲ್ಲವಿದ್ದರೆ ಆ ಬಗ್ಗೆ ನನ್ನ ಒತ್ತಾಯವೇನೂ ಇರುವದಿಲ್ಲ. ನಿನ್ನಂತೆ ನನ್ನದೂ ಈ ಚೋದ್ಯಪುರವೇ ಜನ್ಮ ಭೂಮಿಯಾಗಿದ್ದರೂ ನಿನ್ನ-ನನ್ನಲ್ಲಿ ಮಹದಂತರವಿದೆ. ಅದು ಹೇಗೆಂದರೆ, ಜನ್ಮ ಭೂಮಿಯ ಸ್ಮರಣದ ಹೊರತು ಈ ಊರಲ್ಲಿ ನನ್ನ ಮನಸ್ಸಿಗೆ ಬೇರೆ ಯಾವ ಪ್ರೇಮಬಂಧನವೂ ಇರುವದಿಲ್ಲ; ಆದರೆ ನಿನ್ನ ಮಾತು ಹಾಗಿಲ್ಲ. ನಿನ್ನ ಮನೆ-ಮಾರು, ಆಪ್ತಸಂಬಂಧಿಕರು ಮುಂತಾದುದೆಲ್ಲ ಇಲ್ಲಿಯೇ ಇದೆ; ಮತ್ತು ಮನ ಸ್ಸಿಗೆ ಲಜ್ಜೆಯೆನಿಸುವದಕ್ಕೆ ತನಗೆ ತಾನೇ ಆಗಲಿ, ಬೇರೆ ಯಾರೇ ಆಗಲಿ ಬಂಧು-ಬಳಗದ ಗಡ್ಡೆಯು ಎಷ್ಟು ದೊಡ್ಡದೋ, ಸ್ವಾಭಿಮಾನೀ ಪುರುಷನಿಗೆ ಲಜ್ಜೆಯ ದೃಷ್ಟಿಯಿಂದ ಅದು ಅಷ್ಟು ಹೆಚ್ಚು ಅಡಚಣೆಯದೇ ಆಗುವದು.

ಭಾ:—ಶಂಕರಾ, ನಾನು ನಿನಗೆ ನನ್ನ ಆ ಕಾರಣವನ್ನು ಎಂದೂ ಹೇಳಿ ಯೇ ಇಲ್ಲ; ಅಂದಮೇಲೆ ನಿನಗದರ ನೆನಪಾದರೂ ಹೇಗಾಗಬೇಕು? —ನಿ

ನಾನು ಅದನ್ನು ಹೇಳದಿರುವದಕ್ಕೆ ನೀನು ನಿನ್ನ ಮನಸ್ಸಿನಲ್ಲಿ ಯೋಚಿಸಿಕೊಂಡಿರುವ ಕಾರಣ ಮಾತ್ರ ಅಲ್ಲ. ನನಗೆ ನಮ್ಮೂರಿಗೆ ಬರಲಿಕ್ಕೆ ಯಾವ ಲಜ್ಜೆಯೆನಿಸುತದೋ, ಅದು ನನ್ನ ಕುಟುಂಬದೊಳಗಿನ ಸ್ತ್ರೀ-ಪುರುಷರ ಯಾವ ದುಷ್ಟತನದ ಮೂಲಕವೂ ಆಗಿಲ್ಲ; ಆದರೆ ನನ್ನಿಂದಲೇ ನಡೆದ ಒಂದಾನೊಂದು ದುಷ್ಕೃತ್ಯವೇ ಅದಕ್ಕೆ ಕಾರಣವು.

ಶಂ:—ಏನಂದಿ? ನಿನ್ನಂಥವನಿಂದ ದುಷ್ಕೃತ್ಯವೇ? ನನಗಂತೂ ಅದು ಸಟಿಯೆನಿಸುವದಿಲ್ಲ. ನೀನು ಏನಾದರೂ ಅನ್ನುತ್ತಿರುವೆಯುಷ್ಟೇ?

ಭಾ:—ದುಷ್ಕೃತ್ಯವಲ್ಲದಿದ್ದರೇನು? ಆದರೆ ನಾನು ಅದನ್ನು ಯಾವ ಸ್ವಾರ್ಥದಿಂದಲೂ ಮಾಡಿರುವದಿಲ್ಲ. ಏನು ಘಟಿಸಿತೋ ಅದು ಚಿಕ್ಕಂದಿನ ಅಜ್ಞಾನತನದಿಂದಲೇ; ಮತ್ತು ಅದರಲ್ಲಿಯೂ ಅದು ಪ್ರತ್ಯಕ್ಷವಾಗಿ ನನ್ನ ಹಿರಿಯರ ಹೇಳಿಕೆಯಿಂದ ಹಾಗು ಬಲುಮೆಯಿಂದ. ಅದೆಲ್ಲ ನಿಜ; ಆದರೆ ಆ ನನ್ನ ಕೃತಿಯಿಂದ ಈ ಜೋಧ್ಯಪುರದ ಒಂದು ಕುಟುಂಬದ ನಾಶವಾಗಿ ಬಿಟ್ಟಿತು! ಅದು ಆಗ ನನಗೆ ಚೆನ್ನಾಗಿ ತಿಳಿಯುತ್ತಿರಲಿಲ್ಲ; ಆದರೆ ಈಗ ನಾನು ದೊಡ್ಡವನಾದ ಬಳಿಕ ನನಗದು ಚೆನ್ನಾಗಿ ಅವಗತವಾಗುತ್ತದೆ, ಮನಸ್ಸಿಗೆ ನಡುತ್ತದೆ; ಮತ್ತು ದುಃಖವೂ ಆಗುತ್ತದೆ. ನನ್ನ ಆ ದುಷ್ಕೃತ್ಯವು ಮತ್ತೊಂದೇನೂ ಇರಲಿಲ್ಲ. ಬರಿಯ ಸುಳ್ಳು ಸಾಕ್ಷಿ ಹೇಳುವದಾಗಿತ್ತು. ಆ ಸಾಕ್ಷಿಯನ್ನು ನಾನು ಹೇಳಿರದಿದ್ದರೂ, ಏನು ಆಗಬೇಕಾಗಿದ್ದಿತೋ ಅದು ಆ ಪರಿಸ್ಥಿತಿಯಲ್ಲಿ ಆಗಿಯೇ ಆಗುತ್ತಿತ್ತು. ಏನಾದರೂ ಆಗದಿರುತ್ತಿದ್ದಿಲ್ಲ; ಆದರೆ ನಾನು ಅದಕ್ಕೆ ನೆವವಾದರೂ ಆದೆನೋ ಇಲ್ಲವೋ? ಖೊಟ್ಟಿ ಸಾಕ್ಷಿ ನುಡಿದದ್ದರಿಂದ ನನ್ನ ನಾಮೆಯಂತೂ ಕೆಟ್ಟು ಹೋಯಿತು; ಆದರೆ ನನ್ನ ವಯಸ್ಸಿನ ಒಬ್ಬ ನಿರಪರಾಧಿಯಾದ ಹುಡುಗನು-ಇದೇ ಈ ಜೋಧ್ಯಪುರದ ಒಬ್ಬ ಶ್ರೇಷ್ಠ ನಾಗರಿಕನು-ನ್ಯಾಯಕೋರ್ಟಿನಲ್ಲಿ ಕರಿನೀರಿನ ಶಿಕ್ಷೆಗೆ ಗುರಿಯಾದನು! ಎಷ್ಟೋ ವರ್ಷಗಳ ವರೆಗೆ ಇಡೀ ಊರು ನನ್ನ ಕಡೆಗೂ, ನನ್ನ ತಂದೆಯ ಕಡೆಗೂ, ನನ್ನ ಮನೆತನದ ಕಡೆಗೂ ನಿಂದಾವ್ಯಂಜಕ ಬುದ್ಧಿಯಿಂದ ಬೊಟ್ಟು ಮಾಡಿ ಮಾಡಿ ತೋರಿಸುತ್ತಿತ್ತು! ಅದರಲ್ಲಿ ಊರವರ ದೋಷವಾದರೂ ಏನಿತ್ತು? ಆದರೆ ಬರಬರುತ್ತ ನಿಜ ಸಂಗತಿಯು ಮೆಲ್ಲಮೆಲ್ಲನೆ ಎಲ್ಲರಿಗೂ ತಿಳಿಯಿತು. ಅಂದಿನಿಂದ ಜನರು ನನ್ನ ನಿಂದೆ ಮಾಡುವದನ್ನು ಬಿಟ್ಟರು. ಅಷ್ಟರಲ್ಲಿ ನನ್ನ ತಂದೆಯೂ ತೀರಿಕೊಂಡನು. ನಾನೂ ಎಷ್ಟೋ ವರ್ಷಗಳ ವರೆಗೆ ಈ ಊರಿಗೇ ಬರಲಿಲ್ಲ. ಈ ಬಗೆಯಿಂದ ಆ ಸಂಗತಿಯು ವಿಸ್ಮರಣಕ್ಕೆ ಸಹಾಯವೇ ಆಯಿತು; ಆದರೆ ಜನನಿಂದೆ ತಪ್ಪಿದರೂ ಮನನಿಂದೆಯು ತಪ್ಪುವದೆಂತು?

ಶಂ:—ಅದೇಕೆ? ಜನರು ನಿನ್ನನ್ನು ನಿರ್ದೋಷಿಯೆಂದು ನಿರ್ಧರಿಸಿರುವ

ರಷ್ಟೇ? ಅವರು ನಿನ್ನ ಮೇಲಿನ ಆರೋಪವನ್ನು ಹಿಂದೆಗೆದುಕೊಂಡಿರುವರು; ಅಂದ ಬಳಿಕ?

ಭಾ:—ಎಲಾ, ಜನರಿಗೆ ನನ್ನ ಕೈಯಿಂದಾದ ತಪ್ಪು ಸ್ವಾರ್ಥಪರಾಯಣತೆಯದಲ್ಲೆಂಬದಿಷ್ಟೇ ತಿಳಿದ ಸತ್ಯಸಂಗತಿಯು; ಆದರೆ ಯಾವ ಖೊಟ್ಟಿ ಸಾಕ್ಷಿಯು ಕೃತಿಯು ಘಟಿಸಿತೋ ಅದು ಹಾಗೆಯೇ ಉಳಿಯಿತಷ್ಟೇ? ಅಲ್ಲದೆ ಅದರ ಪರಿಣಾಮವು ಸರಿಯಾಗಿದ್ದರೆ ಆ ಮೇಲೆ ಎಲ್ಲವೂ ಸರಿಹೋಗುತ್ತಿತ್ತು; ಆದರೆ ಡಬೀರರ ಪ್ರಭಾಕರನು-ಯಾವಾತನ ಕೂಡ ನನ್ನನ್ನು ಆರೋಪಿಯೆಂದು ನಿಲ್ಲಿಸಿ, ನನಗೂ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತ್ತೋ, ಆತನಿನ್ನೂ ಫರಾರಿಯೇ ಆಗಿರುವನಲ್ಲವೇ? ನನ್ನನ್ನೇನೋ ಬೇಗನೆ ಕ್ಷಮಿಸಿ ಸೆರೆಮನೆಯೊಳಗಿಂದ ಬಿಟ್ಟರು; ಯಾಕಂದರೆ ಸಂಸ್ಥಾನೀ ದರಬಾರದ ನಿಜವಾದ ಸಿಟ್ಟು ಪ್ರಭಾಕರನ ಮೇಲೆಯೇ ಇತ್ತು. ಆತನನ್ನು ತಪ್ಪಿತಸ್ಥನೆಂದು ನಿರ್ಧರಿಸಲಿಕ್ಕೆ ಯಾವನೊಬ್ಬ ಸಮವಯಸ್ಕ ಹುಡುಗನ ಸಾಕ್ಷಿಯು ಸರಕಾರಕ್ಕೆ ಬೇಕಾಗಿತ್ತು. ಅದನ್ನು ಅವರು ನನ್ನಿಂದ ಪಡೆದರು; ಹಾಗು ಆಗ ನನಗೂ ಶಿಕ್ಷೆ ಕೊಟ್ಟ ನಾಟಕ ಮಾಡಿ, ಮುಂದೆ ಅಲ್ಪಾವಧಿಯಲ್ಲೇ ನನ್ನನ್ನು ಬಿಟ್ಟುಬಿಟ್ಟರು. ಈ ರೀತಿಯಾಗಿ ಅದರಲ್ಲಿ ನನಗೆ ಪ್ರತ್ಯಕ್ಷ ಹಾನಿಯೇನೂ ಆಗಲಿಲ್ಲ; ಆದರೆ ಪಾಪ! ಆ ಪ್ರಭಾಕರನು ಮಾತ್ರ ಮನೆ-ಮಾರುಗಳನ್ನು ತೊರೆದನಲ್ಲವೇ? ಮತ್ತು ಅದೂ ನನ್ನ ಆ ಸಾಕ್ಷಿಯ ನೆವದಿಂದಲೇ?

ಶಂ:—ಭಾನ್ಯಾ, ನಿನ್ನ ಮೇಲೆ ಇಂಥ ಕೆಟ್ಟ ಪ್ರಸಂಗ ಬಂದಿದ್ದೀತೆಂಬದರ ಕಲ್ಪನೆಯು ಕೂಡ ನನಗಿದುವರೆಗೂ ಬಂದಿರಲಿಲ್ಲ.

ಭಾ:—ನಿನಗೆ ಆ ಕಲ್ಪನೆಯಾದರೂ ಹೇಗಾಗಬೇಕು? ನೀನು ಆ ಕಾಲಕ್ಕೆ ಬಹುಶಃ ಈ ಪಟ್ಟಣದಲ್ಲಿರಲಿಕ್ಕಿಲ್ಲ; ಮತ್ತು ಆ ಮೇಲೆಯೂ ನನ್ನ-ನಿನ್ನ ಭೆಟ್ಟಿಯು ಇಂದೇ ಇಲ್ಲಿ ಅದೆಷ್ಟೋ ವರ್ಷಗಳ ತರುವಾಯದಲ್ಲಿ ಆಗುತ್ತಿದೆ! ಇರಲಿ. ಆಗ ನನ್ನ ಸಾಕ್ಷಿಯು ಸುಳ್ಳಿತ್ತೆಂದು ನಾನು ಅದಾರ ಮುಂದೆ ತಿಳಿಸಬೇಕು? ಮತ್ತು ಹಾಗೆ ಹೇಳಿದ್ದರೂ ಅದರ ಉಪಯೋಗವೇನು? ಈ ಸ್ಥಿತಿಯು ಇದುವರೆಗೂ ಇದ್ದಿತು. ಅಂತೆಯೇ ನಾನು ನನ್ನ ಮನಸ್ಸಿನಲ್ಲಿಯೇ ದುಃಖಿಸುತ್ತ ಕುಳಿತಿದ್ದೆನು.

ಶಂ:—ಹಾಗಾದರೆ ಈ ಸಾರೆಯ ಸೂಟಿಯಲ್ಲಿ ಈ ಚೋದ್ಯಪುರಕ್ಕೆ ನೀನು ಯಾವ ಆಶೆಯಿಂದ ಬಂದೆ?

ಭಾ:—ಆಶೆಯಿಷ್ಟೇ; ಹೊಸ ಸಂಸ್ಥಾನಿಕರು ಬೇಗನೆ ಪಟ್ಟವೇರುವರು. ಅವರಿಗೆ ಸರ್ವಾಧಿಕಾರ ಸಿಗುವದು. ಅದರಿಂದ ಸಂಸ್ಥಾನದ ಆಡಳಿತದಲ್ಲಿ ಹೆಚ್ಚು-ಕಡಿಮೆಯಾಗಿ ಪ್ರಸ್ತುತದ ನಷ್ಟನೂ ದುಷ್ಟನೂ ಆಗಿರುವ ದಿವಾಣನು ದಿವಾಣಪದದಿಂದ ಚ್ಯುತನಾದನೆಂದರೆ, ಒಂದಾನೊಂದು ವೇಳೆ ಹೊಸ ಮನ್ವಂತರಕ್ಕೆ

ಪ್ರಾರಂಭವಾದೀತು; ಮತ್ತು ಪ್ರಜೆಗಳಿಗೆ ಸುಖದ ದಿನಗಳೂ ಒದಗುವ ಸಂಭವ ವುಂಟು.

ಶಂ:—ನಿನ್ನ ಸಾಕ್ಷಿಯಿಂದ ಯಾವ ಕೇಸಿನಲ್ಲಿ ಡಬೀರರ ಪ್ರಭಾಕರನಿಗೆ ಕರಿನೀರಿನ ಶಿಕ್ಷೆಯಾಗಿದೆಯೋ ಅದರಲ್ಲೇನಾದರೂ ಲಾಭ ದೊರೆಯುವದೆಂಬ ಆಶೆಯು ನಿನಗೆ ತೋರುವದೇನು?

ಭಾ:--ಇಂದಿಗೆ ಪ್ರತ್ಯಕ್ಷವಾಗಿ ಅಂಥ ಆಶೆಯೇನೂ ತೋರುವದಿಲ್ಲೆಂಬದು ನಿಜವೇ. ಯಾಕಂದರೆ ಅಂತಹ ಯಾವದೊಂದು ಪ್ರಯತ್ನವಾಗಬೇಕೆಂದರೂ ಸ್ವತಃ ಡಬೀರರ ಆ ಪ್ರಭಾಕರನು ಹಾಜರಿರಬೇಕಲ್ಲವೇ? ಅವನದಂತೂ ಇನ್ನೂ ಪತ್ತೆಯೇ ಇರುವದಿಲ್ಲ! ಈ ಸಾರೆ ಹೇಗೂ ನಾನು ನಾಲ್ಕಾರು ತಿಂಗಳ ರಜೆಯನ್ನೇ ಪಡೆದು ಬಂದಿರುತ್ತೇನಿಲ್ಲಿಗೆ. ನಮ್ಮ ಚಿಕ್ಕಪ್ಪನೀಗ ತೀರ ಸೋತಿರುತ್ತಾನೆ; ಅದರಿಂದ ಮನೆತನದ ವ್ಯವಸ್ಥೆಯನ್ನೇನಾದರೂ ಮಾಡಬೇಕೆನ್ನುತ್ತೇನೆ; ಮತ್ತು ಹೊಸ ಸಂಸ್ಥಾನಿಕರು ಅಧಿಕಾರ ಸೂತ್ರಗಳನ್ನು ವಹಿಸಿದರೆಂದರೆ, ಒಂದಿಲ್ಲೊಂದು ರೀತಿಯಿಂದ ಪ್ರಭಾಕರನ ವಿಷಯದ ನಿಜ ಸಂಗತಿಯನ್ನು ಅವರ ಕಿವಿಯ ಮೇಲೆ ಹಾಕಲಿರುವೆನು. ಅದರಿಂದ ಲಾಭವಾಗಲಿ-ಆಗದಿರಲಿ; ಆದರೆ ಹಾಗೆ ಮಾಡುವದರಿಂದ ನನ್ನ ಸ್ವಂತದ ಮನಸ್ಸಿನ ಮೇಲಿನ ಒಜ್ಜೆಯಾದರೂ ಹಗುರಾಗಿ, ನಾನು ಸುಖಿಯಾದೇನು! ಹೊಸ ಸಂಸ್ಥಾನಿಕರು ನನ್ನ ನಿನ್ನ ವಯಸ್ಸಿನವರಿದ್ದು ಒಳ್ಳೇ ಚಪಲರೂ ಕುಶಲರೂ ಆಗಿ ತೋರುವರು; ಆದರೆ ಬರಬರುತ್ತ ಯಾವ ಮೆಟ್ಟಿಗೆ ಮುಟ್ಟುವರೆಂಬದು ತಿಳಿಯತಕ್ಕದ್ದೇ ಆಗಿದೆ.

ಆ ಇಬ್ಬರು ಗೆಳೆಯರಲ್ಲಿ ಈ ಬಗೆಯ ಸಂಭಾಷಣವು ನಡೆದಿರಲಿಕ್ಕೆ ಒಂದು ಸುಂದರವಾದ ಕುದುರೆಯು ಖೇಕರಿಸುತ್ತ ಖೇಕರಿಸುತ್ತ ದೇವಾಲಯದ ಹೆಬ್ಬಾಗಿಲಿಗೆ ಬಂದಿತು. ಆ ಕುದುರೆಯ ಮೇಲೆ ಜೋಧ್ಯಪುರದ ಹೊಸ ಸಂಸ್ಥಾನಿಕರೇ ಆರೋಹಿಸಿದ್ದರು. ಅವರು ಅಲ್ಲಿ ಕೆಳಗಿಳಿದರು. ಬಳಿಯಲ್ಲಿದ್ದ ಸಿಪಾಯಿಯು ತನ್ನ ಕೈಯೊಳಗಿದ್ದ ರೇಶ್ಮಿಯ ಹಗ್ಗವನ್ನು ಕುದುರೆಯ ಲಗಾಮಿಗೆ ಹಚ್ಚಿ ಕುದುರೆಯನ್ನು ತನ್ನ ಕೈಗೆ ತಕ್ಕೊಂಡನು. ಮತ್ತೊಬ್ಬ ಪಟ್ಟೆಯವನ ಕೈಗಳಲ್ಲಿ ಜೋಪದಾರನ ಕೋಲೂ, ಮೇಣಬತ್ತಿಯ ಲಾಂದರವೂ ಇದ್ದವು. ಆ ದೀಪದ ಬೆಳಕಿನಲ್ಲಿ ಸಂಸ್ಥಾನಿಕರು ಕುದುರೆಯ ಬೆನ್ನ ಮೇಲೆ ಶಾಬಾಸ! ಎಂದು ಚಪ್ಪರಿಸಿ, ದೇವಾಲಯದೊಳಗಿನ ಜನರ ಸಲಾಮು ನಮಸ್ಕಾರಗಳನ್ನು ಸ್ವೀಕರಿಸುತ್ತ ದೇವದರ್ಶನಕ್ಕೆಂದು ಗುಡಿಯೊಳಗೆ ಹೊಕ್ಕರು; ಮತ್ತು ದೇವದರ್ಶನ, ಪ್ರದಕ್ಷಿಣ, ನಮಸ್ಕಾರಗಳನ್ನು ಮಾಡಿ, ಹಾಗೆಯೇ ಕಾಲ್ನಡಿಗೆಯಿಂದ ಅರಮನೆಯ ಕಡೆಗೆ ಸಾಗಿದರು. ಭಾನು-ಶಂಕರರು ಬುರುಜಿನ ಕಟ್ಟೆಯ ಮೇಲೆ ನಿಂತುಕೊಂಡೇ ಸಂಸ್ಥಾ

ನಿಕರ ಆ ದೃಶ್ಯವನ್ನು ನೋಡುತ್ತಿದ್ದರು. ಸಂಸ್ಥಾನಿಕರು ಹೊರಟು ಹೋದ ಬಳಿಕ ಶಂಕರನು ಅನ್ನುತ್ತಾನೆ:

ಶಂ:—ಭಾನ್ಯಾ, ಏನೇ ಅನ್ನು; ಈ ಹೊಸ ವ್ಯಕ್ತಿಯು ನೀರೇ ಬೇರೆ ಕಾಣುತ್ತದೆ. ಮುಂದೆ ಈ ಜೋದ್ಯಪುರ ಸಂಸ್ಥಾನದ ಪ್ರಜೆಗಳ ದೈವದಲ್ಲೇನಿದೆಯೋ ಇರಲಿ!

ಭಾ:—ನಾನಂತೂ ಇದೇ ಆಶೆಯು ಮೂಲಕ ಬಹು ದಿನಗಳ ನಂತರ ಈ ಊರ ದರ್ಶನ ತಕ್ಕೊಳ್ಳುವ ಧೈರ್ಯ ಮಾಡಿದ್ದೇನೆ. ಇನ್ನು ಅಧಿಕಾರ ಧಾರಣ ಸಮಾರಂಭವು ಬೇಗನೆ ಆಗತಕ್ಕದ್ದಿದೆ. ಅದಾಯಿತೆಂದರೆ, ಕಾರಸ್ಥಾನಗಳ ಚಕ್ರಗಳು ಗರಗರನೆ ತಿರುಗಹತ್ತುವವು. ಆ ಬಳಿಕ ನನ್ನ ಪ್ರಕರಣವು ಎಲ್ಲಿ ಮತ್ತು ಹೇಗೆ ಗೊತ್ತುಹತ್ತೀತೆಂಬದನ್ನು ನೋಡಲಿಕ್ಕೆ ಬಂದೀತು. ಪಾಪ! ಆ ಡಬೀರರ ಪ್ರಭಾಕರನು ಜೀವದಿಂದಿರುವನೋ-ಸತ್ತಿರುವನೋ ಪತ್ತೆಯೇ ಇಲ್ಲ; ಅಂದಮೇಲೆ ಆತನ ನಿರ್ಣಯವು ಹೇಗಾಗುವದೋ ಆಗಲಿ; ಆದರೆ ನನ್ನಷ್ಟಕ್ಕಂತೂ ನಾನು ಪ್ರಯತ್ನ ಮಾಡಲೇ ಬೇಕು; ಮತ್ತು ಅದನ್ನು ನಾನು ಮಾಡತಕ್ಕವನೇ. ನಾನು ಆಗ ಕ್ಷಮೆ ಬೇಡಿ ಸೆರೆಮನೆಯಿಂದೇನೋ ಬಿಡುಗಡೆ ಹೊಂದಿದೆನು; ಆದರೆ ಆ ಬಿಡುಗಡೆಯಿಂದ ನನಗೆಂದೂ ಸುಖ-ಸಮಾಧಾನವೆನಿಸಿರುವದಿಲ್ಲ. ಹೊಟ್ಟೆಯೊಳಗಿನ ರೋಗವನ್ನು ಮುಚ್ಚಿಟ್ಟುಕೊಂಡು ಯಾವನೊಬ್ಬನು ಬಾಹ್ಯ ಜಗತ್ತಿನೊಡನೆ ಹೇಗೆ ನಡೆಯುವನೋ, ಕೇವಲ ಅದರಂತೆಯೇ ನನ್ನ ಅವಸ್ಥೆಯಾಗಿದೆ. ಆ ಕಟ್ಟಿನ ಖೊಟ್ಟಿ ಆರೋಪವನ್ನು ನನ್ನ ಮೇಲೆ ಹೊರಿಸಿದ್ದರಿಂದ ಅನ್ಯಾಯವು ನನಗಾಯಿತು! ಅಲ್ಲದೆ ಮರಳಿ ನಾನೇ ಕ್ಷಮೆ ಬೇಡಬೇಕಾಯಿತು! ಆದರೆ ಪ್ರಭಾಕರನ ತಂದೆಯು ಹಾಗೆ, ನನ್ನ ತಂದೆಯು ಹೀಗೆ! ಅಂದರೇನು? ಸಂಸ್ಥಾನೀ ಅಮಲ್‌ದಾರರ ಅಧಿಕಾರಕ್ಕೆ ಅಂಜುವವರು; ಅಲ್ಲದೆ ರಾಜನಿಷ್ಠೆಯ ಖೊಟ್ಟಿ ಕಲ್ಪನೆಗಳನ್ನು ಧರಿಸುವವರು. ಇರಲಿ. ನಡೆ; ಹೊತ್ತಾಯಿತು!

ಹೀಗೆ ಮಾತನಾಡಿ ಭಾನುವು ಚಟಕ್ಕನೆ ಎದ್ದು ನಿಂತನು. ಆ ಕೂಡಲೆ ಆತನ ಗೆಳೆಯನೂ ಎದ್ದನು. ಬಳಿಕ ಅವರಿಬ್ಬರೂ ಪ್ರಾಕಾರದ ಮೆಟ್ಟಿಲುಗಳನ್ನಿಳಿದು ದೇವಾಲಯದ ಮಹಾದ್ವಾರದೊಳಗಿಂದ ಹೊರಬಿದ್ದು ಹೋದರು.

---

## ೨ ಜೋಜಿಗ ಮಹಾರಾಜನು.

ನಾವು ಯಾವ ಕಾಲದ ಸಂಗತಿಯನ್ನು ಹೇಳಲಿರುವೆವೋ ಆ ಕಾಲಕ್ಕೆ ಜೋದ್ಯಪುರ ಸಂಸ್ಥಾನದ ರಾಜಕಾರಣವು ಕುದಿಹಿಡಿದು ಉಕ್ಕುವ ಭರಕ್ಕೆ ಬಂದಿತ್ತು. ಸಂಸ್ಥಾನದ ಹಳೇ ಮಾಲಕರು ತೀರಿಕೊಂಡು ಕೆಲವು ವರ್ಷಗಳಾಗಿದ್ದವು. ಅವರ

ತರುವಾಯ ಪ್ರಸ್ತುತದ ಮಹಾರಾಜರನ್ನು ದತ್ತಕ ಮಾಡಿಕೊಂಡ ಬಳಿಕ ಒಂದೇ ವರ್ಷದಲ್ಲಿ ರಾಣೀಸಾಹೇಬರೂ ತೀರಿಕೊಂಡರು. ಹೊಸ ಮಹಾರಾಜರು ಅಜ್ಞಾನರಿದ್ದ ಮೂಲಕ ಅವರು ರಾಜಕುಮಾರ ಕಾಲೇಜದಲ್ಲಿ ಕಲಿಯುತ್ತಿದ್ದರು; ಅದರಿಂದ ಅಧಿಕಾರದ ಸೂತ್ರಗಳು ದಿವಾಣರ ಕೈಯಲ್ಲಿ ಇದ್ದವು. ಅವರ ಮೇಲೆ ಪೋಲೀಟಿಕಲ್ ಏಜಂಟ ಸಾಹೇಬರ ಸರ್ವಸಾಧಾರಣವಾದ ತನಿಖೆಯಿದ್ದಿತು; ಆದರೆ ದಿವಾಣಸಾಹೇಬರು ತಮ್ಮ ಅಧಿಕಾರವನ್ನು ಹೆಚ್ಚಾಗಿ ದುರುಪಯೋಗಿಸಿದ ಮೂಲಕ ಪ್ರಜೆಗಳು ಕಂಗೆಟ್ಟು ಹೋಗಿ, ಹೊಸ ಅಮಲು ಯಾವಾಗ ಪ್ರಾರಂಭವಾದೀತೆಂಬದರ ಮಾರ್ಗನಿರೀಕ್ಷಿಸುತ್ತಿದ್ದರು. ಹೊಸ ಮಹಾರಾಜರಿಗೆ ಇಪ್ಪತ್ತೊಂದನೇ ವರ್ಷವು ಮುಗಿದು, ಅದರೊಡನೆ ರಾಜಕುಮಾರ ಕಾಲೇಜದ ಶಿಕ್ಷಣವೂ ಮುಗಿಯುತ್ತಲೆ ಅವರು ಪರದೇಶ ಪ್ರವಾಸದ ಅಪ್ಪಣೆಯನ್ನು ಕೇಳಿಕೊಂಡರು; ಮತ್ತು ಆ ಪ್ರವಾಸಕ್ಕಾಗಿ ಅವರು ಮೂರು ವರ್ಷಗಳ ಕಾರ್ಯಕ್ರಮವನ್ನಿಟ್ಟುಕೊಂಡರು!

ಆ ಮೂರು ವರ್ಷಗಳ ನಂತರ ಮಹಾರಾಜರು ಹಿಂದಿರುಗಿ ಬಂದರು. ರಾಜಕುಮಾರ ಕಾಲೇಜದ ಪ್ರಿನ್ಸಿಪಾಲರ ರಿಪೋರ್ಟಿನಲ್ಲಿ ಮಹಾರಾಜರ ಅಭ್ಯಾಸ, ಚಟುವಟಿಕೆ, ನಡಾವಳಿ ಮುಂತಾದವುಗಳ ಬಗ್ಗೆ ಒಳ್ಳೇ ಸ್ತುತಿಪರವಾದ ವಿವರಣವಿದ್ದಿತು. ಅದರಿಂದ ಬ್ರಿಟಿಶ ಸರಕಾರದವರು ಅವರಿಗೆ ಸಂಸ್ಥಾನದೊಳಗಿನ ಸರ್ವಾಧಿಕಾರ ಸಮರ್ಪಿಸುವದನ್ನು ಗೊತ್ತು ಮಾಡಿದರು. ಆಗ ಹೊಸ ಮಹಾರಾಜರು "ಆಡಳಿತದ ತುಸ ಅನುಭವ ಬಂದ ಮೇಲೆ ಪೂರ್ಣ ಅಧಿಕಾರವನ್ನು ವಹಿಸುತ್ತೇವೆ. ಸದ್ಯಕ್ಕೆ ಅಲ್ಪ ಅಧಿಕಾರಗಳೇ ಸಾಕು; ಆದರೆ ಉಳಿದ ಅಧಿಕಾರಗಳೆಲ್ಲ ನಾವು ಕೇಳಿದಾಗ ನಮಗೆ ಸಿಗುವ ವ್ಯವಸ್ಥೆಯಾಗಬೇಕು" ಎಂದು ತಾವೇ ಸರಕಾರಕ್ಕೆ ಬರೆದು ತಿಳಿಸಿದರು. ಅದರಿಂದ ದಿವಾಣ ಸಾಹೇಬರ ನೌಕರಿಯ ಅವಧಿಯು ಮತ್ತೆ ಹೆಚ್ಚಿಸಲ್ಪಟ್ಟಿತು; ಮತ್ತು ಅದರೊಡನೆಯೇ ಜೋಧ್ಯಪುರ ಸಂಸ್ಥಾನದ ಪ್ರಜೆಗಳ ನಿರಾಶೆಯು ಮಿತಿಮೀರಿತು!

"ಇನ್ನು ನೀವು ಲಗ್ನವಾಗುವಿರಾ?" ಎಂದು ಪೋಲೀಟಿಕಲ್ ಏಜಂಟನು ಹೊಸ ಸಂಸ್ಥಾನಿಕರನ್ನು ಕೇಳಲು, "ಇನ್ನೂ ಕೆಲವು ದಿವಸ ಅವಿವಾಹಿತರಾಗಿರುವದೇ ನಮ್ಮ ಮನಸ್ಸಿನಲ್ಲಿದೆ" ಎಂದು ಬರೆದು ತಿಳಿಸಿದರು. ಇಷ್ಟೇ ಅಲ್ಲ, ಈ ಹೊಸಬರ ನಡವಳಿಕೆಯು ಕೂಡ ಸರ್ವಸಾಮಾನ್ಯ ಸಂಸ್ಥಾನಿಕರಂತೆ ಒಳ್ಳೇ ಶೀಲವಿನದಾಗಿರಲಿಲ್ಲವೆಂಬದು ಜನರ ನಿದರ್ಶನಕ್ಕೆ ಬರತೊಡಗಿತು. ನಿಜವಾಗಿ ಯೋಚಿಸಿದರೆ, ಹೊಸ ಸಂಸ್ಥಾನಿಕರ ಆ ಕೇವಲ ಸಾಧುಪದ್ಧತಿಯು ನಡವಳಿಕೆಯಿಂದ ಪ್ರಜೆಗಳಿಗೆ ಯಾವ ತೊಂದರೆಯೂ ಉಂಟಾಗುವಂತಿರಲಿಲ್ಲ; ಆದರೆ ಯಾವ ರಾಜನು

ಇಷ್ಟು ಸಾಧು ನಡವಳಿಕೆಯವನಿರುವನೋ ಆತನು ಹುಚ್ಚನಾಗಲಿ, ವಿಕ್ಷಿಪ್ತ ಪ್ರಕೃತಿಯವನಾಗಲಿ, ಲಹರೀ ಸ್ವಭಾವದವನಾಗಲಿ ಆಗಿ, ಮತ್ತೆ ದಿವಾಣರ ಹಾಗು ಹಳೇ ಆಡಳಿತದ ಜನರ ಪ್ರಾಬಲ್ಯವೇ ಆಗುವದೇನೆಂಬ ಮತ್ತು ಅವರ ಆಳಿಕೆಯೇ ದೃಢವಾಗುವದೇನೆಂಬ ಅಂಜಿಕೆಯು ಪ್ರಜೆಗಳಿಗೆ ಉಂಟಾಗಹತ್ತಿದೆ. ನೋಡಿರಿ! ಯಾವ ರೀತಿಯಿಂದಲೂ ಜೋದ್ಯಪುರ ಸಂಸ್ಥಾನೀ ಪ್ರಜೆಗಳ ಗೋಳು ತಪ್ಪಲಿಲ್ಲ. ದುರ್ದೈವ ತೀರಲಿಲ್ಲ; ಯಾಕಂದರೆ ಕೆಡಕು ಕೆಡಕೆಂದು-ಚಲೋದು ಚಲೋದೆಂದು!

ಸಂಸ್ಥಾನೀ ಪ್ರಜೆಗಳ ಮನಃಸ್ಥಿತಿಯು ಬ್ರಿಟಿಶ ಮುಲುಖಿನ ಪ್ರಜೆಗಳಿಗೆ ಎಂದಿಗೂ ಚೆನ್ನಾಗಿ ಅವಗತವಾಗಲಿಕ್ಕಿಲ್ಲ. ಬ್ರಿಟಿಶರ ಸತ್ತೆಯ ಪ್ರದೇಶವು ವಿಸ್ತೀರ್ಣವಾದದ್ದು; ಆದರೆ ಅಲ್ಲಿ ದೇಶೀಯ ಅಧಿಕಾರಿಗಳ ಇಲ್ಲವೆ ಪ್ರಜೆಗಳ ಪಾಲಿಗೆ ಬರುವ ಎಲ್ಲ ಸಂಗತಿಗಳೂ ಮರ್ಯಾದಿತವಾಗಿರುತ್ತವೆ. ಸಂಸ್ಥಾನದೊಳಗೆ ಅದಕ್ಕೆ ತೀರ ವಿಪರೀತ ಸ್ಥಿತಿಯಿರುತ್ತದೆ. ಯಾವದೊಂದು ಸಂಸ್ಥಾನೀ ರಾಜ್ಯವು ಒಂದು-ಒಂದೂವರೆ ಸಾವಿರ ಮೈಲಿನ ಕ್ಷೇತ್ರ, ಒಂದೆರಡು ಲಕ್ಷ ಜನಸಂಖ್ಯೆ ಹಾಗು ಹತ್ತೆಂಟು ಲಕ್ಷ ಆದಾಯದ್ದಿದೆಯೆಂದು ಕಲ್ಪಿಸಿದರೂ ಕನಿಷ್ಟ ಪ್ರಜಾಜನರಿಂದ ಸರ್ವಶ್ರೇಷ್ಠ ರಾಜಸತ್ತೆಯ ವರೆಗಿನ ಎಲ್ಲ ಬಗೆಯ ಅಧಿಕಾರ, ವೈಭವ ಮತ್ತು ಅನುಭವಗಳು ಯಥಾಪ್ರಕಾರವಾಗಿ ಸಂಸ್ಥಾನದ ಪ್ರಜೆಗಳಿಗೆ ಅನುಭೋಗಿಸಲಿಕ್ಕೆ ಬರುತ್ತಿರುತ್ತವೆ. ಪಿಂಡ-ಬ್ರಹ್ಮಾಂಡ ನ್ಯಾಯದ ದೃಶ್ಯಯೋಗವು ಹಿಂದುಸ್ಥಾನದೊಳಗಿನ ಸಂಸ್ಥಾನೀ ಪ್ರದೇಶ, ಬ್ರಿಟಿಶ ಪ್ರದೇಶ ಇವುಗಳ ಸಾನ್ನಿಧ್ಯದಿಂದ ಚೆನ್ನಾಗಿ ಕಂಡುಬರುತ್ತದೆ. ಬ್ರಹ್ಮಾಂಡದಲ್ಲಿ ಒಂದು ತುದಿಗೆ ನಡೆದ ಪ್ರಕಾರವು ಎರಡನೇ ತುದಿಗೆ ಎಂದಿಗೂ ಗೊತ್ತು ಕೂಡ ಆಗುವದಿಲ್ಲ; ಆದರೆ ಚಿಕ್ಕದಾದ ಪಿಂಡದಲ್ಲಿಯೇ ವಿಶಾಲವಾದ ಬ್ರಹ್ಮಾಂಡದೊಳಗಿನ ಎಲ್ಲ ಸಂಗತಿಗಳು ಘಟಿಸಹತ್ತಿದರೆ ಅವುಗಳ ಜ್ಞಾನವು ಪಿಂಡದೊಳಗಿನ ಪ್ರತಿಯೊಂದು ಅಣುರೇಣುಗಳಿಗೂ ಸಹಜವಾಗಿ ಆದೀತು.

ಸಂಸ್ಥಾನದ ಅರಸನಿಗೆ ಎಲ್ಲ ಬಾಬುಗಳಲ್ಲಿ ದೇವರಿಗಿಂತ ತುಸ ಕಡಿಮೆಯಾದ 'ಕರ್ತುಂ ಅಕರ್ತುಂ' ಅಧಿಕಾರವಿರುತ್ತದೆ. ಮನಸ್ಸಿಗೆ ಬಂದರೆ ಆತನು ಯಾವನೊಬ್ಬ ಪ್ರಜೆಯನ್ನು ಒಮ್ಮೆಲೆ ಶ್ರೀಮಂತನನ್ನಾಗಿ ಮಾಡಬಲ್ಲನು; ಅಥವಾ ಯಾವನೊಬ್ಬ ಶ್ರೀಮಂತನನ್ನು ತೀರ ಬಡವನನ್ನಾಗಿ ಮಾಡಿಯಾನು. ಅವನು ಯಾವನೊಬ್ಬನ ಕೊರಳಿಗೆ ತನ್ನ ಮಗಳನ್ನು ಕಟ್ಟಿ ಆತನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬಹುದಂತೆಯೇ, ಬೇಕಾದವನ ಮನೆಯ ಹೆಣ್ಣನ್ನು ಒಡಿಸಿಕೊಂಡೊಯ್ದು ಆಕೆಯೊಡನೆ ಲಗ್ನವಾಗಿ ಆತನ ಅಳಿಯನೂ ಆದಾನು! ಅನ್ಯಾಯದಿಂದ ಪ್ರಜೋತ್ಪಾದನ ಮತ್ತು ಪ್ರಾಣದಾನಗಳನ್ನು ಒಮ್ಮೊಮ್ಮೆ ಮಾಡಿದರೆ, ಮತ್ತೊ-

ಮ್ಮೆ ಅದೇ ನ್ಯಾಯದಿಂದ ಪ್ರಜೆಗಳ ಪ್ರಾಣ ಕೂಡ ಹೀರಿಯಾನು! ಬೇಕಾದಂತಹ ಸಾವುಕಾರನ ಮನೆಯನ್ನು ಕೆಡವಿ ಹಾಳು ಮಾಡಿಯಾನು; ಹಾಗು ಹಾಳು ಬಿದ್ದ ಭೂಮಿಯ ಮಾಲಕನಿಂದ ಅದನ್ನು ಅಪಹರಿಸಿ ಅದರ ಮೇಲೆ ತನ್ನ ಅರಮನೆ ಕಟ್ಟಿಸ್ಯಾನು! ಯಾವನೊಬ್ಬ-ದಿವಾನಾ-ಹುಚ್ಚ ಮನುಷ್ಯನ ಮೇಲೆ ಸಂಸ್ಥಾನಿಕನ ಕೃಪೆಯಾದರೆ ತುಸ ದಿನಗಳಲ್ಲಿಯೇ ಆ ದಿವಾನಾ ಮನುಷ್ಯನು ಆ ಸಂಸ್ಥಾನದ ದಿವಾಣನೇ ಆದಾನು; ಮತ್ತು ದಿವಾಣನ ಮೇಲೆ ಅವಕೃಪೆಯಾದರೆ ಆತನನ್ನು ಅವನು ದಿವಾನಾ ಮಾಡಿ ಬಿಟ್ಟಾನು! ತಾತ್ಪರ್ಯವೇನಂದರೆ, ಮುಂಬಯಿಯ ಸಟ್ಟಾ ಬಝಾರದಲ್ಲಿ ಒಂದೇ ದಿನದಲ್ಲಿ ಶ್ರೀಮಂತಿಕೆ, ದಾರಿದ್ರ್ಯತೆ ಇವುಗಳ ಅದಲುಬದಲು ಒಂದೇಸವನೆ ಹೇಗಾಗುತ್ತಿರುವದೋ, ಕೇವಲ ಅದರಂತೆಯೇ ಸಂಸ್ಥಾನೀ ಅಮಲಿನಲ್ಲಿ ಪ್ರಜೆಗಳ ಸುಖ-ದುಃಖಗಳ ಅದಲುಬದಲಾಗುತ್ತಿರುತ್ತದೆ. ಬ್ರಹ್ಮಾಂಡದೊಳಗಿನ ಚಲನವಲನವೂ ಪಿಂಡಾಂಡದೊಳಗಿನ ಚಲನವಲನವೂ ಒಂದೇ ಬಗೆಯಾಗಿರುತ್ತದೆ; ಆದರೆ ಪಿಂಡಾಂಡದ ಚಲನವಲನದ ಪ್ರಮಾಣವು ಮಾತ್ರ ತೀರ ಸೂಕ್ಷ್ಮತರದ್ದಿರುತ್ತದಷ್ಟೇ.

ಇಂಥ ಸಣ್ಣ ರಾಜ್ಯಗಳಲ್ಲಿಯ ಪ್ರಜೆಗಳಿಗೆ ಯಾವ ಬಗೆಯ ಸುಖವು ದೊರೆಯಬೇಕೆಂಬ ಇಚ್ಛೆಯಿರುತ್ತದೋ, ಅದರಂತೆಯೇ 'ರಾಜವೈಭವ' ನೋಡದೊರೆಯಬೇಕೆಂಬ ಇಚ್ಛೆಯೂ ಅವರಿಗಿರುತ್ತದೆಂಬ ಮಾತು ಸುಳ್ಳಲ್ಲ. ವೈಭವವನ್ನನು ಭೋಗಿಸತಕ್ಕವನು ರಾಜನೇ; ಆದರೆ ವೈಭವವನ್ನು ನೋಡುವ ಪ್ರಜೆಗಳಿಗೆ ಕೇವಲ ಅದರ ನೋಟದಿಂದಲೇ ತಾವೂ ಅದನ್ನು ತುಸ ಭೋಗಿಸಿದೆವೆಂಬ ಆಭಾಸವಾಗುತ್ತಿರುತ್ತದೆ. ಹಬ್ಬ ಹುಣ್ಣಿವೆಗಳಲ್ಲಿ ಅರಸನ ಮೆರವಣಿಗೆ ಹೊರಡಬೇಕು; ಹರಿವದ್ದೀ ಏಕಾಗಲೊಲ್ಲದು-ಜರದ ನಿಶಾನೆಯು ಮೆರೆಯಬೇಕು; ಧಾರ್ಮಿಕ ಉತ್ಸವಗಳಲ್ಲಿ ಅರಸನು ಪ್ರಜೆಗಳೊಡನೆ ಭಾಗ ವಹಿಸಬೇಕು; ದರಬಾರವು ಕೂಡಿ ಅರಮನೆಯಲ್ಲಿ ನಗಾರಿ ನೌಬತ್ತುಗಳು ಮೊಳಗಬೇಕು; ಕಾಳಿಯು ಊದಬೇಕು. ಕುಸಿಮದ್ದಿನವೇ ಏಕಾಗಲೊಲ್ಲವು, ತೋಫು ಹಾರಬೇಕು; ಹಳೇ ಮಾದರಿಯವೇ ಇರಲೊಲ್ಲವೇಕೆ, ಆದರೂ ಬಂದೂಕಗಳ ಬಾರುಗಳಾಗಬೇಕು; ತೋರಿಕೆಗೇ ಏಕಾಗಲೊಲ್ಲದು, ಚಿತ್ರವಿಚಿತ್ರ ಬಣ್ಣದ ಉಡುಪಿನ ಶಿಪಾಯಿಗಳ ಕವಾಯತು ಆಗಬೇಕು; ಹರಿದಾಸರವೇ ಆಗಲೊಲ್ಲವೇಕೆ, ಆದರೆ ಆದೇ ಕಾಲಕ್ಕೆ ಶೃಂಗರಿಸಲ್ಪಟ್ಟ ಸಾಲ್ಕಾರು ಕುದುರೆಗಳನ್ನೇರಿದ ಸ್ವಾರರು ಇತ್ತಿಂದತ್ತ-ಅತ್ತಿಂದಿತ್ತ ಸವಾರಿ ಮಾಡುತ್ತಿರುವದು ಕಾಣಬೇಕು; ಕಗ್ಗ ಕೂಳಿನದೇ ಏಕಾಗಲೊಲ್ಲದು, ಊರೂಟಗಳ ಸಮಾರಂಭಗಳಾಗುತ್ತಿರಬೇಕು; ಮುದುಕಿ-ತದಕಿ ಪಾತರದವರೇ ಇರಲೊಲ್ಲವೇಕೆ, ಆ ಜನರ ನಾಚು-ರಂಗು ಹಾಡು-ಬಾರಿಸುವ ದರ್ಬಾರೀ ನಾಚು-ರಂಗು



ಆ ಇಬ್ಬರು ಗೆಳೆಯರಲ್ಲಿ ಈ ಬಗೆಯ ಸಂಭಾಷಣ ನಡೆದಿರಲಿಕ್ಕೆ ಒಂದು ಸುಂದರವಾದ ಕುದುರೆಯು ಖೇಕರಿಸುತ್ತ ಖೇಕರಿಸುತ್ತ ಆ ದೇವಾಲಯದ ಹೆಬ್ಬಾಗಿಲಿಗೆ ಬಂದಿತು............

ಪುಟ ೧೨ ಸಾಲು ೨೦ ರಿಂದ

ಗಳಾಗಬೇಕೆಂದು ಸಂಸ್ಥಾನೀ ಪ್ರಜೆಗಳ ಇಚ್ಛೆಯಿರುತ್ತದೆ; ಮತ್ತು ಅದು ಸಣ್ಣ ಪುಟ್ಟ ಸಂಸ್ಥಾನದಲ್ಲಿ ಕೂಡ ಈಡೇರುತ್ತಿರುತ್ತದೆ.

ಆದರೆ ಬ್ರಿಟಿಶ ಮುಲುಖಿನಲ್ಲಿ ಅದೊಂದೂ ಇರುವದಿಲ್ಲ. ನೋಡಿದತ್ತೆಲ್ಲ ಹಾಳೇ ಹಾಳು! ಅಧಿಕಾರಿಗಳಲ್ಲಿಯ ಸರ್ವ ಶ್ರೇಷ್ಠ ಅಧಿಕಾರಿಯು ಪ್ರಜೆಗಳ ದೃಷ್ಟಿಗೆ ಸಹಸಾ ಬೀಳಲಾರನು; ಮತ್ತು ಒಮ್ಮೊಮ್ಮೆ ಕಂಡರೂ ಆತನ ಮೈಗೆ ಹಳೇ ಪದ್ಧತಿಯ ಯಾವ ವೈಭವವೂ ಅಂಟಿಕೊಂಡಿರಬಾರದು. ಬ್ರಿಟಿಶ ಮುಲುಖಿನಲ್ಲಿಯೂ ಆಫಳಿತದ ಸಂಸಾರವಿದೆ; ಆದರೆ ಅದೆಲ್ಲವೂ ಕೇವಲ "ಸಂನ್ಯಾಸಿಯ ಸಂಸಾರ' ದಂತೆಯೇ ಸರಿ! ಪ್ರಜೆಗಳ ಮಟ್ಟಿಗಂತೂ ವೈಭವವು ಸಾಹೇಬರ ವಿಭೂತಿಯು, ಅಂದರೆ ಬಿಳಿಯ ಭಸ್ಮದ್ದೇ! ಇದಕ್ಕೆ ಪ್ರತಿಯಾಗಿ ಸಂಸ್ಥಾನೀ ಪ್ರಜೆಗಳಿಗೆ ಸುಖವು ಬೇಕು; ಆದರೆ ಅದು ತಮ್ಮ ರಾಜನಿಂದ ದೊರೆತಿರಬೇಕು. ಅವರಿಗೆ ರಾಜನ ಬಗ್ಗೆ ಸ್ವತ್ವವು ತೋರುವದು. ಮನಸ್ಸಿನೊಳಗಿನ ಸಾಂಕ್ರಮಿತ ವೈಭವವು ಸ್ವತ್ವದಿಂದಲೇ ತೋರುತ್ತದೆಂಬದು ನಿಜವಿರಬಹುದೇನು?

ಈ ಬಗೆಯಿಂದ ಚೋದ್ಯಪುರದ ಹೊಸ ಮಹಾರಾಜನು ಪ್ರಜೆಗಳನ್ನು ಹೆಚ್ಚಾಗಿ ವಿರಸನಗೊಳಿಸಿದನು! ಆತನ ಅರಮನೆಗೆ ಅಂತಃಪುರವೇ ಇರಲಿಲ್ಲ! ಅರಮನೆಯೊಳಗಿನ ಬೇಕಾದ ಕಡೆಗಳಲ್ಲಿ ಸುತ್ತಿಕೊಂಡು ಬರಲಿಕ್ಕೆ ಯಾರಿಗೂ ಪ್ರತಿಬಂಧವಿರಲಿಲ್ಲ; ಮತ್ತು ಹಾಗೆ ಅಡ್ಡಾಡುವವನಿಗೆ ಅಕಸ್ಮಾತ್ತಾಗಿ ಮಹಾರಾಜರು ಕಣ್ಣಿಗೆ ಕಂಡರೆ, ಅವರನ್ನು ಸಾಮಾನ್ಯಮನುಷ್ಯರಿಂದ ವಿಂಗಡಿಸಿ ತಿಳಕೊಳ್ಳಲಿಕ್ಕೆ ಬರುವಂತಿರಲಿಲ್ಲ. ಅವರು ತಮ್ಮ ಮೈಯಲ್ಲೊಂದು ಸ್ವಚ್ಛವಾದ ಶರ್ಟುಹಾಕಿ, ತಲೆಗೊಂದು ಸಾಪಾ ಟೊಪ್ಪಿಗೆ ಇಲ್ಲವೆ ಚಿಕ್ಕರುಮಾಲ ಸುತ್ತುವರು. ಅವರ ಮೈಮೇಲೆ ಬಂಗಾರ-ಮುತ್ತು-ರತ್ನಗಳ ಆಭರಣಗಳಿಲ್ಲ. ಕಾಲ್ಮರಿಗೆ ಕಲಾಬತಿಲ್ಲ. ಬಾಯಲ್ಲಿ ತಾಂಬೂಲವಿಲ್ಲ. ಬೆತ್ತಕ್ಕೆ ಬೆಳ್ಳಿ-ಬಂಗಾರದ ಬೇಡಿಗಳಿಲ್ಲ. ಅವರು ಯಾರೊಡನೆಯೂ ತುಚ್ಛತಾದರ್ಶಕವಾದ ಏಕವಚನದಿಂದ ಮಾತನಾಡುತ್ತಿದ್ದಿಲ್ಲ. ಯಾವನೊಬ್ಬನು ಅವರಿಗೆ ಒಂದು ಕೈಯಿಂದ ಸಲಾಮು ಮಾಡಿದರೆ, ಅವರು ಅವನಿಗೆ ಎರಡೂ ಕೈಗಳನ್ನು ಜೋಡಿಸಿ ತಲೆಬಾಗಿ ನಮಸ್ಕರಿಸುವರು. ಯಾರೊಬ್ಬರು ಭೇಟಿಯಾಗಬೇಕೆಂದರೆ 'ನ'ಕಾರವಿಲ್ಲ. ಭೆಟ್ಟಿಗೆ ಬಂದವನೇ ಅವರೊಡನೆ ಮಾತಾಡಲಿಕ್ಕೆ ಬೇಸತ್ತು ಹೊರಟು ಹೋಗಬೇಕು! ಅವರು ದಾರಿ ಹಿಡಿದು ಸಾಗಿರುವಾಗ ಹೆಣ್ಣು ಮಕ್ಕಳ ಕಡೆಗೆ ಕಣ್ಣೆತ್ತಿ ಕೂಡ ನೋಡರು! ಹೀಗೆ ಮಹಾರಾಜರ ಸಂಸಾರದ ಒಂದು ಅಂಗದ ವರ್ಣನವಿದು. ಇನ್ನೂ ಲಗ್ನವಾಗದ್ದರಿಂದ ಅವರ ಎರಡನೇ ಅಂಗದ ಬಗ್ಗೆ ಮಾತಾಡುವ ಅವಶ್ಯಕತೆಯೇ ಉಳಿದಿರಲಿಲ್ಲ. ಇದೇನು ಅರಮನೆಯೋ ಅಥವಾ ಯಾವುದೊಂದು ಮಠವೋ? ಎಂದು ಅವರ ಅರಮನೆಯನ್ನು ನೋಡಿದ

ಪ್ರಜೆಗಳಿಗೆ ಹೇಗೆ ಹೇಗೋ ಅನಿಸುತ್ತಿತ್ತು. ಇನ್ನು ರಾಜ್ಯಾದಾಡಳಿತದಲ್ಲಿ ಲೋಕೋತ್ತರ ಪ್ರಕಾರವೇನಾದರೂ ಕಂಡೀತೆಂದರೆ, ಅವರು ಇನ್ನೂ ಸಂಪೂರ್ಣ ಅಧಿಕಾರ ವಹಿಸಿರಲಿಲ್ಲ; ಅಲ್ಪ ಅಧಿಕಾರಿಗಳಿಗೆ ಮಾತ್ರ ಪಾತ್ರರಾಗಿರುವರು. ತಾತ್ಪರ್ಯವಿಷ್ಟೇ, ಹೊಸ ಮಹಾರಾಜರ ಹಿಂದೆ ಚಲೋ-ಕೆಡಕು ವಿಶೇಷಣ ಗಳನ್ನು ಹಚ್ಚಲಿಕ್ಕೆ ಅಲ್ಲಿಯ ಪ್ರಜೆಗಳಿಗೆ ಆಸ್ಪದವಿರದ್ದರಿಂದ, ಅವರೊಂದು ಬಗೆಯ ಶಂಕೆಯಲ್ಲಿಯೇ ಗರ್ಕರಾಗಿ ಬಿಟ್ಟಿದ್ದರು.

ದಿವಾಣ ಸಾಹೇಬರ ಸ್ಥಿತಿಯು ಮಹಾರಾಜರ ಸ್ಥಿತಿಗೆ ತೀರ ವಿಪರೀತ ವಾಗಿತ್ತು. ಯಾವುದಕ್ಕೆ 'ರಾಜಯೋಗ'ವೆಂದೆನ್ನಬೇಕೋ, ಅದು ಸಂಪೂರ್ಣ ವಾಗಿ ಸಂಸ್ಥಾನದ ಹೊಸ ಯಜಮಾನರಿಂದ ಹೊರಟು ದಿವಾಣರ ಮೈಮೇಲೇರಿ ಕುಳಿತಿತ್ತು. ದಿವಾಣರು ದೇಹದಿಂದ ಎತ್ತರಾಗಿಯೂ ಧಷ್ಟಪುಷ್ಟರಾಗಿಯೂ ಇದ್ದರು. ಅವರ ವಯಸ್ಸು ಐವತ್ತೈದೇ ಆಗಿದ್ದರೂ, ತಲೆ ಹಾಗು ಮೋರೆಯ ಮೇಲಿನ ಕೂದಲುಗಳೆಲ್ಲ ಬೆಳ್ಳಗಾಗಿದ್ದವು; ಆದರೆ ಅವರು ಪ್ರತಿನಿತ್ಯವೂ ಅವುಗಳಿಗೆ ಕಲಪು ಮೊದಲಾದ ಬಣ್ಣಗಳನ್ನು ಕೊಡೆದು, ತಾರುಣ್ಯದ ಆಭಾಸವನ್ನುಂಟು ಮಾಡುತ್ತಿದ್ದರು. ಮೀಸೆಗಳು ದೊಡ್ಡವೂ ಹುರಿಕಟ್ಟಿನವೂ ಆಗಿದ್ದವು; ಅವರು ಕಲ್ಲೀಮೀಸೆ ಕಾಯ್ದಿದ್ದರು; ಮತ್ತು ಅವರ ಸಂಜಾಪಿನ ಕೂದಲುಗಳು ಗೋಣಿನ ಮೇಲೆ ಇಳಿಬಿದ್ದಿರುತ್ತಿದ್ದವು. ದಿನಾಲು ಮುಖಕ್ಷೌರ, ಸುಗಂಧದ ಎಣ್ಣೆ ಹಚ್ಚಿ ಕೊಂಡು ಸ್ನಾನ ಮತ್ತು ಹಣೆಯ ಮೇಲೆ ಪವನಾಕಾರದ ಕೇಶರೀಗಂಧದ ಬೊಟ್ಟು! ಕಿವಿಯಲ್ಲಿ ಹಳೇ ಪದ್ಧತಿಯ ಇಂಥಿಂಥ ಮುತ್ತಿನ ಮೋಲ್ಮುರುವು! ಕಣ್ಣಿಗೆ ಬಂಗಾರದ ಕಟ್ಟಿನ ಚಾಳೀಸು. ಅದು ಚಿನ್ನದ ಸರಪಳಿಯಿಂದ ಜೇಬಿ ನಲ್ಲಿ ಇಳಿಬಿಟ್ಟಿರುವದು. ತಲೆಗೆ ತುರಾಯಿಯುಳ್ಳ ರೇಶ್ಮೀ ಮುಂಡಾಸ! ಕಣ್ಣೊಳಗೆ ಮುತ್ತಿನಿಂದ ತಯಾರಿಸಲ್ಪಟ್ಟ ಸುರಮಾ-ಕಾಡಿಗೆ. ಕಿವಿಯ ಹೊದರ ನಲ್ಲಿ ಸುಗಂಧ ತೈಲಗಳಲ್ಲದ್ದಿದ ಫಾಯಾ-ಅರಳೆ. ಬಾಯಲ್ಲಿ ಬಳ್ಳೀ ಕೆಂಪಾದ ತ್ರಯೋದಶಗುಣೀ ತಾಂಬೂಲ. ಮೈಯೊಳಗೆ ಕೆಂಪು ರೇಶ್ಮಿಯ ಉದ್ದನ್ನ ಕೋಟು. ಅದರ ಮೇಲೆ ಬಾಜೀರಾವೀ ರೀವಿಯ-ನಾಗಪುರದಂಚಿನ-ಹೊದೆಯುವ ದೋತರ. ಕೈಯಲ್ಲಿ ಬಂಗಾರದ ಹಿಡಿಕೆಯ ಕೋಲು. ಮುಂಗೈಯಲ್ಲಿ ಬಂಗಾರದ ರಿಷ್ಟವಾಚ್. ಬೆರಳೊಳಗೆ ವಜ್ರದುಂಗುರ. ಕಾಲೊಳಗೆ ಕರಕರವೆಂದು ಸಪ್ಪಳ ಮಾಡುವ ಹಸರು ಬಣ್ಣದ ಮೊಗಲಾಯಿ ಜೋಡು! ತಾತ್ಪರ್ಯವೇನೆಂದರೆ, ನಮ್ಮ ದೇಶದೊಳಗಿನ ಹಳೇ ಸುಪ್ರಸಿದ್ಧ ಸಂಸ್ಥಾನೀ ಪದ್ಧತಿಗಳಲ್ಲಿ ಯಾವ ಯಾವದು ತೋರಿಕೆಯ ವೈಭವವೆಂದು ಮನಸ್ಸಿನಿಂದ ಕಲ್ಪಿಸಲಿಕ್ಕೆ ಬರುವದೋ

೩ ಲ್ಲವೂ ಆ ದಿವಾಣರ ಮೈಮೇಲೆ ಕಂಡುಬರುತ್ತಿತ್ತು. ಆ ವೈಭವದೊಳಗಿನ

ಇನ್ನೊಂದೇ ಸಂಗತಿಯು ಹೇಳುವದುಳಿಯಿತು. ಅದೇನಂದರೆ, ಅವರ ಬಾಯೊಳಗಿನ ಅಖಂಡವಾದ ಅವಾಚ್ಯ ಬೈಗಳು!

ಮಹಾರಾಜ ಜೋಜಿಗರಾಯರಿಗೆ ಈಗ ದೊರೆಯುವ ಅಧಿಕಾರಗಳು ಅಲ್ಪವಾಗಿದ್ದವು; ಆದರೂ ಅವುಗಳ ವಿಷಯದ ಸಮಾರಂಭವು ಮಾತ್ರ ಸಂಪೂರ್ಣ ಅಧಿಕಾರ ದೊರೆಯುವಾಗಿನಂತೆಯೇ ಆಗಿತ್ತು. ಯಾಕಂದರೆ ಅಧಿಕಾರ ಪ್ರಾಪ್ತಿಯು ಅಲ್ಪವಾಗಿದ್ದರೂ, ರಾಜ್ಯಾರೋಹಣವು ಸಂಪೂರ್ಣವೇ ಆಗಿದ್ದಿತು. ಏನಿಲ್ಲೆಂದರೂ ರಾಜ್ಯಾರೋಹಣಕ್ಕೆ ಸಮಾರಂಭದ ಸ್ವರೂಪವು ಬಾರದಿದ್ದರೆ ಹೇಗೆ ನಡೆದೀತು? ಆದರೆ ಆ ಸಮಾರಂಭವು ಉತ್ಸಾಹಕ್ಕಾಗಿ ಆಗುತ್ತಿದ್ದರೂ, ಆ ಉತ್ಸಾಹವು ಸ್ವತಃ ಆ ಮಹಾರಾಜರದಾಗಿರದೆ, ಇತರೇ ಜನರದಾಗಿತ್ತು.

ಆ ಇತರೇ ಜನರಲ್ಲಿ ಪೋಲೀಟಿಕಲ್ ಏಜಂಟ ಸಾಹೇಬರ ಮಡದ್ಮಾ ಸಾಹೇಬ ಮಿಸೆಸ್ ಮಕಸ್ವಿನೀ ಇವರು ಮೊದಲನೆಯವರಾಗಿದ್ದರು. ಆ ಸಾಹೇಬರು ಕಲೆಕ್ಟರ ರ್‍ಯಾಂಕಿನವರು. ಇಂದಿನ ವರೆಗೆ ಬೇರೆ ಯಾವದಿರದ್ದರೂ, ಇದೊಂದೇ ಸಂಸ್ಥಾನವು ಅವರ ಕೈಕೆಳಗೆ ಬಂದಿತ್ತು. ಮೊದಲು ಅವರು ಜೋದ್ಯಪುರಕ್ಕೆ ಭೆಟ್ಟಿಕೊಡುತ್ತಿದ್ದಾಗ ದಿವಾಣಸಾಹೇಬರೇ ಪ್ರಾಮುಖ್ಯವಾಗಿ ಅವರ ಆದರ-ಸತ್ಕಾರಗಳನ್ನು ನಡೆಸುತ್ತಿದ್ದರು; ಯಾಕಂದರೆ ದಿವಾಣಸಾಹೇಬರಿಗಾದರೂ ವಿಶೇಷ ಪ್ರಕಾರದಿಂದ ಮೆರೆಯಲಿಕ್ಕೂ ಜಂಭಬಡಿಯಲಿಕ್ಕೂ ಅದೊಂದೇ ಹೇಳಿಕೊಳ್ಳುವಂತಹ ಪ್ರಸಂಗವಿರುತ್ತಿತ್ತು; ಆದರೆ ಎಲ್ಲಿಯವರೆಗೆ ಮನೆಯ ಮಾಲಕನು-ರಾಜನು-ಪಟ್ಟವನ್ನೇರಿರುವದಿಲ್ಲವೋ, ಅಲ್ಲಿಯವರೆಗೆ ದಿವಾಣನು ಏಜಂಟನ ಸತ್ಕಾರ ಮಾಡಿದರೂ, ಅದು ಧರ್ಮಶಾಲೆಯೊಳಗಿನ ಕಾವಲುಗಾರನು ದುಡ್ಡಿನಾಶೆಗಾಗಿ ಯಾವನೊಬ್ಬ ದುಡ್ಡಿಸ್ತನ ಸತ್ಕಾರ ಮಾಡಿದಷ್ಟೇ ಬೆಲೆಗಂಡೀತು! ಆ ಏಜಂಟಸಾಹೇಬರು ಬೇಗನೆ ಆ ಜಿಲ್ಲೆಯ ಹಾಗು ಪೋಲೀಟಿಕಲ್ ಏಜಂಟನ ಅಧಿಕಾರ ಬಿಟ್ಟು ಬೇರೆ ಜಿಲ್ಲೆಗೆ ವರ್ಗಾಗಿ ಹೋಗತಕ್ಕವರಿದ್ದ ಮೂಲಕ, ಅಧಿಕಾರದಾನ-ರಾಜ್ಯಾರೋಹಣಗಳ ಶುಭಸಂತೋಷದಾಯಕ ಪರೋಪಕಾರದ ಕಾರ್ಯವು ತಮ್ಮ ಗಂಡನ ಕೈಯಿಂದಲೇ ಆಗಬೇಕೆಂಬ ಇಚ್ಛೆಯು ಮಡದ್ಮಾ ಸಾಹೇಬರಿಗೆ ಸಹಜವಾಗಿಯೇ ಇದ್ದಿತು. ಇಂಥ ಸಮಾರಂಭಗಳಲ್ಲಿ ದೊರಕುವ ಮಾನ-ಸನ್ಮಾನಗಳು ಕಲೆಕ್ಟರನ ರುಕ್ಷ ಕಾರಭಾರದಲ್ಲಿ ಎಲ್ಲಿ ದೊರೆಯಬೇಕು? ಬ್ರಿಟಿಶ ಮುಲುಖಿನೊಳಗಿನ ಅಧಿಕಾರಿಗಳಿಗೆ ಆನೆಯ ಮೇಲೆ ಕೂಡ್ರಬೇಕೆಂದೆನಿಸಿದರೆ, ಅವರಿಗೆ ಅದು ಸಂಸ್ಥಾನದಲ್ಲಿಯೇ ದೊರೆಯಬೇಕು; ಮತ್ತು ಬೇಟೆಯ ಆಡಂಬರವಾದರೂ ಸಂಸ್ಥಾನಗಳಲ್ಲಿಯೇ ಚೆನ್ನಾಗಿ ಆಗುತ್ತದೆ.

ಆ ಮಡಮ್ಮ ಸಾಹೇಬರ ದೃಷ್ಟಿಯು ಈ ಮೊದಲಿನ ಭೆಟ್ಟಿಯ ಕಾಲಕ್ಕೆ ಆ ಅರಮನೆಯೊಳಗಿನ ಮೂರು ನಾಲ್ಕು ಸುಂದರ ವಸ್ತುಗಳ ಮೇಲೆ ಬಿದ್ದಿತ್ತು. ಅವುಗಳ ವಿಷಯದ ಅವರ ಗುಣವರ್ಣನವು ದಿವಾಣ ಸಾಹೇಬರ ಕಿವಿಗೆ ಮುಟ್ಟಿತ್ತು. ಆದರೂ ಆ ಗುಣವರ್ಣನವು ಹುಸಿಯಾಗಿ ಹೋಗಿತ್ತು; ಯಾಕಂದರೆ ಆ ವಸ್ತುಗಳನ್ನು ತಮ್ಮ ಕೈಯಿಂದೆತ್ತಿ ಮಡಮ್ಮ ಸಾಹೇಬರಿಗೆ ದಾನ ಮಾಡುವ ಅಧಿಕಾರವು ದಿವಾಣ ಸಾಹೇಬರಿಗಿರಲಿಲ್ಲ; ಆದರೆ ಖುದ್ದ ಸಂಸ್ಥಾನಿಕರೇ ಅಧಿಕಾರಿಗಳಾದರೆಂದರೆ, ತಮಗೆ ಅಲ್ಪ ಅಧಿಕಾರಿಗಳಿರುವಾಗಲೂ ಕೂಡ ಅವರು ಅರಮನೆಯೊಳಗಿನ ಬೇಕಾದ ವಸ್ತುಗಳನ್ನು ತಮ್ಮ ಕೈಯಿಂದೆತ್ತಿ ಕೊಡಲಿಕ್ಕೆ ಅವರಿಗೆ ಸಂಪೂರ್ಣ ಹಕ್ಕಿರುತ್ತದೆ. ಅದರಿಂದ ತಾನೂ ತನ್ನ ಗಂಡನೂ ರಾಜ್ಯಾರೋಹಣದ ಸಲುವಾಗಿ, ಅಂದರೆ ಸಂಸ್ಥಾನಿಕರ ಮೇಲ ಉಪಕಾರದ ಹೊರೆ ಹೊರಿಸುವ ಸಲುವಾಗಿ ಹೋದೆವೆಂದರೆ, ಸಂಸ್ಥಾನಿಕರಿಗೂ ಕೆಲ ಪ್ರತ್ಯುಪಕಾರ ಮಾಡುವ ಬುದ್ಧಿಯು ಹುಟ್ಟಿಯೇ ಹುಟ್ಟುವದು! ಮತ್ತು ಅದರಲ್ಲಿಯೂ ಯಾವ ಸುಂದರ ವಸ್ತುಗಳ ವಿಷಯದಲ್ಲಿ ಮಡಮ್ಮ ಸಾಹೇಬರು ಪ್ರಶಂಸೆಯ ಉದ್ಗಾರ ಹೊರಡಿಸಿದ್ದರೊ, ಆ ಸಂಗತಿಯು ದಿವಾಣರ ಮುಖದಿಂದ ಸಂಸ್ಥಾನಿಕರಿಗೆ ತಿಳಿದಿದ್ದರೆ ಆ ಮೇಲೆ "ಕಾಣಿಕೆ! ಕಾಣಿಕೆ!" ಎಂದು ಬಾಯಿಂದ ಅನ್ನದೆ, ಆ ವಸ್ತುಗಳನ್ನು ಪ್ರತ್ಯಕ್ಷವಾಗಿ ಕೊಟ್ಟುಬಿಡುವ ಕ್ರಿಯಾಕರ್ಮದ ರಾಜಮಾರ್ಗವು ನಿರಾತಂಕವೇ ಆಗಿರುತ್ತದೆ. ಒಂದು ಭೆಟ್ಟಿಯ ಕಾಲಕ್ಕೆ ಅವರಿಗೆ ಆ ಅರಮನೆಯ ಮೋತೀಖಾನೆಯೊಳಗಿನ ಮುತ್ತಿನ ಒಂಟಿಳೆ ಸರವು ಒಳ್ಳೇ ಮೋಹಕವಾಗಿ ಕಂಡಿದ್ದಿತು, ಮತ್ತೊಂದು ಭೆಟ್ಟಿಯಲ್ಲಿ ಅವರು ಅಲ್ಲಿಯದೊಂದು ಹಸ್ತಿದಂತದ ಚವರಿಯ ಸ್ತುತಿಗೆಯ್ದಿದ್ದರು. ಮಗದೊಂದು ಭೆಟ್ಟಿಯ ಕಾಲಕ್ಕೆ ವಜ್ರ-ವೈಢೂರ್ಯಗಳಿಂದ ಕೆಚ್ಚಲ್ಪಟ್ಟ ಒಂದು ಅತ್ತರದಾಣಿಯನ್ನು ನೋಡಿ ಬೆರಗಾಗಿ, ಅದನ್ನು ನಿರ್ಮಿಸಿದ ಶಿಲ್ಪಿಗನ ಮೇಲೆ ತಮ್ಮ ಅಮೋಘವಾದ ಸ್ತುತಿಯ ಮಳೆಯನ್ನೇ ಕರೆದದ್ದನ್ನು ದಿವಾಣ ಸಾಹೇಬರು ಮನಗಂಡಿದ್ದರು. ತಾತ್ಪರ್ಯವಿಷ್ಟೇ, ತನ್ನ ಗಂಡನು ಆ ಜಿಲ್ಲೆಯಿಂದ ವರ್ಗವಾಗಿ ಹೋಗುವ ಮೊದಲೇ ಆ ಸಂಸ್ಥಾನಿಕರ ರಾಜ್ಯಾರೋಹಣ ಸಮಾರಂಭವಾಗಬೇಕೆಂದು ಆ ಮಡಮ್ಮ ಸಾಹೇಬಳ ಉತ್ಕಟೇಚ್ಛೆಯಿತ್ತು.

ಆ ಸಮಾರಂಭಕ್ಕಾಗಿ ಆಗುವ ಖರ್ಚು, ಅದರ ಕಾರ್ಯಕ್ರಮ ಇವುಗಳನ್ನು ಗೊತ್ತುಪಡಿಸುವ ಅಧಿಕಾರಗಳು ಏಜಂಟ ಸಾಹೇಬರವು. ಅದರ ಬಗ್ಗೆ ಯಜಮಾನರನ್ನು ಕೇಳುವವರಾರು? ಯಾಕಂದರೆ ಅಧಿಕಾರ ಪ್ರಾಪ್ತವಾಗುವ ಮೊದಲಿನ ಕೆಲಸಗಳವು; ಆದರೆ ಬೇರೆ ಕಾರ್ಯಕ್ರಮಗಳ ಜೊತೆಗೆ ದೇಣಗಿ-ದೇಕಾರಗಳ ಪಟ್ಟಿಯನ್ನು ದಿವಾಣಸಾಹೇಬರು ಯಜಮಾನರ ಮುಂಧೆಯೇ ಇರಿಸಬೇಕಾಯಿತು;

ಯಾಕಂದರೆ ಆ ದೇಕಾರವು ಅವರ ಮಾಲಕಿಯ ಜಿನಸಿನದಿದ್ದು, ಅವರ ಕೈಯಿಂದಲೇ ಆದಾಗಬೇಕಾಗಿತ್ತು. ಯಜಮಾನರು ಪ್ರತಿಯೊಂದು ಬಾಬಿನ ವಿಷಯದ ತಮ್ಮ ಅಭಿಪ್ರಾಯವನ್ನು ಹೇಳಿದರು; ಆದರೆ ಅಧಿಕಾರ ನಡಿಸುವ ಆ ಮೊದಲನೇ ಪ್ರಸಂಗದಲ್ಲಿಯೇ ಸೌಮ್ಯತನವಿರಿಸಬೇಕೆಂದು ಯಾವ ಬಗ್ಗೆಯೂ ಅವರು ಹೆಚ್ಚಾಗಿ ಆಗ್ರಹತಾಳಲಿಲ್ಲ. ಅಧಿಕಾರದಾನದ ಪತ್ರವನ್ನೋದುವ ಕಾರ್ಯಕ್ರಮವನ್ನು ದರಬಾರದ ಸಮಾರಂಭದಲ್ಲಿ ಅವರು ಇರಗೊಟ್ಟರು; ಆದರೆ ಅದರೊಳಗಿನ ಪಾತರದವರ ನಾಚು-ರಂಗಿನ ಬದಲು ಪ್ರಸಿದ್ಧ ಪುರುಷಗಾಯಕನ ಗಾಯನವನ್ನು ಇಡಲಿಕ್ಕೆ ಸೂಚಿಸಿದರು. ದಿವಾಣ ಸಾಹೇಬರು ಹಿಂದಿನ ರಿವಾಜುಗಳ ದಾಖಲೆಗಳನ್ನು ಮುಂದಿಟ್ಟರಲ್ಲದೆ, ಏಜಂಟ ಸಾಹೇಬರೂ ಮಡಮ್ಮ ಸಾಹೇಬರೂ ನಾಚು-ರಂಗಿನ ಶೋಕಿನವರಿರುತ್ತಾರೆಂದು ಸೂಚಿಸಿದರು. ಅದಕ್ಕೆ ಮಹಾರಾಜರು:-ಶೋಕವಿರದೇನು ಮಾಡೀತು? ವಾರವನಿತೆಯರ ಹಾಗು ವಂಶಪರಂಪರವಾಗಿ ಪ್ರಸಿದ್ಧ ರೀತಿಯಿಂದ ಬೀದಿ ಬಸವೆಯರ ವ್ಯವಸಾಯ ನಡೆಯಿಸುವವರ ಸತ್ಕಾರ ಮಾಡುವ ರಾಜ-ಮಹಾರಾಜರ ವರ್ಗವು ಹಿಂದುಸ್ತಾನದಲ್ಲಿದೆಯೆಂದು ವಿಲಾಯತಿಯಲ್ಲಿ ಅನಾಯಾಸವಾಗಿ ಹೇಳಿ, ನಮ್ಮ ರಾಜರುಗಳ ನಿಂದೆಯನ್ನು ಬೇಕಾದ ಹಾಗೆ ಮಾಡಲಿಕ್ಕೆ ಈ ಸಾಹೇಬಜನರಿಗೆ ಲಭಿಸುತ್ತಿರುವ ಸಂಧಿಯನ್ನು ಇವರೇಕೆ ಕಳಕೊಂಡಾರು? “ಖುದ್ದ ಸಂಸ್ಥಾನಿಕರ ಕೂಡ-ಅಂದರೆ ನನ್ನ ಜೊತೆಗೆ-ಬಾಲ್ಲದೊಳಗಿನಂತೆ ಕುಣಿಯುವ ಸಿದ್ಧತೆಯಿದ್ದರೆ, ಆ ವ್ಯವಸ್ಥೆ ಮಾಡಲಾಗುವದೆ”ಂದು ಮಡಮ್ಮ ಸಾಹೇಬರಿಗೆ ತಿಳಿಸಿರಿ. ವಿಲಾಯತಿಗೆ ಹೋಗಿ ಸಭ್ಯಸ್ತ್ರೀಯರೊಡನೆ ಹೇಗೆ ನಡೆಯಬೇಕೆಂಬದನ್ನು ನಾನು ತಿಳಿದಿರುತ್ತೇನೆ.

ಇದರಂತೆ ದರ್ಬಾರು ನೇರವೇರಿದ ನಂತರದ ಆನೆಯ ಮೇಲಿನ ಮೆರವಣಿಗೆಯನ್ನೂ ಮಹಾರಾಜರು ರದ್ದುಪಡಿಸಿದರು; ಹಾಗು “ಮುಂದೆ ಲಗ್ನವಾದಾಗ ನನ್ನ ಹೆಂಡತಿಯೊಡನೆ ಒಳ್ಳೇ ಸೊಗಸಾದ ಮೆರವಣಿಗೆ ಹೊರಡಿಸೋಣವಂತೆ! ಈಗಿನ ನನ್ನ ಮೆರವಣಿಗೆಯಲ್ಲಿ ಏಜಂಟ ಸಾಹೇಬರು ಅಂಬಾರಿಯಲ್ಲಿ ಕೂಡ್ರುವಾಗ ಜೊತೆಗೆ ಅವರ ಮಡಮ್ಮಳಿರುತ್ತಾಳೆ; ಆದರೆ ಆಗ ನಾನು ಒಬ್ಬೊಂಟಿಗನೇ ತೋರುವೆನಲ್ಲವೇ? ನನಗಾರಿರುವರು!” ಎಂದು ನಗೆಚೇಷ್ಟೆಗಂದರು. ಆ ಭಾವೀ ಲಗ್ನ-ಮೆರವಣಿಗೆಗಳ ಹವಾಲಿಯನ್ನು ಬಹು ಚೇಷ್ಟೆಯಿಂದ ಹೇಳಿದ್ದನ್ನೂ ಆ ವಿಷಯದೊಳಗೆ ಕಂಡು ಬಂದ ಅವರ ನಿರಪೇಕ್ಷತೆಯನ್ನೂ ನೋಡಿ, ಯಾವನೊಬ್ಬನಿಗೆ ಇದನ್ನು ಈ ಹರೆಯದ ಮಹಾರಾಜನು ನುಡಿಯುತ್ತಿರದೆ, ಒಬ್ಬಾನೊಬ್ಬ ದಿನ ಹೋದ ಸಂನ್ಯಾಸಿಯು ನುಡಿಯುತ್ತಿರುವನೋ ಏನೋ ಎಂದು ಭಾಸವಾಗುತ್ತಿತ್ತು. ದರಬಾರದ ತರುವಾಯದಲ್ಲಿ ಮದ್ದು ಹಾರಿಸುವ ಕಾರ್ಯಕ್ರಮವಿದ್ದಿತು.

ಮಹಾರಾಜರು ಅದಕ್ಕೆ "ಅದೇ ದುಡ್ಡನ್ನು ಬಡಬಗ್ಗರಿಗೆ ಅನ್ನದಾನ ಮಾಡುವದಕ್ಕೆ ವಿನಿಯೋಗಿಸಿದರೆ ನನಗೆ ಹೆಚ್ಚು ರುಚಿಸೀತು" ಎಂದರು. ಮಹಾರಾಜರ ಈ ತಿದ್ದುಪಾಟಿಗೆ ಏಜಂಟ ಸಾಹೇಬರ ಶಿಫಾರಸಿನ ಅವಶ್ಯಕತೆಯೋ ಇರಲಿಲ್ಲ.

ಆ ಮೇಲೆ ಇನಾಮು-ಕಾಣಿಕೆಗಳ ಪ್ರಶ್ನೆ ಹೊರಟಿತು. ಆಗ ದಿವಾಣ ಸಾಹೇಬರು ಅತ್ತಿತ್ತ ಹೊರಳಿ ನೋಡಿ, ಸಮೀಪದಲ್ಲಿ ಬೇರೆ ಯಾರೂ ಇಲ್ಲೆಂಬದನ್ನು ಮನವರಿಕೆ ಮಾಡಿಕೊಂಡು, ಮೆಲ್ಲನೆ:—"ನಿಮ್ಮ ಯಜಮಾನರಿಗೆ ಅಧಿಕಾರ ಸಮರ್ಪಣ ಮಾಡುವ ಕಾರ್ಯವು ದೈವಬಲದಿಂದ ನಮಗೆ ಲಭಿಸಿದ್ದಕ್ಕಾಗಿ ನಾವಿಬ್ಬರೂ ನಮ್ಮನ್ನು ಧನ್ಯರೆಂದು ತಿಳಿದಿರುವೆವು, ಎಂದು ಮಡಮ್ಮ ಸಾಹೇಬರು ನನ್ನೆದುರಿಗೆ ಮೂರು ಮೂರು ಸಾರೆ ಅಂದಿರುತ್ತಾರೆ" ಎಂದು ನುಡಿದರು. ಅದಕ್ಕೆ ಮಹಾರಾಜರು: "ಹಾಗೆನಿಸುವದು ಅವರಲ್ಲಿಯ ದೊಡ್ಡಸ್ತಿಕೆಯ ದ್ಯೋತಕವಾಗಿರುತ್ತದೆ. ನಾನು ಅವರ ಆಭಾರಗಳನ್ನು ಅತ್ಯವಶ್ಯವಾಗಿ ಮನ್ನಿಸುವೆನು; ಅಲ್ಲದೆ ಪ್ರತಿಯೊಂದು ಸತ್ಕೃತ್ಯವು ದೇವರಲ್ಲಿ ದಾಖಲಾಗದಿರುವದಿಲ್ಲ. ಅಲ್ಲಿಯೂ ಅವರಿಗೆ ಯೋಗ್ಯವಾದ ಪುರಸ್ಕಾರವಾದೀತು." ಆದರೆ ಆ ಪೊಳ್ಳು ಪರಲೋಕದ ಹವಾಲಿಯು ರುಚಿಸದ್ದರಿಂದ ದಿವಾಣ ಸಾಹೇಬರು:— "ಆದರೂ ಅಭಿನಂದನದ ಗುರ್ತೆಂದು ಅವರಿಗೆ ಏನಾದರೂ ಕಾಣಿಕೆ ಕೊಡುವದು ನಿರ್ಧರಿಸಲ್ಪಟ್ಟರೆ ಅದನ್ನು ಅಪ್ಪಣೆಯ ಮೇರೆಗೆ ಒರೆದಿಡುತ್ತೇನೆ" ಎಂದು ಹೇಳಬೇಕೆಂದಿದ್ದರು; ಈ ಶಬ್ದಗಳು ಅವರ ತುಟಿಯ ಮೇಲೆಯೇನೋ ಕುಣಿಯತೊಡಗಿದ್ದವು; ಆದರೆ ಈ ಬಗೆಯ ಸರಳವಾದ ಸಲಹೆಯನ್ನು ಕೊಡದೆ, ಅವರು:— "ಮಡಮ್ಮಸಾಹೇಬರು ಈ ಮೊದಲಿನ ಒಂದೆರಡು ಸಾರೆಯ ಭೆಟ್ಟಿಗಳಲ್ಲಿ ಅರಮನೆಯಲ್ಲೆಲ್ಲ ಅಡ್ಡಾಡಿ ನೋಡಿದ್ದರು. ಆಗಲವರು ಮೋತೀಖಾನೆಯೊಳಗಿನ ಆ ಮುತ್ತಿನ ಒಂಟಿಳೆಯ ಸರವನ್ನು ಕನ್ನಡಿಯೆದುರಿಗೆ ನಿಂತು ತಮ್ಮ ಕೊರಳೊಳಗೆ ಹಾಕಿಕೊಂಡು ನೋಡಿದ್ದರು; ಹಾಗು ಆ ಹಸ್ತಿದಂತದ ಚವರಿಯ ಮತ್ತು ರತ್ನಖಚಿತವಾದ ಅತ್ತರದಾಣಿಯ ಕಲಾಕುಸರಿಯ ಕೆಲಸಗಳ ಬಗ್ಗೆ ಬಹು ಶ್ಲಾಘಿಸಿದರೆಂಬದು ನನಗೆ ಸ್ಪಷ್ಟವಾಗಿ ತೋರಿತು" ಎಂದು ಹೇಳಿದರು.

ಜೋಜಿಗರಾಯ:—ಅವರು ಆ ಜೇನಸು ನಿರ್ಮಿಸಿದವರನ್ನು ಒಳಿತಾಗಿ ಹೊಗಳಿದರೆಂದಿರಲ್ಲವೆ?

ದಿವಾಣ:—ಅಹುದು ಸರಕಾರ!

ಜೋ:—ಹಾಗಾದರೆ ಹೀಗೆ ಮಾಡಿರಿ; ಸಮಾರಂಭಕ್ಕೆ ಮಡಮ್ಮ ಸಾಹೇಬರು ಬಂದರೆಂದರೆ, ಆಯಾ ಕಾರಾಗಿರರ ಹೆಸರಿಗೆ ಒಂದೊಂದು ಚಲೋ ಸರ್ಟಿಫಿಕೀಟನ್ನು ಬರೆಯಿಸಿಕೊಳ್ಳಿರಿ ಅವರ ಸ್ವಹಸ್ತದಿಂದ; ಅಂದರೆ ನಾವು ಅವು

ಗಳನ್ನು ಅವರವರಿಗೆ ನಮ್ಮ ದರಬಾರದ ಖರ್ಚಿನಿಂದ ಕಳಿಸಿ ಬಿಡೋಣವಂತೆ. ಅವರ ಆ ಶಿಫಾರಸಿನಿಂದ ಪಾಪ! ಆ ಬಡವರ ಭಾಗ್ಯೋದಯವಾದರೂ ಆದೀತು; ನನ್ನೊಡನೆ ಅವರದೂ ರಾಜ್ಯಾರೋಹಣವು!

ದಿವಾಣ:—ಆದರೆ ಗುಣವರ್ಣನ ಮಾಡುವಾಗ ಅವರು ಆ ಒಂಟಳಿ ಸರವನ್ನು ತಮ್ಮ ಕೊರಳೊಳಗೆ ಹಾಕಿಕೊಂಡು ಕನ್ನಡಿಯಲ್ಲಿ ನೋಡಿ ನಕ್ಕಿದ್ದರು. ಆ ಚವರಿಯಿಂದ ಗಾಳಿಬೀಸಿಕೊಂಡು—"ದಿವಾಣಸಾಹೇಬರ, ಪಲ್ಲಂಗದ ಮೇಲೆ ಬಿದ್ದುಕೊಂಡಾಗ ಈ ಚವರಿಯಿಂದ ನೊಣಗಳು ಚೆನ್ನಾಗಿ ನಿವಾರಿಸಲ್ಪಡಬಹುದಲ್ಲವೇ?" ಎಂದಂದಿದ್ದರು; ಮತ್ತು "ಈ ಅತ್ತರದಾಣಿಯು ಮೇಜಿನ ಮೇಲಿರಿಸಲಿಕ್ಕೆ ಯೋಗ್ಯವಾಗಿದೆಯೆ"ಂದೂ ಅಂದಿದ್ದರು.

ಜೋ:—ಹೀಗಲ್ಲವೆ? ಒಳ್ಳೇದು! ದಿವಾಣಸಾಹೇಬ, ಈ ಮೂರೂ ಜೀನಸುಗಳ ಯೋಗ್ಯ ಬೆಲೆಯು ಏನಾದೀತೆಂದು ನಿಮಗನಿಸುತ್ತದೆ?

ದಿ:—ಹೆಚ್ಚೇನೂ ಇಲ್ಲ; ಸರಾಸರಿ ಹತ್ತೇ ಸಾವಿರ.

ಜೋ:—ಇಷ್ಟೇಯೋ! ಅಷ್ಟೆಂದರೆ ಅತ್ಯಲ್ಪವೆನ್ನಬೇಕೇ?

ಆಗ ದಿವಾಣ ಸಾಹೇಬರಿಗೆ ಇನ್ನು ಮಹಾರಾಜರು "ಹಾಗಾದರೆ ಈ ಮೂರೂ ಜೀನಸುಗಳನ್ನು ಬರೆದು ಬಿಡಿರಿ ಕಾಣಿಕೆಯ ಲಿಷ್ಟಿನಲ್ಲಿ" ಎಂದು ಅಂದಾರೆಂದೆನಿಸಿತು; ಆದರೆ ಮಹಾರಾಜರು ಹಾಗೆನ್ನದೆ "ಆದರೆ ಮಡಮ್ಮಸಾಹೇಬರು ಈ ಜೀನಸುಗಳನ್ನು ಪಡೆಯಲಿಕ್ಕೆ ಸಿದ್ಧರಿರುವರೋ ಇಲ್ಲವೋ ಎಂಬದನ್ನು ನೀ-ವೆಂದಾದರೂ ವಿಚಾರಿಸಿರುವಿರೇನು?" ಎಂದು ಪ್ರಶ್ನೆ ಮಾಡಿದರು.

ದಿ:—ಓಹೋ. ಅವರು ಬೇಡ-ಬೇಕು ಎಂದೆನ್ನುತ್ತ ಹೇಗಾದರೂ ತಕ್ಕೊಂಡಾರು.

ಜೋ:—ಅವರು ಹಾಗೆ ಬೇಡ-ಬೇಕೆನ್ನುವದರ ಕಾರಣವು ಅವರಿಗೆ ಈ ಜೀನಸುಗಳ ಬೆಲೆಯು ಹೆಚ್ಚೆನಿಸುತ್ತಿರುವದೇ ಅಲ್ಲವೆ? ಹಾಗಾದರೆ ನಾವಾದರೂ ಅವುಗಳನ್ನು ಮಾರುವ ಖುಷಿಯಿಲ್ಲೆಂದೇಕೆ ಅನ್ನಬಾರದು? ಒತ್ತಾಯವೇತಕ್ಕೆ, ಅವುಗಳನ್ನು ಕೊಂಡುಕೊಳ್ಳುವ ವಿಷಯದಲ್ಲವರಿಗೆ?

ದಿ:—ಮಹಾರಾಜ! ಬೆಲೆ ತಕ್ಕೊಂಡು ಆ ಜೀನಸುಗಳನ್ನು ಅವರಿಗೆ ಕೊಡಬೇಕೆಂಬರ್ಥದಿಂದ ನಾನನ್ನಲಿಲ್ಲ.

ಜೋ:—ಹಾಗಾದರೆ ಯಾವ ಅರ್ಥದಿಂದೆಂಬದನ್ನು ಸರಳವಾಗಿ ತಿಳಿಸಿದಲ್ಲರೀ ದಿವಾಣಸಾಹೇಬ! ಗೂಢ ಭಾಷೆಯದೇತಕ್ಕೆ?

ದಿ:—ನನಗನಿಸಿತೇನಂದರೆ, ಏಜಂಟ ಸಾಹೇಬರು ತಮ್ಮನ್ನು ಪಟ್ಟಕ್ಕೆ ಕೂಡ್ರಿಸಿ, ಕೈಯೊಳಗೆ ಅಧಿಕಾರಸೂತ್ರದ ಶಾಸನವನ್ನು ಕೊಟ್ಟು ತಮ್ಮ ಅಭಿ

ನಂದನ ಮಾಡುವರೆಂದ ಬಳಿಕ, ಒಳ್ಳೇ ಸುದ್ದಿ ಹೇಳುವವರ ಬಾಯಿಗೂ ಸಕ್ಕರೆ ಹಾಕಬೇಕೆಂಬ ರೀತಿಯಿದೆ.....

"ಆದರೆ ನಮ್ಮ ಕಡೆಯ ಅತ್ಯುತ್ತಮ ಮಿಠಾಯಿಯು ಹೆಚ್ಚು ಸಿಹಿಯಿರುತ್ತದಂತೇ ಯುರೋಪಿಯನ್ನ ಜನರಿಗೆ ಅದು ಸೇರುವದಿಲ್ಲೆಂದು ಅನ್ನುತ್ತಾರೆ!" ಎಂಬ ಮಹಾರಾಜರ ಉತ್ತರವನ್ನು ಕೇಳಿ ದಿವಾಣಸಾಹೇಬರು ಸ್ತಬ್ಧರಾದರು. ಆಗ ಮಹಾರಾಜರೇ ದಿವಾಣರನ್ನು ಕುರಿತು ಪುನಃ:—ದಿವಾಣಸಾಹೇಬ, ಹೀಗೆ ಸುಮ್ಮನೇಕಾದಿರಿ? ಬಾಯಿಗೆ ಸಕ್ಕರೆ ಹಾಕಬೇಕೆಂದು ಹೇಳಿದ್ದರಿಂದ ಮಿಠಾಯಿಯನ್ನು ಸೂಚಿಸಿದೆನಿಷ್ಟೇ.

ದಿ:-ಮಹಾರಾಜ! ನಾನು ಲಾಕ್ಷಣಿಕ ಅರ್ಥದಿಂದ ಒಂದಿಷ್ಟು ಹಾಗೆಂದೆನು.

ಜೋ:—ಹಾಗಾದರೆ ಆ ಅಲ್ಪ ಲಾಕ್ಷಣಿಕವನ್ನೂ ಬಿಟ್ಟು, ತೀರ ಸ್ಪಷ್ಟವಾಗಿ ಏಕೆ ಹೇಳಲೊಲ್ಲಿರಿ? ನಾವೀಗ ವ್ಯವಹಾರ ಸಂಬಂಧವಾಗಿ ಮಾತನಾಡುತ್ತಿರುವೆವಲ್ಲದೆ, ಕಾವ್ಯದೊಳಗಿನ ಅರ್ಥಾಲಂಕಾರಗಳನ್ನು ಹುಡುಕಿ ಅನ್ವಯ ಹಚ್ಚಿ ಕಲಿಯುತ್ತಿರುವದಿಲ್ಲ!

ದಿ:—ಛೆ! ಛೀ! ಹಾಗೇಕಾದೀತು? ಈ ಮೂರು ವಸ್ತುಗಳನ್ನು ಸಮಾರಂಭದ ಸಲುವಾಗಿ ಸಾಹೇಬರಿಗೆ ಕಾಣಿಕೆ ಕೊಡಬೇಕೆಂದು ನನ್ನ ಅಭಿಪ್ರಾಯವಿದೆ.

ಜೋ:—ಹೀಗೆಯೋ? ಈಗ ಚೆನ್ನಾಗಿ ತಿಳಿಯಿತು; ಆದರೆ ಏಜಂಟಸಾಹೇಬರು ಸರಕಾರೀ ನೌಕರರು. ಕಾಣಿಕೆ ಸ್ವೀಕರಿಸಕೂಡದೆಂಬ ಮನಾಯಿಯು ಅವರಿಗಿರುತ್ತದೆಂಬದು ದಿವಾಣರೇ, ನಿಮಗೆ ಗೊತ್ತಿಲ್ಲವೇನು?

ದಿ:—ಅದು ಗೊತ್ತಿದೆ; ಅಂತೆಯೇ ಆ ವಸ್ತುಗಳನ್ನು ಮಡಮ್ಮಸಾಹೇಬರಿಗೆ ಕೊಡಬೇಕು. ಆ ಕಾಣಿಕೆಯ ವಸ್ತುಗಳಾದರೂ ಹೆಂಗಸರಿಗೆ ಕೊಡಲಿಕ್ಕೆ ಒಪ್ಪುವಂಥವೇ ಆಗಿರುತ್ತವೆ.

ಜೋ:—ಏಜಂಟಸಾಹೇಬರು ಸರಕಾರೀ ನೌಕರರಿರುವಂತೆ, ಮಡಮ್ಮಸಾಹೇಬರಾದರೂ ಸ್ವಾಭಿಮಾನಿಗಳಾದ ಇಂಗ್ಲಿಷ ಲೇಡಿಗಳಿರುವರು. ಅವರು ಅವುಗಳನ್ನು ಹೀಗೆ ಡಾಣಾಡಂಗುರವಾಗಿ ಕಾಣಿಕೆಯೆಂದು ನಮ್ಮಿಂದ ಹೇಗೆ ಸ್ವೀಕರಿಸಿಯಾರು? ಅಲ್ಲದೆ ನೀವು ಆ ಮೂರರ ಬೆಲೆ ಹತ್ತುಸಾವಿರವು ಕಡಿಮೆಯೆಂದಿರಿ; ಆದರೆ ಹತ್ತು ಸಾವಿರವೆಂದರೆ ಕಡಿಮೆಯಾಯಿತೇ?

ದಿ:—ಇಂಥ ಕಾಣಿಕೆಗಳನ್ನು ಬಹಿರಂಗದಲ್ಲಿ ಕೊಡತಕ್ಕದ್ದೇ ಇರುವದಿಲ್ಲ. ಅವುಗಳನ್ನು ಕೊಡುವ ಮಾರ್ಗಗಳು ಹಲವಿವೆ. ಆ ಮಾರ್ಗದಿಂದ ಕೊಟ್ಟರೆ ಕೆಲಸವಾಗುವದು.

ಜೊ:—ಹಾಗಾದರೆ ಆ ವಿಷಯದ ನಿಮ್ಮ ಯೋಜನೆ ತಿಳಿಸಿರಿ ನೋಡೋಣ.

# ಚೋದ್ಯಪುರದ ಚೋಜಿಗರಾಯ.



ದಿವಾಣಸಾಹೇಬರು:—ಆದರೆ ಗುಣವರ್ಣನ ಮಾಡುವಾಗ ಅವರು ಆ ಒಂಟೆಳೆಯ ಸರವನ್ನು ಕೊರಳೊಳಗೆ ಹಾಕಿಕೊಂಡು ಕನ್ನಡಿಯಲ್ಲಿ ನೋಡಿ ನಕ್ಕಿದ್ದರು............

ಪುಟ ೨೩ ಸಾಲು ೫ ರಿಂದ

ದಿ: —ಅದು ಬಹು ಸುಲಭ ಕೆಲಸ. ಮಡಮ್ಮ ಸಾಹೇಬರಿಗೆ ಕೊಡಬೇಕಾಗಿರುವ ಆ ಮುತ್ತಿನ ಒಂಟೆಳೆ ಸರವನ್ನು ಅವರ ಕೊರಳಿಗೆ ಹಾಕುವ ಹೂವಿನ ಹಾರದಲ್ಲಿ ಸೇರಿಸಿ ಬಿಡಬೇಕು. ಹಾರಗಳು ಅದಲುಬದಲಾಗಬಾರದೆಂದು ಮಡಮ್ಮ ಸಾಹೇಬರ ಹೂವಿನ ಹಾರಕ್ಕೆ ಕೆಂಪು ರಿಬನ್ನನ್ನು ಚಿಕ್ಕ ಚಿಕ್ಕ ಯುರೋಪಿಯನ್ ಬಾಲಿಕೆಯರು ಕೂದಲಿಗೆ ಹಚ್ಚಿಕೊಳ್ಳುವಂತೆ ಹಚ್ಚಿಸಬೇಕು. ಅಂದರೆ ಹಾರ ಹಾಕುವ ಕೆಲಸವು ಯಾರ ಪಾಲಿಗೆ ಬಂದರೂ ಅವರಿಗೆ ಆ ಗುರ್ತು ಒಡೆದು ಕಂಡೀತು! ಮಡಮ್ಮಸಾಹೇಬರು ತಮ್ಮ ಬಂಗ್ಲೆಗೆ ಹೊರಟು ಹೋದ ಕೂಡಲೆ ಆ ಹಾರವನ್ನು ಬಿಚ್ಚಿ, ಅದರೊಳಗಿನ ಆ ಒಂಟೆಳೆ ಸರವನ್ನು ತೆಗೆದುಕೊಳ್ಳುವಂತೆ ಸಾನವರಿಗೆ ಮೊದಲೇ ಸೂಚಿಸಿಡುತ್ತೇನೆ; ಮತ್ತು ಆ ಮುತ್ತಿನ ಸರವು ಹೂವಿನ ಹಾರದೊಡನೆ ಸಹಜ ಬಂದಿದೆಯೆಂಬ ನಮ್ಮ ತಪ್ಪು ಅವರಿಗೆ ಸಹಜವಾಗಿಯೇ ತಿಳಿದೀತು.

ಜೋ: —ಮತ್ತು ಅವರು ಆ ನಮ್ಮ ತಪ್ಪನ್ನು ಕ್ಷಮಿಸುವರೋ? ಅಥವಾ ಆ ತಪ್ಪನ್ನು ನಮಗೆ ತಿಳಿಸಿ, ನಮ್ಮ ಅವಮಾನ ಮಾಡಲಿಕ್ಕಿಲ್ಲವಷ್ಟೇ? ಆ ನಮ್ಮ ತಪ್ಪನ್ನು ನಮ್ಮ ಕೊರಳಿಗೆ ಕಟ್ಟದೆ, ತಮ್ಮ ಕೊರಳಿಗೇ ಕಟ್ಟಿಕೊಂಡಾರೆನ್ನುವಿರಾ? ಒಳ್ಳೇದು, ಇನ್ನು ಚವರಿಯ ಬಗ್ಗೆ?

ದಿ: —ಕುದುರೆಯ ಸಾರೋಟಿನಲ್ಲಿ ಸಾಹೇಬ ಜನರು ಕುಳಿತರೆಂದರೆ, ಅವರ ಬಳಿಯ ಪಟ್ಟೇದವನ ಕೈಗೆ ಅವರ ಮೇಲೆ ಕೂಡ್ರುವ ನೊಣಗಳನ್ನು ನಿವಾರಿಸಲಿಕ್ಕೆಂದು ಈ ಚವರಿಯನ್ನು ಕೊಡಬೇಕು; ಮತ್ತು ಆತನ ಕಿವಿಯಲ್ಲಿ ಮೆಲ್ಲನೆ "ಇದು ಬಂಗ್ಲೆಯಲ್ಲಿಯೇ ಇರತಕ್ಕದ್ದು; ತಿರುಗಿ ಕಳಿಸತಕ್ಕದ್ದಲ್ಲ" ಎಂದು ತಿಳಿಸುವದು.

ಜೋ: —ಹಾಗೇ ಆಗಲಿ; ಆ ರತ್ನಖಚಿತ ಅತ್ತರದಾಣಿಯ ಗತಿಯೇನು?

ದಿ: —ಸಾಹೇಬ ಜನರು ಸುಗಂಧ ತೈಲವನ್ನು ಮೈಗೆ ಹಚ್ಚಗೊಡುವದಿಲ್ಲ. ಅದರಿಂದ ಒಂದು ಬೆಳ್ಳಿಯ ತಬಕದಲ್ಲಿ-ಅಂದರೆ ಚಿಕ್ಕ ತಬಕದಲ್ಲಿ-ಒಂದು ಬೆಳ್ಳಿಯ ಗುಲಾಬದಾಣಿಯನ್ನೂ ಆ ಅತ್ತರದಾಣಿಯನ್ನೂ ಇಟ್ಟು ಅವರ ಮುಂದಿರಿಸಿದರೆ, ಮಡಮ್ಮ ಸಾಹೇಬರು ಆ ತಬಕಕ್ಕೆ ಹಸ್ತಸ್ಪರ್ಶಮಾಡುವರು. ಬಳಿಕ ಆ ಇಡೀ ತಬಕವನ್ನೇ ಅವರ ಕಡೆಗೆ ಕಳಿಸಿದರಾಯಿತು.

ಜೋ: — ಮತ್ತು ತಬಕ ಸಹಿತವಾಗಿ ಅವರು ಆ ಜೀನಸುಗಳನ್ನಿಟ್ಟುಕೊಂಡು ಬಿಡುವರು, ಇಷ್ಟೇ ಅಲ್ಲವೆ? ದಿವಾಣ ಸಾಹೇಬರೇ, ಆ ಅತ್ತರದಾಣಿಯು ಮೂರುಸಾವಿರದ್ದಾಗಿದ್ದರೂ ಅದನ್ನಿಟ್ಟು ಕೊಡುವ ತಬಕವನ್ನು ಹೇಳುವಾಗ ನೀವು ಬೇಕಂತ ಸಣ್ಣ ತಬಕವೆಂದು ಅಂದಿರಿ. ನಿಮ್ಮ ಆ ಅಂಬೋಣವು-ಸಂಸ್ಥಾ

ನದ ಹಿತದ ದೃಷ್ಟಿಯು ರಿಟ್ರೆಂಚಮೆಂಟಿನ ನಿಮ್ಮ ಧೋರಣವು- ನನಗೆ ಹೊಳೆದಿಲ್ಲೆಂದು ತಿಳಿಯಬೇಡಿರಿ. ಇರಲಿ. ನಿಮ್ಮ ಆ ರಿಟ್ರೆಂಚಮೆಂಟಿನ ಧೋರಣದ ಸಲಹೆಯನ್ನು ನಾನು ಕೇಳಲೇಬೇಕು. ಅಂತೆಯೇ ಹೇಳುವದೇನಂದರೆ, ಆ ಸಮಾರಂಭದ ಪಟ್ಟಿಯೊಳಗಿದ್ದ ಈ ಇನಾಮು-ಕಾಣಿಕೆಯ ಕಲಮನ್ನೇ ಕಾಟು ಹಾಕಿಬಿಡಿರಿ!

ದಿವಾಣ ಸಾಹೇಬರ ಎಲ್ಲ ಶ್ರಮ, ಎಲ್ಲ ಮುತ್ಸದ್ದಿತನ, ಎಲ್ಲ ಬುದ್ಧಿವಂತಿಕೆ ಮತ್ತು ಎಲ್ಲ ಮನೋರಥಗಳ ವ್ಯೂಹವು, ನೀರೊಳಗೆ ಬಿದ್ದ ಮಣ್ಣಿನ ಹೆಂಡೆಯಂತೆ ಹಾಳಾಗಿ ಹೋಯಿತು; ಮತ್ತು ಮಡಮ್ಮ ಸಾಹೇಬರಿಗೆ ಏನೆನಿಸೀತೆಂಬ ಅಂಜಿಕೆಯು ಮಾತ್ರ ಮೂರ್ತಿಗೊಂಡು ಅವರೆದುರಿಗೆ ಬಂದು ನಿಂತಿತು; ಆದರೆ ದಿವಾಣರು ಮಾಡುತ್ತಾರೇನು?

---

## ೩ ಮಿತ್ರಲಾಭ.

ಗೊತ್ತುಪಡಿಸಿದ ಮೇರೆಗೆ ರಾಜ್ಯಾರೋಹಣ ಸಮಾರಂಭವು ಪೂರೈಸಿತು; ಆದರೆ ಅದು ಮೇಲೆ ವಿವರಿಸಿದ ರೀತಿಯಿಂದಲೇ ಆಯಿತು. ಸಮಾರಂಭವಾದದ್ದು ಸಂಸ್ಥಾನದ್ದು, ಸಂಸ್ಥಾನದ ಪಟ್ಟದ್ದು; ಸ್ವಂತ ವ್ಯಕ್ತಿಯದಲ್ಲವೆಂಬ ಒಂದು ಬಗೆಯ ಉದಾಸೀನ ವೃತ್ತಿಯನ್ನು ಮಹಾರಾಜರು ಧರಿಸಿದ್ದರು. ದರಬಾರದಲ್ಲಿ ಅಧಿಕಾರ ಸಮರ್ಪಣದ ಶಾಸನಪತ್ರವನ್ನು ಏಜಂಟ ಸಾಹೇಬರು ಓದಿ, ರಿವಾಜಿನಂತೆ ಭಾಷಣ ಮಾಡಿದರು. ಅದಕ್ಕೆ ಮಹಾರಾಜರು ಉತ್ತರರೂಪವಾಗಿ ಮಾಡಿದ ಭಾಷಣವು ಮಾತ್ರ ಸಾರ್ವತ್ರಿಕ ರಾಜ-ಮಹಾರಾಜರ ಭಾಷಣದಂತಾಗಿರಲಿಲ್ಲ. ಅವರು ಸರಕಾರದ್ದೆಂದು ಒಂದೇ ಒಂದು ಶಬ್ದದಲ್ಲಿಯೂ ಔಪಚಾರಿಕವಾಗಿಯೂ ಆಭಾರ ಮನ್ನಿಸಿದರು! ಏಜಂಟಸಾಹೇಬರ ವ್ಯಕ್ತಿಶಃ ಉಲ್ಲೇಖವನ್ನು ಅವರು ತಮ್ಮ ಭಾಷಣದಲ್ಲಿ ಮಾಡಲೇ ಇಲ್ಲ. ಇಬ್ಬರು ಸಂಸ್ಥಾನಿಕರ ಆಡಳಿತದಲ್ಲಿ ಸಂತತವಾಗಿ ಆಡಳಿತ ನಡೆಸಿದ ದಿವಾಣ ಸಾಹೇಬರ ಕಾರ್ಯಗಳ ಬಗ್ಗೆ ಆಭಾರ ಪ್ರದರ್ಶನವೆಂದು ಯಾವುದನ್ನೂ ನುಡಿಯಲಿಲ್ಲ. ಇಷ್ಟೇ ಅಲ್ಲದೆ, ಎಲ್ಲರಿಗೂ 'ಎಚ್ಚರಿಕೆ-ಎಚ್ಚರಿಕೆ!' ಎಂದು ಜಾಗ್ರತಪಡಿಸುವವರಂತೆ: "ಚಾರ್ಜನ್ನು ಕೊಡ-ತೆಗೆದುಕೊಳ್ಳುವಾಗ ಭಾಂಡಾರದೊಳಗಿನ ಸಿಲ್ಕು ರಕಮು ಎಣಿಸಿ ಕೊಡ-ತಕ್ಕೊಳ್ಳುವ ಕೆಲಸವು ಸ್ವಲ್ಪವೂ ಶ್ರಮವಿರಹಿತವೂ ಆಗಿರುತ್ತದೆ; ಮತ್ತು ಅದನ್ನು ಗುಮಾಸ್ತರಿಂದಲೂ ಮಾಡಿಸಿಕೊಳ್ಳಲಿಕ್ಕೆ ಬರುತ್ತದೆ; ಆದರೆ ಆಡಳಿತ-ನ್ಯಾಯದಾನಗಳ ಮಾತು ಹಾಗಲ್ಲ. ಅದಕ್ಕಾಗಿ ನಾನು ಕಳೆದ ಹನ್ನೆರಡು ವರ್ಷ

ಗಳ ಚೌಕಶಿಯನ್ನು ಪ್ರಾರಂಭಿಸಿರುತ್ತೇನೆ. ಅದು ಪೂರೈಸಿದ ಬಳಿಕ ಎಲ್ಲ ಕಾಗದ-ಪತ್ರಗಳನ್ನು ನೋಡಿ, ಪ್ರಜೆಗಳ ತಕರಾರು-ಕೈಫಿಯತ್ತುಗಳೇನಿರುವವೋ ಅವುಗಳನ್ನು ಪರಾಂಬರಿಸಿದ ನಂತರವೇ ನಾನು ದಿವಾಣಸಾಹೇಬರಿಂದ ಚಾರ್ಜ ತಕ್ಕೊಂಡೆನೆಂದೇನು; ಹಾಗು ಅದಕ್ಕಾಗಿಯೇ ನಾನು ಸದ್ಯಕ್ಕೆ ಅಲ್ಪ ಅಧಿಕಾರ ಗಳನ್ನು ಸ್ವೀಕರಿಸಿರುತ್ತೇನೆ. ಅದರಂತೆಯೇ ನಾನು ಸಂಪೂರ್ಣ ಅಧಿಕಾರಗಳ ನ್ನು ಸ್ವೀಕರಿಸುವವರೆಗೆ ಈ ದಿವಾಣ ಸಾಹೇಬರು ತಮ್ಮ ನೌಕರಿಯಲ್ಲೇ ಇರು ವರು; ಮತ್ತು ನನಗೆ ನೆರವಾಗುವರು. ಇಂಥ ಪ್ರಸಂಗಗಳಲ್ಲಿ ಇನಾಮು- ಕಾಣಿಕೆಗಳನ್ನು ಕೊಡುವ, ಸೆರೆಮನೆಯೊಳಗಿನ ಬಂದಿಗಳನ್ನು ಬಂಧಮುಕ್ತ ಗೊಳಿಸುವ ರಿವಾಜು ಇರುತ್ತದೆಂಬದು ನನಗೂ ಗೊತ್ತಿರುತ್ತದೆ; ಆದರೆ ನಾನು ಮನಸ್ಸಿನಲ್ಲಿ ಯೋಚಿಸಿದ ಮೇರೆಗೆ ಹಳೇ ಆಡಳಿತವನ್ನು ಬೇರೆ ಬೇರೆ ರೀತಿಯಿಂದ ನೋಡಿಕೊಂಡ ಮೇಲೆ, ಯಾರಿಗೆ ಏನು ಹಾನಿಯಾಗಿದೆ? ಯಾರಿಗೆ ಯಾವ ಅನ್ಯಾಯ ವಾಗಿದೆ? ಇದೆಲ್ಲ ತಿಳಿದ ಬಳಿಕ ನಾನು ಕೊಡಬಹುದಾದ ಇನಾಮು-ಕಾಣಿಕೆ ಗಳೇ ನಿಜವಾದ ಇನಾಮು-ಕಾಣಿಕೆಗಳು! ತ ಮೇಲೆ ನಾನು ಯಾವ ಬಂದಿಗಳ ನ್ನು ಬಂಧಮುಕ್ತ ಮಾಡೇನು ಇಲ್ಲವೆ ಯಾರ ಶಿಕ್ಷೆ ಕಡಿಮೆ ಮಾಡೇನು ಅದೇ ನ್ಯಾಯುವಾದ ಬಂಧಮುಕ್ತತೆಯು! ನಾನು ಇಂದಿಗೆ ಚೌಕಶಿಯ ಹೊರತು ಯಾರನ್ನೂ ಶ್ಲಾಘಿಸಲಿಚ್ಛಿಸುವದಿಲ್ಲ; ಯಾರನ್ನೂ ಹಳಿಯುವ ಧೈರ್ಯವನ್ನೂ ಮಾಡುವದಿಲ್ಲ. ಮಾನವರೆಲ್ಲರೂ ತಪ್ಪುಮಾಡುವರೇ ಎಂದು ನಾನು ನನ್ನನ್ನು ಹಿಡಿದು ಎಲ್ಲರಿಗೂ ಅನ್ನುತ್ತೇನೆ; ಆದರೆ ರಾಜ್ಯಾಧಿಕಾರಕ್ಕೆ ನಿಜವಾಗಿಯೂ ''ಈಶ್ವರೀ ಸತ್ತೆ''ಯೆನ್ನುವಷ್ಟು ಗಂಭೀರ ಸ್ವರೂಪವಿರುವದೆಂದು ನನ್ನ ದೃಢವಾದ ನಂಬಿಗೆಯಿರುತ್ತದೆ. ಅಂತೆಯೇ ನಾನು ತೋರಿಕೆಗಾಗಿ ಶೃಂಗರಿಸಲ್ಪಟ್ಟ ಕಾಗ ದದ ಕುದುರೆಗಳನ್ನು ಕುಣಿಸಲಿಚ್ಛಿಸುವದಿಲ್ಲ; ಮತ್ತು ಅದಕ್ಕಾಗಿ ಸರ್ವಶ್ರೇಷ್ಠ ಬ್ರಿಟಿಶ ಸರಕಾರ ಮೊದಲು ಮಾಡಿಕೊಂಡು, ನನ್ನ ತೀರ ಕ್ಷುಲ್ಲಕ ನೌಕರನ ವರೆಗೆ ಹಾಗು ತೀರ ಕಡಿಮೆ ದರ್ಜೆಯ ಪ್ರಜೆಯುವರೆಗೆ ಎಲ್ಲರೂ ನನ್ನನ್ನು ಕ್ಷಮಿಸ ಬಹುದೆಂದು ನಾನು ನಂಬಿರುತ್ತೇನೆ.''

ರಾತ್ರಿಯಲ್ಲಾದ ಔತಣದ ಕಾಲಕ್ಕೆ ಏಜಂಟ ಸಾಹೇಬರು ಮಹಾರಾಜರ ಅಂದಿನ ಭಾಷಣದ ಬಗ್ಗೆ ಬಹು ಸ್ತುತಿಸಿದರು; ಆದರೆ ಅದೇ ರಾತ್ರಿ ಸರಕಾರದ ಮೇಲಧಿಕಾರಿಗಳ ಕಡೆಗೆ ಯಾವ ಕೇವಲ ಗುಪ್ತ Confidential ಪತ್ರವು ಏಜಂಟ ಸಾಹೇಬರಿಂದ ಹೋಗಬೇಕಾಗಿರುತ್ತದೋ, ಆ ಪತ್ರದಲ್ಲಿ ಅವರು:- ''ಈ ಜೋದ್ಯಪುರದ ಸಂಸ್ಥಾನಿಕನು ನನಗಂತೂ ಒಳ್ಳೇ ಜೋಗಿಗದವನಾಗಿಯೇ ತೋರುತ್ತಾನೆ. ಈತನ ಚಲೋ-ಕೆಡಕುತನಗಳ ನಿಶ್ಚಿತ ದಿಸೆಯು ಇಂದಿಗೆ ನಿರ್ಧ

ರಿಸ ಬರುವಂತಿಲ್ಲ; ಆದರೆ ಸರಕಾರವು ಈತನ ಆಡಳಿತದ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುತ್ತ, ನಡುನಡುವೆ ತಣಿಖೆ ಮಾಡುತ್ತಿರುವದು ಅವಶ್ಯವಿದೆ. ಈತನ ಸ್ಥಿತಿಯು ಪೌರ್ವಾತ್ಯ ಜನರ ಪುರಾಣಾದಿಗಳಲ್ಲಿಯೂ ದಂತಕಥೆಗಳಲ್ಲಿಯೂ 'ಒಬ್ಬ ದೇಶದ ಹಳೇ ರಾಜನು ಸತ್ತನು; ಆ ಪಟ್ಟಕ್ಕೆ ಬಾಧ್ಯಸ್ಥರಾರೂ ಇರಲಿಲ್ಲ; ಆಗ ಪ್ರಧಾನಿಯು ಆನೆಯ ಸೊಂಡಿಯಲ್ಲಿ ಹೂವಿನ ಮಾಲೆಯನ್ನು ಕೊಟ್ಟು ಅದನ್ನು ಪಟ್ಟಣ ತುಂಬೆಲ್ಲ ಮೆರಿಸಿದನು. ಆಗ ಆ ಆನೆಗೊಂದು ಬಗೆಯ ದಿವ್ಯ ಸ್ಫೂರ್ತಿಯೇ ಉಂಟಾಗಿ, ಅದು ಪಟ್ಟಣದಿಂದ ಹೊರಹೊರಟು, ಅಗಸೆಯ ಹೊರಬದಿಗಿರುವ ಧರ್ಮಶಾಲೆಯೊಳಗಿನ ಮೂಲೆಯಲ್ಲಿ ರಗಟಿಯನ್ನು ಹೊದ್ದುಕೊಂಡು ಕುಳಿತಿದ್ದ ಓರ್ವ ಫಕೀರನ ಕೊರಳಲ್ಲಿ ಆ ಹೂಮಾಲೆಯನ್ನು ಹಾಕಿತು; ಬಳಿಕ ಮಂತ್ರಿ ಮಂಡಲದವರು ಆ ಫಕೀರನನ್ನು ಕರೆದೊಯ್ದು ಆ ಊರ ಪಟ್ಟಕ್ಕೆ ಕೂಡ್ರಿಸಿದರು' ಎಂದು ಕೇಳಬರುವ ಕಥೆಯಂತಾಗಿದೆ. ಪುರಾಣ-ದಂತಕಥೆಗಳು ಇತಿಹಾಸಗಳಲ್ಲದ್ದರಿಂದ ಆ ರಗಟಿ ಹೊತ್ತ ಫಕೀರನು ಮುಂದೆ ಹೇಗೆ ರಾಜ್ಯವನ್ನಾಳಿದನೆಂಬದನ್ನು ಅವು ತಿಳಿಸುವದಿಲ್ಲ. ಇರಲಿ. ಆದರೆ ನಾನು ಹೇಳುವ ವೃತ್ತಾಂತವು ಈ ರಾಜನಿಗೆ ಸಾಕು. ಜೋಧ್ಯಪುರದ ಈಗಿನ ಮಹಾರಾಜರು ಸುಶಿಕ್ಷಿತರಾಗಿದ್ದಾರೆ. ಬಹುಶ್ರುತರಿರುವರು. ಇವರ ಮನಸ್ಸು ಸುಸಂಸ್ಕೃತವಿರುವಂತೆ ತೋರುತ್ತದೆ. ಇವರು ತುಚ್ಛ ಹಾಗು ತೋರಿಕೆಯ ಸಂಗತಿಗಳನ್ನು ತಿರಸ್ಕರಿಸುತ್ತಿರುವಂತೆ ಭಾಸವಾಗುತ್ತದೆ. ಬಡವರ ಮನೆಯ ಬಡ ಹುಡುಗನನ್ನು ದತ್ತು ಮಾಡಿಕೊಂಡ ಮೂಲಕ ಗರ್ಭಶ್ರೀಮಂತಿಕೆಯ ಹುಟ್ಟುಗುಣವು ಇವರಲ್ಲಿ ಹೇಗೆ ಇಲ್ಲವೋ, ಅದರಂತೆಯೇ ಗರ್ಭಶ್ರೀಮಂತರಿಗೆ ಅಂಟಿಕೊಳ್ಳುವ ದುರ್ಗುಣಗಳೂ ಇವರಲ್ಲಿರುವಂತೆ ಕಾಣುವದಿಲ್ಲ. ತಿಳಿಸತಕ್ಕ ವಿಶೇಷ ಸಂಗತಿಯೇನಂದರೆ ಇಂದಿಗೆ ಇವರು ಲಗ್ನಮಾಡಿಕೊಳ್ಳುವ ವಯಸ್ಸನ್ನು ಮೀರಿದವರಾಗಿದ್ದರೂ ಲಗ್ನವಿಷಯಕ ಮಾತೆತ್ತಿದರೆ, ಇವರು ಅದಕ್ಕೆ ಸ್ಪಷ್ಟವಾಗಿ ಸಮ್ಮತಿ ಇಲ್ಲವೆ ಅಸಮ್ಮತಿಗಳನ್ನೀಯುವದಿಲ್ಲ. ಅಂದಮೇಲೆ ಇಂತಹ ಹರೆಯದ ಅವಿವಾಹಿತ ರಾಜನು ಪಟ್ಟಕ್ಕೆ ಬರುವದು ಜೋಧ್ಯಪುರದೊಳಗಿನ ಪ್ರೌಢಕುಮಾರಿಕೆಯರ ಸುದೈವವು ಫಲಿಸಿತೆನ್ನಬೇಕೋ? ಅಥವಾ ಸಂಸ್ಥಾನದೊಳಗಿನ ಎಲ್ಲ ಸ್ತ್ರೀವರ್ಗದ ದುರ್ದೈವವು ಬಲವತ್ತರವಾಯಿತೆನ್ನಬೇಕೋ? ಇದು ಕಾಲಾಂತರದಿಂದಲೇ ತಿಳಿಯುತಕ್ಕ ವಿಷಯವಾಗಿದೆ. ಸದ್ಯಕ್ಕೆ ಸರಕಾರದವರು ಇವರ ಆಡಳಿತದ ಬಗ್ಗೆ ತಟಸ್ಥವೃತ್ತಿಯನ್ನೇ ತಾಳುವದು ಯುಕ್ತವೆಂದು ನನಗನಿಸುತ್ತದೆ.'' ಹೀಗೆಂದು ಬರೆದರು.

ಮಡಮ್ಮಸಾಹೇಬರ ವೃತ್ತಿಯಲ್ಲಿ ಮಾತ್ರ ಆ ತಾಟಸ್ಥ್ಯವೂ ಇರಲಿಲ್ಲ. ಆ ಮಹಾರಾಜರು ಅವಿವಾಹಿತರಾದುದರಿಂದ ಅರಮನೆಯೊಳಗೆ ಇವರ

ಸತ್ಕಾರವನ್ನು ಕಡೆಗೆ ಗಂಡಸರೇ ಮಾಡುವ ಪ್ರಸಂಗಬಿತ್ತು; ಮತ್ತು ಯುರೋಪೀಯ ಹೆಂಗಸರಿಗೆ ಗಂಡಸರೊಡನೆ ಕೂಡಿ ನಡೆಯುವ ರೂಢಿಯಿದ್ದರೂ, ಕಾಲಿದಾಸ ಕವಿಯು ತನ್ನ ಶಾಕುಂತಲ ನಾಟಕದಲ್ಲಿ ಹೇಳಿದಂತೆ: "ಸರ್ವಃ ಸಂಗಧೇಷು ವಿಶ್ವಸತಿ" ಇದೇ ಸತ್ಯವು. ಇಂಗ್ಲಿಷ ಕಲಿತಂತಹ ಸಂಸ್ಥಾನದ ಒಡತಿಯು ಭೆಟ್ಟಿಯಾದರೆ ಯುರೋಪಿಯನ್ನ ಸ್ತ್ರೀಯರ ರಹಸ್ಯವು ಚನ್ನಾಗಿಯೇ ಕೂಡಿ ಬರುತ್ತದೆ; ಆದರೆ ಅಶಿಕ್ಷಿತ ಒಡತಿಯರ ಗಂಟು ಬಿದ್ದರೂ ಸ್ವಂತದ ಪ್ರೌಢಿಯನ್ನು ಮೆರೆಯಿಸುವ ಸುಖವಾದರೂ ಅವರಿಗೆ ಲಭಿಸುತ್ತದೆ. ಸಂಸ್ಥಾನೀ ಒಡತಿಯ ಮೊಳಕೈವರೆಗಿನ ಆ ಬಳೆಗಳು, ಒಂದೇ ದಿವಸದ ಮಟ್ಟಿಗೆಂದು ಕಾಲಲ್ಲಿ ತೊಡಿಸಿದ ಅನಭ್ಯಾಸದ ಆ ಬೂಟು-ಸ್ಟಾಕಿಂಗು, ಹುಣ್ಣಿವೆಯ ಚಂದ್ರಮನಂತಹ ಕುಂಕುಮದ ಆ ದೊಡ್ಡ ಬೊಟ್ಟು, ಮೂಗಿನೊಳಗಿನ ಆ ಮುತ್ತಿನ ಮೂಗದಾಣ, ಉಪಯೋಗಿಸಲಿಕ್ಕೆ ತಿಳಿಯದ, ಆದರೆ ಟೊಂಕಕ್ಕೆ ಸಿಗಿಸಿಕೊಂಡ ಭಾರೀ ಬೆಲೆಯ ಚಿತ್ರವಿಚಿತ್ರ ಬಣ್ಣದ ಆ ಕರವಸ್ತ್ರಗಳು; ಇಂಗ್ಲಿಷ ಬಾರದಿದ್ದರೂ ನಿಷ್ಕಾರಣವಾಗಿ ಯಾವುದೊಂದು ಶಬ್ದವು ತಿಳಿಯಿತೆಂದು ತೋರಿಸುವ ಆ ಅಜ್ಞಾನ-ದಡ್ಡತನಗಳ ಹುಚ್ಚು ನಗೆ, ಮಧ್ಯಸ್ಥನಾದ ದುಭಾಷಿಯು ಇತ್ತಣ ಭಾಷಾಂತರವನ್ನು ಅತ್ತಕಡೆಗೂ ಅತ್ತಣ ಭಾಷಾಂತರವನ್ನು ಇತ್ತಕಡೆಗೂ ಹೇಳುತ್ತಿರಲಿಕ್ಕೆ ನಡೆಸಿದ ನಿರರ್ಥಕ ಆ ಗೋಣು ಅಲ್ಲಾಡಿಸುವಿಕೆ, ಆ ಹೂಂಕಾರ ಗೆಯ್ಯುವಿಕೆ; ಮೇಜಿಗೆ ಕುಳಿತು ಚಹ ಕುಡಿಯುವ ಪ್ರಸಂಗ ಬಂದಾಗ ಧರ್ಮಭ್ರಷ್ಟತೆಯ ಭೀತಿಯಿಂದ ಕುಡಿಯಲೋ-ಬೇಡಲೋ ಎಂಬ ಭ್ರಮೆಯಿಂದುಂಟಾದ ಆ ಗೊಂದಲ; ಇಂತಹ ಒಂದಲ್ಲ-ಎರಡಲ್ಲ ಹಲವು ಮನರಂಜನದ ಸಾಧನಗಳು ದೊರೆತು, ಅರಮನೆಗೆ ಹೋಗುವ ಯುರೋಪಿಯನ್ನ ಮಡಮ್ಮಗಳು ಸಂತೃಪ್ತರಾಗುತ್ತಾರೆ. ಯಾಕಂದರೆ, ಅವರಿಗೆ ಆ ಮೋಜನ್ನಾದರೂ ನೋಡಲಿಕ್ಕೆ ಸಿಗುತ್ತದೆ! ಆದರೆ ಈ ಮಡಮ್ಮಸಾಹೇಬರಿಗೆ ಆ ಜೋದ್ಯಪುರದಲ್ಲಿ ಅತ್ತ ಅದೂ ಇಲ್ಲ-ಇತ್ತ ಇದೂ ಇಲ್ಲ ಹೀಗಾಗಿತ್ತು. ಅದರಿಂದ ಜೋಗಿಗಮಹಾರಾಜರ ಮೇಲಿದ್ದ ಅವರ ಸ್ವಾಭಾವಿಕ ಅಸಂತೋಷವು ಮತ್ತಿಷ್ಟು ಹೆಚ್ಚಿತು; ಮತ್ತು ಮರು ದಿವಸ ಜೋದ್ಯಪುರದಿಂದ ಬರಿಗೈಯಿಂದ ಮೋಟರನ್ನಾರೋಹಿಸಿ ಹೊರಡುವ ಪ್ರಸಂಗವು ಯಾವಾಗ ಬಂದಿತೋ, ಆಗಲಂತೂ ಅವರು ಮಹಾರಾಜರೊಡನೆ ಮನಸ್ಸಿಲ್ಲದೆ ಶೇಕ್‌ಹ್ಯಾಂಡನ್ನಾದರೂ ಮಾಡಬೇಕಾಯಿತು; ಆದರೆ ಅವರು ದಿವಾಣರೆದುರಿಗೆ ತಮ್ಮ ಕೈ ಕೂಡ ಮುಂದು ಮಾಡಲಿಲ್ಲ; ಮತ್ತು ಅವರ ಕಡೆಗೆ ದುರದುರನೆ ಸಿಟ್ಟಿನಿಂದ ನೋಡುತ್ತ ಹೊರಟು ಹೋದರು!

ರಾಜಧಾನಿಯ ಜನರದಾದರೂ ಹೀಗೆಯೇ ನಿರಾಶೆಯಾಯಿತು. ಅವರ

ಮನಸ್ಸಿನಲ್ಲಿ ದರಬಾರವು ಮನಸೋಕ್ತವಾಗಿ ಆದೀತೆಂದಿದ್ದಿತು; ಆದರೆ ಆದ ಸಮಾರಂಭವು ಅತ್ಯಲ್ಪವೇ. ಆದದ್ದರ ಮರದಂಡಲವನ್ನಾದರೂ ವಿಜೃಂಭಿಸ ಬೇಕೆಂಬ ಇಚ್ಛೆಯೂ ಅವರದಿತ್ತು. ಅನ್ನವು ತಂಗಳದಾದರೂ ಒಗ್ಗರಣೆ ಹಾಕಿ ಅದನ್ನು ರುಚಿಕರವನ್ನಾಗ ಮಾಡಬರುವಂತೆ ಸಮಾರಂಭವನ್ನಾದರೂ ಅದೇ ಬಗೆ ಯಾಗಿ ಮಾಡಿಕೊಳ್ಳುವದು ಅವರಿಗೆ ಬೇಕಾಗಿತ್ತು. ಒಬ್ಬಾನೊಬ್ಬ ದರಬಾರದ ಸಲಹೆಗಾರನಿಗೆ ಅರಸುಮನೆತನದ ಕುಲಾಚಾರದ ಸ್ಮರಣೆಯಾಯಿತು; ಯಾಕಂದರೆ ಗೊಂದಲ ಹಾಕಿಸುವ ಆ ನೆವದಿಂದ ಸೂಳೆಯರನ್ನು ಕುಣಿಸ ಬರುತ್ತಿತ್ತು; ಮತ್ತು ಗೊಂದಲಿಗನ ಕಥೆಯು ಮುಗಿದ ಮೇಲೆ ಅವರಿಂದ ಮನಮೆಚ್ಚುವ ಲಾವಣಿ ಗಳನ್ನೂ ಅನಿಸಿಕೊಳ್ಳಲಿಕ್ಕೆ ಬರುತ್ತಿತ್ತು. ಮತ್ತೊಬ್ಬನಿಗೆ ಕೀರ್ತನ ಸಪ್ತಾಹದ ನೆನ ಪಾಯಿತು. ಯಾಕಂದರೆ, ಋಣಾನುಬಂಧಿಗಳಾದ ಹರಿದಾಸರಿಗೆ ಬಿದಾಗಿ-ದುಡ್ಡು ಕೊಡಿಸುವ ಕಾಲಕ್ಕೆ ಮಧ್ಯಸ್ಥರ ಕೈಯೂ ಅಲ್ಪ ಸ್ವಲ್ಪ ಬೆಚ್ಚಗಾಗುವ ಸಂಭವ ವಿರುತ್ತದೆ. ಇನ್ನೊಬ್ಬನು ಕುಸ್ತಿಗಳ ಕಾರ್ಯಕ್ರಮವನ್ನು ಸೂಚಿಸಿದನು; ಆದರೆ ಮಹಾರಾಜರು ಯಾವದೂ ಬೇಡವೆಂದು ಹೇಳಿಬಿಟ್ಟರು! ಅಲ್ಲದೆ "ರಾಜ್ಯಾ ರೋಹಣ ಸಮಾರಂಭದ ಗುಡಿ-ತೋರಣ ಮೊದಲಾದ ಚಿಹ್ನಗಳೆಲ್ಲ ಇನ್ನು ಇಪ್ಪ ತ್ನಾಲ್ಕು ತಾಸುಗಳಲ್ಲಿ ನಾವಶೇಷವಾಗಬೇಕು" ಎಂಬ ಹುಕುಮನ್ನೂ ಕೊಟ್ಟರು. ಅದರಂತೆ ಅಮಲು ನಡೆದು ಎರಡೇ ದಿನಗಳಲ್ಲಿ ರಾಜಧಾನಿಗೆ ನಿತ್ಯದ ಸ್ವರೂಪವು ಪ್ರಾಪ್ತವಾಯಿತು. ಎಷ್ಟೋ ಜನರಿಗೆ ಈ ರಾಜ್ಯಾರೋಹಣ ಸಮಾರಂಭವಾ ದೊಡನೆ ಮಹಾರಾಜರು ಲಗ್ನವಾಗಿ ಚತುರ್ಭುಜರಾಗುವ ಎರಡನೇ ಸಮಾರಂ- ಭವು ಬೇಗನೆ ಆದೀತೆಂದೂ; ಹಾಗಾಯಿತೆಂದರೆ, ಮೊದಲನೇ ಸಮಾರಂಭಕ್ಕಾಗಿ ಸಿದ್ಧಗೊಳಿಸಿದ ಕಮಾನು-ತೋರಣಗಳು ಆ ಎರಡನೇ ಸಮಾರಂಭಕ್ಕೆ ಅನಾಯಾಸ ಉಪಯೋಗಬಿದ್ದಾವೆಂದೂ ಅನಿಸುತ್ತಿತ್ತು; ಆದರೆ ಚೋಜಿಗಮಹಾರಾಜರು ಪ್ರಜೆಗಳ ಆ ಆಶೆಯನ್ನೂ ಪೂರ್ತಿಗೊಳಿಸಲಿಲ್ಲ.

ಅಲ್ಪಾಧಿಕಾರ ಸ್ವೀಕಾರ ಸಮಾರಂಭದ ನಂತರ ಕೆಲ ದಿನಗಳ ಮೇಲೆ ಒಂದು ದಿನ ಸಂಜೆಯ ಮುಂದೆ ಒಂದು ಸರಕಾರೀ ಮೋಟಾರು ಅರಮನೆಯ ಹೆಬ್ಬಾಗಿಲಿಗೆ ಬಂದು ನಿಂತಿತು. ಅದರೊಳಗಿಂದ ದೇಶೀ ಪದ್ಧತಿಯ ಪ್ರವಾಸೀ ಉಡುಪು ಧರಿಸಿರುವ ಒಬ್ಬ ತರುಣ ಗೃಹಸ್ಥನು ಕೈಯೊಳಗೆ ಕೋಲು, ಚಿಕ್ಕ ಬ್ಯಾಗಗಳನ್ನು ಹಿಡಕೊಂಡು ಕೆಳಗಿಳಿದನು. ಕೂಡಲೆ ಒಬ್ಬ ಪಹರೆಯವನು ಅವ ನನ್ನು ಕುರಿತು ಕೈ ಜೋಡಿಸಿ:--"ಮಹಾರಾಜ ಸಾಹೇಬರು ಆಗಿನಿಂದ ತಮ್ಮ ದಾರಿಯನ್ನೇ ನೋಡುತ್ತ ಉಪ್ಪರಿಗೆಯ ಮೇಲೆ ಕುಳಿತಿರುತ್ತಾರೆ. ಸಾಮಾನು- ಸಟ್ಟುಗಳ ಬಗ್ಗೆ ತಾವು ಕೊಂಚವೂ ಯೋಚಿಸಬೇಕಾದ್ದಿಲ್ಲ. ನಾನು ಅದನ್ನೆಲ್ಲ

ತಮ್ಮ ಬಿಡಾರದ ಕೋಣೆಗೊಯ್ದು ವ್ಯವಸ್ಥೆಯಿಂದಿರಿಸುತ್ತೇನೆ' ಎಂದು ಹೇಳಿದನು.

ಅತಿಥಿಯೂ ಪಹರೆಯುವನೂ ಮೆಟ್ಟಿಲುಗಳನ್ನೇರಿ ಹೋಗುತ್ತಿರುವಷ್ಟರಲ್ಲಿ ಖುದ್ದ ಜೋಜಿಗಮಹಾರಾಜರು ಅಲ್ಲಿಯೇ ನಿಂತುಕೊಂಡಿದ್ದರು. ಪಹರೆಯುವನು ಅವರಿಗೆ ಮುಜುರೆ ಮಾಡುತ್ತಲೆ, ಮಹಾರಾಜರು:—"ಕೆಳಗೆ ಹೋಗಿ ಇವರ ಸಾಮಾನುಗಳನ್ನು ಸರಿಯಾಗಿರಿಸು; ಮತ್ತು ನಮ್ಮ ಚಹವನ್ನು ಇಲ್ಲಿಗೇ ಕಳಿಸಲು ಹೇಳು" ಎಂದು ಹೇಳಿ ಅವನನ್ನು ಕಳಿಸಿದರು; ಹಾಗು ಅತಿಥಿಯ ಕೈ ಹಿಡಿದು ತಮ್ಮ ದಿವಾಣಖಾನೆಗೆ ಕರೆದೊಯ್ದು ಅವನನ್ನು ಬಲವಾಗಿ ಅಪ್ಪಿಕೊಂಡರು; ಮತ್ತು ಸದ್ಗದಿತ ಕಂಠದಿಂದ ಅನ್ನುತ್ತಾರೆ:—ಮನೋಹರಾ, ಎಷ್ಟು ವರ್ಷಗಳ ನಂತರ ಭೆಟ್ಟಿಯಾದೆ!"

ಮನೋಹರ:—ಸರಾಸರಿ ಮೂರು ವರ್ಷಗಳಾದವು.

ಜೋ:—ನೀನು ನನ್ನ ರಾಜ್ಯಾರೋಹಣ ಸಮಾರಂಭಕ್ಕೆ ಬಂದೀಯೆಂದು ಎಷ್ಟೋ ನಿರೀಕ್ಷಿಸಿದೆನು; ಆದರೆ ಕಡೆಗೂ ನೀನು ಬಾರದ್ದರಿಂದ ನನಗೆಷ್ಟು ಖೇದವಾಯಿತೆನ್ನಲಿ?

ಮ:—ನೀವು ಹೇಳದ ಹೊರತು ನನಗದು ತಿಳಿಯುವದಿಲ್ಲವೇ? ನನಗೂ ಅದರಂತೆಯೇ ದುಃಖವಾಯಿತು; ಆದರೆ ಮಾಡಲೇನು? ಆ ಸಮಾರಂಭವನ್ನು ನೋಡಿ, ಕಣ್ಣಿನ ಬರವನ್ನು ಹಿಂಗಿಸಿಕೊಳ್ಳುವದು ನನ್ನ ದೈವದಲ್ಲಿಯೇ ಇರದಿದ್ದರೆ, ನಾನು ವೇಳೆಗೆ ಸರಿಯಾಗಿ ಬರುವದಾದರೂ ಹೇಗೆ? ಅದಿರಲಿ. ಇನ್ನು ಆ ಖೇದದ ಬಗ್ಗೆ ನಾವಿಬ್ಬರೂ ಕೂಡಿಯೇ ಸೇಡು ತೀರಿಸಿಕೊಳ್ಳೋಣ! ಇನ್ನು ಮುಂದೆ ರಾಜ್ಯಾರೋಹಣದ್ದಲ್ಲದಿದ್ದರೂ ಬೇರೆ ಹಲವು ಸಮಾರಂಭಗಳು ಆಗತಕ್ಕವೇ ಇವೆ. ಯಜಮಾನ ಸಾಹೇಬರ ವೈಭವವಿದೆ, ನಮ್ಮ ಕಣ್ಣುಗಳಿವೆ, ನೋಡಿ ಬಿಡೋಣ! ನಾನು ಯಾವಾಗಲೂ ಈ ಜೋದ್ಯಪುರದಲ್ಲಿರದಿದ್ದರೂ ಸಮೀಪದಲ್ಲಿಯೇ ಇರುತ್ತೇನೆ. ದೂರವೆಂದರೆ, ಒಂದೇ ರಾತ್ರಿಯ ಪ್ರವಾಸ!

ಜೋ:—ಏನಂದಿ? ನನ್ನ ವೈಭವ ಮತ್ತು ನಿನ್ನ ಕಣ್ಣೇ? ನೀನು ವಿದೇಶಗಳಿಗೆ ಹೋಗಿ ಇದೇ ಬುದ್ಧಿವಂತಿಕೆಯನ್ನು ಕಲಿತು ಬಂದೆಯೇನು! ನೀನು ಸಮಾರಂಭದಲ್ಲಿ ನನ್ನ ಬಳಿಯಲ್ಲಿರದ ಬಗ್ಗೆ ನನಗೆ ಖೇದವಾಯಿತೆಂದು ನಾನು ಅಂದದ್ದು ನನ್ನ ವೈಭವ ನೋಡಲಿಕ್ಕೆ ನಿನ್ನವೆರಡು ಕಣ್ಣು ಕಡಿಮೆಯಾದವೆಂದೇನು? ಹಾಗಾದರೆ ನನ್ನನ್ನು ನೀನು ಚೆನ್ನಾಗಿಯೇ ಪರೀಕ್ಷಿಸಿದೆನ್ನಬೇಕು! ಅದಿರಲಿ. ನಾನು ಎಲ್ಲ ಬಗೆಯ ತೋರಿಕೆಯ ವೈಭವದ ಭೋಕ್ತಾರನೆಷ್ಟಿರುವೆನೆಂಬದು ನಿನಗೆ ಚೆನ್ನಾಗಿ ಗೊತ್ತಿದೆ; ಆದರೆ ಆ ಹಾಳುತೋರಿಕೆಯ ಪ್ರಕಾರಗಳನ್ನು ಅಧಿಕಾರ ಸ್ವೀಕಾರದ ಕಾರ್ಯಕ್ರಮದಿಂದ ಕಿತ್ತೊಗೆದು, ನೂರಾರು ಜನರನ್ನು ನಾನು ಹೇಗೆ ವಿರಸ

ಗೊಳಿಸಿದೆನೆಂಬದು ನಿನಗೆಲ್ಲಿ ಗೊತ್ತಿದೆ? ಅಧಿಕಾರ ಸ್ವೀಕಾರದ ದಿನದ ವರೆಗೆ ನಾನು ಪರಾವಲಂಬಿಯೇ ಆಗಿದ್ದೆನು. ಅದರಿಂದ ನಾನು ಬೇಡ-ಬೇಡವೆನ್ನು ತ್ತಿದ್ದರೂ ಸಮಾರಂಭದಲ್ಲಿ ನನ್ನ ಮೈ ಮೇಲೆ ಅಲ್ಪ ಸ್ವಲ್ಪ ವೈಭವವು ಪೋಲೀಟಿ ಕಲ್ ಏಜಂಟನ ಹುಕುಮಿನ ಮೇರೆಗೆ ಹತ್ತಿ ಕುಳಿತಿತ್ತು; ಆದರೆ ಅದು ಇನ್ನು ಮುಂದೆ ಯಾರಿಗೂ ಕಾಣದಿರುವದು ಖಂಡಿತವು. ನಿನ್ನ ಕಣ್ಣುಗಳಿಗಾದರೂ ನಿನ್ನ ಗೈರ ಹಾಜರಿಯ ಮೂಲಕ ಅದೇ ಶಿಕ್ಷೆಯು! ಅಲ್ಲದೆ ನನ್ನ ವೈಭವ ನೋಡಲಿಕ್ಕೆ ನಿನಗೆ ದೊರೆಯಲಿ-ದೊರೆಯದಿರಲಿ; ಆದರೆ ಇನ್ನು ಮುಂದೆ ಒಂದು ರಾತ್ರಿಯ ಪ್ರವಾಸದ ತೊಂದರೆಯು ಕೂಡ ನಿನಗೆ ಆಗಕೂಡದ ವ್ಯವಸ್ಥೆಯನ್ನು ನಾನು ಮಾಡಿಟ್ಟಿರುತ್ತೇನೆ.

ಮ:—ಭಲೆ! ಹಾಗಾದರೆ ನನಗೆ ಮತ್ತೆ ಈ ಜೋದ್ಯಪುರಕ್ಕೆ ಬರುವ ಆಮಂತ್ರಣವನ್ನೇ ಕೊಡಬಾರದೆಂದು ನಿಶ್ಚಯ ಮಾಡಿರುವಿರೇನು?

ಜೋ:—ಹಾಗಲ್ಲೋ; ನಿನ್ನನ್ನು ಇನ್ನು ಮುಂದೆ ಈ ಜೋದ್ಯಪುರದಲ್ಲಿ ಯಾವಾಗಲೂ ನನ್ನ ಬಳಿಯಲ್ಲೇ ಇಟ್ಟುಕೊಳ್ಳುವ ನಿರ್ಧಾರ ಮಾಡಿದ್ದೇನೆ. ಅಂದ ಮೇಲೆ ಪ್ರವಾಸದ ಅವಶ್ಯಕತೆಯೇನು? ನನ್ನ ವೈಭವ ನೋಡುವ ನಿರಾಶೆಯ ದುಃಖವನ್ನನುಭೋಗಿಸುತ್ತ, ಇನ್ನು ಮುಂದೆ ನೀನು ಈ ಪಟ್ಟಣದಲ್ಲಿಯೇ ನಿನ್ನ ಶೇಷಾಯುಷ್ಯವನ್ನೆಲ್ಲ ಕಳೆಯುತ್ತಿರಬೇಕಾಗುವದು!

ಮ:—ಅಂದರೆ? ಇದರ ಅರ್ಥವೇ ನನಗೆ ಹೊಳೆಯಲಿಲ್ಲ.

ಜೋ:—ಕೃತಿಯು ಘಟಿಸಿದರೆ ತೀರಿತು; ಅರ್ಥ ತಿಳಿದು ಮಾಡತಕ್ಕದ್ದೇನಿದೆ?

ಮ:— ನಿಮ್ಮ ಅಧಿಕಾರ-ಗಿಧಿಕಾರಗಳ ಆಗ್ರಹ ನಡಿಸಲಿಕ್ಕೆ ನಿಮಗೆ ನಿಮ್ಮ ಪ್ರಜೆಗಳಿಗೇನು ಕೊರತೆಯಿದೆಯೆಂದು ನನ್ನ ಮೇಲೆ ಈ ಬಗೆಯ ಬಲುಮೆ ಮಾಡುತ್ತಿರುವಿರಿ?

ಜೋ: -ಭಾಪು! ಪ್ರೇಮದ ಮನುಷ್ಯರ ಮೇಲೆಯೇ ಒತ್ತಾಯ ಮಾಡು ವದರಲ್ಲಿ ಜೀವಾಳವಿರುತ್ತದೆ. ಪ್ರೇಮದ ಜನರೇ ಒತ್ತಾಯವನ್ನು ಸಹಿಸಿಕೊಳ್ಳು ತ್ತಾರೆ; ಆದರೆ ಇತರೇ ಜನರು ಆ ಬಗ್ಗೆ ಬೊಬ್ಬಾಟ ಮಾಡುತ್ತಾರೆ.

ಮ:—ಆದರೆ ಈ ನಿಮ್ಮ ಒತ್ತಾಯವನ್ನು ಸಹಿಸಿ ನಾನು ಇಲ್ಲಿದ್ದು ಮಾಡುವದೇನು?

ಜೋ:—ಇದುವರೆಗೆ ನೀನು ಗಳಿಸಿದ ವಿದ್ಯೆಯು, ವಿಶೇಷವಾಗಿ ವ್ಯಾವ ಹಾರಿಕ ಬುದ್ಧಿವಂತಿಕೆಯು ಮತ್ತು ಅನುಭವದ ಲಾಭವು ನನಗೂ ನನ್ನ ಪ್ರಜೆ ಗಳಿಗೂ ಆಗುವದೇ ನನ್ನ ಮುಖ್ಯ ಧ್ಯೇಯವು. ಮತ್ತೇನು?

ಮ:—ಅದು ಯಾವ ಬಗೆಯ ಸಂಬಂಧದಿಂದಪ್ಪಾ?

ಜೋ:—ನನ್ನ ಪ್ರ್ಯಾಯವ್ಹೇಟ ಸೆಕ್ರೆಟರಿಯಾಗಿ.

ಮ:—ಅಂದರೆ ಸಂಸ್ಥಾನೀ ದರಬಾರದೊಳಗಿನ ಎಲ್ಲಕ್ಕಿಂತಲೂ ಗಡಚಾದಂತಹ ಆ ಕೆಲಸವನ್ನೇ ನೀವು ನನಗೆ ಹೇಳುವಿರಾ?

ಜೋ:—ಅದು ಎಲ್ಲ ಕೆಲಸಗಳಿಗಿಂತಲೂ ಗಡಚಾದದ್ದು ಹೇಗೆ?

ಮ:—ತಮ್ಮ ರಾಜನಿಂದ ಯಾವ ಯಾವ ಕೆಟ್ಟ ಕೆಲಸಗಳಾಗುವವೋ, ಅವುಗಳ ಪ್ರೇರಕನು ಅವರ ಪ್ರ್ಯಾಯವ್ಹೇಟ ಸೆಕ್ರೆಟರಿಯೆಂದು ಜನರು ತಿಳಕೊಳ್ಳಬೇಕು; ಆದರೆ ಈತನು ತಲೆ ಒಡಕೊಂಡು ಹೇಳಿದರೂ ರಾಜನು ಅದನ್ನು ಕೇಳಬಾರದು. ಇದೇ.

ಜೋ:—ಚಿಕ್ಕಂದಿನಲ್ಲಿ ನಾವು ಶಾಲೆಯಲ್ಲಿ ಬಾಲಮಿತ್ರರಾಗಿದ್ದಾಗ ನನ್ನ ಕೈಯಿಂದಾದ ಎಲ್ಲ ಅಪರಾಧಗಳ ದೋಷವನ್ನು ನೀನಾಗಿ ನಿನ್ನ ಮೇಲೆ ಹೇರಿಕೊಳ್ಳುತ್ತಿದ್ದೆ. ಅದರಂತೆಯೇ ಈಗಲಾದರೂ ಮಾಡೆಂದರಾಯಿತು! ನೀನು ಸಣ್ಣವನು ದೊಡ್ಡವನಾದೆ; ಅದರೊಡನೆ ನನ್ನ ಮೇಲಿನ ನಿನ್ನ ಬಂಧುಪ್ರೇಮ ಮತ್ತು ಸ್ವಭಾವದ ಉದಾರತೆಗಳೂ ದೊಡ್ಡವಾಗಿರುವವು; ಬೆಳೆದಿರುವವು.

ಮ:—ನೀವು ಸಣ್ಣವರು ದೊಡ್ಡವರಾಗಿ ಅದರೊಡನೆ ತಪ್ಪು ಮತ್ತು ಕಿಡಿಗೇಡಿತನ ಮಾಡುವ ನಿಮ್ಮ ಪರಾಕ್ರಮವೂ ಬೆಳೆದಿರುವವೆಂದು ನಾನು ತಿಳಿಯಲೋ, ಏನು? ಮತ್ತು ನೀವೂ ಹಾಗೆಯೇ ಅನ್ನುವಿರಾ?

ಮಹಾರಾಜರು ನಕ್ಕು:—ಅವಶ್ಯವಾಗಿ. ರಾಜನೆಂದೆನ್ನುವದು ಮತ್ತೇತಕ್ಕೆ? ತಮ್ಮ ಲಹರಿಗಳ ಇಚ್ಛೆಯನ್ನು ತೀರಿಸಿಕೊಳ್ಳುವದಾದರೆ ಇಂಥ ಬಂಗಾರದಂತಹ ದೇಶ ಮತ್ತು ಕಾಲಗಳು ಎಲ್ಲಿ ಹಾಗು ಹೇಗೆ ದೊರೆಯುವವು?

ಮನೋಹರನು ಜ್ಞಾಪಿಸಿಕೊಂಡಂತೆ ಮಾಡಿ, ನಿಟ್ಟುಸಿರುಗರೆದು.-ತೋರಿಕೆಯ ವೈಭವದ ಇಚ್ಛೆಯು ನಿಮಗೆ ಹೇಗಿಲ್ಲವೋ ಹಾಗೆಯೇ ನನಗೂ ಇಲ್ಲವೆಂಬುದು ನಿಮಗೆ ಗೊತ್ತೇ ಇದೆ; ಆದರೆ ಇಂದಿಗೆ ಒಂದು ವ್ಯಕ್ತಿಯು ಜೀವಂತವಾಗಿದ್ದರೆ, ನಿಮ್ಮ ಈ ವೈಭವಹೀನ,-ರುಕ್ಷವೇ ಏಕಾಗಲೊಲ್ಲದು; ಆದರೆ-ರಾಜ್ಯಾರೋಹಣದ ಸಮಾರಂಭವನ್ನು ಕಂಡು ತನಗಾದ ಆನಂದವನ್ನು ವ್ಯಕ್ತಪಡಿಸಲಿಕ್ಕೆ ಅದಕ್ಕೆ ಜಗತ್ತೇ ಚಿಕ್ಕದಾಗುತ್ತಿತ್ತೋ ಏನೋ? ಆ ವ್ಯಕ್ತಿಯು ಜೀವದಿಂದಿಲ್ಲವೆಂಬ ಬಗ್ಗೆ ನನಗೆ ಬಹಳ ಕೆಡಕೆನಿಸುತ್ತದೆ.

ಜೋ:—ಅವರು ಯಾರು?

ಮ:—ನನ್ನ ತಾಯಿಯು.

ಮಹಾರಾಜರು ಪುಟ್ಟಬಿದ್ದು ಗದ್ಗದಿತ ದನಿಯಿಂದ:—ಎಚ್ಚರ! ಬಲು

ಎಚ್ಚರ!! 'ನನ್ನ' ತಾಯಿಯೆಂದೆನ್ನದೆ 'ನಮ್ಮ' ತಾಯಿ ಎಂದು ಹೇಳು! ಮನೋಹರಾ! ಅವಳು ನಿನಗೆ ಜನ್ಮ ಕೊಟ್ಟವಳು; ಆದರೆ ನಿಜವಾದ ಪುತ್ರಪ್ರೇಮವನ್ನು ನನ್ನಲ್ಲಿರಿಸಿದ್ದಳು. ಇಂದು ನೀನು ಬೇಕಂತ ಅವಳ ನೆನಪು ತೆಗೆದದ್ದು ಒಳಿತೇ ಆಯಿತು; ಆದರೆ ನೀನು ನೆನಪು ಮಾಡಿಕೊಡುವ ಮೊದಲೇ ಅಥವಾ ನೀನು ಇಲ್ಲಿಗೆ ಬರುವ ಮುಂಚೆಯೇ ನಾನು ನಮ್ಮ ತಾಯಿಯ ನೆನಪು ನಿರಂತರದಲ್ಲುಳಿಯುವಂತೆ ಏನು ಮಾಡಿರುತ್ತೇನೆಂಬದನ್ನು ತೋರಿಸುತ್ತೇನೆ ಬಾ; ಅಂದರೆ ತಿಳಿದೀತು ನಿನಗೆ.

ಹೀಗೆಂದು ಹೇಳಿ, ಜೋಜಿಗರಾಯನು ಮನೋಹರನ ಕೈ ಹಿಡಿದು, ಅವನನ್ನು ತನ್ನ ಒಳಗಿನ ಕೋಣೆಗೆ ಕರೆದೊಯ್ದನು. ಅಲ್ಲಿಯ ಬಣ್ಣ ತೊಡೆದ ಗೋಡೆಯ ಮೇಲೆ ಚಂದವಾದ ಕಟ್ಟಿಗೆಯ ಚೌಕಟ್ಟು ಕೂಡ್ರಿಸಿ, ಅದರೊಳಗೆ ಒಂದರ ಬದಿಯಲ್ಲೊಂದರಂತೆ ಮೂರು ಬಹು ದೊಡ್ಡ ಫೋಟೋಗಳನ್ನು ತೂಗಬಿಟ್ಟಿದ್ದರು. ಅವುಗಳಲ್ಲಿ ನಟ್ಟನಡುವೆ ಮನೋಹರನ ಮೃತತಾಯಿಯ ಫೋಟೋವಿದ್ದು, ಒಂದು ಕಡೆಗೆ ಮನೋಹರನ ಹಾಗು ಇನ್ನೊಂದು ಕಡೆಗೆ ಸ್ವತಃ ಜೋಜಿಗರಾಯನ ಫೋಟೋಗಳಿದ್ದವು; ಮತ್ತು ಆ ನಡುವಿನ ಫೋಟೋದ ಮೇಲೆ ಆಗ ತಾನೆ ಅರಳಿದ ಮಲ್ಲಿಗೆ ಹೂವಿನ ಹಾರವು ತೂಗಗಟ್ಟಿತ್ತು. ಆ ಫೋಟೋದೆದುರಿಗೆ ತಲೆಬಾಗಿಸಿ, ಗದ್ಗದಕಂಠದಿಂದ ಜೋಜಿಗರಾಯನು:-ಮನೋಹರ! ಈ ಮಹಾತಾಯಿಯ ಆಶೀರ್ವಾದವೇ ಇಂದಿನ ನನ್ನ ಸ್ಥಾನ ಮತ್ತು ನನ್ನ ವೈಭವಗಳಿಗೆ ಕಾರಣವಾಗಿರುತ್ತದೆಂದು ನಾನು ತಿಳಿದಿರುತ್ತೇನೆ. ನನಗೆ ಜನ್ಮ ಕೊಟ್ಟ ತಾಯಿಯ ನೆನಪು ನನಗೆ ಇಲ್ಲವೇ ಇಲ್ಲ. ನನ್ನ ತಂದೆಯಾದರೂ ನನ್ನ ತಾಯಿಯ ತರುವಾಯ ತೀವ್ರವೇ ಗತಿಸಿದರು. ಅಂಥ ನನ್ನ ಅನಾಥ ಅಸಹಾಯ ಸ್ಥಿತಿಯಲ್ಲಿ ಯಾವಳು ನನ್ನನ್ನು ಸಂರಕ್ಷಣೆ ಮಾಡಿದಳೋ, ಹೊಟ್ಟೆ-ಬಟ್ಟೆಗಳನ್ನು ನೋಡಿದಳೋ, ಅವಳೇ ನನ್ನ ತಾಯಿಯು; ಮತ್ತು ನಿಜವಾದ ಅಧಿಷ್ಠಾತ್ರಿದೇವತೆಯು! ನಾನು ದತ್ತಕನಾಗಿ ಈ ಸಂಸ್ಥಾನದ ಯಜಮಾನನಾದ ಮೊದಲನೇ ದಿವಸ ಅವಳ ಅಂತಃಕರಣವು ಭಾವನೆಗಳಿಂದ ಹೆಚ್ಚಾಗಿ ತುಂಬಿತುಳುಕುತ್ತಿತ್ತು. ಆದ್ದರಿಂದ ಅವಳು ಆ ಇಡೀ ರಾತ್ರಿಯಲ್ಲಿ ದೇವರ ಮುಂದೆ ಕುಳಿತು ಭಜನ ಮಾಡುತ್ತಿದ್ದಳು. ಹೀಗೆ ಒಳ್ಳೇ ಆನಂದಭರದಿಂದ ಅವಳು ಆಗ ಸ್ಫುಂದಿಸುತ್ತಲೂ ನನ್ನ ದೈವತೆರೆಯಿತೆಂದು ಸಂತೋಷದಿಂದ ಹಿಗ್ಗುತ್ತಲೂ ಇದ್ದಳೋ ಅಥವಾ ನಾನು ಅವಳಿಂದ ನಿರಂತರ ದೂರ ಹೋಗುವೆನೆಂಬ ದುಃಖದಿಂದ ಅಳುತ್ತಿದ್ದಳೋ ಅದೇ ತಿಳಿಯಲಿಲ್ಲ! ಮನೋಹರ! ಈ ಮಹಾತಾಯಿಯ ಉಪಕಾರವನ್ನು ನಾನು ಹೇಗೆ ತೀರಿಸಲಿ? ನನ್ನ ಭಾಗ್ಯಕ್ಕೆ ಹೂ ಕಾಯಿ ಬಿಟ್ಟದ್ದನ್ನು ನೋಡಲಿಕ್ಕೆ ಅವಳೇಕೆ ಜೀವಿಸಿರಲಿಲ್ಲ? ರಾಜ್ಯಪದಕ್ಕೆ ಬಂದು ಅವಳನ್ನು ನಾನು ತ್ಯಜಿಸಿದೆ

ನೆಂದು ನನ್ನಲ್ಲಿ ಸಿಟ್ಟಾಗಿ, ಅವಳು ನನ್ನನ್ನು ತ್ಯಜಿಸಿದಳೋ ಏನೋ? ಅವಳು ನನ್ನ ಮೇಲೆ ಹಾಗೆ ಪ್ರೇಮ ಮಾಡಬೇಕೆಂಬದಕ್ಕೆ ಈಶ್ವರೀಸೂತ್ರದ ಹೊರತು ಬೇರೆ ಯಾವ ಕಾರಣವಿರಬೇಕು? ಇಂದಿಗೆ ಅವಳು ಜೀವಿಸಿದ್ದರೆ, ನಾನು ಅವಳ ಸ್ವಂತ ಕ್ಕೆಂದು ಒಂದು ಚಿಕ್ಕ ದೇವಾಲಯುವನ್ನು ಕಟ್ಟಿಸಿಕೊಡುತ್ತಿದ್ದೆನು; ಉಪವನ ನಿರ್ಮಿಸಿ ಕೊಡುತ್ತಿದ್ದೆನು; ಪುರಾಣ-ಕೀರ್ತನಗಳ ಅನುಕೂಲತೆ ಮಾಡಿಕೊಡು ತ್ತಿದ್ದೆನು; ಮತ್ತು ದಿನಾಲು ಆಕೆಯ ಚರಣಗಳ ಮೇಲೆ ಹೂವೇರಿಸಿದ ನಂತ ರವೇ ಊಟಮಾಡುತ್ತಿದ್ದೆನು; ಆದರೆ ಅವಳು ಹೊರಟು ಹೋದ ಬಳಿಕ ನನ್ನ ಕೈಗೆ ಸಿಕ್ಕಿರುವ ನಿನ್ನನ್ನು ಬಿಟ್ಟುಕೊಟ್ಟೇನೆಂದು ನಿನಗನಿಸುವದೇ? ಅದೇನೂ ಇಲ್ಲ. ನೀನಿನ್ನು ಈ ಜೋದ್ಯಪುರದಲ್ಲಿಯೇ ಇರತಕ್ಕದ್ದು; ಅದೂ ನನ್ನ ಬಳಿಯಲ್ಲೇ. ನಿನ್ನದಾದರೂ ನಿನ್ನ ಊರಲ್ಲೇನಿದೆ? ಮತ್ತು ನಿನಗೆ ಆ ಕುಗ್ರಾಮ ವಸತಿಯಲ್ಲಿ ಮನರಂಜನೇ ಆಗಲಿಕ್ಕಿಲ್ಲ. ಇನ್ನು ಮುಂಬಯಿಯಂತಹ ಪಟ್ಟಣದಲ್ಲಿದ್ದು ಒಂದಾನೊಂದು ಆಸ್ಪತ್ರೆಯನ್ನಿರಿಸುವದಷ್ಟೇ? ಅಂದಮೇಲೆ ಅದನ್ನು ಇಲ್ಲಿಯೇ ಏಕೆ ಇಡಬಾರದು? ನಾನು ಅದರ ಎಲ್ಲ ವ್ಯವಸ್ಥೆಯನ್ನು ಮಾಡಿಕೊಡುವೆನು. ನಿನಗೆಹೊಟ್ಟೆಯ ಪಾಡಿಗಾಗಿ ಧಂದೆ ಮಾಡುವ ಅವಶ್ಯಕತೆಯಿಲ್ಲ. ಚಿಕ್ಕಂದಿ ನಲ್ಲಿ ನಮ್ಮ ತಾಯಿಯ ಕೈಯ ಒಂದೇ ರೊಟ್ಟಿಯನ್ನು ತಕ್ಕೊಂಡು ಮುರಿ ಮುರಿದು ನಾವಿಬ್ಬರೂ ಹೇಗೆ ತಿಂದೆವೋ, ಹಾಗೆಯೇ ಈಗಲೂ ತಿನ್ನೋಣ. ಇನ್ನು ಪರೋಪಕಾರದ ಬಗ್ಗೆ ಎಂದರೆ ಮುಂಬಯಿಯ ಜನರಿಗೆ ಔಷಧೋಪಚಾರ ಮಾಡಿದರೇ ಪರೋಪಕಾರವಿರುವದೆಂತಲ್ಲ; ಬೇರೆ ಕಡೆಯ ದುಃಖಿತ ಜನರನ್ನು ಸುಖಿಗಳನ್ನಾಗ ಮಾಡುವದರಿಂದ ಅದೇ ಪುಣ್ಯವು ಲಭಿಸೀತು. ಪ್ರತ್ಯಕ್ಷವಾಗಿ ನನ್ನ ಪ್ರಾಯವ್ಹೇಟ ಸೆಕ್ರೆಟರಿಯಾಗುವದು ಮತ್ತಾವ ಕಾರಣದಿಂದಲೂ ನಿನಗೆ ಸೇರದಿದ್ದರೆ-ಸೇರದಿರಲಿ; ಆದರೆ ಖಾಸಗೀ ಸಲಹೆಗಾರಿಕೆಯ ಆ ಕೆಲಸವನ್ನು ಸ್ವತಂ ತ್ರನೂ ಲೌಕಿಕಸ್ಥನೂ ಮಿತ್ರನೂ ಡಾಕ್ಟರನೂ ಎಂದು ನೀನು ಬಹು ಚೆನ್ನಾಗಿ ಮಾಡಬಲ್ಲೆ. ಹಾಗಾದರೇನು ಸಮ್ಮತಿಯಿದೆಯೇ? ಒಡನುಡಿ; ಅಂದರೆ ನಾಳೆ ಯಿಂದ ಅರಮನೆಗೆ ಸಮೀಪದಲ್ಲಿಯೇ, ಆದರೆ ಸ್ವತಂತ್ರವಾದ ಬಿಡಾರದ ವ್ಯವಸ್ಥೆ ಯನ್ನು ನಿನಗಾಗಿ ಮಾಡಿಕೊಡುವೆನು.

ಈ ಬಗೆಯಾಗಿ ಹಳೇ ಪ್ರೇಮದ ಸ್ಮರಣೆಗಳನ್ನು ಜ್ಞಾಪಿಸಿಕೊಂಡು, ವ್ಯವ ಹಾರದ ಶಂಕೆಗಳನ್ನು ತಾನೇ ಮುಂದು ಮಾಡಿ, ಅವುಗಳ ಉತ್ತರಗಳನ್ನು ಮನೋಹರನ ಸಲುವಾಗಿ ಜೋಜಿಗರಾಯನೇ ಸ್ವಂತ ಕೊಟ್ಟ ಬಳಿಕ ಮನೋಹರ ನಾದರೂ ಮತ್ತೆ ಏನು ಹೇಳಬೇಕು? ಅಂಥ ಹುಟ್ಟು ಅಖಂಡವಾದ ಪ್ರೇಮಪಾಶ ವನ್ನು ಮನೋಹರನಿಂದಾದರೂ ಛೇದಿಸಬೇಕೆಂದೆನಿಸೀತೇ? ಕಡೆಗೆ ಮನೋಹರನು

ಸಮ್ಮತಿಯನ್ನಿತ್ತ ಬಳಿಕ, ಈ ಪ್ರಶ್ನೆಯು ಸಮಾಧಾನಕರವಾಗಿ ಬಿಡಿಸಲ್ಪಟ್ಟಿತೆಂಬದರ ನೆನಪೆಂದು ಜೋಜಿಗರಾಯನು ಮನೋಹರನನ್ನು ಮತ್ತೊಮ್ಮೆ ಗಟ್ಟಿಯಾಗಿ ಅಪ್ಪಿಕೊಂಡನು! ಮತ್ತು ಮರುದಿನದಿಂದಲೇ ಮನೋಹರನು ಸ್ವತಂತ್ರ ಡಾಕ್ಟರ, ಜೋಜಿಗರಾಯನ ಖಾಸಗೀ ಸಲಹೆಗಾರ ಹಾಗು ಬೇಕಾದಾಗ ಪ್ರಾಯವ್ಹೇಟ ಸಕ್ರೆಟರಿ ಈ ಬಗೆಯಾಗಿ ಆ ಜೋದ್ಯಪುರದಲ್ಲಿ ನಿರಂತರದ ನಾಗರಿಕನಾದನು.

ಈ ಲೋಕದಲ್ಲಿ ಮಿತ್ರಲಾಭವೆಂಬದು ಪ್ರತಿಯೊಬ್ಬ ಮನುಷ್ಯನಿಗೆ ನಿಜವಾಗಿಯೂ ದೊಡ್ಡ ಲಾಭವಾಗಿರುತ್ತದೆ; ಆದರೆ ಆ ಲಾಭದ ಮಹತ್ವವು ಸಾಮಾನ್ಯ ಜನರಿಗಿಂತ ಅರಸರುಗಳಿಗೇ ಹೆಚ್ಚು ಅವಗತವಾಗತಕ್ಕದ್ದಿದೆ. ಮಿತ್ರನ ವ್ಯಾಖ್ಯೆಯು ಒಂದು ಸುಭಾಷಿತದಲ್ಲಿ ಹೀಗೆ ಮಾಡಲ್ಪಟ್ಟಿದೆ:—

"ದದಾತಿ ಪ್ರತಿಗೃಹ್ಣಾತಿ, ಗೂಢಮಾಖ್ಯಾತಿ ಪೃಚ್ಛತಿ|
ಭುಂಕ್ತೇ ಭೋಜಯತೇ ಚೈವ ಷಡ್ವಿಧಂ ಮಿತ್ರಲಕ್ಷಣಂ|"

ಆದರೆ ಇದರಲ್ಲಿ ಎಷ್ಟು ಲಕ್ಷಣಗಳು ರಾಜಮಿತ್ರನಲ್ಲಿರಬಹುದು? ಆತನು ರಾಜನಿಂದ ಬೇಕಾದ್ದನ್ನು ತಕೊಳ್ಳಂಡಾನು; ಅಥವಾ ಸೆಳೆಕೊಂಡಾನು; ಆದರೆ ಯಾವನು ಖುದ್ದ ರಾಜನಾಗಿಲ್ಲವೋ ಅಂಥ ರಾಜಮಿತ್ರನು ತನ್ನ ಮಿತ್ರರಾಜನಿಗೇನು ಕೊಟ್ಟಾನು? ರಾಜನು ತನ್ನ ಪಂಕ್ತಿಗೆ ಬೇರೆ ಜನರನ್ನು ದಿನಾಲು ಹೇಗೆ ಕರೆದಾನು? ಮತ್ತು ಹಾಗೆ ಒಮ್ಮೊಮ್ಮೆ ಕರೆದಾಗಲೂ ಆತನ ಹಾಗು ಬೇರೆ ಜನರ ಮಾನ ಮರ್ಯಾದೆಗಳಲ್ಲಿಯ ಅಂತರವು ಲುಪ್ತವಾಗದಂತೆ ರಾಜನ ಅಭಿಮಾನದಿಂದ ಆತನ ಲೋಭಿಗಳಾದ ಪರಿಚಾರಕರು ನೋಡಿಕೊಳ್ಳುತ್ತಿರುತ್ತಾರೆ. ಆ ಬಗ್ಗೆ ಖುದ್ದ ರಾಜನ ಇಚ್ಛೆಯೇನಿದ್ದರೂ ಅಷ್ಟೇ. ಇನ್ನು ರಾಜನ ಪಂಕ್ತಿಗೆ ಉಣ್ಣುವ ಜನರು ರಾಜನನ್ನು ತಮ್ಮ ಮನೆಗೆ ಹಾಗು ತಮ್ಮ ಪಂಕ್ತಿಗೆ ಹೇಗೆ ಕರೆಯುವರು? ರಾಜನ ಮಾನ-ಮರ್ಯಾದೆಗಳು ತನ್ನ ಮನೆಯಲ್ಲಿ ಹೇಗೆ ಪಾಲಿಸಲ್ಪಟ್ಟಾವು; ಅದರಲ್ಲೇನಾದರೂ ಅಭ್ಯಂತರವಾದೀತೇನು? ಈ ಬಗೆಯ ಚಿಂತೆಯಲ್ಲಿಯೇ ಕರೆಯುವವನು ಗಾರಾಗಿ ಬಿಟ್ಟಿರುತ್ತಾನೆ. ಪ್ರಾಚೀನ ಕಾಲದಲ್ಲಿ ರಾಜನು ಯಾರ ಮನೆಗಾದರೂ ಊಟಕ್ಕೆ ಹೋಗಬೇಕಾದರೆ ಅಡಿಗೆಯವನು, ಬಡಿಸುವವನು, ಆಶ್ರಿತರು ಇವರೆಲ್ಲ ರಾಜನ ಸ್ವಂತದ ಜನರೇ ಅವರಲ್ಲಿ ಮುಂಗಡವಾಗಿ ಹೋಗುತ್ತಿದ್ದರು. ಇದರಲ್ಲಿಯ ತೋರಿಕೆಯ ಕಾರಣವು ರಾಜನ ನಿತ್ಯಸೇವೆ ಮಾಡುವವರ ಹೊರತು ಮಿಕ್ಕವರಿಂದ ಅದು ಯಥಾಸ್ಥಿತವಾಗಿ ಆಗಲಾರದೆಂಬದಿದ್ದರೂ, ರಾಜನಿಗೆ ವಿಷಪ್ರಯೋಗಾದಿಗಳ ಬಾಧೆಯಾಗಕೂಡದೆಂಬದೇ ಅಂತಃಸ್ಥಕಾರಣವಿರುತ್ತದೆಂದು ಹಳೇ ಜನರು ಹೇಳುತ್ತಿರುತ್ತಾರೆ; ಮತ್ತು ಕರೆಯುವವನಿಗೂ ಅದು ವಿಹಿತವಾಗಿಯೇ ಅನಿಸುವದು; ಯಾಕೆಂದರೆ, ತನ್ನ ಮನೆಯಲ್ಲಿ ರಾಜನ ಊಟದೊಳಗೆ

ಯಾವದೊಂದು ವಿಷದ ಇಲ್ಲವೆ ವಿಕಾರದ ಪದಾರ್ಥವು ಹೋಯಿತೆಂದರೆ, ಅದು ಅಪ್ಪಿತಪ್ಪಿ ಆಗಿದೆಯೆಂದೆನ್ನದೆ, ಬೇಕಂತ ಹಾಕಿದರೆಂದು ಜನರು ಸಂಶಯಪಡುವರು. ಇನ್ನು ಕಟ್ಟಕಡೆಗುಳಿಯಿತು, ಮಿತ್ರಲಕ್ಷಣವು. ಮಿತ್ರನಲ್ಲಿ ವಿಶ್ವಾಸವಿಟ್ಟು ಗುಪ್ತ ಸಂಗತಿಗಳನ್ನು ಕೇಳುವದು-ಹೇಳುವದು; ಆದರೆ ರಾಜನ ವಿಷಯದಲ್ಲಿ ಈ ಮಾತಾದರೂ ಇಕ್ಕಟ್ಟಿನದೇ ಆಗಿರುತ್ತದೆ. ರಾಜನು ಬೇರೆಯವರನ್ನು ತನ್ನ ವಿಶ್ವಾಸದಲ್ಲಿ ತಕ್ಕೊಳ್ಳುವದು ಕಠಿಣವಾಗಿರುವದು; ಯಾಕಂದರೆ ಆ ವಿಶ್ವಾಸವು ಪ್ರಾಯಶಃ ದುರುಪಯೋಗಿಸಲ್ಪಡುತ್ತದೆ. ಇದಕ್ಕೆ ವಿರುದ್ಧವಾಗಿ ರಾಜನನ್ನು ತನ್ನ ವಿಶ್ವಾಸದಲ್ಲಿ ತಕ್ಕೊಳ್ಳುವಂತಹದು ಸಾಮಾನ್ಯ ಮನುಷ್ಯನಲ್ಲೇನಿರುವದು? ಇನ್ನು ಮನುಷ್ಯಸ್ವಭಾವದಂತೆ ರಾಜನಿಗೂ ತನ್ನ ವಿಶ್ವಾಸದವರಾರಾದರೂ ಇರದಿದ್ದರೆ ಸರಿಹೋಗುವದಿಲ್ಲ. ಅಂತೆಯೇ ಅವನು ಯಾರನ್ನಾದರೂ ನಂಬುತ್ತಾನೆ; ಆದರೆ ಆ ಜನರು ಮನೆಯ ಚಾಕರರು, ಮುಖಸ್ತುತಿ ಮಾಡುವವರು, ಬಾಲಬಡೆಯುವವರು, ವಿದೂಷಕರು ಇಂಥವರೇ ಆಗಿರುತ್ತಾರೆ; ಇಲ್ಲವೆ ರಾಜನು ವ್ಯಸನಿಯಾಗಿದ್ದರೆ ಇಂಥ ಜನರ ಹೊರತು ಆತನ ಇಷ್ಟ ಸಾಧ್ಯಗಳು ಸಾಧಿಸುವದು ಶಕ್ಯವಿರುವದಿಲ್ಲೆಂದು ಅವರಿರದಿದ್ದರೆ ಆತನಿಗೆ ಗತಿಯೇ ಇರುವದಿಲ್ಲ. ರಾಜನಿಗೆ ರಾಜನೂ, ಧನಿಕನಿಗೆ ಧನಿಕನೂ, ಕಳ್ಳನಿಗೆ ಕಳ್ಳನೂ ಮಿತ್ರರಾಗುವದೇ ವಿಹಿತವು; ಆದರೆ ಒಬ್ಬ ರಾಜನಿಗೆ ಇನ್ನೊಬ್ಬ ರಾಜನು ನಿತ್ಯದ ಗೆಳೆಯನೆಂದು ಹೇಗೆ ಲಭಿಸಿಯಾನು? ಇಬ್ಬರಿಗೂ ತಮ್ಮ ತಮ್ಮ ರಾಜ್ಯಗಳ ಬಂಧನವು ಏಕಪ್ರಕಾರವಾಗಿರುತ್ತದೆ.

ಜೋಧಜಿಗಮಹಾರಾಜರ ಇದುವರೆಗಿನ ದಿನಗಳು ರಾಜಕುಮಾರ ಕಾಲೇಜದಲ್ಲಿಯೂ ವಿದೇಶಗಳ ಪ್ರವಾಸದಲ್ಲಿಯೂ ಕಳೆದಿದ್ದ ಮೂಲಕ, ಜೀವದ ಗೆಳೆಯರ ಆವಶ್ಯಕತೆಯುಂಟಾಗುವಂತಹ ಜಬಾಬುದಾರಿಯು ಅವರ ಮೇಲೆ ಇದುವರೆಗೂ ಬಿದ್ದಿರಲಿಲ್ಲ. ಯಾಕಂದರೆ ಕಾಲೇಜದಲ್ಲಿ ಜವಾಬುದಾರಿಯೇತರದು? ಅಭ್ಯಾಸ ಮಾಡುವದು; ಅದಕ್ಕಾಗಿ ಸ್ವಂತದ ಟ್ಯೂಟರನಿರುತ್ತಾನೆ; ಮತ್ತು ಕ್ರೀಡಾಂಗಣದ ಮೇಲೆ ಆಡುವದೊಂದೇ ಮಹತ್ವದ ವಿಷಯವು! ಮಹಾರಾಜರು ಪರದೇಶಗಳ ಪ್ರವಾಸಕ್ಕೆ ಒಬ್ಬೊಂಟಿಗರಾಗಿಯೇ ಹೋದದ್ದು. ಅವರು ಬೇಕಂತ ಹಾಗೆ ಹೊರಡುವ ಅಪ್ಪಣೆಯನ್ನೇ ಕೇಳಿಕೊಂಡಿದ್ದರು; ಮತ್ತು ಅದು ಅವರಿಗೆ ಕೊಡಲ್ಪಟ್ಟಿತ್ತು. ಪರದೇಶಗಳಲ್ಲಾದರೂ ಒಂದೇ ಕಡೆಗೆ ಹೆಚ್ಚು ದಿನಗಳಿರಲಿಲ್ಲ. ಅವರ ಮನೋವೃತ್ತಿಯು ಅಡ್ಡಾಡುವದು ನೋಡುವದು ಮುಂತಾದ ಎಲ್ಲ ಸಂಗತಿಗಳನ್ನು ಸ್ವತಂತ್ರವಾಗಿ ಮಾಡುವದಿದ್ದ ಮೂಲಕ ಅವರು ಅಲ್ಲಿ ಯಾರೊಡನೆಯೂ ಸ್ನೇಹಬೆಳೆಸಿರಲಿಲ್ಲ. ಮರಳಿ ಬಂದು ಜೋಧ್ಯಪುರದಲ್ಲಿ ಸ್ಥಿರವಾದ ಬಳಿಕ ಮತ್ತು ಅಧಿಕಾರ ಧಾರಣದ ನಂತರ ಮಾತ್ರ ಅವರಿಗೆ ಮಿತ್ರಸಂಗತಿಯು

ಆವಶ್ಯಕತೆಯೆನಿಸತೊಡಗಿತು. ಅದು ಆವಶ್ಯಕವಾದಾಗಲೇ ಮನೋಹರನು ಪರ ದೇಶದಿಂದ ಬಂದ ಕಾರಣ ಮಹಾರಾಜರಿಗೆ ಬಹು ಸಂತೋಷವಾಯಿತು; ಮತ್ತು ಹೀಗೆ ಒಡಹುಟ್ಟಿದ ಅಣ್ಣನಂತೆ ದೊರೆತ ಗೆಳೆಯನು ತಪ್ಪಿಸಿಕೊಂಡು ಹೋಗಬಾರ ದೆಂದು ಅವರು ಅವನನ್ನು ಮೇಲೆ ಹೇಳಿದಂತೆ ಜೋಧ್ಯಪುರದಲ್ಲಿ ತಮ್ಮ ಬಳಿ ಯಲ್ಲೇ ನಿರಂತರವಾಗಿಟ್ಟುಕೊಂಡರು.

---

## ೪ ಪೋಷ್ಯಮನ್ನನೋ-ಪತ್ತೆದಾರನೋ?

ಜೋಧ್ಯಪುರಪಟ್ಟಣದ ರಾಜಬೀದಿಯ ಮಧ್ಯಭಾಗದ ಒಂದು ವಿಶಾಲ ವಾದ ಮೇಲುಪ್ಪರಿಗೆಯ ಮನೆಯಲ್ಲಿ ಡಬೀರರ ಭಾವೂಸಾಹೇಬರಿರುತ್ತಿದ್ದರು. ಆ ಮನೆಯು ಕೇವಲ ಪೆಟ್ಟಿಗೆಯಂತೆ ಒಂದೋಬಸ್ತಾಗಿದ್ದಿತು. ಹೆಬ್ಬಾಗಿಲವ ನೊಮ್ಮೆ ಇಕ್ಕಿಬಿಟ್ಟರೆ, ಆ ಮೇಲೆ ಯಾವನೊಬ್ಬನು ಹಾರಿಯ ಕೋಲನ್ನುಪ ಯೋಗಿಸಿ ಗೋಡೆಯನ್ನು ಕೆಡವಿದನೆಂದರೇ ಮನೆಯೊಳಗೆ ಪ್ರವೇಶಿಸಬಹುದು. ಹಗಲಿನಲ್ಲಿ ಕೂಡ ಆ ಮನೆಯ ಇಡಿ ಹೆಬ್ಬಾಗಿಲು ಎಂದೂ ತೆರೆದಿರುತ್ತಿರಲಿಲ್ಲ; ದಿಡ್ಡಿಬಾಗಿಲದಿಂದಲೇ ಹೋಗ ಬರುವ ವ್ಯವಹಾರವಾಗಬೇಕು. ಅದರೊಳಗಿಂದ ಹೋಗಿ ಬರುವಾಗ ತಲೆ ಬೊಗ್ಗಿಸಲೇ ಬೇಕು; ನಡ ತಗ್ಗಿಸಲೇಬೇಕು; ಆದರೆ ಒಳಹೊಕ್ಕ ಮೇಲೆ ಮಾತ್ರ ಮನಸ್ಸು ಪ್ರಸನ್ನವಾಗಿ ದಿಡ್ಡೀಪ್ರವೇಶದ ಕಷ್ಟವು ದೂರವಾಗುತ್ತಿತ್ತು; ಯಾಕಂದರೆ ಅಲ್ಲಿ ನೋಡಿದತ್ತೆಲ್ಲ ಸ್ವಚ್ಛತೆ-ಸುವ್ಯವಸ್ಥೆಗಳು ಮೂರ್ತಿಮತ್ತಾಗಿ ಕಾಣುತ್ತಿದ್ದವು. ಅಲ್ಲಿಯ ಪ್ರತಿಯೊಂದು ಕಲ್ಲಿನ ನುಣುಪನ್ನೂ ಕಟ್ಟಿಗೆಯ ಹೊಳಪನ್ನೂ ನೋಡಿದರೆ, ಅವನ್ನೆಲ್ಲ ಯಾರೋ ಈಗತಾನೆ ಅರಿವೆ ಯಿಂದ ಒರಸಿರುವಂತೆ ಭಾಸವಾಗುತ್ತಿತ್ತು! ಆ ಮನೆಯ ಪಡಸಾಲೆಗಳ ಪ್ರತಿ ಯೊಂದು ಅಂಕಣದಲ್ಲಿ ಒಂದೊಂದು ತಂತಿಯ ನೆಲವಿನಂತಹ ಕುಂಡವು ತೂಗ ಗಟ್ಟಿದ್ದು, ಅವುಗಳಲ್ಲಿ ಬೇರೆ ಬೇರೆ ಜಾತಿಯ ಹೂಗಳ ಒಂದೊಂದು ಬಳ್ಳಿಯು ಹಬ್ಬಲ್ಪಟ್ಟಿತ್ತು. ಆ ಪಡಸಾಲೆಯಲ್ಲಿ ಪ್ರವೇಶಿಸಿದ ಕೂಡಲೆ ಎದುರಿಗೇ ಎರಡು ದೊಡ್ಡ ಫೋಟೋಗಳು ತೂಗಗಟ್ಟಿರುವದು ಕಾಣಬರುತ್ತಿತ್ತು. ಅವುಗಳ ಲ್ಲೊಂದು ಇಂಗ್ಲಂಡದ ಪ್ರಸ್ತುತದ ಸಾರ್ವಭೌಮರದು; ಮತ್ತು ಅದರ ಜೊತೆಗೇ ಜೋಧ್ಯಪುರದ ಈ ಮೊದಲಿನ ಮಹಾರಾಜರದು. ಇದರಂತೆಯೇ ಕಣ್ಣಿಗೆ ಒಡೆದು ಕಾಣುವಂತಹ ಅಲ್ಲಿಯ ಬೇರೆ ವಸ್ತುಗಳೆಂದರೆ, ಮೂಲೆಯಲ್ಲಿ ತೂಗಗಟ್ಟಿದ್ದ ಭೂತಕಾಲದ ಪಲ್ಲಕ್ಕಿ, ಅಬ್ದಾಗಿರಿ, ಖಡ್ಗ, ಬಂದೂಕುಗಳು. ವೈಭವದ ಈ ಚಿಹ್ನ ಗಳನ್ನು ನೋಡುವವರಿಗೆ ಪ್ರಾಚೀನ-ಅರ್ವಾಚೀನ ಕಾಲಗಳ ಸ್ಮೃತಿಯು ಒಮ್ಮೆಲೆ ಆಗಿ, ದೈವಲೀಲೆಯ ಕಲ್ಪನೆಯು ಮನಸ್ಸಿನಲ್ಲಿ ಮಿಂಚಿ ಹೋಗುತ್ತಿತ್ತು.

ಬೆಳಗಿನ ಎಂಟು ಗಂಟೆಯಾಗಿತ್ತು. ಡಬೀರರ ಭಾವೂಸಾಹೇಬರು ನಿತ್ಯ ನಿಯಮದಂತೆ ಸ್ನಾನ-ಸಂಧ್ಯೆಗಳನ್ನು ಮುಗಿಸಿ, ಮೈಮೇಲೆ ಶಾಲುಹೊತ್ತು ಕೊಂಡು, ಉಪ್ಪರಿಗೆಯ ಮೇಲಿನ ದಿವಾಣಖಾನೆಯಲ್ಲಿ ಲೋಡಿಗೆ ಆತು ಗಾದಿಯ ಮೇಲೆ ಕುಳಿತಿದ್ದರು. ಅವರು ಗಡಿಯಾರದ ಕಡೆಗೆ ನೋಡಿದರು; ಕಣ್ಣಿಗೆ ಉಪನೇತ್ರಗಳನ್ನು ಏರಿಸಿದರು; ಬಾಯಲ್ಲಿ ಚಿರೂಟವನ್ನು ಹಿಡಿದು ಕಡ್ಡಿ ಕೆರೆದರು. ಅತ್ತಿತ್ತ ದೃಷ್ಟಿ ಹೊರಳಿಸಿ ಅಲ್ಲಿ ಯಾರೂ ಇರದ್ದನ್ನು ಕಂಡು ಅವರು ತುಸ ಚಕಿತರಾದರು. ಯಾಕಂದರೆ ಆ ಕಾಲಕ್ಕೆ ಅವರ ಆಳಾದ ದೌಲತನು ಗಾದಿಯ ಮೇಲೆ ಟಪಾಲಿನ ಕಾಗದಗಳನ್ನಿರಿಸಿ, ಆಂಜನೇಯನಂತೆ ಒಡೆಯನ ಅಪ್ಪಣೆ ಯನ್ನು ನಿರೀಕ್ಷಣೆ ಮಾಡುತ್ತ ಪಕ್ಕದ ಮೂಲೆಯಲ್ಲಿ ಕೈಜೋಡಿಸಿ ನಿಂತಿರ ತಕ್ಕವನು; ಆದರೆ ಇಂದು ಟಪಾಲಿನ ಕಾಗದ-ಪತ್ರಗಳು ಗಾದಿಯ ಮೇಲಿರಲಿಲ್ಲ; ಮತ್ತು ದೌಲತನೂ ಮೂಲೆಯಲ್ಲಿ ನಿಂತಿರಲಿಲ್ಲ. ಆದರಿಂದ ಕ್ಷಣಕಾಲ ತಡೆದು, ಭಾವೂಸಾಹೇಬರು ದೊಡ್ಡ ದನಿಯಿಂದ ದೌಲತನನ್ನು ಕೂಗಲಾರಂಭಿಸಿದರು:

ಭಾ:—ದೌಲತ, ಎಲಾ ದೌಲತ, ದೌಲ್ಯಾ, ಏ ದೌಲ್ಯಾ. ಮಗನೇ, ನಿನ್ನ ಕಿವಿ ಹೋದವೋ ಏನು? ನಾನು ಇತ್ತ ಗಂಟಲೊಡಕೊಂಡು ಒದರುತ್ತೇನೆ; ಮತ್ತು ನೀನು ಅತ್ತ ಮಾಡುತ್ತಿರುವದಾದರೂ ಏನು?

ಭಾವೂಸಾಹೇಬರ ನಾಲ್ಕನೇ ಕೂಗಿನೊಡನೆಯೇ ದೌಲತನು ಅಟ್ಟವನ್ನೇರಿ ಬಂದನು; ಮತ್ತು ಕೈಜೋಡಿಸಿ ಮೂಲೆಯಲ್ಲಿ ನಿಂತುಕೊಂಡನು. ಅವನನ್ನು ಕಂಡ ಕೂಡಲೆ ಅವರು ತಮ್ಮ ದನಿಯನ್ನು ತುಸ ತಗ್ಗಿಸಿದರೂ ಗಟ್ಟಿಯಾಗಿಯೇ:- ದೌಲತ.

ದೌ: . ಏನು ಧಣಿಯರೇ? ಭಾ:—ಬರಿಯ ಏನೆಂದೇನು ಕೇಳುತ್ತೀ? ಇದುವರೆಗೆ ನೀನು ಮಾಡುತ್ತಿದ್ದುದೇನು?

ದೌ:—ಆಚೇಕಡೆಯ ದಿವಾಣಖಾನೆಯೊಳಗಿನ ಮೇಜು-ಖುರ್ಚಿಗಳನ್ನೊರಸುತ್ತಿದ್ದೆನು.

ಭಾ:-ಖುರ್ಚಿಗಳನ್ನೊರಿಸಲಿಕ್ಕೆ ನಿನಗೆ ಇದೇ ವೇಳೆಯೇನು? ಗಡಿಯಾರದ ಕಡೆಗೆ ನೋಡು; ಮತ್ತು ಎಷ್ಟು ಹೊಡೆದಿದೆಯೆಂಬದನ್ನು ಹೇಳು, ನೋಡುವಾ.

ದೌ:—ಎಂಟು ಬಡಿದಂತೆ ಕಾಣುತ್ತದೆ.

ಭಾ:—ಮತ್ತು ಎಂಟರ ಮೇಲೆ ಇಡಿಯ ಏಳು ಮಿನಿಟುಗಳಾದವಲ್ಲ! ಅವು ನಿನಗೆ ಕಾಣುವದಿಲ್ಲವೇ?

ದೌ:—ಹೌದು ಧಣಿಯರೇ, ನನಗೇನು ತಿಳಿದೀತು ಗಡಿಯಾರವು? ಆದರೆ ತುಸ ಹೆಚ್ಚು ವೇಳೆಯಾದಂತೆ ತೋರುತ್ತದೆ.

ಭಾ: –ನೋಡಿರಿದನ್ನು! ಈತನು ವೇಳೆ ಹೆಚ್ಚಾಗಿದೆಯೆಂದು ಸಹಜವಾಗಿ ನುಡಿಯುತ್ತಾನೆ. ಎಲಾ, ಎಂಟು ಹೊಡೆದು ಮೇಲೆ ಏಳು ಮಿನೀಟಾದರೂ ಇಂದಿನ ಹೊಸ ಪತ್ರ ಮತ್ತು ವೃತ್ತಪತ್ರಗಳೆಲ್ಲಿವೆ?

ದೌ: —ಪತರ ಪತ್ರಗಳಲ್ಲವೆ? ಧಣಿಯರೇ, ಇನ್ನೂ ಟಪಾಲೇ ಬಂದಿಲ್ಲ.

ಭಾ:—ಏನು ಮಾಡಬೇಕು ಈ....ಮಗನಿಗೆ? ಎಲಾ, ಪತ್ರಗಳು ಬಾರದ್ದರಿಂದ ಟಪಾಲು ಬಂದಿಲ್ಲವೆಂಬದು ತಿಳಿಯಿತು; ಆದರೆ ಟಪಾಲೇಕೆ ಬರಲಿಲ್ಲ?

ದೌ:—ಧಣಿಯರೇ, ನನಗದೇನು ಗೊತ್ತು?

ಭಾ: –ಹಾಗಾದರೆ ನಿನ್ನನ್ನಲ್ಲದೆ ಊರಗೌಡನಿಗೆ ಕೇಳಲೋ? ಹೋಗು, ಮೊದಲು ಪಡಸಾಲೆಗೆ ಹೋಗು; ಮತ್ತು ನೋಡು, ಟಪಾಲು ಬಂದಿತೋ ಇಲ್ಲವೆಂಬದನ್ನು! ಹೊತ್ತಿನ ಬೆಲೆಯು ಯಾರಿಗಾದರೂ ಇದ್ದರೆ ಆಣೆ!

'ಹೋಗು' ಎಂದ ಶಬ್ದದೊಡನೆಯೇ ದೌಲತನು ಕೆಳಗಿಳಿದು ಹೋಗಿದ್ದನು; ಆದರೆ ಭಾವೂಸಾಹೇಬರು ಮುಂದಿನ ಶಬ್ದಗಳಲ್ಲಿಯ ಕೆಲವನ್ನು ಅವನಿಗುದ್ದೇಶಿಸಿ, ಕೆಲವು ಆತ್ಮಗತವಾಗಿಯೇ ಅನ್ನುತ್ತಿದ್ದರು:

ಭಾ:—ಇಂಗ್ಲಿಷರ ರಾಜ್ಯವೆಂದರೆ, ನಿಯಮಿತತನದ ಮಾದರಿಯಂತೆ! ಹೀಗಲ್ಲವೆ? ಹಾಗಾದರೆ ನೋಡಿರೀ ನಮೂನೆಯನ್ನು. ಹತ್ತು ಮಿನೀಟುಗಳೆಂದರೆ ಅದೇನೂ ತಡವಾಗಲಿಲ್ಲವೆ ಟಪಾಲಿಗೆ? ಸುಳ್ಳೇ ಇವರ ಜಂಬವು! ಪೂರ್ವಕಾಲದಲ್ಲಾದರೂ ಇದೇ ಬಗೆಯ ಅವಸ್ಥೆಯಿದ್ದಿತು; ಆದರೆ ಈಗಿನಂತೆ ಆಗ ಒಣ ಜಂಬವನ್ನಾದರೂ ಬಡಿಯುತ್ತಿರಲಿಲ್ಲ...............

ಈ ಬಗೆಯಾಗಿ ಭಾವೂಸಾಹೇಬರ ಆತ್ಮಗತ ಸಂಭಾಷಣವು ಕೆಲ ಹೊತ್ತಿನವರೆಗೆ ಏಕೋಪ್ರಕಾರ ನಡೆದಿತ್ತು. ಅವರ ಟಾಯಿಮ್‌ಟೇಬಲ್ಲಿನಲ್ಲಿ ಆ ಕಾಲಕ್ಕೆ ಟಪಾಲಿನಿಂದ ಬಂದ ಪತ್ರ ಮತ್ತು ವೃತ್ತಪತ್ರಿಕೆಗಳನ್ನೋದುವ ಕಾರ್ಯಕ್ರಮದ ಹೊರತು ಬೇರೆ ಏನೂ ಇರಲಿಲ್ಲ. ಅದರಿಂದ ಅವರಾದರೂ ಆ ಬಿಡುವಿನ ಸಮಯದಲ್ಲಿ ಮತ್ತೇನು ಮಾಡಿಯಾರು? ಆದರೆ ನೀರಿನ ಪ್ರವಾಹಕ್ಕೆ ಯಾವದೊಂದು ಬಂಡೆಯು ಅಡ್ಡಾದರೆ, ಅದು ತನ್ನಷ್ಟಕ್ಕೆ ತಾನೇ ಬದಿಗಾಗುತ್ತಿರುವಂತೆ, ಭಾವೂಸಾಹೇಬರ ಆತ್ಮಗತಭಾಷಣದ ಗತಿಯೂ ಆಯಿತು.

"ಸುಭೇದಾರರು ಭೆಟ್ಟಿಗೆ ಬಂದಿದ್ದಾರೆ"ಂಬ ವರದಿಯು ಕೆಳಗಿನಿಂದ ಬಂದಿತು; ಮತ್ತು ಆ ವರದಿಯ ಹಿಂದೆಯೇ "ಅಟ್ಟದ ಮೇಲೆ ಭಾವೂಸಾಹೇಬರಿರುವರೇ? ನಾನು ಮೇಲೆ ಬರಲಿಯಾ?" ಎಂಬ ಬಹು ಸೌಮ್ಯತನದ ಮರ್ಯಾದೆಯುಕ್ತ, ಆದರೆ ತೀರ ಎಳೆದು ಉಚ್ಚರಿಸಿದ ಶಬ್ದಗಳಿಂದ ಖುದ್ದ ಸುಭೇದಾರರೇ ಅಂದದ್ದು ಕೇಳಿಸಿತು; ಹಾಗು ಆ ಶಬ್ದಗಳ ಹಿಂದೆಯೇ ಎದುರುತ್ತರದ ಇಲ್ಲವೆ

ಅಪ್ಪಣೆಯ ದಾರಿ ಕೂಡ ನೋಡದೆ ಖುದ್ದ ಸುಭೇದಾರರು ಉಪ್ಪರಿಗೆಯ ಮೇಲೆ ಬಂದುಬಿಟ್ಟರು. ಅದರಿಂದ ಭಾವೂಸಾಹೇಬರು: "ಬರ್‍ರಿ; ಕೂಡ್ರಿರಿ" ಎಂದು ಅನ್ನಲೇಬೇಕಾಯಿತು. ಆಗ ಅವರು ಪತ್ರ-ವರ್ತಮಾನಪತ್ರಗಳ ಆಶೆದೊರೆದು ಉಪನೇತ್ರಗಳನ್ನಿಳಿಸಿಟ್ಟರು. ಅಗ್ಮಗತ ಭಾಷಣದ ಬದಲು ಸಂಭಾಷಣಕ್ಕಾರಂಭ ವಾಯಿತು; ಆದರೆ ಸುಭೇದಾರರಿಗೆ ಭಾವೂಸಾಹೇಬರ ಟಾಯಿಮ್‌ಟೇಬಲ್ಲಿನ ಜ್ಞಾನವಿದ್ದ ಮೂಲಕ ಸಂಭಾಷಣಕ್ಕೇನಾದರೂ ನೆವ ಬೇಕಾಗುವದೆಂದು ಟಪಾ ಲಿನ ಪ್ರಶ್ನೆಯನ್ನೇ ಅವರು ಸಹಜವಾಗಿ ತೆಗೆದರು. ಅದರಿಂದ ಭಾವೂಸಾಹೇ ಬರ ವಿಚಾರಪ್ರವಾಹಕ್ಕೆ ಮತ್ತೆ ಮೊದಲಿನ ಗತಿಯೇ ಪ್ರಾಪ್ತವಾಯಿತು.

ಸು:—"ಇಂದು ಸವಾರಿಯು ಅದೇಕೆ ಸ್ತಬ್ಧವಾಗಿ ಕುಳಿತಿದೆ? ಟಪಾಲು ಇನ್ನೂ ಬಂದಿಲ್ಲವೇ?" ಕೆಲಕೆಲವು ಭಾವಿಕ ಕರ್ಮಠ ಜನರು ತಾವನ್ನುತ್ತಿರುವ ಸ್ತೋತ್ರ ಪಾಠಗಳಿಗೇನಾದರೂ ವ್ಯತ್ಯಯವುಂಟಾದರೆ ಅವುಗಳನ್ನು ಅವರು ಮತ್ತೆ ಮೊದಲಿನಿಂದಲೇ ಅನ್ನಹತ್ತುತ್ತಿರುವಂತೆ, ಭಾವೂಸಾಹೇಬರು ಟಪಾಲಿನ ಅನಿಯ ಮಿತತನಕ್ಕಾಗಿ ಮತ್ತೆ ಬೈಯತೊಡಗಿದರು.

ಭಾ: ಸುಭೇದಾರರೇ, ಇತ್ತೀಚೆಗೆ ತಾಳ-ಮೇಳಗಳದೇತರಲ್ಲಿಯೂ ಉಳಿದೇ ಇಲ್ಲ. ಎಂಟರ ಬದರ ಎಂಟೂಕಾಲಾಯಿತು! ಇಷ್ಟು ತಡವೇಕಾಗ ಬೇಕು? ಇದೇನು ಟಪಾಲಿನ ರೀತಿಯೋ?

ಸು: -ರೀತಿಯೆಲ್ಲಿಯದು? ಪೋಸ್ಟಮನ್ನನು ಹೆಗಲ ಮೇಲೆ ಚೀಲ ಹಾಕಿ ಕೊಂಡು ಆಗಲೆ ಹೊರಟಿರಬಹುದು; ಆದರೆ ದಾರಿಯಲ್ಲಿ ಯಾರ ಕೂಡಾದರೂ ಕುಳಿತಿದ್ದಾನು ಹರಟೆಕೊಚ್ಚುತ್ತ? ಆ ಮಗನಿಗೇನು? ತಡವಾಯಿತೆಂದರೆ, ಇತ್ತ ಗಡಿ ಯಾರವಿಟ್ಟು ಕೆಲಸ ಮಾಡುವ ಜನರ ಕೆಲಸ ಕೆಡುತ್ತದೆಂಬದರ ಪರಿವೆಯು? ನಾಯಿಯು ವೇಗದಿಂದ ಊರಿಗೆ ಹೊರಟರೂ ಅದು ಒಮ್ಮೆಲೆ ಅಲ್ಲಿಗೆಲ್ಲಿ ತಲು ಪುವದು? ದಾರಿಯಲ್ಲಿ ಸಿಕ್ಕ ನಾಯಿಯ ಬೊಗಳಿಗೆ ಬೊಗಳುತ್ತ, ಕಣ್ಣಿಗೆ ಕಂಡ ಕಲ್ಲು-ಬಂಡೆಗಳ ಮೇಲೆ ಮೂತ್ರ ಹೊಯ್ಯುತ್ತ ಕಾಲಹರಣ ಮಾಡುವಂತೆಯೋ, ಈ ನಮ್ಮ ಪೋಸ್ಟಮನ್ನ ಜನರು! ಎಡೆಯ ಕುಂಟೆಗೆ ಹೂಡಿದ ಇಲ್ಲವೆ ತೆನೆ ರಾಶಿ ತುಳಿಯಲಿಕ್ಕೆ ಕಟ್ಟಿದ ಎತ್ತಿನ ಬಾಯಿಗೆ ಕುಕ್ಕಿಹಾಕುವಂತೆ, ಈ ಪೋಸ್ಟಮನ್ನ ಜನರ ಬಾಯಿಗೂ ಮಾತಾಡಲಿಕ್ಕೆ ಬಾರದಂತೆ ಟಪಾಲ ಖಾತೆಯ ವರಿಷ್ಠರು ಕುಕ್ಕಿಹಾಕಬೇಕೆಂದು ನನಗಂತೂ ಅನಿಸುತ್ತಿದೆ; ಅಥವಾ ಭಾವೂಸಾಹೇಬ, ಪಾಪ! ಆ ಬಡ ಪೋಸ್ಟಮನ್ನನ ತಪ್ಪು ಅದರಲ್ಲಿರಲಿಕ್ಕಿಲ್ಲೆಂದು ಹೇಳಬಹುದು; ಏನಲೀ, ಆ ಪೋಸ್ಟಮಾಸ್ತರರಾದರೂ ಏನು ಕಡಿಮೆಯವರೇ? ಹೊರಗೆ ಟಪಾ ಲಿನ ಚೀಲಗಳು ಬಂದು ಅವರ ಎದೆಯ ಮೇಲೆ ಬಿದ್ದಿದರೂ ಅವರ ನಡುಮನೆ

ಯೊಳಗಿನ ಕೆಲಸವು ತೀರಬೇಕಲ್ಲವೇ? ಅಳುಬುರುಕ ಹುಡುಗರನ್ನಾಡಿಸುವ, ಮೆಚ್ಚುಗೆಯ ಮಡದಿಯರೊಡನೆ ಕಿವಿಮಾತನಾಡುವ, ಚಹ ಕುಡಿಯುವ ಇವೆಲ್ಲವೂ ಅವರ ವೇಳೆಗಳು ಆಗಲೆ ಇರುತ್ತವೆ! ಒಳಗೆ ಮನೆ, ಹೊರಗೆ ಆಫೀಸು, ಪೋಷ್ಟ ಖಾತೆಯುವರು ಈ ಉಭಯ ಅನುಕೂಲತೆಗಳನ್ನು ಅವರಿಗೆ ಕೊಡುವದರಿಂದಲೇ ನಮ್ಮ-ನಿಮ್ಮಗಳಿಗೆ ಹೀಗೆ ಅನನುಕೂಲತೆಯಾಗುತ್ತದೆ.

ಭಾವೂಸಾಹೇಬರು ಮತ್ತೆ ಗಡಿಯಾರದ ಕಡೆಗೆ ನೋಡಿ:—ಸುಭೇದಾರರೇ, ಹಾಗೆಯೂ ಇರಲಿಕ್ಕಿಲ್ಲ. ಎಂಟು ಹೊಡೆದು ಹದಿನೇಳು ನಿಮಿಷಗಳಾದವು. ಇಂದು ಪೋಷ್ಟಮನ್ನನ ತಪ್ಪಿಲ್ಲ, ಪೋಷ್ಟಮಾಸ್ತರನ ತಪ್ಪಿಲ್ಲ; ಆದರೆ ಏನಾದರೂ ಅಪಘಾತವಾಗಿರುವದು ಮಾತ್ರ ಖಂಡಿತವು. ಇನ್ನು ದಾರಿಯಲ್ಲಿ ಟಪಾಲಮೋಟಾರು ಬ್ರೆಕ್‌ಡೌನ್ ಆಗಿರಲಿ; ಅಥವಾ ಟಪಾಲನ್ನು ದರವಡೆಖೋರರು ಲೂಟಿ ಮಾಡಿರಲಿ; ಇಲ್ಲವೆ ಮೇಲಗಾಡಿಯೇ ಹೂಡಿ ಹಾಯ್ದಿರಲಿ ಆಗಿರಬೇಕು; ಆದರೆ ಇಂದಿನ ಪ್ರಕರಣವು ಸಾಮಾನ್ಯವಾಗಿರುವದಿಲ್ಲ; ಇಂದು ಏನೋ ವಿಚಿತ್ರವಾಗಿರುವದೇ ನಿಜ. ಸುಭೇದಾರರೇ, ಈಗ ನಾಲ್ಕೂ ಕಡೆಗೆ ಇದೇ ಬಗೆಯ ಅವ್ಯವಸ್ಥೆಯು ಹೆಚ್ಚಿದೆ. ಸುರಳೀತ ನಡೆದ ದಿನವೇ ವಿರಳ. ಯಾವ ವರ್ತಮಾನ ಪತ್ರವನ್ನು ತೆಗೆದರೂ ಅದರಲ್ಲಿ ಒಂದಿಲ್ಲೊಂದು ಅಘಟಿತ ಘಟನೆಯೇ ಕಂಡು ಬರುತ್ತದೆ. ಈ ಲೋಕದ ಗತಿಯು ಏನಾಗಬೇಕಾಗಿದೆಯೋ ತಿಳಿಯದಾಗಿದೆ.

ಸು:—ನನ್ನ ಅಲ್ಪ ಬುದ್ಧಿಗೆ ತಿಳಿಯುವದೇನಂದರೆ, ವೃತ್ತಪತ್ರಗಳೋದುವದನ್ನು ಬಿಟ್ಟರೆ ಪ್ರತಿಯೊಬ್ಬರಿಗೂ ವಿಹಿತವಾಗುವದೆಂದು.

ಭಾ:—ಛೇ! ಛೇ! ಹಾಗೆ ಮಾಡಿದರೆ ಹೇಗೆ ನಡೆದೀತು?

ಸು:—ನನ್ನನ್ನೇ ನೋಡಿರಿ. ನನ್ನ ಜಮಾಖರ್ಚಿನಲ್ಲಿ ವರ್ತಮಾನ ಪತ್ರಗಳಿಗೆಂದಾದರೂ ಒಂದು ಪೈ ಕೂಡ ಖರ್ಚು ಬಿದ್ದಿದ್ದರೆ ಆಣೆ.

ಭಾ:—ಸ್ವಂತದ ದುಡ್ಡು ವೆಚ್ಚ ಮಾಡಿಯೇ ವೃತ್ತ ಪತ್ರಗಳನ್ನೋದಬೇಕೆಂದು ಶಾಸ್ತ್ರವಿದೆಯೇ? ಯಾರೊಬ್ಬರು ತಾವು ಕೊಂಡುಕೊಳ್ಳದಿದ್ದರೂ ಬಿಕ್ಕೆಯ ಹಕ್ಕಿನಿಂದ ನಾಚಿಕೆತೊರೆದು ಮುಂದಿಯ ಮನೆಯ ಪತ್ರಗಳನ್ನೆಲ್ಲ ಎತ್ತಿಕೊಂಡೊಯ್ಯುವರು. ಒಟ್ಟಿನಲ್ಲಿ ಎಲ್ಲವೂ ಒಂದೇ.

ಇದನ್ನು ಭಾವೂಸಾಹೇಬರು ಸಹಜವಾಗಿಯೇ ನುಡಿದರು; ಆದರೆ ಬೇರೆಯವರ ಮನೆಯ ವೃತ್ತಪತ್ರಗಳನ್ನು ಹೇಗಾದರೂ ತಂದುಕೊಂಡು ಪುಕ್ಕಟೆಯಾಗಿ ಓದುವ ದುಶ್ಚಟವು ಖುದ್ದ ಆ ಸುಭೇದಾರರಿಗೇ ಇದ್ದಿತು. ಅಂತೇ ಭಾವೂಸಾಹೇಬರ ಆ ನುಡಿಯು ಒಂದಿಷ್ಟು ಸುಭೇದಾರರ ಮರ್ಮಕ್ಕೇ ಹತ್ತಿತು. ಆದರೆ ಅವನೆಂತಹ ವಸ್ತಾದಿಯು! ಎಂತಹ ಎದೆಗಾರನು! ಅವನು ಅದನ್ನು ಕೇಳಿ

ಕೊಂಡು:—ಓದಿದರೆ ವೃತ್ತಗಳನ್ನು ಪುಕ್ಕಟೆಯಾಗಿಯೇ ಓದಬೇಕೆಂದು ನನ್ನ ನಿಶ್ಚಿತ ತತ್ತ್ವವೇ ಆಗಿಬಿಟ್ಟಿದೆ. ವೃತ್ತಪತ್ರಗಳನ್ನೋದುವದೆಂದರೆ, ಅದೊಂದು ದುಶ್ಚಟವೇ ಆಗಿರುತ್ತದೆ.

ಆದರೆ ಈ ತನ್ನ ವಾಕ್ಯಲ್ಯವು ಭಾವೂಸಾಹೇಬರಿಗೆ ನಟ್ಟೀತೆಂಬದು ಹೊಳೆಯುತ್ತಲೆ, ಸುಭೇದಾರನು ತನ್ನ ನಾಲಿಗೆಯನ್ನು ಕಚ್ಚುತ್ತ: ತಮ್ಮಂತಹ ವಿದ್ವಾಂಸರಿಗೆ ಅದೊಂದು ಬಗೆಯ ವ್ಯಸನವೇ ಆಗಿದೆ; ಆದರೆ ವ್ಯಸನವನ್ನಾದರೂ ಖರ್ಚು-ಕಂದಾಯಗಳಿಲ್ಲದಂತೆ ಪರಭಾರೆ ಸಾಗಿಸಿದರೆ ಹಿಡಿತದಲ್ಲಾದರೂ ಉಳಿಯುವದೆಂದು ನಮ್ಮಂತಹ ಜನರು ತಿಳಿದಿರುತ್ತಾರೆ. ಅದು ಹೇಳಿ ಕೇಳಿ ರೋಗವು, ಇಷ್ಟೇ ಅಲ್ಲ ಹೃದ್ರೋಗವು! ಅಂದಮೇಲೆ ಅದನ್ನು ಕೊಂಡುಕೊಳ್ಳಬೇಕೇಕೆ? ಈಗ ತಾನೆ ತಾವೇ ಅನ್ನಲಿಲ್ಲವೇ, ಯಾವ ವೃತ್ತಪತ್ರ ತೆರೆದರೂ ಅದರಲ್ಲಿ ಅಘಟಿತ ಘಟನೆಗಳೂ ಅನರ್ಥಗಳೂ ತುಂಬಿರುವವೆಂದು?

ಭಾ:--ಇದು ನಿಜ; ಆದರೆ ವೃತ್ತಪತ್ರಗಳನ್ನು ನಾವು ಓದದಿದ್ದರೂ ಇಲ್ಲವೆ ವೃತ್ತಪತ್ರಗಳು ಅನರ್ಥದ ವೃತ್ತಕೊಡುವದನ್ನು ನಿಲ್ಲಿಸಿದರೂ ನಡೆಯುವ ಅನರ್ಥಗಳು ನಡೆಯುವವೇ ಅಲ್ಲವೇ? ಹಾಗಿಲ್ಲದೆ ಅವೆಲ್ಲಿ ನಿಲ್ಲುವವು? ಅಂತೆಯೇ ವೃತ್ತಪತ್ರಗಳಲ್ಲಿ ಅವುಗಳನ್ನೋದಿದೆವೆಂದರೆ, ನಾವೂ ಲೋಕದೊಡನೆಯೇ ಅಲ್ಪಸ್ವಲ್ಪಾದರೂ ನಡೆದಿಪ್ಪೇವೆಂಬಂತೆ ಅನಿಸುತ್ತದೆ. ಜಗತ್ತಿನೊಳಗೆ ಅನರ್ಥಗಳೇನು ಕಡಿಮೆ ಇವೆಯೋ! ಒಂದು ಕಡೆ ಬೆಂಕಿಯು ಅನಾಹುತ, ಮತ್ತೊಂದು ಕಡೆ ಭೂಕಂಪ, ಇನ್ನೊಂದು ಕಡೆ ನೆರೆಹಾವಳಿ............

ಸುಭೇದಾರನು ಆ ನೆರೆಹಾವಳಿಯ ಸಂಧಿಯನ್ನು ಸಾಧಿಸಿ ಅದರಲ್ಲಿ ತನ್ನ ಡೋಣಿಯನ್ನು ಮೆಲ್ಲನೆ ದೂಡುತ್ತ:—ಒಂದು ಕಡೆಗೆ ಕೊಲೆ, ಮತ್ತೊಂದು ಕಡೆಗೆ ಸುಲಿಗೆ............

ಭಾ:—ಒತ್ತಟ್ಟಿಗೆ ಆತ್ಮಘಾತ, ಮತ್ತೊತ್ತಟ್ಟಿಗೆ ಘಟಸ್ಫೋಟ........

ಸು:—ಒಂದು ಕಡೆಗೆ ಬಂಡು, ಇನ್ನೊಂದು ಕಡೆಗೆ ರಾಜ್ಯಕ್ರಾಂತಿ ಇತ್ಯಾದಿಗಳು ನಡೆದೇ ಇವೆ; ಆದರೆ ಭಾವೂಸಾಹೇಬರೇ, ನಮ್ಮಂತಹ ಹರೆಯದ ಜನರಿಗೆ ಮನಸ್ಸಿನ ಈ ಆಘಾತಗಳು ಒಂದು ವೇಳೆ ಸಹನವಾದಾವು; ಆದರೆ ತಾವು ಅವುಗಳನ್ನು ಈ ಇಳಿ ವಯಸ್ಸಿನಲ್ಲಿ ಸಹಿಸಲೆತ್ನಿಸಬಾರದು. ತಮಗೆ ಈಗ ಅಪರ ವಯಸ್ಸು ಪ್ರಾಪ್ತವಾಯಿತು. ತಾವಿನ್ನು ತಮ್ಮಷ್ಟಕ್ಕೆ ನೋಡಿಕೊಳ್ಳಬೇಕಾಗುವದು; ಮತ್ತು ತಾವು ಲೋಕದವರ ಚಿಂತೆಯನ್ನು ಕೊಂಚವೂ ಹಚ್ಚಿಕೊಳ್ಳಕೂಡದೆಂದು ನನಗನಿಸುತ್ತಿದೆ.

ಹೊಟ್ಟೆಯೊಳಗೆ ಹೊಕ್ಕು ಬೆನ್ನಿನಲ್ಲಿ ಬಿರಿಯುವ ಸುಭೇದಾರರ ಈ

ಉದ್ಗಾರಗಳಿಂದ ಭಾವೂಸಾಹೇಬರ ಮನಸ್ಸಿನ ಮೇಲೆ ತುಸ ಪರಿಣಾಮವಾಯಿತು. ಕೆಚ್ಚಲಿಗೆ ಕೈಹಾಕಿದ ಬಳಿಕ ಗೋವು ಹೇಗೆ ತೊರಿಸುವದೋ, ಅದರಂತೆಯೇ ಕೆಲ ಜನರು ಮೋಜಿನ ಸಂಭಾಷಣದಿಂದ ಪ್ರಸನ್ನಗೊಳ್ಳುತ್ತಾರೆ; ಆದರೆ ಕೆಲವು ಆಕಳುಗಳು ಮೊದಮೊದಲು ತೊರಿಸಿದರೂ, ಹೊಟ್ಟೆತುಂಬುವಷ್ಟು ಹಾಲು ಹಿಂಡುವದಿಲ್ಲ; ಒರೇ ಕೈಹಸಿಯಾಗುವ ಮಟ್ಟಿಗೆ ಹಾಲಿನಾಶೆಯನ್ನುಂಟು ಮಾಡು ತ್ತವೆ; ಮತ್ತು ಮುಂದೆ ಅದನ್ನೂ ನಿಷ್ಫಲವನ್ನಾಗಮಾಡುತ್ತವೆಂಬ ಅನುಭವವು ಆ ಸುಭೇದಾರನಿಗೆ ಬೇಗನೆ ಬಂದಿತು. ಅದು ಹೇಗೆಂದರೆ:—

ಭಾ:-ನಾನೊಬ್ಬನು ಜಗತ್ತಿನ ಚಿಂತೆ ಮಾಡಿದರೆ ಆಗುವದೇನು? ಯಾವಾ ತನು ಈ ಲೋಕವನ್ನು ಸೃಷ್ಟಿಸಿರುವನೋ ಆತನೇ ಅದನ್ನು ಮಾಡುವವನು? ಮತ್ತು ಜಗತ್ತಿನದೇ ಏನು, ನನ್ನ ಚಿಂತೆಯನ್ನು ನಾನು ಮಾಡಿದರೂ ನನ್ನ ಕೈ-ಯಲ್ಲೇನಿದೆ, ಹೇಳಿರಿ ನೋಡೋಣ! ನನ್ನ ಕೈಯಲ್ಲಿದ್ದರೆ ನನ್ನ ಗತಿಯು ಹೀಗೇಕಾ ಗುತ್ತಿತ್ತು?

"ಊ ಹೂಂ!" ಎಂದಂದು ಸುಭೇದಾರರು ಒಮ್ಮೆಲೆ ಇಳಿಮೋರೆ ಮಾಡಿ, ಮೇಲಕ್ಕೆ ಆಕಾಶದ ಕಡೆಗೆ ನೋಡಿದರು. ಬಳಿಕ ಒಂದು ನಿಮಿಷದ ವರೆಗೆ ದೀರ್ಘ ಶ್ವಾಸ ಬಿಟ್ಟು, ದುಃಖಪ್ರದರ್ಶನಗೈದರು; ಮತ್ತು ತಮ್ಮ ದೋತರದ ಸೆರಗಿ ನಿಂದ ತಮ್ಮ ಕಣ್ಣು ಕೂಡ ಒರಸಿದರು. ಏನಾದರೂ ಕಣ್ಣೊಳಗಿಂದ ಹನಿ ನೀರು ಕೂಡ ಬರಲಿಲ್ಲ; ಆದರೆ ಕಣ್ಣಿಗೆ ಹಚ್ಚಿದ್ದ ಆಕರ್ಷಕವಾದ ಒಂದಿಷ್ಟು ಕಾಡಿಗೆಯು ಮಾತ್ರ ದೋತರದ ಸೆರಗಿಗೆ ಹತ್ತಿತಷ್ಟೆ! ಸುಭೇದಾರರು ತಮ್ಮ ನಿಟ್ಟುಸಿರಿಗೆ ಬಾಯಿ ಬರುವದಕ್ಕೆಂದು:—ಮಾನವನ ಕೈಯೊಳಗೆ ಹೆಚ್ಚೇನೂ ಇಲ್ಲೆಂಬದು ನಿಜವೇ; ಆದರೆ ಇದ್ದದ್ದನ್ನಾದರೂ ಮಾಡಲಿಕ್ಕೆ ಬೇಕಲ್ಲವೇ? ಭಾವೂಸಾಹೇಬ, ತಮ್ಮ ಮಾಡು-ಮಟ್ಟುವ ವಯಸ್ಸಿಗೆ ಬಂದ ಮಗನಾದ ಪ್ರಭಾಕರನು ಮನೆ ಯಲ್ಲಿದ್ದಿದ್ದರೆ ತಾವೇತಕ್ಕೆ ಮನೆತನದ ಋಣ ಚಿಂತೆ ವಹಿಸಬೇಕಾಗುತ್ತಿತ್ತು? ಆದರೆ ದೈವವು ಕೊಡುತ್ತದೆ; ಕರ್ಮವು ಒಯ್ಯುತ್ತದೆಂದು ಅನ್ನುವದು ಸುಳ್ಳಲ್ಲ.

ಭಾ:—ದೈವವಿರಲಿ ಇಲ್ಲವೆ ಕರ್ಮವಿರಲಿ, ಅವನು ಸತ್ತನೆಂದು ತಿಳಿದೇ ನಾನು ವ್ಯವಹರಿಸಬೇಕಾಗಿದೆಯಲ್ಲವೇ?

ಸು:—ಅಹುದಹುದು; ಮತ್ತು ಆತನು ಸತ್ತನೆಂದು ತಿಳಿದೇ ಮುಂದಿನ ವ್ಯವಸ್ಥೆ ಮಾಡಬೇಕೆಂದಿರುವದು.

ಭಾ:—ಮಾಡಬಾರದ್ಧ ವ್ಯವಸ್ಥೆಯದೇನು ಮಾಡತಕ್ಕದ್ದಿದೆ?

ಸು:—ಭಾವೂಸಾಹೇಬ, ಹೀಗೇಕೆನ್ನುವಿರಿ? ಈ ಜೋಧ್ಯಪುರದ ಸಂಸ್ಥಾನ ದೊಡನೆಯೇ ತಮ್ಮ ತೈನಾತವೂ ಉಂಟಾಗಿರುತ್ತದೆ. ಅದನ್ನು ಕಳಕೊಳ್ಳುವದು

ಹೇಗೆ? ಮತ್ತು ಅದನ್ನು ಉಳಿಸುವದಾದರೆ ತಮ್ಮ ಹೆಸರು ಮುಂದೆ ನಡೆಯು ಬೇಕಲ್ಲವೆ? ಹೆಸರು ನಡೆಯುಬೇಕಾದರೆ ಪುರುಷ ಸಂತಾನವೇ ಬೇಕು; ಮತ್ತು ಅದು ಔರಸದಿಂದಿರದಿದ್ದರೆ ದತ್ತು ಅಂತಾ ಮಾಡಿಕೊಳ್ಳಬೇಕು. ತಮ್ಮ ಖಾಸಗೀ ಸಂಸಾರ ಸಾಗಿಸಲಿಕ್ಕೆ ಮಾಯೀಸಾಹೇಬರು ಸಮರ್ಥರಿರುತ್ತಾರೆ; ಆದರೆ ದುರ್ದೈವದ ಮೂಲಕ ಹೆಂಗಸರಿಗೆ ತೈನಾತ ನಡೆಯುವದಿಲ್ಲವಷ್ಟೆ? ವಂಶಪರಂಪರ ವಾಗಿ ಮಾಡತಕ್ಕ ಸಂಸ್ಥಾನದ ನೌಕರಿಯನ್ನು ಗಂಡಸರೇ ಮಾಡತಕ್ಕವರು. ಅದಕ್ಕೇನು ಮಾಡಬೇಕು? ಸಂಸ್ಥಾನದಲ್ಲಿಯು ಕಾಲವು ವಿಪರೀತವಾಗಹತ್ತಿದೆ. ಗತಿಸಿದ ಮಹಾರಾಜರವರೆಗೆ ತೈನಾತಗಳು ಹೇಗಾದರೂ ಉಳಿದವು; ಆದರೆ ಇನ್ನು ಹೊಸ ಮಹಾರಾಜರು ಪಟ್ಟವೇರುವ.........

ಭಾ: —ಅವರು ಪಟ್ಟವೇರಿದ ಮಾತ್ರದಿಂದ ಏನಾದೀತು?

ಸು:—ಭಲೆ! ತಾವು ಕೇಳಿಯೇ ಇಲ್ಲವೇನು, ದತ್ತಕ ಪದ್ಧತಿಯನ್ನು ಮುಗ್ಗಿಸಬೇಕೆಂದಿರುವ ಅವರ ಯೋಚನೆಯನ್ನು! ಅವರು ಸುಧಾರಕರಿರುತ್ತಾರ್ರೀ.

ಭಾ:-ಆದರೆ ಸ್ವತಃ ಅವರೇ ದತ್ತು ಬಂದಿರುವರಲ್ಲ! ಅದರ ಗತಿಯೇನು?

ಸು:—'ಕುಲಕ್ಕೆ ಮೂಲ ಕೊಡಲಿಯು ಕಾವು' ಎಂದೆನ್ನುವದಿದಕ್ಕೇ! ಸ್ವತಃ ದತ್ತಕ ಬಂದವನೇ ದತ್ತಕಪದ್ಧತಿಯನ್ನು ಮುಳುಗಿಸದಿದ್ದ ಮೇಲೆ ಅದರಲ್ಲೇನುಳಿ ಯುವದು ಮೋಜು! ಆದರೆ ಅವರ ಸ್ವಂತದ ದತ್ತವಿಧಾನವು ಸಶಾಸ್ತ್ರವೆಲ್ಲಾಗಿತ್ತು? ಬ್ರಿಟಿಶ ಸರಕಾರದವರು ಸಾರ್ವಭೌಮತ್ವದ ಅಧಿಕಾರ ನಡಿಸಿ ಮೊದಲು ಅವರನ್ನು ಪಟ್ಟಕ್ಕೆ ಕೂಡ್ರಿಸಿದರು; ಹಾಗು ಆ ಮೇಲೆ ಹಳೇ ರಾಣೀಸಾಹೇಬರ ಹುಚ್ಚು ತಿಳುವಳಿಕೆಗಾಗಿ ಅವರನ್ನು ಸುಮ್ಮನೆ ಅವರ ಉಡಲಲ್ಲಿ ಹಾಕಿದರು! ಅದಿರಲಿ. ಅವರು ಹೇಗೆಯೋ ಇರಲೊಲ್ಲರೇಕೆ, ಭಾವೂಸಾಹೇಬರೇ, ದಯವಿಟ್ಟು ನಿಮ್ಮ ಮನೆಯ ದತ್ತವಿಧಾನವನ್ನೊಮ್ಮೆ ತೀರಿಸಿಕೊಂಡು ಬಿಡಿರಿ ನೋಡುವಾ. ನಿಮಗೆ ನಿಮ್ಮ ಮನೆತನದ ಪರಿವೆಯಿರದಿದ್ದರೂ ಬೇರೆಯವರ ಮನೆತನದ ಬಗ್ಗೆಯಾದರೂ ಯೋಚಿಸಿ ನೋಡಿರಿ. ನಿಮ್ಮಿಂದ ತೈನಾತು ಮುಳುಗಿದ ಪದ್ಧತಿಯನ್ನು ಕೆಡವ ಗೊಡಬೇಡಿರಿ. ಮುಂದುಕಿ ಸತ್ತದ್ದಕ್ಕೆ ದುಃಖವಿಲ್ಲ; ಆದರೆ ಯಮನು ಕೊಬ್ಬೇ ರುವನೆಂಬ ಬಗ್ಗೆ ಯೋಚನೆ! ಇದು ತೈನಾತದ ವಿಷಯವಾಯಿತು. ಇನ್ನು ತಮಗೆ ತಮ್ಮ ಪಿಂಡೋದಕ ಕ್ರಿಯೆಯ ವ್ಯವಸ್ಥೆಯನ್ನೇನಾದರೂ ಮಾಡಬೇಡವೆ? ತಾವು ಧರ್ಮನಿಷ್ಠರಿರುತ್ತೀರಿ; ಶ್ರದ್ಧಾವಂತರರುತ್ತೀರಿ. ನಿಪುತ್ರಿಕರಿಗೆ ನರಕವೇ ಗತಿಯೆಂಬುದನ್ನು ನಾನು ತಮಗೆ ಹೇಳಬೇಕೆಂತಿಲ್ಲ. ತಾವು ದತ್ತಕ ಮಾಡಿಕೊಂ ಡರೆ, ಸ್ವಾರ್ಥ, ಪರಾರ್ಥ, ಪರಮಾರ್ಥ ಇವೆಲ್ಲವೂ ಒಮ್ಮೆಲೆ ಸಾಧಿಸಬಹುದಾಗಿವೆ.

ಭಾ: —ಆದರೆ ನಾನು ದತ್ತಕ ಮಾಡಿಕೊಂಡರೂ ನಮ್ಮ ತೈನಾತು ನಡೆದೇ

ನಡೆದೀತೆಂಬ ಬಗ್ಗೆ ಖಾತ್ರಿಯೇನು?

ಸು:—ಅದರ ಸಿದ್ಧತೆಯೆಲ್ಲ ಆಗಿಹೋಗಿದೆ. ಆ ಬಗ್ಗೆ ತಾವು ಎಳ್ಳಷ್ಟೂ ಯೋಚಿಸುವಂತಿಲ್ಲ. ತಮ್ಮ ತೈನಾತ ನಡಿಸುವ ಬಗ್ಗೆ ದಿವಾಣಸಾಹೇಬರು ಹುಕುಮಿನ ಮೇಲೆ ಸಹಿ ಇಕ್ಕಲಿಕ್ಕೆಂದು ಸಿದ್ಧರಾಗಿ ಕುಳಿತಿರುತ್ತಾರೆ. ದತ್ತಕವಿಧಾನವಾಗಿ ತಮ್ಮ ಅರ್ಜಿಯು ಬಂದೊಡನೆಯೇ, ಹುಕುಮಿನ ಮೇಲೆ ಅವರ ಸಹಿಯಾಯಿತೆಂದು ತಿಳಿಯಿರಿ. ತಮ್ಮ ತೈನಾತದ ವಿಷಯವಾಗಿ ತಮಗಿಂತಲೂ ದಿವಾಣಸಾಹೇಬರಿಗೆ ಹೆಚ್ಚು ಯೋಚನೆಯಿದೆ. ಹೇಳಿ ಕೇಳಿ ಅವರು ಮುತ್ಸದ್ದಿಗಳು. ಅದರಿಂದ ಪ್ರಜೆಗಳ ಕಲ್ಯಾಣದ ಸಲುವಾಗಿ ಅವರು ಬಹು ದೂರ ಲಕ್ಷ್ಯಕೊಡಬೇಕಾಗುತ್ತದೆ.

ಭಾ:—ನಾನು ದತ್ತಕ ಮಾಡಿಕೊಳ್ಳುವ ಮನಸ್ಸು ಮಾಡಿದರೂ ಅಂಥ ಹುಡುಗನು ಒಮ್ಮೆಲೆ ಸಿಗಬೇಕಲ್ಲವೆ? ಅದರಂತೆ ಮುಹೂರ್ತವೂ?

ಸು:—ಮುಹೂರ್ತವನ್ನು ನಾನು ಈ ಮೊದಲೇ ತೆಗೆಸಿಟ್ಟಿರುತ್ತೇನೆ. ಯಾಕೆಂದರೆ ಯುಜಮಾನಸಾಹೇಬರಿಗೆ ಸಂಪೂರ್ಣ ಅಧಿಕಾರಗಳು ಪ್ರಾಪ್ತವಾಗುವ ಮೊದಲೇ ಈ ಕೆಲಸವನ್ನು ಮುಗಿಸಿಬಿಡಬೇಕೆಂದು ದಿವಾಣಸಾಹೇಬರು ನನಗೆ ನಾಲ್ಕು ನಾಲ್ಕು ಸಾರೆ ಬಜಾಯಿಸಿ, ಅದನ್ನು ತಮಗೆ ಅವಶ್ಯವಾಗಿ ತಿಳಿಸುವ ಸಲುವಾಗಿ ಹೇಳಿರುತ್ತಾರೆ. ತಾವು ಬೇಕಾದ ಹುಡುಗನನ್ನು ಗೊತ್ತು ಮಾಡಿರಿ; ಆದರೆ ಸ್ವಗೋತ್ರದೊಳಗಿನ ಮತ್ತು ತಮ್ಮ ಮನೆತನದೊಳಗಿನ ಹುಡುಗನೇ ಆಗಬೇಕೆಂಬುದು ಶಾಸ್ತ್ರದಲ್ಲಿಯೇ ಹೇಳಿದೆ. ನಾನೂ ತಾವೂ ಒಂದೇ ಡಬೀರರ ಉರ್ಫ ಸುಭೇದಾರರ ಮನೆತನದವರು. ಹುಡುಗನು ನನ್ನ ಬಾಜೀರಾಯನಂತೆ ಚಿಕ್ಕವನಿರಬೇಕೆಂಬದನ್ನು ಮಾತ್ರ ನಿಮಗೆ ಹೇಳುವ ಅವಶ್ಯಕತೆಯಿಲ್ಲ.

ಈ ರೀತಿಯಾಗಿ ಸುಭೇದಾರರು ಮಧ್ಯದಲ್ಲಿ ಸ್ವಲ್ಪವೂ ವಿರಾಮಕೊಡದೆ ಮಾತನಾಡುತ್ತಿದ್ದರು. ಅದರಿಂದ ಭಾವೂಸಾಹೇಬರಿಗೆ ನಡನಡುವೆ ಹೂಂಕಾರ ವೀಯುದ ಹೊರತು ಬೇರೆ ಹೇಳಲಿಕ್ಕೆ ಆವಕಾಶವೇ ಉಳಿಯುತ್ತಿದ್ದಿಲ್ಲ; ಆದರೆ ಕಡೆಗೆ ಆ ಪೇಚಿನೊಳಗಿಂದೊಮ್ಮೆ ಅವರ ಬಿಡುಗಡೆಯು ಅಕಲ್ಪಿತವಾಗಿ ಆಯಿತು. ಯಾಕೆಂದರೆ, ಅಷ್ಟರಲ್ಲಿ ದೌಲತನು ಟಪಾಲು ತಕ್ಕೊಂಡು ಮೇಲೆ ಬಂದನು; ಮತ್ತು ಟಪಾಲು ಕಂಡ ಕೂಡಲೆ ಭಾವೂಸಾಹೇಬರು ಮಿಕ್ಕ ಎಲ್ಲ ವಿಷಯವನ್ನೂ ಮರೆತು ಬಿಡುತ್ತಿದ್ದರು. ದೌಲತನು ತಂದ ಟಪಾಲನ್ನು ಅವರು ಒಳ್ಳೇ ಉಲ್ಲುಕೋಚಿತನದಿಂದ ಕೈಯಲ್ಲಿ ತಕ್ಕೊಂಡರು. ಪತ್ರಗಳ ಮೇಲಿನ ಪಾಕೀಟುಗಳನ್ನೂ ವೃತ್ತಪತ್ರಗಳ ಮೇಲಿನ ಕಾಗದಗಳನ್ನೂ ಹರಿಯುವಾಗ ಟಪಾಲಖಾತೆಯನ್ನು ಅವರು ಮತ್ತೆ ಹಳಿಯಹತ್ತಿದರು.

ಭಾ:—ಎಂಥ ಅನಿಯಮಿತತನವಿದು? ಯಾಕೋ ದೌಲತ! ಪೋಷ್ಟ ಮನ್ನನೇನೆಂದನು? ಇಷ್ಟು ತಡವಾದ ಬಗ್ಗೆ ಏನಾದರೂ ಹೇಳಿದನೇನು? ಮೇಲ್ ಗಾಡಿಗೆ ಅಪಘಾತವಾಗಿರಬೇಕೆಂದು ನನಗನಿಸಿದುದು ನಿಜವಷ್ಟೇ?

ದೌ:—ಅದೇನಿಲ್ಲ. ಟಪಾಲು ಹೊತ್ತಿಗೆ ಸರಿಯಾಗಿಯೇ ಬಂದಿತಂತೆ; ಆದರೆ ಧಣಿಯರೇ, ಪೋಷ್ಟಮನ್ನನ ಮತ್ತು ನನ್ನ ತಪ್ಪುಗಂಟಾಯಿತು. ನಾನು ಆತನನ್ನು ಮುಂಬಾಗದಲ್ಲಿ ನಿರೀಕ್ಷಿಸುತ್ತಿದ್ದೆನು; ಆದರೆ ಆತನು ಈ ಮನೆಯ ಹಿಂದಿನ ಓಣಿಯಿಂದ ಹೋಗುವಾಗ ನಮ್ಮ ಅವ್ವನವರಿಗೆ ಅವರ ಹೆಸರಿನ ಪತ್ರ ಕೊಟ್ಟು, ಇತ್ತ ತಿರುಗಿ ಬರುವಷ್ಟರಲ್ಲೇ ನಾನು ಆತನಿಗೆ ಭೆಟ್ಟಿಯಾಗಿ ಅತನಿಂದ ತಮ್ಮ ಟಪಾಲನ್ನು ಇಸಕೊಂಡು ಬಂದೆನು.

ಈ ಶಬ್ದಗಳನ್ನು ಕೇಳಿ ಭಾವೂಸಾಹೇಬರು ಬೆಟ್ಟಿಬಿದ್ದರು! ಸೋಜಿಗ ಗೊಂಡರು! ಟಪಾಲನ್ನೊಡೆದು ಪತ್ರಗಳ ಮಡಿಕೆಗಳನ್ನು ಬಿಚ್ಚತೊಡಗಿದ್ದ ಅವರ ಕೈಗಳು ಕ್ಷಣಕಾಲದ ವರೆಗೆ ಸ್ತಬ್ಧವಾಗಿಬಿಟ್ಟವು! ಮತ್ತು ಅವರು ಹುಬ್ಬು ಮೇಲಕ್ಕೇರಿಸಿ ದೌಲತನ ಕಡೆಗೆ ದಿಟ್ಟಿಸಿ ನೋಡುತ್ತ ಕುಳಿತರು. ಕೆಲ ನಿಮಿಷ ಗಳ ವರೆಗೆ ಅವರ ಬಾಯಿಂದ ಪಿಟ್ಟೆಂಬ ಶಬ್ದವು ಕೂಡ ಹೊರಡದಾಯಿತು. ಆದರೆ ಕಟ್ಟಕಡೆಗೆ ಅವರಲ್ಲಿಯ ಚಿಕಿತ್ಸಕತೆಯು ಸೋಜಿಗವನ್ನು ಜಯಿಸಿತು. ಆಗ ಲವರು:—ದೌಲತ, ಏನಂದಿ? ಪೋಷ್ಟಮನ್ನನು ಹಿಂದಿನ ಓಣಿಯಿಂದ ಬಂದು ಯಾರಿಗೆ ಪತ್ರಕೊಟ್ಟನೆಂದೆ?

ದೌ:—ಧಣಿಯರೇ, ಅವ್ವನವರಿಗೆ.

ಭಾ:—ಏನೆನ್ನುತ್ತೀ? ನಮ್ಮ ಮನೆಯಲ್ಲೇ? ನಮ್ಮ ಮನೆಯವಳಿಗೇ? ಆತನು ನಮ್ಮವಳಿಗೆ ಪತ್ರ ಕೊಟ್ಟನೇ? ಅದನ್ನು ಆ ಪೋಷ್ಟಮನ್ನನು ಕೊಟ್ಟನೇ? ಮತ್ತು ಅದನ್ನು ಹಿತ್ತಲಬಾಗಿಲಿನಿಂದ ಬಂದು ಕೊಟ್ಟು ಹೋದನೇ?

ದೌ:—ಹೌದು; ಹಾಗೆಯೇ ಕೊಟ್ಟನು.

ಅದನ್ನು ಕೇಳಿದ ಕೂಡಲೆ ಭಾವೂಸಾಹೇಬರ ಮುಖವು ನಸುಗೆಂಪಾಯಿತು. ಹುಬ್ಬುಗಳು ಗಂಟಿಕ್ಕಿದವು; ಆದರೂ ದೃಷ್ಟಿಯು ಒಳ್ಳೇ ಏಕಾಗ್ರವಾಯಿತು ಸುಭೇದಾರರ ತಂತ್ರದಲ್ಲಿ ಇದೊಂದು ಆಕಸ್ಮಿಕವಾದ ವಿಘ್ನ ಬಂದಿತು. ಅದರಿಂದ ಅದನ್ನು ನಿವಾರಿಸುವ ಸಲುವಾಗಿ ಅವರು ನಡುವೇ ಬಾಯಿಹಾಕಿದರು. ದೌಲತನು ಹೇಳುವ ಸಂಗತಿಯಿಂದ ಅವರಿಗೂ ಆಶ್ಚರ್ಯವಾಗಿದ್ದಿತು; ಮತ್ತು ಅದರಿಂದ ಒಂದು ಬಗೆಯ ಕುತ್ಸಿತ ವಿಚಾರವೂ ಅವರ ತಲೆಯಲ್ಲಿ ತಲೆಹಾಕಹತ್ತಿತ್ತು; ಆದರೂ ಸಂಭಾವಿತತನದ ಆಡಂಬರವನ್ನಿಳಿಸುತ್ತ ಅವರು:—ಭಾವೂಸಾಹೇಬ, ಒಮ್ಮೊಮ್ಮೆ ಹೀಗೆ ಆಗುತ್ತಿರುತ್ತದೆ. ಪೋಷ್ಟಮನ್ನನು ಎತ್ತಕಡೆಯಿಂದ

ಬಂದರೂ ತನ್ನ ಅನುಕೂಲತೆ ನೋಡುತ್ತಿರುತ್ತಾನೆ. ನಾಲ್ಕು ಹೆಚ್ಚು ಕಡಿಮೆ ಯಾದರೆ ಅಷ್ಟೇ ಸಾಕು. ಹಿಂದಿನ ಓಣಿಯೇನು, ಮುಂದಿನ ಬೀದಿಯೇನು? ಮತ್ತು ಪತ್ರ-ಪಾಕೀಟಿನ ಮೇಲೆ ಯಾರ ಹೆಸರಿರುವದೋ, ಅವರ ಕೈಯಲ್ಲೇ ಸ್ವತಃ ಅದನ್ನು ಕೊಡಬೇಕೆಂದು ಪೋಷ್ಟಮನ್ನ ಜನರಿಗೆ ಅವರ ವರಿಷ್ಠರಿಂದ ಹಾಗೆ ಒಟ್ಟು ಸೂಚನೆಯೇ ಇರುತ್ತದಂತೆ.

ಭಾ:—ಹೆಂಗಸರ ಹೆಸರಿನ ಪತ್ರಗಳಿದ್ದರೂ ಆ ಮನೆಯ ಗಂಡಸರ ಪತ್ರ ಗಳ ಜೋತೆಗೆ ಅವುಗಳನ್ನು ಕೊಡಲಿಕ್ಕೆ ಅಡ್ಡಿಯೇ? ಅವರ ಆ ಪತ್ರಗಳನ್ನಾರಾ ದರೂ ಕದಿಯುವರೋ ಏನು? ಏನೋ ವರಿಷ್ಠರ ಸೂಚನೆಯಿರುತ್ತದಂತೆ ಹೀಗೆ! ಪತ್ರಗಳು ಪೋಷ್ಟ ಆಫೀಸಿನಲ್ಲಿರುವವರೆಗೇ ಅವುಗಳ ಮೇಲೆ ವರಿಷ್ಠರ ಅಮಲು; ಆದರೆ ಅವರ ಆ ಅಮಲನ್ನು ಮಂದಿಯ ಮನೆಗಳಲ್ಲಾರು ನಡೆಯಗೊಟ್ಟಾರು? ಮನೆಯಲ್ಲಿ ಗಂಡಸರೇ ಎಲ್ಲ ಆಡಳಿತಗಳಲ್ಲಿ ವರಿಷ್ಠರು; ಗಂಡಸರದೇ ಸರ್ವಾ ಧಿಕಾರವು! ಹುಚ್ಚು ಮುಂಡೇಗಂಡ ಪೋಷ್ಟಮನ್ನ. ಹಿತ್ತಲ ಬಾಗಿಲದಿಂದ ಟಪಾಲು ಹಂಚಿದ್ದನ್ನು ನಾನು ಕಂಡಿದ್ದರೆ, ಆತನ ಕಾಲೇ ಮುರಿಯುತ್ತಿದ್ದೆನು; ಆದರೆ ಆತನ ಕಡೆಗೇ ಎಲ್ಲ ದೋಷವಿದೆಯೆಂದು ಅದಾರು ಹೇಳಬೇಕು?

ಮುಗಿಯಿತು; ಸುಭೇದಾರರ ಸಾವೋಪಚಾರವು ನಿರರ್ಥಕವಾಯಿತು. ಭಾವೂಸಾಹೇಬರ ಚಿತ್ತವು ಕ್ಷೋಭದ ಮೂಲಕ ಬಿಚ್ಚಿಟ್ಟಿದ್ದ ಪತ್ರಗಳನ್ನೋ ದುವ ಕಡೆಗೂ ಹತ್ತಲಿಲ್ಲ. ಅಂದಮೇಲೆ ಸುಭೇದಾರರು ತೆಗೆದಿದ್ದ ದತ್ತಕದ ಆಗಂತುಕ ವಿಷಯದ ಕಡೆಗೆ ಅವರ ಲಕ್ಷ್ಯವು ಹೇಗೆ ಉಳಿಯಬೇಕು? ಅವರು ಪತ್ರ ಮತ್ತು ವೃತ್ತಪತ್ರಗಳನ್ನು ಸುಮ್ಮ ಸುಮ್ಮನೆ ತಿರುತಿರುವಿ ಇಡುತ್ತಿದ್ದರು. ಇನ್ನು ನಿಮ್ಮ ಮಾತು ಸಾಕು; ನೀವು ಹೊರಟು ಹೋಗಬಹುದೆಂದು ಸುಭೇದಾ ರರಿಗೆ ಅದೊಂದು ಬಗೆಯ ಸೂಚನೆಯೇ ಆಗಿತ್ತು; ಆದರೆ ಇಂತಹ ಸೂಕ್ಷ್ಮ ಸೂಚನೆಗಳಿಂದ ಬೋಧಪಡೆಯುವ ಗೃಹಸ್ಥರೇ ಅವರು? ಅವರು ಮತ್ತೆ ತಮ್ಮ ಮಾತೆತ್ತಿದರು:

ಸು:—ಹಾಗಾದರೆ ಭಾವೂಸಾಹೇಬರೇ, ಆಗಲೆ ತಿಳಿಸಿದ ದತ್ತಕದ ಬಗ್ಗೆ ಏನು ಮಾಡುವದು? ಹುಡುಗನನ್ನು ಹುಡುಕುವ ಕೆಲಸದಲ್ಲಿ ನಾನು ತಮಗೆ ನೆರ ವಾಗುತ್ತೇನೆ; ಆದರೆ ನಿಶ್ಚಯಿಸಿದ ಮುಹೂರ್ತವನ್ನು ಮಾತ್ರ ಯಾವ ಕಾರಣ ದಿಂದಲೂ ತಪ್ಪಿಸಕೂಡದು. ಹುಡುಕಹತ್ತಿದರೆ ಹುಡುಗನು ಸಿಗಲಿಕ್ಕಿಲ್ಲವೆಂತಲ್ಲ; ಆದರೆ ಬೇರೆ ಯಾವನೂ ಸಿಗದಿದ್ದರೆ, ನಾನು ನನ್ನ ಹೊಟ್ಟೆಯ ಕರಳನ್ನು ಕೂಡ ಕೊಡಲಿಕ್ಕೆ ಸಿದ್ಧನಿರುತ್ತೇನೆ. ನಮ್ಮ ಬಾಜೀರಾಯನು ನಮ್ಮ ಒಡವರ ಹೊಟ್ಟೆ ಯಲ್ಲಿ ಹುಟ್ಟಿದವನಾದ ಏಕಮಾತ್ರಪುತ್ರನು; ಮತ್ತು ದೇವರ ದಯೆಯಿಂದ ನನ್ನ

ಆತನಿಗೆ ಮನೆಯಲ್ಲೇನೂ ಅರೆಯಿಲ್ಲ; ಆದರೂ ಮನೆತನದ ಹೆಸರು ಉಳಿಸಬೇಕಾಗಿದ್ದರೆ, ನಮ್ಮ ಡಬೀರರ-ಸುಭೇದಾರರ ಮನೆತನದ ವಂಶವನ್ನು ಹಬ್ಬಿಸಬೇಕಾಗಿದ್ದರೆ ಮತ್ತು ಎಲ್ಲರ ತೈನಾತ ನಡಿಸಬೇಕಾಗಿದ್ದರೆ ಆ ನನ್ನ ಹುಡುಗನನ್ನು ತಮ್ಮ ಹಾಗು ತಮ್ಮ ಕುಟುಂಬದ ಉಡುಲಲ್ಲಿ ಹಾಕಲಿಕ್ಕೆ ಈ ಸುಭೇದಾರನು ಎಂದೂ ಹಿಂದೆಗೆಯಲಿಕ್ಕಿಲ್ಲ.

ಸುಭೇದಾರನು ಈ ರೀತಿಯಾಗಿ ತನ್ನ ಚರ್ಪಟಪಂಜರಿಯನ್ನು ಪಠಿಸುತ್ತಲಿದ್ದನು; ಆದರೆ ಭಾವೂಸಾಹೇಬರ ಲಕ್ಷ್ಯವು ಅತ್ತ ಕಡೆಗಿರಲಿಲ್ಲ. ಅವರು ಮನಸ್ಸಿನಲ್ಲಿ ಏನೋ ಯೋಚಿಸುತ್ತ ಬಾಯಿಂದ ತಮ್ಮಷ್ಟಕ್ಕೆ ತಾವೇ ಗುಣುಗುಟ್ಟುತ್ತಿದ್ದರು; ಮತ್ತು ಕೈಯಿಂದ ಟಪಾಲಿನ ಕಾಗದ-ಪತ್ರಗಳನ್ನು ತಿರುವಿ ತಿರುವಿ ಒಗೆಯುತ್ತಿದ್ದರು. ಇತ್ತ ಸುಭೇದಾರರು ದತ್ತಕದ ಮಾತು ನಡೆಸಿದ್ದರು; ಆದರೆ ಅತ್ತ ಭಾವೂಸಾಹೇಬರ ಕಣ್ಣೆದುರಿಗೆ ಆ ಪೋಷ್ಟಮನ್ನನ ಚಿತ್ರವೇ ಇನ್ನೂ ನಿಂತಿತ್ತು. ಅಷ್ಟರಲ್ಲೊಂದು ಹೊಸ ಕಲ್ಪನೆಯು ಸೂಚಿಸಿದ್ದರಿಂದ, ಅವರು ಸ್ವಂತಕ್ಕೂ ಸುಭೇದಾರರಿಗೂ ಉದ್ದೇಶಿಸಿ,—

ಭಾ:—ಸುಭೇದಾರರೇ, ಆತನು ಪೋಷ್ಟಮನ್ನನಾಗಿರದೆ ಗುಪ್ತ ಪೋಲೀಸನಿರಬೇಕೆಂದು ನನಗನಿಸುತ್ತದೆ. ಹಾಗಿರದಿದ್ದರೆ ಸಭ್ಯ ಗೃಹಸ್ಥರ ಮನೆಯ ಹಿತ್ತಲ ಬಾಗಿಲಿನಿಂದ ಬರಹೋಗುವ ಬುದ್ಧಿಯು,-ಬೇಕಾದರೆ ಧೈರ್ಯವೆನ್ನಿರದಕ್ಕೆ-ಅವನಿಗೇಕಾಗುತ್ತಿತ್ತು? ಅವನು ಪತ್ತೆದಾರನೇ ಅಹುದು. ಅದರಲ್ಲಿ ಸಂಶಯವಿಲ್ಲ; ಆದರೆ ಆತನ ಬಳಿಗೆ ಟಪಾಲಿನ ಪತ್ರಗಳು ಹೇಗೆ ಬಂದವು? ಪೋಷ್ಟಿನವರಿಗೆ ಸರಕಾರದವರು ಪತ್ತೇದಾರಿಕೆಯ ಕೆಲಸವನ್ನೂ ವಹಿಸಿರಬಹುದೆಂದು ನನಗನಿಸುತ್ತದೆ. ಆಗಬಾರದ ಕೆಲಸವು ನನ್ನ ಮಗನ ಕೈಯಿಂದಾದದ್ದೇನೋ ನಿಜ; ಆದರೆ ಅದಕ್ಕೆ ಎಷ್ಟೋ ವರ್ಷಗಳಾದವಲ್ಲ? ಹೀಗಿದ್ದೂ ಈ ಗುಪ್ತ ಪೋಲೀಸರು ನನ್ನ ಮನೆಯ ದಾರಿಯನ್ನಿನ್ನೂ ಬಿಡುವದಿಲ್ಲ. ಇದಕ್ಕೇನು ಮಾಡಬೇಕು?

ಸುಭೇದಾರನು ಮತ್ತೊಮ್ಮೆ ಪ್ರಯತ್ನಿಸಿ ನೋಡಿದನು: ಛೇ! ಛೇ! ತಮಗೆ ಇಲ್ಲದ ಸಂದೇಹವು ಪ್ರಾಪ್ತವಾಯಿತು. ಆತನು ಖಂಡಿತವಾಗಿಯೂ ಪತ್ತೆದಾರನಲ್ಲ, ಪೋಷ್ಟಮನ್ನನೇ ಆಗಿರಬೇಕು. ಅದರಲ್ಲಿ ವಿಶೇಷವೇನಿದೆ?

ಆದರೆ ಈ ಆಶ್ವಾಸನದಿಂದ ಭಾವೂಸಾಹೇಬರ ಕಲ್ಪನಾತರಂಗಕ್ಕೆ ಮತ್ತೆ ಮೊದಲಿನ ಗತಿಯೇ ಪ್ರಾಪ್ತವಾಯಿತು. ಅವರು ತಮ್ಮ ಕೈಯೊಳಗಿನ ಕಾಗದ ಪತ್ರಗಳನ್ನು ಕೆಳಗಿಟ್ಟು ಎದ್ದು ನಿಂತು:—"ಹಾಗಾದರೆ ಒಳಗೆ ಹೋಗಿ ಅವಳನ್ನೇ ಆ ಪತ್ರದ ಬಗ್ಗೆ ಕೇಳಬೇಕು; ಅಂದರೆ ನಿರ್ಣಯವಾದೀತು" ಎಂದಂದರು.

ತೀರಿತು. ಭಾವೂಸಾಹೇಬರೇ ಅಲ್ಲಿಂದೆದ್ದ ಮೇಲೆ, ಸುಭೇದಾರರು ಕುಳಿತು

ಪ್ರಯೋಜನವೇನು? ದತ್ತಕದ ಬಗ್ಗೆ ಅವರು ಮತ್ತೆ ಏನೋ ಹೇಳತಕ್ಕವರಿದ್ದರು. ಅಷ್ಟರಲ್ಲಿ ಭಾವೂಸಾಹೇಬರು ಅವರಿಗೆ ಹೋಗಿ ಬರ್ರೆಂದು ನಮಸ್ಕಾರ ಕೂಡ ಮಾಡಿಬಿಟ್ಟರು; ಮತ್ತು ಹಿಮ್ಮಗ್ಗಲಿನ ಮೇಲುಪ್ಪರಿಗೆಯ ಕಡೆಗೆ ಹೊರಟರು. ಆಗ ಸುಭೇದಾರರೂ ಮುಮ್ಮಗ್ಗಲಿನ ಅಟ್ಟದ ಪಾವಟಿಗೆಗಳನ್ನಿಳಿಯಹತ್ತಿದರು.

---

## ೫ ಪತ್ರದಿಂದುಂಟಾದ ಗೊಂದಲ.

ಮೇಲೆ ವಿವರಿಸಿದ ಸಂಗತಿಯು ಮುಂಜೆ ಹತ್ತೆಂಟು ನಿಮಿಷ ಭಾಗೀರಥೀ ಬಾಯಿ ಊರ್ಫ ಮಾಯಿಊಸಾಹೇಬರು ಮೈತೊಳಕೊಂಡು ಹಿತ್ತಲ ಬಾಗಿಲ ಬಳಿಯ ತುಳಸಿಗೆ ಪ್ರದಕ್ಷಿಣೆಗಳನ್ನು ಹಾಕುತ್ತಿದ್ದರು. ಅಷ್ಟರಲ್ಲಿ ಅವರ ಮನೆಯ ಹಿತ್ತಲ ಬಾಗಿಲವನ್ನು ಅದಾರೋ ಬಡಿದರು. ಆ ಬಾಗಿಲದಲ್ಲಿ ರಪಡಾರಿಯಿರಲಿಲ್ಲ. ಆದುದರಿಂದ ಅವರು ಮೊದಲು ಅತ್ತಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಓಣಿಯಲ್ಲಾಡುವ ಯಾವನೊಬ್ಬ ಹುಡುಗನು ಮೋಜಿಗಾಗಿ ಸುಮ್ಮನೆ ಬಾಗಿಲ ಬಡೆದಿರಬಹುದೆಂದೇ ಅವರಿಗನಿಸಿತು; ಆದರೆ ಮತ್ತೊಮ್ಮೆ ಯಾರೋ ಬಾಗಿಲ ಬಡಿದರಷ್ಟೇ ಅಲ್ಲ; “ಬಾಗಿಲು ತೆರೆಯಿರಿ ಬಾಗಿಲು” ಹೀಗೆಂದು ಗಟ್ಟಿಯಾಗಿ ಕೂಗಿದರು. ಆದ್ದರಿಂದ ಮಾಯಿಊಸಾಹೇಬರು ಪ್ರದಕ್ಷಿಣೆಗಳನ್ನು ತಡೆದು, ಹಕ್ಕೆಯಲ್ಲಿ ಕೆಲಸ ಮಾಡುತ್ತಿದ್ದ ತೊತ್ತನ್ನು ಸನ್ನೆಯಿಂದ ಕರೆದು:—“ಗಹಿನೀ, ಬಾಗಿಲು ತೆರೆದು ನೋಡು, ಹೊರಗೆ ಯಾರು ಕೂಗುತ್ತಿರುವರೆಂಬದನ್ನು!” ಎಂದು ಸೂಚಿಸಿದರು. ಗಹಿನಿಯು ಬಾಗಿಲು ತೆರೆಯುತ್ತಲೆ, ಒಬ್ಬ ಪೋಷ್ಟಮನ್ನನು ಒಳಗೆ ಬಂದು:—“ಬಾಯಿಊಸಾಹೇಬರೇ, ಕ್ಷಮಿಸಿರಿ. ನಾನು ಈ ಹಿಂದಿನ ಓಣಿಯ ಪತ್ರಗಳನ್ನು ಹಂಚುತ್ತ ನಡೆದಿದ್ದೆನು. ಅದರಲ್ಲಿ ಈ ಮನೆಯ ಒಡತಿಯರ ಹೆಸರಿನ ಪತ್ರವು ಹೊರಟಿತು. ಅದರಿಂದ ಇತ್ತಿಂದ ಇತ್ತೇ ಇದನ್ನು ಕೊಟ್ಟು ಮುಂದೆ ಹೋಗಬೇಕೆಂದೆನಿಸಿತು. ಅದಕ್ಕಾಗಿ ಸಹಜವಾಗಿ ಕೂಗಿದೆನು. ಅದರಿಂದ ನನ್ನ ಕೆಲಸವೇ ಪೂರೈಸಿತು! ರಾವಸಾಹೇಬರ ಪತ್ರಗಳೂ ಇರುತ್ತವೆ; ಈ ಓಣಿಯನ್ನು ಮುಗಿಸಿ ಮುಮ್ಮಗ್ಗಲಿಗೆ ಹೋದೆನೆಂದರೆ, ಅವುಗಳನ್ನು ಅವರಿಗೆ ಕೊಟ್ಟೇ ಕೊಡುವೆನು. ಶಕ್ಯವಾದಷ್ಟು ಅವರವರ ಹೆಸರಿನ ಪತ್ರಗಳನ್ನು ಅವರವರಿಗೇ ತಲುಪಿಸಬೇಕೆಂದು ನಮ್ಮ ವರಿಷ್ಠರ ಹುಕುಮಿರುತ್ತದೆ. ಅದೂ ಸಾಧಿಸಿದಂತಾಯಿತು. ನಾನು ಹೋಗುವಾಗ ಬಾಗಿಲವನ್ನಿಕ್ಕಿಕೊಳ್ಳುತ್ತೇನೆ. ಕ್ಷಮಿಸಿರಿ” ಎಂದೆಂದು ಗಹಿನಿಯ ಕೈಯಲ್ಲಿ ಒಂದು ಪತ್ರಕೊಟ್ಟು ಆತನು ಕೂಡಲೆ ಹೊರಬಿದ್ದು ಕದವನ್ನೆಳೆದುಕೊಂಡನು.

ಆದರೆ ಅಷ್ಟರಿಂದ ಗಹಿನಿಯ ಶ್ರಮವು ಕಡಿಮೆಯಾಗುವಂತಿರಲಿಲ್ಲ.

ಯಾಕಂದರೆ ಅವಳು ಆ ಕದದವರೆಗೆ ಹೋಗಿಯೇ ಅದಕ್ಕೆ ಒಳಚಿಲಕಹಾಕಬೇಕಾಯಿತು. ಅವಳು ಹಿಂದಿರುಗಿ ಬಂದು: "ಮಾಯೂಸಾಹೇಬ, ಈ ಕಾಗದವನ್ನೆಲ್ಲಿಡಲಿ?" ಎಂದು ಕೇಳಲು, ಮಾಯೂಸಾಹೇಬರು ತುಳಸೀಕಟ್ಟೆಯ ಒಂದು ಮೂಲೆಯ ಕಡೆಗೆ ಬೊಟ್ಟು ತೋರಿಸಿ, ಅಲ್ಲಿಡಲಿಕ್ಕೆ ಸಂಜ್ಞೆ ಮಾಡಿದರು. ಅವಳು ಅಲ್ಲಿ ಅದನ್ನಿರಿಸಿ, ಗಾಳಿಗೆ ಹಾರಿ ಹೋಗಬಾರದೆಂದು ಅದರ ಮೇಲೊಂದು ಕಲ್ಲಿಟ್ಟು ಹೋದಳು. ಮಾಯೂಸಾಹೇಬರ ಇನ್ನೂ ಹತ್ತು ಪ್ರದಕ್ಷಿಣೆಗಳುಳಿದಿದ್ದವು. ಅದರಿಂದ ಅವರು ಆ ಪತ್ರವನ್ನೆತ್ತಿಕೊಳ್ಳಲಿಲ್ಲ; ಆದರೆ ಅವರಿಗೆ ಆ ಪತ್ರದ ಬಗ್ಗೆ ಬಹು ಆಶ್ಚರ್ಯವುಂಟಾದ್ದರಿಂದ, ಪ್ರದಕ್ಷಿಣೆ ಮಾಡ ಮಾಡುತ್ತ ಅವರು ಆ ಪತ್ರವಿದ್ದ ಕಡೆಗೆ ಬಂದರೆಂದರೆ ಅಲ್ಲಿ ಅತ್ಯಲ್ಪ ಕಾಲ ನಿಂತು, ಅದರ ಕಡೆಗೆ ದಿಟ್ಟಿಸಿ ನೋಡಿಯೇ ಮುಂದೆ ಸಾಗುತ್ತಿದ್ದರು. ಪ್ರದಕ್ಷಿಣೆಗಳು ಮುಗಿದ ಕೂಡಲೆ ಅವರ ಆತ್ಮಸಂಯಮನವು ಸಡಿಲಿತು. ಕೂಡಲೆ ಅವರು ಸೂರ್ಯನಿಗೆ ಅರ್ಘ್ಯಕೊಟ್ಟು, ಹೂವೇರಿಸಿದರು; ಆಚಮನ ಮಾಡಿ ಕಣ್ಣಿಗೆ ನೀರು ಹಚ್ಚಿಕೊಂಡರು; ಮತ್ತು ಅವಸರದಿಂದ ಪೂಜಾಸಾಮಗ್ರಿಗಳನ್ನೆಲ್ಲ ತಬಕದಲ್ಲಿ ತುಂಬಿಟ್ಟು ಭರ್ರನೆ ಪತ್ರವನ್ನು ತಕ್ಕೊಂಡರು. ಆ ಪತ್ರದ ಮೇಲಿನ ವಿಳಾಸ ಓದಲಿಕ್ಕೆ ಕೆಲ ವೇಳೆಯು ಹತ್ತಿತು; ಆದರೆ ಪ್ರತ್ಯಕ್ಷ ವಸ್ತುಜ್ಞಾನವೇ ಆಗುತ್ತಿರುವಾಗ ತರ್ಕವೇತಕ್ಕೆ? ಹೀಗೆಂದೆನಿಸಲು, ಅವರು ನಿಂತು ನಿಂತಿರಲಿಕ್ಕೇ ಆ ಪಾಕೀಟನ್ನು ಹರಿದರು; ಮತ್ತು ಒಳಗಿನ ಕಾಗದವನ್ನು ತಿರುತಿರುವಿ ನೋಡಿದರು. ಅದರಿಂದ ಅವರ ಸರ್ವಾಂಗಕ್ಕೆ ಧಕ್ಕೆ ಹತ್ತಿದಂತಾಯಿತು. ಆಗ ಅವರು ಆ ಕಾಗದವನ್ನು ಮತ್ತೆ ಮತ್ತೆ ಮೊದಲಿನಿಂದ ಓದಿ ಮುಗಿಸಿದರು. ಇಷ್ಟರಲ್ಲಿ ಭಾವೂಸಾಹೇಬರ ದನಿಯು ಕೇಳಿಸಿದಂತಾಗಲು, ಅವರು ಆ ಪತ್ರವನ್ನು ಉಡಿಯಲ್ಲೇ ಮುಚ್ಚಿಕೊಂಡರು; ಮತ್ತು ಪೂಜಾ ಸಾಮಗ್ರಿಗಳನ್ನೆಲ್ಲ ತಕ್ಕೊಂಡು ಮನೆಯೊಳಗೆ ಹೊಕ್ಕರು

ಭಾವೂಸಾಹೇಬರು ಅವರ ಹಿಂದೆಯೇ ಹಿತ್ತಲಲ್ಲಿ ಬಂದರು. ಈ ಮೊದಲು ಅವರು ಅಡಿಗೆಮನೆ, ನಡುಮನೆಗಳಲ್ಲಿ ತಮ್ಮ ಹೆಂಡತಿಯನ್ನು ಶೋಧಮಾಡಿದ್ದರು; ಆದರೆ ಅಲ್ಲೆಲ್ಲಿಯೂ ಸಿಗದ್ದರಿಂದ ಅವರು ಹಿತ್ತಲಿಗೆ ಬಂದರು; ಅಷ್ಟರಲ್ಲಿ ಮಾಯೂಸಾಹೇಬರು ಸಮೀಪದ ಬೇರೆ ಬಾಗಿಲಿನಿಂದ ಒಳಹೊಕ್ಕರು. ಅದರಿಂದ ಭಾವೂಸಾಹೇಬರು ಮತ್ತೆ ಅವರ ಬೆನ್ನುಹತ್ತಿದರು. ಕಡೆಗೆ ಭಾವೂಸಾಹೇಬರಿಗೆ ಮಾಯೂಸಾಹೇಬರು ತಮ್ಮ ಖಾಸ ಕೋಣೆಯಲ್ಲಿ ಕುಳಿತಿರುವಾಗ ಭೆಟ್ಟಿಯಾದರು. ಯಾವುದೊಂದು ಗುಪ್ತ ಮತ್ತು ಆಶ್ಚರ್ಯಜನಕವಾದ ಸಂಗತಿಯ ಸ್ಫೋಟವನ್ನು ತಮ್ಮತಮ್ಮೊಳಗೆ ಮಾಡಬೇಕಾಗಿದ್ದಾಗ ಇಬ್ಬರ ಸ್ಥಿತಿಯು ಹೇಗಾಗುತ್ತದೋ ಅದೇ ಸ್ಥಿತಿಯು ಭಾವೂಸಾಹೇಬ-ಮಾಯೂಸಾಹೇಬರದಾಯಿತು. ಭಾವೂಸಾಹೇ

ಬರು ಮನಸ್ಸಿನಲ್ಲಿ ಕೋಪಗೊಂಡಿದ್ದರು; ಆದರೂ ಆ ಪತ್ರದ ಸಂಗತಿಯನ್ನು ಯುಕ್ತಿ-ಪ್ರಯುಕ್ತಿಗಳಿಂದ ಹೊರಹೊರಡಿಸಿಕೊಳ್ಳಬೇಕಾದ್ದರಿಂದ, ಅವರು ತಾವೊಳ್ಳೇ ಖುಷಿಯಲ್ಲಿರುವಂತೆ ತಮ್ಮ ಮುಖಚರ್ಯದಿಂದ ತೋರಿಸುತ್ತಿದ್ದರು. ಮಾಯಿಸಾಹೇಬರಿಗೆ ತಾವು ಕೇವಲ ನಿರಪರಾಧಿಗಳಿರುವೆವೆಂಬ ಖಾತ್ರಿಯಿದ್ದಿತು. ಆದರೆ ಅವರಿಗೆ ಏನೋ ಒಂದು ಗುಪ್ತವಿರಸಬೇಕಾದ್ದರಿಂದ, ಕಪಟದ ನಾಚಿಕೆಯು ಕಳೆಯು ಅವರ ಮೋರೆಯ ಮೇಲೆ ಬಂದಿತ್ತು. ಮಾಯಿಸಾಹೇಬರ ಆ ಖಾಸ ಕೋಣೆಗೆ ಸಹಸಾ ಎಂದೂ ಬಾರದಿದ್ದ ಭಾವೂಸಾಹೇಬರು ಇಂದು ಬಂದಿದ್ದರು; ಆದರೆ ಮಾಯಿಸಾಹೇಬರಿಗೆ ಅವರಿಗೆ ಕೂಡ್ರಲಿಕ್ಕೆ ಖುರ್ಚಿಯನ್ನು ಮುಂದಿರಿಸಬೇಕೆಂದೆನಿಸಲಿಲ್ಲ. ಯಾಕಂದರೆ ಅವರನ್ನು ಅಲ್ಲಿ ಕೂಡ್ರಿಸಿಕೊಳ್ಳುವ ಇಚ್ಛೆಯೇ ಆಗ ಅವರಿಗಿರಲಿಲ್ಲ. ಆದರಿಂದ ಭಾವೂಸಾಹೇಬರು ತಾವಾಗಿಯೇ ಖುರ್ಚಿಯನ್ನು ಜಗ್ಗಿಕೊಂಡು ಕುಳಿತರು; ಮತ್ತು ಸಂಭಾಷಣಕ್ಕಾರಂಭಿಸಿದರು:

ಭಾ:—ತುಳಸಿಯ ಪ್ರದಕ್ಷಿಣೆಗಳು ಪೂರೈಸಿದವೇ?

ಮಾ:—ಪೂರೈಸದೇನು ಮಾಡಿಯಾವು?

ಭಾ:—ಅಲ್ಲಾ ಅಂದೆ, ಏನಾದರೂ ಸ್ವಲ್ಪ ನಡುವೆ ವಿಘ್ನಬಂದಿರಬೇಕೆಂದೆನಿಸಿತು; ಅಂತೆಯೇ ಕೇಳಿದೆನಿಷ್ಟೇ?

ಮಾ:— ಛೇ! ವಿಘ್ನವೆಂತಹದು? ಮತ್ತು ನಾನು ಪ್ರದಕ್ಷಿಣೆಗಳನ್ನಾದರೂ ಎಲ್ಲಿ ನೂರಿನ್ನೂರು ಹಾಕುತ್ತೇನೆ? ತೀರ ಹೆಚ್ಚೆಂದರೆ ಐವತ್ತೇ.

ಭಾ:—ನಿನ್ನ ಪತ್ರವೊಂದನ್ನು ಪೋಷ್ಟಮನ್ನನು ತಂದುಕೊಟ್ಟನೆಂದು ದೌಲತನಂದದ್ದನ್ನು ಕೇಳಿದೆನು. ನಿಜವಾಗಿಯೂ ನಿನಗೆ ಪತ್ರಬಂದಿದೆಯೇ? ಯಾವಾಗ ಬಂತು? ಎಲ್ಲಿಂದ ಬಂತು? ಯಾರಿಂದ ಬಂತು? ಅದರಲ್ಲೇನು ಬರದಿದೆ? ಮುಂತಾದ ಭಾವೂಸಾಹೇಬರ ಪ್ರಶ್ನೆಗಳ ಸುರಿಮಳೆಯಿಂದ ಪಾಪ! ಆ ಹೆಣ್ಣುಮಗಳು ಏನು ಹೇಳಬೇಕೆಂಬದನ್ನು ಮುಂದುಗಾಣದಾದಳು. ಅವಳ ಬಾಯಿಂದ ಉತ್ತರವೇ ಹೊರಡದಾಯಿತು. ಅಷ್ಟರಲ್ಲಿ ಭಾವೂಸಾಹೇಬರು ಬೇಕಂತ ಧರಿಸಿದ್ದ ಸೌಮ್ಯತನದ ವೇಷವೂ ಕ್ಷಣಾರ್ಧದಲ್ಲಿ ಮಾಯವಾಗಿ ಬಿಟ್ಟಿತು. ಆಗ ಅವರು ಸಿಟ್ಟಿನಿಂದ ಒಮ್ಮೆಲೆ:— ಏಕೆ, ಮಾತನಾಡಲೊಲ್ಲೆ ? ಸೋಜಿಗವೇ ಸರಿ! ನಾನು ಗೋಡೆಗೆ ಕೇಳುತ್ತೇನೇನು? ಅಥವಾ ನಾನು ಮೂರ್ಖನೆಂದು ಕೇಳುತ್ತಿರುವೆನೋ? ನಿನ್ನನ್ನು ಕೇಳಿದ ತಪ್ಪಿಗಾಗಿ ಮೋರೆಯ ಮೇಲೆ ಹೊಡಕೊಳ್ಳುತ್ತೇನೆ-ಬೇಕಾದರೆ?

ಪ್ರಸಂಗವು ಒಮ್ಮೆಲೆ ನಿಕರಕ್ಕೆ ತಲುಪಿದ್ದನ್ನು ಕಂಡು ಮಾಯಿಸಾಹೇಬರು ತೀರ ಮೆತ್ತಗಾಗಿ: ಹೀಗೇಕೆ ಮಾಡುವದದು? ಹೇಳುವದಿಲ್ಲೆಂದು ನಾನೆಂದೆನೇ?

ಭಾ:—ಹೇಳು ಹಾಗಾದರೆ, ಎಲ್ಲಿಯ ಪತ್ರ ಬಂದಿದೆ? ಯಾರು ಬರೆದಿರುವರು? ಅದರಲ್ಲೇನು ಬರೆಯಲ್ಪಟ್ಟಿದೆ!

ಮಾಯಿಸಾಹೇಬರು ಮತ್ತೆ ಸ್ತಬ್ಧರಾದರು. ಹೇಳಬೇಕೆಂದು ಪ್ರಯತ್ನಿಸಿದರು; ಆದರೆ ಏನು ಹೇಳಬೇಕೆಂಬದೇ ಸೂಚಿಸದಾಯಿತು!

ಭಾ:—ಹೇಳುತ್ತೇನೆನ್ನುತ್ತೀ; ಆದರೆ ಹೇಳುವದಿಲ್ಲವಲ್ಲ!

ಮಾ:—ಅದೇಕೆ ಹೇಳುವದಿಲ್ಲ? ಮತ್ತು ಹೇಳದಿರಲಿಕ್ಕಾದರೂ ಕಾರಣವೇನು? ಆದರೆ ಮೊದಲು ನನಗೆ ಇತ್ತ ಕೇಳಬೇಕೆಂದೆನಿಸುವದೇನಂದರೆ, ನನ್ನ ಹೆಸರಿಗೆ ಅಪ್ಪಿ ತಪ್ಪಿ ಯಾವುದೊಂದು ಪತ್ರ ಬಂದರೆ, ಅದಕ್ಕಾಗಿ ಕೂಡಲೆ ಇಷ್ಟು ಗೊಂದಲವನ್ನೇಕೆ ಎಬ್ಬಿಸಬೇಕು? ಇದು ಇತ್ತ ಕಡೆಗೆ ಶೋಭಿಸುವದೇ?

ಭಾ:—ಅದು ಮಾತ್ರ ಶೋಭಿಸುವದಿಲ್ಲ; ಆದರೆ ನಿನಗೆ ಪರಸ್ಪರ ಪತ್ರ ಬರಬೇಕು; ಮತ್ತು ಆ ಬಗ್ಗೆ ನೀನು ನನಗೆ ತಿಳಿಸಬಾರದು. ಇದಾದರೂ ಸರಿದೋರುವದೇ?

ಮಾ:—ಇಶ್ಶ! ಪತ್ರ-ಪತ್ರಗಳೆಂದರೆ ಎಷ್ಟವು? ಇಡಿ ಜನ್ಮದಲ್ಲಿ ಬಂದದ್ದು ಒಂದೇ; ಮತ್ತು ತಮಗೆ ತಿಳಿಸಲಿಲ್ಲೆಂಬದಕ್ಕೆ ಅದೂ ಬಂದು ನಾಲ್ಕೆಂಟು ದಿನಗಳಾಗಿರುವದಿಲ್ಲ. ಇನ್ನು ಅದು ಪರಭಾರೆ ತಲುಪಿದ ಬಗ್ಗೆ ನಾನಾದರೂ ಏನು ಮಾಡಲಿ? ನಾನೇನು ಆ ಪೋಷ್ಟಮನ್ನನಿಗೆ "ಮನೆಯುವರಿಗೆ ತಿಳಿಯದಂತೆ ನನ್ನ ಪತ್ರವನ್ನು ನನಗೇ ತಂದುಕೊಡೆ"ಂದು ಹೇಳ ಹೋಗಿದ್ದೆನೊ?

ಭಾ:--ನೀನು ಹೇಳಹೋಗಿರಲಿಕ್ಕಿಲ್ಲ; ಆದರೆ ಆತನು ಪ್ರತಿನಿತ್ಯವೂ ಮುಂಬಾಗಿಲಿಗೆ ಬರುವವನು, ನಿನ್ನ ಪತ್ರ ಕೊಡುವ ಸಲುವಾಗಿಯೇ ಇಂದೀ ಹಿತ್ತಲ ಬಾಗಿಲಿಗೇಕೆ ಬಂದನು?

ಮಾ:—ಅದನ್ನು ನಾನು ಹೇಗೆ ಹೇಳಲಿ?

ಭಾ:—ಅದೇನೇ ಇರಲಿ. ನಿನಗೆ ಬಂದ ಪತ್ರವು ಖಂಡಿತವಾಗಿಯೂ ಯಾರದು? ಅದರಲ್ಲೇನು ಬರೆದಿದೆ?

ಮಾಯಿಸಾಹೇಬರು ಮತ್ತೆ ಗಾಬರಿಗೊಂಡರು; ಆದರೆ ಅಷ್ಟರಲ್ಲಿ ಅವರಿಗೇನೋ ಹೊಳೆಯಲು, ಅವರು:—ಆ ಪತ್ರವಲ್ಲವೇ? ಅದು ನನ್ನ ದೂರಿನ ಸಂಬಂಧದ ಚಿಕ್ಕಮ್ಮಳೊಬ್ಬಳಿಂದ ಬಂದಿದೆ. ತಿಳಿಯಿತೇ?

ಭಾ:--ಈ ಪತ್ರ ಬರೆಯುವವಳು ದೂರಿನ ಸಂಬಂಧದ ನಿನ್ನ ಹೊಸ ಚಿಕ್ಕಮ್ಮನೇ ಕಾಣುತ್ತಾಳಲ್ಲವೇ?

ಮಾ:—ಹೊಸಬಳೇನೂ ಅಲ್ಲ; ಆದರೆ ಅವಳನ್ನು ತಾವು ನೋಡಿಲ್ಲೆಂಬದೇನೋ ನಿಜವು,

ಭಾ:—ಇರಲಿ. ಅವಳು ಆ ಪತ್ರದಲ್ಲದೇನು ಬರೆದಿರುವಳೆಂಬದನ್ನು ಹೇಳಬಾರದೇ? ಎಂದೂ ಬಾರದ ನಿನಗೆ ಇಂದು ಪತ್ರ ಬಂದದ್ದಕ್ಕಾಗಿಯೇ ನಾನು ಕೌತುಕದಿಂದ ಕೇಳುತ್ತಿರುವೆನಿಷ್ಟೇ.

ಮಾ:—ಬರೆದಿರುವಳು ಕ್ಷೆಮ ಸಮಾಚಾರದ ಸಂಗತಿಯನ್ನು. ಮತ್ತೇನು ಬರೆಯಬೇಕು? ಆಕೆಯು ಅತ್ತ ದೂರ ಭಾಗಾನಗರಕ್ಕೆ ಹೋಗಿ ಬಹಳ ವರ್ಷಗಳಾದವು. ಅದರಿಂದ ಬರೆದಿರುವಳು ಅತ್ತಿತ್ತಣದ ಸಂಗತಿಗಳನ್ನು.

ಭಾ:--ಹೀಗಲ್ಲವೇ? ಇರಲಿ. ಹಾಗಾದರೇನೂ ಮಹತ್ವವಿಲ್ಲ; ಆದರೆ ತೋರಿಸು ನೋಡೋಣ, ಆ ಪತ್ರವನ್ನು. ಅದರಲ್ಲೇನು ಬರೆದಿದೆಯೆಂಬದನ್ನಾದರೂ ನೋಡೋಣ. ಭಾಗಾನಗರವೇ ಅದು! ಹೇಳಿ ಕೇಳಿ ಮೊಗಲಾಯಿಯ ರಾಜಧಾನಿಯದು! ಅಂದ ಮೇಲೆ ಪತ್ರದೊಳಗಿನ ಸಂಗತಿಯಾದರೂ ಒಳ್ಳೇ ಮನೋರಂಜಕವೇ ಆಗಿರಬೇಕು.

ಮಾ:—ಇಶ್ಶ! ಅದರಲ್ಲೇನಿರಬೇಕು? ವೃತ್ತಪತ್ರಗಳೊಳಗಿನ ಸಂಗತಿಗಳಿಗಿಂತ ಅದರಲ್ಲೇನು ಮನೋರಂಜನವಿದ್ದೀತು? ಹಾ! ನೆನಪಾಯಿತು. ತಮ್ಮ ವೃತ್ತಪತ್ರಗಳೂ ಪತ್ರಗಳೂ ಪೋಷ್ಟಮನ್ನನ ಕೈಯಲ್ಲಿದ್ದವು. ದೊರತವೇನು ತಮಗವು?

ಮಾಯಿಸಾಹೇಬರಿಗೆ ತಮ್ಮ ಗಂಡನು ವೃತ್ತಪತ್ರಗಳನ್ನೋದುವ ಚಟವುಳ್ಳವನಿರುವನೆಂಬದು ಚೆನ್ನಾಗಿ ಗೊತ್ತಿತ್ತು. ಆ ಜ್ಞಾನದ ಉಪಯೋಗವನ್ನು ಅವರು ಆಗ ಮಾಡಿಕೊಂಡರು; ಆದರೆ ಅದೇ ಅವರಿಗೆ ತುಸ ಮೈಯ್ಯಡರಿತು. ವೃತ್ತಪತ್ರಗಳ ಉಲ್ಲೇಖ ಮಾಡಿ ತನ್ನ ಮನಸ್ಸನ್ನು ಬೇರೆ ಕಡೆಗೆ ತೊಡಗಿಸುವ ಹೆಂಡತಿಯ ಆ ಪ್ರಯತ್ನವು ಭಾವೂಸಾಹೇಬರಿಗೆ ಹೊಳೆಯಲು, ಯಾರೊಬ್ಬರು ತಮ್ಮ ಮರ್ಮ ತೆಗೆದಂತೆನಿಸಿ, ಭಾವೂಸಾಹೇಬರು ರೇಗಿದರು; ಆಗಲವರು:-ತಿಳಿಯಿತು-ತಿಳಿಯಿತು; ಆದರೆ ಹೀಗೆ ಹೊರದಾರಿ ಹಚ್ಚಬೇಡ. ಏನಾದರೂ ನಾನು ಅನುಭವಿಕ ಪೆನ್‌ಶನ್‌ದಾರನಿರುತ್ತೇನೆ! ನಿನ್ನೀ ಧೋಕಿಸಿಂದ ನಾನೆಂದಿಗೂ ಮೋಸಹೋಗುವವನಲ್ಲ. ಹೂಂ, ಕೊಡು ಆ ಪತ್ರವನ್ನಿತ್ತ. ನೋಡಿಯಾದರೂ ನೋಡೋಣ, ಭಾಗಾನಗರದ ಸಂಗತಿಯೇನಿದೆಯೆಂಬದನ್ನು? ಹೆಂಗಸರಾದರೂ ವರ್ಣನೆಗಳನ್ನು ಒಳ್ಳೇ ಮಾರ್ಮಿಕವಾಗಿಯೂ ಮನೋಹರವಾಗಿಯೂ ಬರೆಯುವಲ್ಲಿ ಬಹು ನಿಷ್ಣಾತರಿರುತ್ತಾರರ್ರೀಪ.

ಇದರಿಂದ ಭಾವೂಸಾಹೇಬರ ಮೇಲೆ ತಿರುಗಿ ಸಿಟ್ಟಾಗುವ ಸುಸಂಧಿಯು ಮಾಯಿಸಾಹೇಬರಿಗೆ ಅನಾಯಾಸದಿಂದಲೇ ಪ್ರಾಪ್ತವಾಯಿತು. ಅವರು ಅದನ್ನು ಸರಿಯಾಗಿ ಉಪಯೋಗಿಸಿಕೊಂಡರು. ಸ್ತ್ರೀಯರ ಶಿಕ್ಷಣದ ಮತ್ತು ಬುದ್ಧಿವಂತಿಕೆಯ ಇಂಥ ಸ್ತುತಿಪರ ವರ್ಣನವು ಎಂದಿಲ್ಲದೆ ಇಂದು ಭಾವೂಸಾಹೇಬರ ಮುಖ

ದಿಂದ ಹೊರಡುವದೆಂದರೆ, ಸ್ತ್ರೀಯರು ಅಜ್ಞಾನಿಗಳೇ ಎಂದಂದು ಅವರ ಮರ್ಮವನ್ನೇ ತೆಗೆದಂತಾಗುವದೆಂದು ಆ ಉಭಯತರ ಮನಸ್ಸಿಗೂ ಸಂಪೂರ್ಣವಾಗಿ ಗೊತ್ತಿತ್ತು. ಅಂತೆಯೇ ಅವರು ಸಿಟ್ಟಿನ ಆವೇಶವನ್ನು ತಂದುಕೊಂಡು:—ಸುಮ್ಮನೆ ಏನನ್ನಾದರೂ ಮಾತನಾಡುವದಿಷ್ಟೇ? ಹೆಂಗಸರ ಓದು-ಬರೆಯುವ ವಿಷಯವು ಮತ್ತಾವಾಗಲಾದರೂ ಹೊರಟಿತೆಂದರೆ, ಬಾಯಿಗೆ ಬಂದ ಹಾಗೆ ಅನ್ನುವದು. ತಮ್ಮ ಇಡಿ ಆಯುಷ್ಯವೇ ಹೆಂಗಸರ ನಿಂದೆ ಮಾಡುವಲ್ಲಿ ಕಳೆಯಿತು; ಹೀಗಿದ್ದು ಇಂದೇ ಎಂದಿಲ್ಲದ ಆ ಕೌತುಕವು ಎಲ್ಲಿಂದ ಬಂದಿತೋ ಅದಾರಿಗೆ ಗೊತ್ತು? ಹೆಂಗಸರು ವರ್ಣನೆ ಮಾಡುವಲ್ಲಿ ಒಳ್ಳೇ ನಿಪುಣರಂತೆ-ಮಾರ್ಮಿಕರಂತೆ! ಬೆಂಕಿಬಿದ್ದಿತು, ಅವರ ನಿಪುಣತನಕ್ಕೂ ಮಾರ್ಮಿಕತನಕ್ಕೂ!

ಭಾವೂಸಾಹೇಬರಿಗೆ ತಮ್ಮ ಮಂತ್ರವು ತಮಗೇ ತಿರುಗಿತೆಂದೆನಿಸಿತು. ಅದರಿಂದ ಅವರು ಮತ್ತೆ ಭೋಳೇಭಾವಿಕತನವನ್ನು ಸ್ವೀಕರಿಸಿದರು; ಮತ್ತು ಮುಖ್ಯ ವಿಷಯಕ್ಕೆ ಪ್ರಾರಂಭಿಸಿ, ಪ್ರಾಂಜಲತನದ ಆವಿರ್ಭಾವದಿಂದ:—ಬಿಡು ಬಿಡು, ಆ ನಮ್ಮ ನಿರಂತರದ ವಾದವನ್ನು; ಆದರೆ ಖಂಡಿತವಾಗಿ ತಿಳಿಸು, ಆ ಪತ್ರದಲ್ಲೇನು ಬರೆದಿದೆಯೆಂಬದನ್ನು.

ಮಾ:—ಆದರೆ ನನಗೆ ಮೊದಲು ತಮ್ಮನ್ನೇ ಕೇಳಬೇಕೆಂದೆನಿಸುವದೇನಂದರೆ, ಒಬ್ಬ ಹೆಣ್ಣುಮಗಳು ಇನ್ನೊಬ್ಬ ಹೆಣ್ಣುಮಗಳಿಗೆ ಬರೆದ ಪತ್ರವದು. ಆ ಬಗ್ಗೆ ಗಂಡಸರು ಲಕ್ಷ್ಯವಿರಿಸದಿದ್ದರೆ ನಡೆಯಲಿಕ್ಕಿಲ್ಲೇನು?

ಭಾ:—ಏನಂದಿ? ನಾನು ಲಕ್ಷ್ಯವಿರಿಸದಿದ್ದರೆ ನಡೆಯುದೇನೆಂದೆಯಾ? ನಡೆದೀತು; ನಡೆಯುದೇನು ಮಾಡೀತು? ಆದರೆ ನಾನು ನಿನಗೆ ತಿರುಗಿ ಕೇಳುವದೇನಂದರೆ, ನಾನು ಅದರಲ್ಲಿ ಲಕ್ಷ್ಯವಿರಿಸಿದರೂ ನಾನೇನು ಪರಕೀಯನಿರುವೆನೆ? ನೀನೇ ಹೇಳು ನೋಡೋಣ. ಆ ಸಂಗತಿಯನ್ನು ನಿನಗೆ ಬಾಯಿಂದ ಹೇಳಲಿಕ್ಕೆ ಬರದಿದ್ದರೆ, ಆ ಪತ್ರವನ್ನೇ ತೋರಿಸು. ನಾನು ಅದನ್ನು ಸಾವಕಾಶವಾಗಿ ಓದಿ, ನಿನಗದರ ಸಂಗತಿಯನ್ನು ತಿಳಿಸುತ್ತೇನೆ.

ಪತ್ರದ ಸಂಗತಿಯನ್ನು ತಿಳಿಸು ತಿಳಿಸು ಅನ್ನುತ್ತ ಕಡೆಗೆ ಪತ್ರವನ್ನೇ ತೋರಿಸುವ ಭಾಗಬಿತ್ತು! ಗಂಡನ ಆ ಸಂಶಯ ಪಿಶಾಚಿಯನ್ನೂ ಉಲುಕೋಚಿತನವನ್ನೂ ಕಂಡು ಮಾಯಿಸಾಹೇಬರಿಗೆ ಪ್ರಾಣಸಂಕಟವೇ ಪ್ರಾಪ್ತವಾಯಿತು. ಆ ಪತ್ರವು ಅಲ್ಲಿಯೇ-ಅವರ ಉಡಲಲ್ಲಿಯೇ ಇತ್ತು; ಆದರೆ ಅದನ್ನು ಹರಿದೊಗೆದೆನೆಂದು ಹೇಳುವ ಧೈರ್ಯದ ಕಲ್ಪನೆಯು ಒಮ್ಮೆಲೆ ಅವರಿಗೆ ಸೂಚಿಸಿತು; ಮತ್ತು ಪ್ರಾಣಸಂಕಟದಲ್ಲಿ ಸ್ತ್ರೀಯರು ಒಳ್ಳೇ ಧೈರ್ಯ ತಾಳುತ್ತಿರುವಂತೆ, ಮಾಯಿಸಾಹೇಬರು ಆ ಬಗೆಯ ಧೈರ್ಯದಿಂದ ಹಾಗೆ ಹೇಳಿಯೂ ಬಿಟ್ಟರು; ಆದರೆ ಆ ಧೈರ್ಯ

ಕ್ಕಾಗಿ ಎಂದೂ ಮಾಡದ ಅತ್ಯಂತ ಕಪಟನಾಟಕವನ್ನು ಅವರು ಅಂದು ಮಾಡಬೇಕಾಯಿತು. ಅವರು ಆಗ ಒಳ್ಳೇ ಮೃದುವಾದ ಹಾಗು ತೀರ ಕರುಣಾಜನಕವಾದ ದನಿಯಿಂದ:—"ತೀರ ಹೀಗೇಕೆ ಮಾಡುವದದು? ಇದು ನೋಡಿರಿ, ನಾನು ಆ ಪತ್ರವನ್ನು ಓದಿ ಹರಿದು ಕೂಡ ಬಿಟ್ಟೆನು. ಅಂಗೈಯುಗಲದ ಒರಿಯು ಕ್ಷೇಮಸಮಾಚಾರದ ಚೀಟಿಯದು. ಓದಿಕೊಂಡ ಬಳಿಕ ಅದನ್ನಿಟ್ಟೇನು ಮಾಡುವದು? ನಾನು ಖಂಡಿತವಾಗಿಯೂ ಹೇಳುತ್ತೇನೆ, ಆಣೆಮಾಡಿ ಬೇಕಾದರೂ ಹೇಳುತ್ತೇನೆ, ಆ ಪತ್ರದಲ್ಲಿ ಭಾಗಾನಗರದ ವರ್ಣನವು ಸ್ವಲ್ಪ ಕೂಡ ಇರಲಿಲ್ಲ. ಅವಳು ಬಹು ದಿನಗಳಿಂದ ಭೆಟ್ಟಿಯಾಗಿರಲಿಲ್ಲ. ಇಷ್ಟೇ ಅಲ್ಲ, ಅವಳು ತೀರಿಕೊಂಡ ಹಾರಿಕೆಯ ಸುದ್ದಿಯನ್ನು ಕೂಡ ನಾನು ಈ ಮೊದಲೇ ಕೇಳಿದ್ದೆನು. ಆ ಸುದ್ದಿಯು ಸುಳ್ಳೆಂದೂ ಬರೆಯುವ ವ್ಯಕ್ತಿಯು ಜೀವಿಸಿರುವದೆಂದೂ ಇಷ್ಟೇ ಆ ಪತ್ರದಿಂದ ತಿಳಿದು ಬರುವಂತಿತ್ತು. ಅದು ತಿಳಿದ ಕೂಡಲೆ ನಾನು ಆ ಪತ್ರವನ್ನು ಹರಿದು ಚೆಲ್ಲಿದೆನು. ತಿಳಿಯಿತೇ? ನಿಜವಾಗಿಯೂ ಹೇಳುತ್ತೇನೆ, ಅದರಲ್ಲಿ ಮತ್ತೇನೂ ಸಂಗತಿಯಿರಲಿಲ್ಲ. ನನಗೇನು ಗೊತ್ತು, ಆ ಪತ್ರವು ತಮಗೆ ಓದಲಿಕ್ಕೆ ಬೇಕೆಂಬದು? ಈಗಲಾದರೂ ಖಾತ್ರಿಯಾಯಿತೇ?" ಎಂದು ಹೇಳಿದರು.

ಭಾವೂ:—ಹೀಗೇನು? ಮೊದಲು ಆಶೆದೋರಿ, ಕಡೆಗೆ ನನ್ನನ್ನು ತೆಗ್ಗಿನಲ್ಲಿ ದೂಡಿಬಿಟ್ಟೆಯಲ್ಲವೇ? ಪತ್ರವನ್ನು ಹರಿದೊಗೆದೆನೆಂದ ಹೇಳಿ ನನ್ನನ್ನು ಮೋಸಪಡಿಸುತ್ತೀಯಾ? ಆದರೆ ಇದು ಒಳಿತಲ್ಲ. ನಾನು ನಗರ ಕೊತವಾಲನ ಕೆಲಸ ಮಾಡಿದವನಿರುತ್ತೇನೆ; ಹತ್ತು ವರ್ಷಗಳ ವರೆಗೆ ಸಾಹೇಬನ ಶಿರಸ್ತೆದಾರನೂ ಆಗಿದ್ದೆನು ಈ ಕಣ್ಣುಮುಚ್ಚಣಿಕೆಯ ಆಟದಿಂದ ನೀನು ನನ್ನನ್ನು ಮೋಸಗೊಳಿಸಲೆತ್ನಿಸಬೇಡ. ಒಳ್ಳೇದು, ನೋಡಿಕೊಂಡೇನು. ಈ ನನ್ನ ಇಳಿವಯಸ್ಸಿನಲ್ಲಿ ನನ್ನೊಡನೆ ಹೀಗೆ ಕಪಟವನ್ನಾಚರಿಸತೊಡಗಿದೆಯಾ? ಒಳ್ಳೇದು, ಒಳ್ಳೇದು....ಎಂದಂದು ಭಾವೂಸಾಹೇಬರು ಮಾಯಿಊಸಾಹೇಬರ ಕೋಣೆಯೊಳಗಿಂದ ಕಾಲನ್ನಪ್ಪಳಿಸುತ್ತ ನೆಟ್ಟಗೆ ಹೊರಬಿದ್ದರು; ಮತ್ತು ಆತ್ಮಗತವಾಗಿಯೇ ಗುಣುಗುಟ್ಟುತ್ತ ಅವರು ಅಟ್ಟದ ದಾರಿಯ ಹಿಡಿದರು. ಆಗ ಮಾಯಿಊಸಾಹೇಬರಿಗೆ ಒಂದು ಕಠಿಣ ಸಂಕಟದಿಂದ ಪಾರಾದಂತೆನಿಸಿತು; ಆದರೆ ಪ್ರತ್ಯಕ್ಷ ಸಂಕಟಪಡುತ್ತಿರುವ ವೇಳೆಗಿಂತ ಸಂಕಟಮುಕ್ತವಾದ ನಂತರವೇ ಮನುಷ್ಯನಿಗೆ ಅಳುಬರುತ್ತಿರುವಂತೆ ಅವರಿಗೂ ಆಗ ಆಯಿತು. ಭಾವೂಸಾಹೇಬರು ದೂರ ಹೋದದ್ದನ್ನು ಕಂಡು, ಅವರು ಕೋಣೆಯ ಬಾಗಿಲವನ್ನಿಕ್ಕಿಕೊಂಡರು. ಖುರ್ಚಿಯ ಮೇಲೆ ಕುಳಿತು ಉಡಿಯೊಳಗಿನ ಪತ್ರ ತೆಗೆದು ನಾಲ್ಕು ನಾಲ್ಕು ಸಾರೆ ಓದಿ ಮುಗಿಸಿದರು; ಮತ್ತು ಕಡೆಗೆ ತಮ್ಮ ಅಳುವು ತಡೆಯದ್ದರಿಂದ, ಅದು ಇನ್ನಾರಿಗೂ ಕೇಳಬಾರದೆಂದು ಬಾಗಿಲಿಗೆ

ಒಳಚಿಲಕ ಹಾಕಿಕೊಂಡು, ಪಲ್ಲಂಗದ ಮೇಲೆ ಅಡ್ಡಾಗಿ, ಎತ್ತರವಾದ ತಲೆಗಿಂಬಿನ ಮೇಲೆ ಮೋರೆಯಿರಿಸಿ ಅಳತೊಡಗಿದರು.

ಇಂದು ಯೋಗಾಯೋಗವು ಒಂದೇಸವನೆ ಅವರ ಬೆನ್ನೇ ಹತ್ತಿಬಿಟ್ಟಿತ್ತು. ಅಶ್ರುಗಳಿಂದ ತೊಯ್ದ ಮಾಯಿೂಸಾಹೇಬರ ಮುಖವು ಇನ್ನೂ ತಲೆಗಿಂಬಿನ ಮೇಲೆಯೇ ಇದ್ದಿತು. ಅಷ್ಟರಲ್ಲಿ:—"ಮಾಯಿೂ, ಏ ಮಾಯಿೂ! ಮಾಯಿೂ! ಅದೆಲ್ಲಿ ಅಡಗಿ ಕುಳಿತಿರುವೆಯವ್ವಾ ಹೀಗೆ ಕಾಣದ ಹಾಗೆ? ಮಾಯಿೂ, ಮನೆಯೆಲ್ಲ ಹುಡುಕಿದರೂ ಸಿಗಲೊಲ್ಲೆಯಲ್ಲ!" ಎಂಬ ಶಬ್ದಗಳಿಂದ ಕೂಗಿದ ಕೂಗು ಮಾಯಿೂಸಾಹೇಬರ ಕಿವಿಗೆ ಕೇಳಿಸಿತು. ಕೂಡಲೆ ಅವರು ಸೆರಗಿನಿಂದ ಕಣ್ಣುಗಳನ್ನೊರಿಸಿಕೊಂಡರು; ಬಳಿಕ ಅವರು 'ಯಾರವರು, ವಿಮಲಾ? ಬಂದೆನವ್ವಾ. ತಡೆ, ಚಿಲಕ ತೆಗೆಯುತ್ತೇನೆ' ಎಂದು ಕೂಗಿಯೇ ಹೇಳಿದರು,

ಇಂಥ ವೇಳೆಯಲ್ಲಿ ಮಾಯಿೂಸಾಹೇಬರು ತಮ್ಮ ಕೂಡ್ರುವ ಕೋಣೆಯಲ್ಲಿ ಒಳಚಿಲಕ ಹಾಕಿಕೊಂಡು ಗುಪ್ತರಾದದ್ದನ್ನು ನೋಡಿ ವಿಮಲೆಗೆನಿಸಿದ ಆಶ್ಚರ್ಯವು ಅವರ ಆಶ್ವಾಸನರೂಪವಾದ ಕೂಗಿನಿಂದಲೂ ಕಡಿಮೆಯಾಗಲಿಲ್ಲ. ಬಾಗಿಲ ತೆರೆದ ಕೂಡಲೆ ಅವಳು ಒಮ್ಮೆಲೆ ಒಳಹೊಕ್ಕು ಪಲ್ಲಂಗದ ಮೇಲೆ ಕುಳಿತಳು; ಮತ್ತು ಮಾಯಿೂಸಾಹೇಬರ ಕೈಯನ್ನು ಗಟ್ಟಿಯಾಗಿ ಹಿಡಿದು ಅವರನ್ನು ತೀರ ತನ್ನ ಹತ್ತಿರದಲ್ಲಿ ಕುಳ್ಳಿರಿಸಿಕೊಂಡಳು. ಮಾಯಿೂಸಾಹೇಬರಿಗೆ ಏನಾದರೂ ಜಡ್ಡಾಗಿರಬಹುದೆಂದು ಅವಳಿಗೆ ಮೊದಲು ಅನಿಸಿತು. ಅದಕ್ಕಾಗಿ ಅವಳು:-ಇಂದು ಮತ್ತೆ ಬವಳಿ ಬರುತ್ತಿತ್ತೇನು? ಎಂದು ಕೇಳಿದಳು. ಅದಕ್ಕೆ ಮಾಯಿೂಸಾಹೇಬರಿಂದ ಉತ್ತರ ದೊರೆಯುವ ಮೊದಲೇ ಅವಳ ದೃಷ್ಟಿಯು ಅವರ ಮುಖದ ಕಡೆಗೆ ಹೊರಳಿತು. ಅದರಿಂದ ಇವರಿಗೆ ಬವಳಿ-ಗಿವಳಿಯೇನೂ ಬಂದಿರದೆ, ಇವರನ್ನು ಅಳಹಚ್ಚುವ ಬೇರೆ ಯಾವದೋ ಒಂದು ಪ್ರಕಾರ ನಡೆದಿರಬೇಕೆಂದು ಅವಳು ಆಗಲೆ ತರ್ಕಿಸಿದಳು; ಹಾಗು ಮಾಯಿೂಸಾಹೇಬರನ್ನು ಪ್ರೇಮಭರದಿಂದ ತಬ್ಬಿಕೊಂಡು:— ಮಾಯಿೂ, ಹೇಳು, ಏನಾಯಿತೆಂಬದನ್ನೆಲ್ಲ ಚೆನ್ನಾಗಿ ಹೇಳು. ಹೀಗೇಕೆ ಮಾಡುತ್ತೀಯೇ? ಅತ್ತುಅತ್ತು ಕಣ್ಣು ಉಬ್ಬಿಹೋಗಿವೆ, ಕಣ್ಣೀರಿನಿಂದ ಸೆರಗು ತೊಯ್ದುಹೋದಂತೆ ಕಾಣುತ್ತದೆ. ಅಪ್ಪನು ನಿನಗೇನಾದರೂ ಕೊಕ್ಕಿ ಮಾತನಾಡಿರಬೇಕೆಂಬದು ಖಂಡಿತವು! ಅವರು ನಿನ್ನನ್ನು ಅವಮಾನಗೊಳಿಸಿರಲಿಕ್ಕೆಬೇಕು. ಅಹುದೋ-ಅಲ್ಲೊ? ನಿನಗೆ ಬವಳಿ ಬಂದಿಲ್ಲ; ಆದರೆ ಅಪ್ಪನಿಗೆ ಮಾತ್ರ ಹುಚ್ಚಿನ ಲಹರಿ ಬಂದಿದೆ! ಅವರ ಸ್ವಭಾವವು ನಿನಗೆ ಚನ್ನಾಗಿ ಗೊತ್ತಿದ್ದು ನೀನು ಹೀಗೇಕೆ ಮಾಡುತ್ತೀ? ಅವರಾದರೂ ಏನು ಮಾಡಿಯಾರು? ಅವರಿಗೆ ಹುಚ್ಚಿನ ಲಹರಿ ಬಂದಿತೆಂದರೆ ಅದು ತಗ್ಗುವದೇ ಕಠಿಣ!" ಹೀಗೆ ಹೇಳಿ ವಿಮಲೆಯು ತಾಯಿಯನ್ನು ಮತ್ತೊಮ್ಮೆ

ಗಟ್ಟಿಯಾಗಿ ತಬ್ಬಿಕೊಂಡಳು.

ಪರಕ್ಷಣದಲ್ಲಿಯೇ ಮಾಯಿಸಾಹೇಬರ ದುಃಖವು ಹಗುರಾಯಿತು; ಮತ್ತು ಅವರು ಶಾಂತಮನಸ್ಸಿನಿಂದ:-"ತಂಗೀ, ನೀನು ತಿಳಿದಿರುವಂತೆ ಇಂದು ಹಾಗೇನೂ ಆಗಿಲ್ಲ. ನನಗೂ ಅವರ ಹುಟ್ಟುಗುಣವು ಗೊತ್ತಾಗಿ ಬಿಟ್ಟಿದೆ; ಅದರಿಂದ ನಾನು ಅವರ ಮಾತನ್ನೇ ಮನಸ್ಸಿಗೆ ಹೆಚ್ಚಾಗಿ ಹಚ್ಚಿಕೊಳ್ಳುವದಿಲ್ಲ; ಆದರೆ ನನಗಿಂದು ಅಳುವೇಕೆ ಬಂದಿತೆಂಬದರ ಕಾರಣವು ಇತ್ತ ನೋಡು ಆನಂದ, ದುಃಖ ಮತ್ತು ಯೋಚನೆಗಳನ್ನು ಒಮ್ಮೆಲೆ ಉಂಟುಮಾಡುವ ಈ ಪತ್ರವನ್ನು. ಇದನ್ನು ಓದಿದರೆ ನಿನಗೆಲ್ಲವೂ ತಿಳಿಯು ಬಂದೀತು" ಹೀಗೆಂದು ಹೇಳಿ, ಒಂದು ಪತ್ರವನ್ನು ವಿಮಲೆಯ ಕೈಗಿತ್ತರು. ಅವಳು ಆ ಪತ್ರವನ್ನು ಓದುತ್ತಿರುವಾಗಲೇ ಅವರು ಮತ್ತೆ: —"ನೀನೇ ಹೇಳು, ಈ ಪತ್ರವನ್ನು ನಾನು ಅವರ ಕೈಗೆ ಒಮ್ಮೆಲೆ ಹೇಗೆ ಕೊಡಲೆಂಬದನ್ನು? ಮತ್ತು ಕೊಡದಿರುವದಾದರೂ ಹೇಗೆ? 'ಒತ್ತಟ್ಟಿಗೆ ಬಾವಿ; ಮತ್ತೊತ್ತಟ್ಟಿಗೆ ಕೆರೆ' ಎಂದೆನ್ನುವಂತೆಯೇ ನನ್ನ ಅವಸ್ಥೆಯಾಯಿತು! ಹುಟ್ಟು ಸ್ವಭಾವದಂತೆ ಅವರು ಬಗೆಬಗೆಯು ಸಂಶಯುಗಳನ್ನು ಕಲ್ಪಿಸಿಕೊಂಡು ನನಗೆ ಬೇಕುಬೇಕಾದ ಹಾಗೆ ಅಂದರು; ಆದರೆ ಆ ಬಾಯಿ ಕಟ್ಟಿ ಗುದ್ದಿದ ಪೆಟ್ಟನ್ನು ನಾನು ಸುಮ್ಮನೆ ಸಹಿಸಿಕೊಂಡೆನು; ಇಷ್ಟೇ ಅಲ್ಲ, ಎಂದೂ ಇಲ್ಲದ ಬಂದಿಷ್ಟು ಕಪಟ-ಮೋಸಗಳನ್ನೂ ಆಚರಿಸಿದೆನು. ಕಡೆಗ ಅದೆಲ್ಲವೂ ಮನಸ್ಸಿಗೆ ಸಹಿಸದ್ದರಿಂದ ಅನಿವಾರ್ಯವಾದ ಅಳುವು ಬಂದಿತು. ನೀನು ಈಗ ಬಂದದ್ದು ವಿಹಿತವೇ ಆಯಿತು. ನನ್ನ ದುಃಖವೆಲ್ಲ ಹಗುರಾಯಿತು. ನನ್ನ ಯೋಚನೆಯು ತೀರಿತು. ನೀನು ಬಳಿಯಲ್ಲಿದ್ದ ಮೇಲೆ ನನಗಾವ ಚಿಂತೆಯೂ ಅನಿಸುವದಿಲ್ಲ" ಎಂದಂದರು. ವಿಮಲೆಯು ತಾಯಿಯ ಆ ಭಾಷಣವನ್ನು ಒಂದು ಕಿವಿಯಿಂದ ಕೇಳುತ್ತಿದ್ದಳು; ಮತ್ತು ತಾನೇ ಗಟ್ಟಿಯಾಗಿ ಓದುತ್ತಿರುವ ಪತ್ರದೊಳಗಿನ ಶಬ್ದಗಳನ್ನು ಇನ್ನೊಂದು ಕಿವಿಯಿಂದ ಆಲಿಸುತ್ತಿದ್ದಳು. ಮಾಯಿಸಾಹೇಬರ ಭಾಷಣವು ಕಟ್ಟಾದ ಕೂಡಲೆ ಅವಳು:—"ಮಾಯಿ, ಈ ಪತ್ರವನ್ನು ಯಾರು ಕಳಿಸಿರುವರೆಂಬದು ನಿನಗೆ ಗೊತ್ತಾಯಿತೇ? ನಿನಗದು ತಿಳಿದೇ ಇದ್ದಿತು; ಆದರೂ ನಾನು ಸುಮ್ಮನೆ ಕೇಳುವೆನು" ಎಂದು ಪ್ರಶ್ನಿಸಿದಳು.

ಮಾ:—ಅಹುದು; ಬಹುತರವಾಗಿ ತಿಳಿದಂತಾಗಿದೆ; ಆದರೆ ನೀನೂ ಅಹುದೆಂದರೆ ನನ್ನ ತರ್ಕವು ಸಟಿಯಾಗುವದು. ಆ ಇಡಿ ಪತ್ರವನ್ನೇ ಒಮ್ಮೆ ಓದು ನೋಡೋಣ. ಹೀಗೆಂದು ಅವರು ಮತ್ತೆ ಬಾಗಿಲವನ್ನಿಕ್ಕಿ, ಒಳ ಚಿಲಕವನ್ನು ಚನ್ನಾಗಿ ಹಾಕಿದರು. ವಿಮಲೆಯು ಆ ಪತ್ರದ ಮಡಿಕೆಗಳನ್ನು ಬಿಚ್ಚಿ ಸರಿಪಡಿಸಿ, ಅದನ್ನು ಓದಲಾರಂಭಿಸಿದಳು. ಆ ಪತ್ರದಲ್ಲಿ—

“ಅವನೇನು ರಾಮನಲ್ಲ; ಆದರೂ ಆತನು ಹನ್ನೆರಡು ವರ್ಷಗಳ ವನವಾಸವನ್ನನುಭವಿಸಿದನು. ನೀನೇನು ಕೈಕೇಯಿಯಲ್ಲ; ಆದರೂ ನಿನ್ನ ಮೇಲೆ ಸವತಿ ಮತ್ಸರದ ಖೊಟ್ಟಿ ಆರೋಪವು ಬಂದಿತು. ರಾಮಚಂದ್ರನು ತನ್ನ ವನವಾಸದ ಕೊನೆಗೆ ಶತ್ರುಗಳ ಸಂಹಾರ ಮಾಡಿದನು; ಅದರಂತೆಯೇ ವನವಾಸವನ್ನನು ಭೋಗಿಸಿದ ಪುಣ್ಯಬಲದಿಂದ ಬೇರೆಯವರಿಗೂ ಮಾಡಲಿಕ್ಕೆ ಈಗ ಕಾಲವು ಅನುಕೂಲವಾಗಿ ಕಾಣುತ್ತದೆ. ಪಾಂಡವರು ಹದಿಮೂರು ವರ್ಷಗಳ ವರೆಗೆ ಮನೆ-ಮಾರುಗಳನ್ನು ತೊರೆದಿದ್ದರು; ಅದಕ್ಕಿಂತ ಹನ್ನೆರಡು ವರ್ಷಗಳು ಕಡಿಮೆಯೇ ಅಲ್ಲವೆ? ತೋರುತ್ತದೇನೋ ಚೆನ್ನಾಗಿ; ಆದರೆ ಕೊನೆಗಾಗುವದೇ ನಿಜವು. ಜೀವಂತರಾಗಿದ್ದರೆ ದರ್ಶನ ಕೊಡುವೆ; ಆಶೀರ್ವಾದವೂ ಲಭಿಸೀತು. ಸಾಧುಗಳು ಅಮಾಸಿಯ ಪರ್ವಣಿಗೇ ದರ್ಶನವೀಯುವರು. ಅನುಸೂಯೆಯೆದುರಿಗೆ ಜಟಾಧಾರಿಯಾದ ದತ್ತಾತ್ರಯನು ಹೋಗಿ ನಿಂತಾಗ, ಅವಳು ಆತನಿಗೇನೂ ಅಂಜಲಿಲ್ಲ.”

ಆ ಪತ್ರವನ್ನು ಒಮ್ಮೆಯೇ ಓದಿ ವಿಮಲೆಗೆ ಸಮಾಧಾನವೆನಿಸಲಿಲ್ಲ. “ಮಾಯಿ, ಕೇಳಿಕೊಂಡೆಯಾ?” ಎಂದು ತಾಯಿಗೆ ಅನ್ನುತ್ತ, ಮತ್ತೊಮ್ಮೆ ಓದಿ, ಅದರಿಂದಲೂ ಸಂಪೂರ್ಣ ಸಮಾಧಾನವಾಗದಿರಲು, ಇನ್ನೊಮ್ಮೆ ಓದಬೇಕು. ಹೀಗೆ ಅವಳು ಹಲವು ಸಾರೆ ಆ ಪತ್ರದ ಪಾರಾಯಣಗಳನ್ನೇ ಮಾಡಿದಳು. ಮಾಯಿ ಸಾಹೇಬರಾದರೂ ಒಮ್ಮೆ ತಿಳಿದಂತೆ, ಮತ್ತೊಮ್ಮೆ ತಿಳಿಯದಿರುವಂತಹ ಹಾವಭಾವಗಳಿಂದ ಆ ಪತ್ರದ ಸಂಗತಿಯನ್ನು ಕೇಳುತ್ತಿದ್ದರು. ಕಡೆಗೆ ವಿಮಲೆಯೇ ಸಂಭಾಷಣಕ್ಕೆ ಪ್ರಾರಂಭಿಸಿದಳು: “ಈ ಪತ್ರವು ಒಂದಿಷ್ಟು ಗೂಢವಿದೆ; ಒಂದಿಷ್ಟು ಸ್ಪಷ್ಟವಿದೆ, ಇದರ ಅಕ್ಷರಗಳೇನೂ ನನ್ನ ಪರಿಚಯದವಿಲ್ಲ; ಆದರೆ ಮಾಯಿ, ಒಳ್ಳೇ ಸುಂದರವಿರುವವಲ್ಲವೆ?”

ಮಾ:—ಆ ಅಕ್ಷರಗಳ ಪರಿಚಯವು ನಿನಗೆ ಹೇಗಿರಬೇಕು? ಆತನು ಫರಾರಿಯಾದಾಗ ನೀನಿನ್ನೂ ಚಿಕ್ಕವಳಿದ್ದೆ; ಆದರೆ ಆ ಅಕ್ಷರಗಳು ನನಗೆ ಚೆನ್ನಾಗಿ ಪರಿಚಿತವಾಗಿರುತ್ತವೆ; ಯಾಕಂದರೆ ನಾನು ಆಗ ಒಳ್ಳೇ ಉತ್ಸಾಹದಿಂದ, ಅದರೆ ಕದ್ದು ಆತನಿಂದ ಓದು-ಬರೆಯಲಿಕ್ಕೆ ಕಲಿಯುತ್ತಿದ್ದೆನು. ಅವನು ನನಗೆ ಬರೆದು ಕೊಡುತ್ತಿದ್ದ ಪಾಠಗಳ ಮೂಲಕ ಆತನ ಅಕ್ಷರಗಳು ನನ್ನ ಕಣ್ಣೆದುರಿಗಿನ್ನೂ ಕಟ್ಟಿದಂತಿರುತ್ತವೆ. ನಾನು ಆಗ ಪ್ರಸ್ತುತದ ನಿನ್ನ ವಯಸ್ಸಿನವಳಿದ್ದೆನು.

ವಿ:—ಮಾಯಿ, ನನಗೆ ನಿನ್ನ ಬಗ್ಗೆ ಅಭಿಮಾನವೆನಿಸುತ್ತದೆ; ಯಾಕಂದರೆ ಆತನು ನಿನ್ನ ವಿಷಯವಾಗಿ ಎಷ್ಟು ಪ್ರೇಮತೋರಿಸಿರುವನೀ ಪತ್ರದಲ್ಲಿ?

ಮಾ:—ನಾವು ಒಂದೇ ವಯಸ್ಸಿನ ತಾಯಿ-ಮಗನ ಜೊತೆಯು; ಮತ್ತು ಮನೆಯ ಯಜಮಾನರ ಒಂದು ಮಾದರಿಯ ಸಿಟ್ಟಿನ ಸ್ವಭಾವದ ಮೂಲಕ ಪ್ರಭಾ

ಕರನದು ನನಗೆ ಬಹು ದೊಡ್ಡ ಆಧಾರವೆನಿಸುತ್ತಿತ್ತು!

ವಿ:—ಹಾಗಾದರೆ ನಿನ್ನ ಮೇಲೆ ಸವತಿ ಮತ್ಸರದ ಖೊಟ್ಟಿ ಆರೋಪ ಬಂದಿತೆಂದು ಪತ್ರದಲ್ಲಿ ಬರೆದ ಸಂಗತಿಯು ಅರ್ಥರಹಿತವಾದದ್ದೇನು?

ಮಾ:—ಅದು ಆತನ ದೊಡ್ಡಿಸ್ತಿಕೆಯೇ! ಮಾಡು-ಮಟ್ಟುವ ವಯಸ್ಸಿಗೆ ಬಂದ ಮಗನು ಮಲತಾಯಿಯು ಮೇಲೆ ನಿಜತಾಯಿಯಂತೆ ಪ್ರೇಮ ಮಾಡುವದು ಅವಳಿಗಿಂತ ಆತನ ಸುಗುಣವನ್ನೇ ವ್ಯಕ್ತಪಡಿಸುವದು. ನಿನ್ನನ್ನು ಕೂಡ ಆತನು ಹೆಚ್ಚಾಗಿ ಪ್ರೀತಿಸುತ್ತಿದ್ದನೆಂಬದು ನನಗೆ ಗೊತ್ತಿದೆ; ಆದರೆ ಆತನ ಹೆಚ್ಚು ವೇಳೆಯು ಮನೆಗೆಲಸಗಳಿಗಿಂತ ಹೆರವರ ಕೆಲಸಗಳಿಗಾಗಿಯೇ ವಿನಿಯೋಗವಾಗುತ್ತಿತ್ತು; ಮೇಲಾಗಿ ಆತನ ವೃತ್ತಿಯು ಬಳ್ಳೇ ಗಂಭೀರವಾದದ್ದು. ಅದರಿಂದ ಅವನು ಹುಡುಗರ ಹಾಗೆ ಹೆಚ್ಚು ಕಾಲವನ್ನು ಒಂದೇ ಕೆಲಸದಲ್ಲಿ ಕಳೆಯುತ್ತಿರಲಿಲ್ಲ. ಪ್ರಭಾಕರನಿಗೆ ನಿನ್ನ ನೆನಪಿದ್ದರೂ ಅಂಥ ನಿಕಟ ಸಂಬಂಧವಿರಲಿಲ್ಲ. ಆದರಿಂದ ಆತನು ನಿನ್ನ ಬಗ್ಗೆ ಪತ್ರದಲ್ಲಿ ಉಲ್ಲೇಖಿಸಿರುವದಿಲ್ಲ; ಆದರೆ ಈಗಂತೂ ನೀನು ಆತನನ್ನು ಬುದ್ಧಿವಂತಿಕೆಯಲ್ಲಿ, ವಿದ್ಯೆಯಲ್ಲಿ, ಪರೋಪಕಾರದಲ್ಲಿ ಮತ್ತು ಜನರ ಕಾರಭಾರದಲ್ಲಿ ಪರಾಭವಗೊಳಿಸಿರುತ್ತೀ. ನಾಳೆ ಆತನು ಹಿಂದಿರುಗಿ ಬಂದನೆಂದರೆ, ಮತ್ತು ಮಿಕ್ಕ ಪೇಚುಗಳ ನಿವಾರಣವಾದರೆ ನೋಡೀಯಂತೆ, ಆತನು ನಿನ್ನ ವಿಷಯವಾಗಿ ಎಷ್ಟು ಕೌತುಕಪಟ್ಟಾನೆಂಬದನ್ನು! ಆತನಿಗೆ ನಿನ್ನ ಬಗ್ಗೆ ಎಷ್ಟು ಅಭಿಮಾನವೆನಿಸೀತಂದಿ? ಆದರೆ ನನಗೆ ಆತನ ಆಗಮನದ ಬಗ್ಗೆ ಒಂದು ಬಗೆಯ ಅಂಜಿಕೆಯೇ ಅನಿಸುತ್ತದೆ.

ವಿ:—ಮಾಯಿ, ನಾವಿನ್ನು ಮುಂದಿನ ಉದ್ಯೋಗಕ್ಕೆ ತೊಡಗಬೇಕು. ಆತನು ಬಹುಶಃ ನಾಳಿನ ಅಮಾಸಿಯ ರಾತ್ರಿಯೇ ಬರಬಹುದೆಂದು ಆತನ ಪತ್ರದಿಂದ ತಿಳಿಯುತ್ತದೆ. ತಾನು ಯಾವ ವೇಷದಿಂದ ಬರುತ್ತೇನೆಂಬ ಸೂಚನೆಯನ್ನು ಕೂಡ ಅವನು ತನ್ನ ಪತ್ರದಲ್ಲಿ ಉಲ್ಲೇಖಿಸಿದ್ದಾನೆ. ವಿಹಿತವಾಯಿತು. ಒಮ್ಮೆಲೆ ಯಾರಿಗೂ ಗುರ್ತಾಗದಿರಲಿಕ್ಕೆ ಇಂಥ ಯುಕ್ತಿಯೇ ಬೇಕು; ಆದರೆ ಬಂದ ಮೇಲೆ ಆತನು ತೀವ್ರವೇ ಪ್ರಕಟವಾಗದಿರಲಾರನೆಂಬಂತೆ ತೋರುತ್ತದೆ. ವನವಾಸಕ್ಕೆ ಬೇಸತ್ತಿದ್ದಾನು. ಬೇಸರಿಯುದೇನು? ಅಂತೆಯೇ ಪ್ರಕಟನಾಗಿ ನೋಕ್ಷವೋ ಮೋಕ್ಷವೋ ಎಂಬದನ್ನು ಚೆನ್ನಾಗಿ ತಿಳಕೊಳ್ಳುವದನ್ನು ಆತನು ನಿಶ್ಚಯಿಸಿರಬಹುದಾಗಿದೆ. ಮಾಯಿ, ಆತನ ಆತ್ಮವಿಶ್ವಾಸವು ಖಂಬೀರವಿರುವಂತೆ ತೋರುವದಲ್ಲವೆ?

ಮಾ:—ಆತನು ಹಾಗೆಯೇ ಗಟ್ಟಿಮಸ್ಸಿನವನಿದ್ದನು-ಇರುವನು. ಹನ್ನೆರಡು ವರ್ಷಗಳ ಹಿಂದೆ ದೊಡ್ಡ ಪ್ರಕರಣವಾಯಿತು. ನಮ್ಮ ಪ್ರಭಾಕರನು ಒಂದು ದಿನ ಅಕಸ್ಮಾತ್ತಾಗಿ ಕಾಣದಾದನು, ನಾನು ಆಗ ಚಿಕ್ಕವಳೇ ಆಗಿದ್ದೆನು,

ಅದೆಲ್ಲವನ್ನು ಕಂಡು ಗಾಬರಿಗೊಂಡೆನು. ಮುಂದೊಂದು ದಿವಸ ಸರಕಾರದವರು ಆತನಿಗೆ ಕರಿನೀರಿನ ಶಿಕ್ಷೆಯನ್ನು ಆತನ ಗೈರಹಾಜರಿಯಲ್ಲೇ ಕೊಟ್ಟರೆಂದು ಕೇಳಿದೆನು. ಕರಿನೀರಿನ ಶಿಕ್ಷೆಯೆಂದರೇನೆಂಬದು ಕೂಡ ಆಗ ನನಗೆ ತಿಳಿಯುತ್ತಿರಲಿಲ್ಲ! ಆದರೆ ಪ್ರಭಾಕರನು ಇನ್ನು ತಿರುಗಿ ಬರಲಾರನು, ಭೆಟ್ಟಿಯಾಗಲಾರನೆಂಬದನ್ನು ಕೇಳಿ ನಾಲ್ಕೆಂಟು ದಿನಗಳ ವರೆಗೆ ನಾನು ಅಹೋರಾತ್ರಿ ಒಂದೇಸವನೆ ಅಳುತ್ತಿದ್ದೆನು; ಆಗ ಅಳುವದನ್ನಾದರೂ ಕದ್ದೇ ಅಳಬೇಕಾಗುತ್ತಿತ್ತೇ ಹುಡುಗೀ! ಬಹಿರಂಗದಲ್ಲಿ ಅಳುವದಕ್ಕೆ ಕೂಡ ನಿನ್ನ ಜನಕರ ಭೀತಿಯೆನಿಸುತ್ತಿತ್ತವ್ವಾ.

ವಿ:—ಹಾಗಾದರೆ ಈಗೇನೊಳ್ಳೇ ದಿಟ್ಟಳಾಗಿರುವೆಯೇನು? ನಾನು ಆಗಲೆ ಬಂದಾಗ ಹಾಗೆಯೇ ಅಪ್ಪನಿಗಂಜಿ ಬಾಗಿಲಿಕ್ಕಿಕೊಂಡು ಕೋಣೆಯಲ್ಲಳುತ್ತಿದ್ದಿಲ್ಲವೇ?

ಮಾ:—ತಂಗೀ, ಇದುವರೆಗೆ ಹೀಗೆ ಅಂಜಿ ನಡೆದೆನಂತೇ ಇಷ್ಟು ದಿನಗಳು ಮರ್ಯಾದೆಯಿಂದ ಪಾರಾದವು. ನಿನ್ನ ಮಾತೇ ಬೇರೆಯಾಗಿದೆ. ನೀನು ಅವರ ಮಗಳು; ನಾನು ಹೆಂಡತಿಯು! ನಿನ್ನ ಮೇಲೆ ಅವರ ಅಂತಹ ಪುತ್ರವಾತ್ಸಲ್ಯವೇ ಇದೆ. ಮೇಲಾಗಿ ನೀನು ಕಲಿತವಳು; ಬುದ್ಧಿವಂತಳು! ಸಭೆಯೊಳಗೆ ಹೋಗಿ ಮಾತನಾಡುವವಳು, ಜಗಳಾಡುವವಳು. ಇಂಥವಳು ಇವರಿಗೆ ಹೆದರುವೆಯಾ? ಆದರೆ ತಂಗೀ, ನಾನು ನಿನ್ನನ್ನು ಸರಿಗಟ್ಟಲಾರೆನವ್ವಾ. ದೇವರು ನಿನಗೆ ಹೀಗೆಯೇ ಧೈರ್ಯ ಬುದ್ಧಿವಂತಿಕೆಗಳನ್ನು ದಯಪಾಲಿಸಿ ಬೆಳಿಸಲಿ! ಪ್ರಭಾಕರನು ಹೊರಟು ಹೋಗಿದ್ದರೂ ನಿನ್ನ ಆಧಾರದ ಮೇಲೆಯೇ ನಾನು ಈ ಮನೆಯಲ್ಲಿ ದಿನಗಳನ್ನು ಕಳೆಯುತ್ತಿರುವೆನು. ನನಗೆ ನನ್ನ ತವರು ಮನೆಯಿಲ್ಲ. ನೀನೇ ಅತ್ತಕಡೆಯು ಬಳಗದಂತೆ ನನಗೆ ತೋರುತ್ತೀ. ಇಂದಿನದೇ ನೋಡು, ಪ್ರಭಾಕರನ ಈ ಪತ್ರವು ಹೀಗೆ ಬರಲಿಕ್ಕೂ, ನೀನು ಈಗಲೆ ಬರಲಿಕ್ಕೂ ಗಂಟೇಬಿದ್ದಿತು. ಅದನ್ನು ದೇವರೇ ಕೂಡಿಸಿಕೊಟ್ಟನು. ನೀನು ಬರದಿದ್ದರೆ ನಾನು ಗಾಬರಿಗೊಳ್ಳುತ್ತಿದ್ದೆನು; ಮತ್ತು ಹಾಗಾದಾಗ ಅಳುವುದರ ಹೊರತು ನನಗೆ ಬೇರೆ ಏನೂ ತೋಚುವುದಿಲ್ಲ; ಆದರೆ ಈಗ ನೀನೇ ಬಂದಿರುವಿಯಾದ್ದರಿಂದ ನೀನು ಇದೆಲ್ಲವನ್ನೂ ನೀಗಿಸುವೆ; ಸಂಬಾಳಿಸುವೆ.

ಬಳಿಕ ವಿಮಲೆಯು ತಾಯಿಯನ್ನು ಮತ್ತೊಮ್ಮೆ ಬಿಗಿದಪ್ಪಿ:—ಮಾಯಿ, ಹಾಗಾದರೆ ಪ್ರಭಾಕರಣ್ಣನು ನಿನ್ನಂತೆಯೇ ನನಗೂ ಹನ್ನೆರಡು ವರ್ಷಗಳ ಮೇಲೆಯೇ ಕಾಣುವನು! ಆದರೆ ಆತನಿನ್ನೂ ಪ್ರಾಣಸಂಕಟದಲ್ಲಿರುವನೆಂದರೂ ಸಲ್ಲಬಹುದು. ನಾವು ಹೆಣ್ಣುಮಕ್ಕಳಾದರೂ ಅವನಿಗೆ ಧೈರ್ಯಕೊಟ್ಟು, ಸಂಕಟದಿಂದ ಪಾರಾಗುವ ಯುಕ್ತಿಯನ್ನು ಸೂಚಿಸಬಹುದು; ಮತ್ತು ನಿನಗನಿಸುತ್ತಿರು

ವಂತೆ ಅಪ್ಪನು ನನ್ನದೇನಾದರೂ ಕೇಳಿಕೊಳ್ಳುವ ಸಂಭವವಿದ್ದರೆ, ಅತ್ತಕಡೆಯಿಂದಲೂ ಏನಾದರೂ ಮಾಡಬಂದರೊಳ್ಳೇದೇ ಅಲ್ಲವೆ? ನಡೆ ಹಾಗಾದರಿನ್ನು. ನಾವು ಅತ್ತ ಸಹಜ ಹೋದ ಹಾಗೆ ಮಾಡಿ ಹಿತ್ತಲದೊಳಗೆ ಹೋಗೋಣ; ಹಾಗು ಅಲ್ಲಿಯ ಚಿಕ್ಕ ಕೋಣೆಯ ನೆಲಮನೆಯೊಳಗಿನ ಸ್ಥಳವು ಹೇಗಿರುತ್ತದೆಂಬದನ್ನು ನೋಡಿ ಬರೋಣ. ಅದೇ ಅವನಿಗೊಳ್ಳೇ ಬಂದೋಬಸ್ತಿನ ಸ್ಥಳವಿದೆ. ಅದನ್ನು ಚೆನ್ನಾಗಿ ಉಡುಗಿ ಸಾರಿಸಿಟ್ಟರೆ, ಆತನು ಬಂದನೆಂದರೆ ಕೂಡ್ರಲಿಕ್ಕೂ ಮಲಗಲಿಕ್ಕೂ ಅವನಿಗನುಕೂಲ ಸ್ಥಳವಾದೀತು.

ಬಳಿಕ ಅವರಿಬ್ಬರೂ ಆ ಕೋಣೆಯಿಂದ ಹೊರಬಿದ್ದರು; ಮತ್ತು ಪ್ರಭಾಕರನ ಸ್ವಾಗತದ ಸಿದ್ಧತೆಗೆ ತೊಡಗಿದರು.

---

## ೬ ತಂದೆ-ಮಗಳ ಪ್ರೇಮಕಲಹ.

ಬಿಡುವಿದ್ದಾಗೆಲ್ಲ ಭಾವೂಸಾಹೇಬರು ಚಿರೂಟ ಸೇದುತ್ತ ಕೂಡ್ರುತ್ತಿದ್ದರು, ಓದಲಿಕ್ಕೆ ವೃತ್ತಪತ್ರಗಳಿರದಿದ್ದರಂತೂ ಅವರು ಬೇರೆ ಏನೂ ಮಾಡದೆ, ಬರಿಯ ಚಿರೂಟ ಸೇದುತ್ತ ತಾಸುಗಟ್ಲೆ ಲೋಡಿಗಾತು ಸ್ವಸ್ಥವಾಗಿ ಕುಳಿತು ಬಿಡುತ್ತಿದ್ದರು. ಇದರಂತೆಯೇ ಇಂದು ಅವರು ಕುಳಿತಿರಲು, ವಿಮಲೆಯು ಅಲ್ಲಿಗೆ ಹೋದಳು. ಅದರಿಂದ ಅವರಿಗೆ ಬಹು ಸಂತೋಷವೆನಿಸಿತು. ಕೂಡಲೆ ಅವರು ತಮ್ಮ ಕೈಯೊಳಗಿನ ಚಿರೂಟನ್ನು ಎಸೆದು ಬಿಟ್ಟರು; ಮತ್ತು ಕೈ ಹಿಡಿದು ಅವಳನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು. ತೀರ ದುರ್ನಡತೆಯ ಮನುಷ್ಯರಲ್ಲಿಯೂ ಕೆಲ ಲೋಕೋತ್ತರ ಗುಣಗಳಿರುತ್ತಿರುವದರಿಂದ, ಆ ಗುಣಕ್ಕಾಗಿಯೇ ಲೋಕದವರು ಅವರೊಳಗಿನ ದೋಷಗಳನ್ನೆಲ್ಲ ಮರೆತು ಬಿಟ್ಟು, ಅವರನ್ನು ಪ್ರೀತಿಸುವರು. ನಮ್ಮ ಭಾವೂಸಾಹೇಬರಲ್ಲಾದರೂ ತಮ್ಮ ಮಗಳ ವಿಷಯದ ಪ್ರೇಮವು ಲೋಕೋತ್ತರವೇ ಆದುದರಿಂದ, ಅವರಲ್ಲಿಯ ಲೋಭ, ಸಂಶಯ, ಭೋಳೇಭಾವಿಕತನ ಮತ್ತು ಕೇವಲ ದುರಾಗ್ರಹ ಮುಂ-ತಾದ ದುರ್ಗುಣಗಳ ಬಗ್ಗೆ ಅವರನ್ನು ಎಲ್ಲರೂ ಕ್ಷಮಿಸಬಹುದಾಗಿತ್ತು. ವಿಮಲೆಗೆ ಜನ್ಮಕೊಟ್ಟ ತಾಯಿಯು ಗತಿಸಿದಂದಿನಿಂದ ಅವರು ಅವಳನ್ನೊಳ್ಳೇ ಸುಖ-ಸಮಾಧಾನದಲ್ಲಿಟ್ಟಿದ್ದರು. ಆಕೆಯು ಬೇಡಿಬೇಡಿದ್ದನ್ನಂತೂ ಅವರು ಕೊಟ್ಟೇ ಕೊಡುತ್ತಿದ್ದರು; ಅಲ್ಲದೆ, ತಾವೂ ಬೇಕಂತ ನೆನಿನೆನಿಸಿ ಸೂಚಿಸಿ ಅವಳ ಅಚ್ಛೆಯನ್ನು ಪೂರೈಸುತ್ತಿದ್ದರು. ಅವಳಿಗಾಗಿ ಎಷ್ಟು ದುಡ್ಡು ಖರ್ಚುಮಾಡಬೇಕೆಂಬದರ ಲೆಕ್ಕವೇ ಅವರಲ್ಲಿರಲಿಲ್ಲ. ಚಿಕ್ಕಂದಿನಲ್ಲಿ ಮನೆಯಲ್ಲೇ ಶಿಕ್ಷಕರನ್ನಿಟ್ಟು ಅವಳಿಗೆ ಶಿಕ್ಷಣ ಕೊಡಿಸಿದ್ದರು; ಅಲ್ಲದೆ, ಸ್ವಂತದ ಶಿಕ್ಷಣವನ್ನು ನಿಲ್ಲಿಸಿ 'ಶಾರದಾ ಮಠ'

ಎಂಬ ಹೆಸರಿನ ಬಾಲಕಿಯರ ಶಿಕ್ಷಣಸಂಸ್ಥೆ ತೆರೆಯುವದನ್ನವಳು ಗೊತ್ತು ಮಾಡಲು, ಅವರು ಆ ಮಠಕ್ಕೆ ಸ್ಥಳಕೊಡುವದೇ ಮೊದಲು ಮಾಡಿಕೊಂಡು, ಎಲ್ಲ ಖರ್ಚನ್ನು ತಾವೇ ವಹಿಸಿ, ಅದಕ್ಕೆ ಚಿಕ್ಕ ಇಮಾರತನ್ನು ಕಟ್ಟಿಸಿಕೊಟ್ಟರು; ಸಾಮಾನು-ಸಟ್ಟುಗಳನ್ನು ಕೊಂಡುಕೊಟ್ಟರು; ಮತ್ತು ಆ ಸಾಲೆಯಲ್ಲಿ ಮೋಫತ ಶಿಕ್ಷಣ ಕೊಡುವದಿದ್ದ ಮೂಲಕ ಶಿಕ್ಷಕರ ಸಂಬಳ ಮುಂತಾದ ಖರ್ಚಿಗೆ ಪ್ರತಿತಿಂಗಳಲ್ಲೂ ಪರಸ್ಪರ ಬಡ್ಡಿಯ ರೂಪದಿಂದ ಹಣ ಸಿಗುವಂತೆ ಸಾಕಷ್ಟು ಮೂಲಧನವನ್ನೂ ಬ್ಯಾಂಕಿನಲ್ಲಿ ಠೇವಾಗಿಟ್ಟರು. ಇದರ ಹೊರತು ಪ್ರತಿಯೊಂದು ಸಣ್ಣ-ದೊಡ್ಡ ಹಬ್ಬಗಳಲ್ಲಿ ಅವರು ಅವಳಿಗೆ ಬಕ್ಷೀಸೆಂದು ಕೆಲ ಹಣವನ್ನು ಕೊಟ್ಟೇ ಕೊಡುತ್ತಿದ್ದರು.

ವಿಮಲೆಯನ್ನು ಕಂಡು ಕಡು ಸಂತೋಷದಿಂದ ಭಾವೂಸಾಹೇಬರು:— ತಂಗೀ, ನೀನು ಮುಂಬಯಿಯಿಂದ ಯಾವಾಗ ಬಂದೆ? ಬರುವಾಗ ನನಗೆ ಮುಂಗಡ ತಿಳಿಸಲಿಲ್ಲವೇಕೆ?

ವಿ:—ನಾನು ಆಗಲೆ ಬಂದೆನು. ಬಂದ ಕೂಡಲೆ ಮೇಲಕ್ಕೇ ಬರಬೇಕೆಂದೆನು; ಆದರೆ ನಿಮ್ಮ ಜೊತೆಗೆ ಯಾರೋ ಮಾತನಾಡುತ್ತಿದ್ದದರಿಂದ ಒಳಗೆ ಹೋಗಿ, ಮಾಯಿಯ ಬಳಿಯಲ್ಲೇ ಇದುವರೆಗೆ ಕುಳಿತಿದ್ದೆನು.

ಭಾ:—ಒಳ್ಳೇದು, ನಿನ್ನ ಶಾರದಾ ಮಠದೊಳಗಿನ ಬಾಲ ಬಾಲಿಕೆಯರ ಶಿಕ್ಷಣವು ಹೇಗೆ ನಡೆದಿದೆ?

ವಿ:—ಹೇಗೆ ಏನು ಸಾಗಬೇಕು? ಸಾಗುತ್ತಿರುವದೇ ವಿಹಿತವಾಗಿದೆ. ಸಣ್ಣ ಸಣ್ಣ ಹುಡುಗರು ಕಲಿಯುವದೇನು ಮತ್ತು ಕಲಿಯುವದೆಷ್ಟು? ಆದರೆ ಶಿಕ್ಷಣದಂತೆ ನಾನು ಅವರ ಆಟದ ವ್ಯವಸ್ಥೆಯನ್ನೂ ಚೆನ್ನಾಗಿ ಮಾಡಿರುತ್ತೇನೆ. ಅದರಿಂದ ಅವರ ವೇಳೆಯೆಲ್ಲ ಆನಂದದಲ್ಲಿಯೇ ಕಳೆಯುವದು. ಅದಾದ ಮೇಲೆ ಶಿಕ್ಷಣವು ಏನಾಗುವದೋ ಆಗುವದು; ಆದರೆ ಅಪ್ಪಾ, ನೀವು ಈ ಮೊದಲು ನನಗೆ ಎರಡುನೂರು ರೂಪಾಯಿ ಕೊಟ್ಟಿರಲಿಲ್ಲವೆ? ನಾನು ಅವುಗಳ ಮೋಜು ಮೋಜಿನ ಹೊಸ ಆಟಿಕೆಗಳನ್ನು ಕೊಂಡುಕೊಂಡಿರುವೆನು. ಅದರಿಂದ ನನ್ನ ಸಾಲೆಯೊಳಗಿನ ಹುಡುಗರೆಲ್ಲ ಮನೆಗೆ ಕೂಡ ಹೋಗಲಾರದೆ, ಅಲ್ಲಿಯೇ ಆನಂದಮಗ್ನವಾಗಿರುತ್ತವೆ.

ಭಾ:—ಸಾಕುಮಾಡು ಆ ನಿನ್ನ ಹುಡುಗರ ಕೌತುಕವನ್ನು. ಕಂಡಕಂಡವರ ನಾಲ್ಕು ಮನೆಯ ಹುಡುಗರನ್ನು ಕೂಡಿಸಿಕೊಂಡು, ತಾನೂ ಕೋಡು ಮುರಿದಂತಹ ಆಕಳವು ಕರುಗಳ ಹಿಂಡಿನಲ್ಲಿ ಹೊಕ್ಕಂತೆ ಆದರಲ್ಲಿಯೇ ಹುಡುಗಿಯಾಗಿ ಕುಳಿತಿದ್ದಾಳೆ. ನಾನು ನಿನಗೆ ಆ ಎರಡುನೂರು ರೂಪಾಯಿಗಳನ್ನು ತಿನಸಿಗೆಂದು

ಕೊಟ್ಟಿರಲಿಕ್ಕೆ ನೀನು ಅವುಗಳನ್ನು ಹೀಗೆ ಹಾಳು ಮಾಡಿಬಿಟ್ಟೆಯಲ್ಲವೆ?

ವಿ:—ಅಪ್ಪಾ, ನೀವು ಹೀಗೆನ್ನಹತ್ತಿದರೆ ನಾನು ನಿಮ್ಮ ಮೇಲೆ ಸಿಟ್ಟಾದೇನು. ತಿಳಿಯಿತೇ? ಮನೆಮನೆಯಲ್ಲೂ ಚಿಕ್ಕ ಮಕ್ಕಳ ಆನಂದವೇ ಆನಂದವು; ಮತ್ತು ಅಷ್ಟು ಹುಡುಗರನ್ನು ಒತ್ತಟ್ಟಿಗೆ ಕೂಡಿಸಿಕೊಂಡು ಆಡಲಿಕ್ಕೆ ಸಿಗುತ್ತಿರುವದರಿಂದ, ನನಗೆ ಎಷ್ಟು ಹೆಚ್ಚು ಆನಂದವಾಗುತ್ತಿರಬಹುದೆಂಬದು ನಿಮಗೆ ಹೇಗೆ ತಿಳಿಯಬೇಕು? ನಾನು ನಿಮಗೆ ನಮ್ಮ ಸಾಲೆಗೊಮ್ಮೆಯಾದರೂ ಬಂದು ನೋಡಿರೆಂದು ಆಗಾಗ್ಗೆ ಕರೆಯುತ್ತಿರುವೆನು; ಆದರೆ ನೀವು ಬರುವದೇ ಇಲ್ಲ. ನೀವು ನನಗೆ ತಿನಿಸಿಗೆಂದು ಇನ್ನೂರು ರೂಪಾಯಿ ಕೊಟ್ಟಿದ್ದಿರಷ್ಟೇ? ಆದರೆ ಹಾಗೆ ಕಂಡ ಕಂಡಾಗ ತಿನಿಸು ತಿನ್ನಲಿಕ್ಕೆ ನಾನೇನು ಚಿಕ್ಕಮಗುವೆ? ಮತ್ತು ಆ ನನ್ನ ಸಾಲೆಯ ಹುಡುಗರಿಗೆ ಕೊಂಡು ಕೊಟ್ಟರೂ ಅವರಾದರೂ ಎಷ್ಟೆಂದು ತಿಂದಾರು? ಅವುಗಳೊಳಗಿನ ಐದು ರೂಪಾಯಿಗಳ ಮಿಠಾಯಿ ತಂದು ಅವರೆಲ್ಲರಿಗೂ ಹಂಚಿದೆನು; ನಾನೂ ಸಾಕಷ್ಟು ತಿಂದೆನು. ಉಳಿದ ರೂಪಾಯಿಗಳಲ್ಲಿ ಬಗೆಬಗೆಯ ದೇಶೀ-ವಿದೇಶೀ ಆಟಿಗೆಗಳನ್ನು ತರಿಸಿದೆನು. ಇನ್ನು ಆ ಹಣದ ವಸ್ತ್ರ-ಒಡವೆ ಮಾಡಿಸಬೇಕೆಂದರೆ, ನೀವು ನನಗೆ ಎಲ್ಲ ಒಡವೆಗಳನ್ನು ಈ ಮೊದಲೇ ಮಾಡಿಸಿದ್ದು, ಅವು ನಡುಮನೆಯೊಳಗಿನ ತಿಜೋರಿಗಳಲ್ಲಿ ಹಿಡಿಸದಾಗಿವೆ; ಆದರೆ ಅಪ್ಪಾ, ನಾನು ಇಂದು ತಮಗೊಂದು ಮಾತು ಕೇಳಬೇಕೆಂದಿರುತ್ತೇನೆ. ಕೇಳಲೇನಿರಿ? ಸಿಟ್ಟಾಗಲಿಕ್ಕಿಲ್ಲಷ್ಟೆ?

ಭಾ:—ತಂಗೀ, ಕೇಳು. ನಿನ್ನಮೇಲೆಂದಾದರೂ ಸಿಟ್ಟಿಗೇಳುವೆನೇ?

ವಿ:—ಅಪ್ಪಾ, ನಿಮಗೆ ಹೆಣ್ಣುಮಕ್ಕಳ ಶಿಕ್ಷಣವು ಅದೇಕೆ ರುಚಿಸುವದಿಲ್ಲ? ಓದುಬರೆಯುವ ಆ ಆನಂದವನ್ನು ಹೊಂದಲಿಕ್ಕೆ ಸ್ತ್ರೀಯರೇ ಅದೇನು ಪಾಪ ಮಾಡಿರುವರು?

ಭಾ:—ಖಂಡಿತವಾಗಿ ಹೇಳಲೊ? ನಮ್ಮ ಚಿಕ್ಕಂದಿನಲ್ಲಿ ಯಾವ ಸಂಗತಿಗಳನ್ನು ನಾವೆಂದೂ ನೋಡಲಿಲ್ಲವೋ, ಅವು ಈಗ ಕಾಣಹತ್ತಲು ಅವೆಲ್ಲ ನಮಗೆ ವಿಚಿತ್ರ ಹಾಗು ಅನವಶ್ಯಕಗಳೆಂದು ತೋರುತ್ತವೆ; ಆದರೆ ನೀನೇ ಹೇಳು ನೋಡೋಣ, ಸಾಲೆ ಕಲಿತು ಹೆಂಗಸರೇನು ಹೊಟ್ಟೆಹೊರೆಯಬೇಕಾಗಿದೆಯೋ?

ವಿ:—ಹೊಟ್ಟೆ ಹೊರೆಯುವದಕ್ಕೆಂದೇ ಕಲಿಯತಕ್ಕದ್ದೇನು? ಅದರಲ್ಲಿ ಆನಂದವೆಂಬದು ಇಲ್ಲವೇ ಇಲ್ಲವೇನು? ಅಪ್ಪಾ ಹಾಗಾದರೆ ನೀವೇತಕ್ಕೆ ಓದುವಿರಿ, ದಿನಾಲು ಇಷ್ಟು ವೃತ್ತಪತ್ರಗಳನ್ನು? ಅವುಗಳನ್ನೋದಿಯೇ ನಿಮ್ಮ ಹೊಟ್ಟೆ ತುಂಬುವದಿದೆಯೇ?

ಭಾ:—ತಿಳಿಯಿತು-ತಿಳಿಯಿತು. ಮತ್ತೊಂದಿಲ್ಲ-ಮಗದೊಂದಿಲ್ಲ, ಎಲ್ಲರ

ಕಟಾಕ್ಷವೂ ನನ್ನ ವೃತ್ತಪತ್ರವಾಚನದ ಮೇಲೆಯೇ ಇದೆ! ತಂಗೀ ಅವುಗಳನ್ನೋದಿದರೆ ನಾವು ಈ ಜಗತ್ತಿನಲ್ಲಿದ್ದೇವೆಂದೆನಿಸುತ್ತದಷ್ಟೇ.

ವಿ:—ಹಾಗಾದರೆ ನಾವು ಹೆಣ್ಣುಮಕ್ಕಳೇನು ಜಗತ್ತಿನ ಹೊರಗಿರುವೆವೋ ಅಥವಾ ಹೊರಗಿನಿಂದ ಬಂದಿರುವೆವೋ? ಈ ಲೋಕವು ಹೇಗೆ ಸಾಗಿದೆಯೆಂಬದು ನಮಗೂ ತಿಳಿಯಬಾರದೇನು? ಅದಿರಲಿ. ಅಪ್ಪಾ, ಹೆಣ್ಣುಮಕ್ಕಳಿಗೆ ಶಿಕ್ಷಣಕೊಡುವದು ವಿಪರೀತವಾಗಿದ್ದರೆ, ನೀವು ಮನೆಯಲ್ಲಿ ಮಾಸ್ತರರನ್ನಿಟ್ಟು ನನಗೇಕೆ ಕಲಿಸಿದಿರಿ? ನಾನು ಹೇಗೆ ನಿಮ್ಮ ಮಗಳೋ, ಹಾಗೆಯೇ ಹೆರವರು ಮಂದಿಯ ಮಕ್ಕಳು. ಇನ್ನು ಮನೆಯಲ್ಲಿ ಮಾಸ್ತರರನ್ನಿಟ್ಟು ಕಲಿಸುವ ಯೋಗ್ಯತೆಯು ಅವರಿಗಿರದಿದ್ದರೆ ಆ ದೋಷವು ಆ ಹೆಣ್ಣುಮಕ್ಕಳದೋ, ಅವರ ಪಾಲಕರದೊ? ತಮ್ಮ ಹುಡುಗರೇನು ಮಂದಿಯವೇನು ಎಲ್ಲವೂ ಹುಡುಗರೇ ಅಷ್ಟೇ? ದೇವರ ದಯೆಯಿಂದ ನಿಮ್ಮ ಬಳಿಯಲ್ಲಿ ನಾಲ್ಕು ದುಡ್ಡು ರೊಕ್ಕವಿದೆ. ಅದನ್ನು ಮಂದಿಯ ಹುಡುಗರ ಶಿಕ್ಷಣಕ್ಕೆಂದು ಖರ್ಚ ಮಾಡಿದರೆ ತಪ್ಪೇನು? ಮಾಯಿಸಾಹೇಬರಿಗೂ ಕಲಿಸಲಿಕ್ಕೆ ನೀವು ಮಾಸ್ತರರನ್ನಿಡತಕ್ಕದ್ದಿತ್ತು. ಅವಳಿಗಾದರೂ ಓದು ಬರೆಯುವದರ ಹೊರತು ವೇಳೆಗಳೆಯಲು ಬೇರೆ ಸಾಧನಗಳೇನಿವೆ? ಇನ್ನು ಅವಳು ನಿಮಗೆ ಕಾಣದ ಹಾಗೆ ಅಣ್ಣನಿಂದ ಅಲ್ಪಸ್ವಲ್ಪ ಕಲಿತದ್ದೇ ಬೇರೆ; ಆದರೆ ಅದಕ್ಕಾಗಿ ಅವಳ ಮೇಲೆ ನಿಮ್ಮ ಸಿಟ್ಟೆಷ್ಟು? ರೋಷವೆಷ್ಟು? ನಾನು ಹೇಗೆ ನಿಮ್ಮ ಮಗಳೋ, ಹಾಗೆಯೇ ಅವಳಾದರೂ ಬೇರೊಬ್ಬರ ಮಗಳೇ ಅಲ್ಲವೆ?

ವಿಮಲೆಯ ಈ ಪ್ರಶ್ನೆಗೆ ಭಾವೂಸಾಹೇಬರು ಯಾವ ಉತ್ತರವನ್ನೂ ಕೊಡದಾದರು. ಅಂತೆಯೇ ಆ ವಿಷಯ ಬದಲಿಸುವ ಸಲುವಾಗಿ ಅವರು:— ಅದಿರಲಿ. ತಂಗೀ, ಅತ್ತಿತ್ತಣದ ಏನಾದರೂ ಹೊಸ ಸಂಗತಿಯನ್ನು ಹೇಳು ನೋಡೋಣ, ಎಂದರು.

ಈ ಪ್ರಶ್ನೆಯ ಲಾಭ ಹೊಂದುವದಕ್ಕಾಗಿ ಪ್ರಭಾಕರನ ಸಂಬಂಧದ ಮಾತೆತ್ತಬೇಕೆಂದು ಅವಳಿಗೆ ಅನಿಸಿತು; ಆದರೆ ಆ ಮಾತು ತುಸ ಜವಾಬುದಾರಿಯದೆಂದೂ, ತಂದೆಯನ್ನು ಸಂತುಷ್ಟಗೊಳಿಸಿ, ಆ ಮೇಲೆಯೆ ಅದನ್ನು ತೆಗೆಯಬೇಕೆಂದೂ ಅವಳು ಗೊತ್ತುಮಾಡಿಕೊಂಡು:—"ಅಪ್ಪಾ, ಇದೇನರಿ? ಚಿಕ್ಕಮಕ್ಕಳ ಸಾಲೆಯಲ್ಲಿ ಹೊಸ ಸಂಗತಿಗಳೇತರವು? ಅವು ಈಗಿನ ವೃತ್ತಪತ್ರಗಳಲ್ಲೇ ಚೆನ್ನಾಗಿರುತ್ತವೆ. ನೀವೇ ಹೇಳಿರೊಂದು ಅದ್ಭುತದ ಇಲ್ಲವೆ ಸೋಜಿಗದ ಹೊಸ ಸುದ್ದಿಯನ್ನು. ನೀವು ಇಂದು ಹೇಳಲೇ ಬೇಕು. ನಾನು ನಿಮ್ಮನ್ನು ಬಿಡುವವಳೇ ಅಲ್ಲ" ಎನ್ನಲು, ಭಾವೂಸಾಹೇಬರಿಗೆ ಇದುವರೆಗೆ ತಮ್ಮ ಮನಸ್ಸಿನಲ್ಲಿ ನಡುತ್ತಿದ್ದ ಸಂಗತಿಯನ್ನು ಹೊರಹೊರಡಿಸಲಿಕ್ಕೆ ಇದೊಳ್ಳೇ ಸಮಯವೆಂದೆನಿಸಿತು. ಅದರಿಂದ ಅವರು:—

ಸೋಜಿಗದ ಸುದ್ದಿಗಳು ವೃತ್ತಪತ್ರಗಳಲ್ಲೇ ಇರುತ್ತವೆಂತಲ್ಲ. ಬೇರೆ ಕಡೆಗೂ ಬರಿಯ ಕೇಳಲಿಕ್ಕೇ ಅದೇಕೆ, ತಂಗೀ, ಅನುಭವಕ್ಕೆ ಕೂಡ ಅಂತಹ ಸಂಗತಿಗಳು ಬರುತ್ತಿರುತ್ತವಪ್ಪಾ.

ಪಿ:--ಹಾಗಾದರೆ ನಿಮ್ಮ ಅನುಭವಕ್ಕೆ ಬಂದಂಥ ಅದ್ಭುತ ಇಲ್ಲವೆ ಸೋಜಿಗದ ಹೊಸ ಸಂಗತಿಯನ್ನೇ ಹೇಳಿರಿ, ಕೇಳೋಣ.

ಭಾ: ಅದ್ಭುತವಲ್ಲವಿದ್ದರೇನು? ಅವಳು ಪ್ರಭಾಕರನ ಬಳಿಯಲ್ಲಿ ನನಗೆ ಕದ್ದು ಓದುಬರಹ ಕಲಿತಳೆಂದು ಈಗಲೆ ನೀನೇ ಅನ್ನಲಿಲ್ಲವೆ? ಆಗ ಆ ಕಳವಿನ ದುರ್ಲಕ್ಷ್ಯ ಮಾಡಿದ್ದರ ಫಲವು ದೊರೆಯದಿದ್ದೀತೇ?

ಪಿ:—ಅಪ್ಪಾ, ನೀವಂದದ್ದು ನನಗೆ ತಿಳಿಯಲಿಲ್ಲ. ಕಳವಿನ ಬಗ್ಗೆ ಗೊತ್ತಾಯಿತು; ಆದರೆ ಫಲವೇನು ಮತ್ತೆ ಅದು ಯಾರಿಗೆ ದೊರೆಯಿತು?

ಭಾ:—ತಂಗೀ, ಕಳವಿನ ಕಡೆಗೆ ದುರ್ಲಕ್ಷ್ಯ ಮಾಡಿದವರಿಗೇ ಆ ಫಲವು-ಇನಾಮು-ದೊರಕುವದು ಯೋಗ್ಯವಾಗಿದೆ. ನಾನು ಅವಳ ಶಿಕ್ಷಣದ ಕಳವಿನ ಕಡೆಗೆ ದುರ್ಲಕ್ಷ್ಯ ಮಾಡಿದ್ದರಿಂದ ಆ ಇನಾಮು ನನಗೇ ದೊರಕಿತು.

ಪಿ:-ಅಪ್ಪಾ, ಹೀಗೆ ಏನೇನಾದರೂ ಹೇಳಬೇಡಿರಿ. ಸ್ಪಷ್ಟವಾಗಿ ಹೇಳಿರಿ, ಏನೆಂಬುದನ್ನು?

ಭಾ:-ತಂಗೀ, ಇತ್ತೀಚೆಗೆ ಅವಳಿಗೆ ಕದ್ದು ಪತ್ರಗಳು ಬರುತ್ತಿರುತ್ತವೆ!

ಪಿ:—ಅವಳಿಗೆಂದರೇನು? ಭಾ:—ಮನೆಯವಳಿಗೆ; ನಿನ್ನ ತಾಯಿಗೆ.

ಪಿ:-ಅಪ್ಪಾ, ನೀವು ನನ್ನ ಚೇಷ್ಟೆ ಮಾಡುತ್ತಿಲ್ಲವೆ? ಅವಳಿಗೆ ಬಂದ ಪತ್ರಗಳೆಷ್ಟು ಮತ್ತು ಯಾವಾಗ?

ಭಾ:—ಇಂದಿನ ಸಂಗತಿಯೇ ಇದು; ಹಳೇ ಮಾತಲ್ಲ.

ಪಿ:-ಹೀಗೆಯೋ? ಇರಲಿ. ಮತ್ತೆ ಯಾವ ಯಾವಾಗ ಬಂದಿದ್ದವು?

ಭಾ:—ಮತ್ತೊಂದೆಂಬುದು ನನಗೆ ಚೆನ್ನಾಗಿ ನೆನಪಿಲ್ಲ.

ಪಿ:—ಇದೇ ಅಲ್ಲವೆ? ಇಂದಿನ ಪತ್ರದ ಸಂಗತಿಯನ್ನು ಅವಳು ನನಗೆ ಆಗಲೆ ತಿಳಿಸಿರುವಳು; ಮತ್ತು ನಿಮಗೂ ಅದನ್ನು ಹೇಳಿದಳಂತೆ; ಇಷ್ಟೇ ಅಲ್ಲದೆ ಆ ಪತ್ರದೊಳಗಿನ ಸಂಗತಿಯನ್ನು ಕೂಡ ನಿಮಗೆ ವಿಶದಪಡಿಸಿರುವಳಂತೆ. ಅಪ್ಪಾ, ಆ ಪತ್ರದಲ್ಲಿ ವಿಶೇಷವೇನಿತ್ತು? ನನ್ನ ತಾಯಿಯ ದೂರ ಸಂಬಂಧಿಕಳೊಬ್ಬಳ ಕ್ಷೇಮ ಸಮಾಚಾರದ ಪತ್ರವು ಭಾಗಾನಗರದಿಂದ ಬಂದಿದೆ. ಆ ಭಾಗಾನಗರವೆಲ್ಲಿ, ಈ ಜೋದ್ಯಪುರವೆಲ್ಲಿ? ನಾನು ಕೂಡ ಅವಳನ್ನೆಂದೂ ನೋಡಿರುವದಿಲ್ಲ. ಮಾಯಿಯೂ ಕೂಡ ತನ್ನ ಚಿಕ್ಕಂದಿನಲ್ಲಿ ಒಂದೆರಡು ಸಾರೆಯೇ ಅವಳನ್ನು ನೋಡಿರುವಳಂತೆ; ಆದರೆ ಭಾಗಾನಗರಗಲ್ಲಿ ಕೆಲ ದಿನಗಳ ಹಿಂದೆ ಮಾರಿಕಾ

ಬೇನೆಯು ಹೆಚ್ಚಿದ್ದಿತೆಂಬ ವರ್ತಮಾನವು ಲೋಕವಲ್ಲೆಲ್ಲ ಹರಡಿದ್ದಿತು. ಈಗ ಆ ಬೇನೆಯು ಕಡಿಮೆಯಾಗಿದ್ದು, ನಾವೆಲ್ಲರೂ ಕ್ಷೇಮದಿಂದಿರುತ್ತೇವೆಂದು ಅವಳು ಮಾಯಿಯು ಹೆಸರಿಗೆ ಪತ್ರ ಬರೆದು ತಿಳಿಸಿರುವಳು. ಹಳೇ ಪೀಳಿಗೆಯ ಹೆಂಗಸರು ತಮ್ಮ ಇಡೀ ಜನ್ಮದಲ್ಲಿ ಹೀಗೆ ನಾನಾಗಾದರೊಮ್ಮೆ ಪತ್ರ ಬರೆಯುತ್ತಿರುತ್ತಾರೆ. ಅಂತೇ ಮಾಯಿಯವರಿಗಾಗಲಿ ಆ ಮನೆಯಿಂದಲೂ ಯಾವ ಪತ್ರವೂ ಬಂದಿರಲಿಕ್ಕಿಲ್ಲ. ಬಂದಿದ್ದರೂ ಕೂಡ ಅಂತಹ ಪತ್ರದ ಸಂಗತಿಯನ್ನು ಅವಳು ನಿಮಗೆ ಏನೆಂದು ಹೇಳಬೇಕು? ಮತ್ತು ಒಂದುವೇಳೆ ಹೇಳಿದರೂ ನಿಮಗದರ ನೆನಪಾದರೂ ಹೇಗೆ ಉಳಿಯುವದು?

ಭಾ:—ಹಾಗೆಯೂ ಇದ್ದೀತು; ಆದರೆ ಅವಳಿಗೆ ಆ ಪತ್ರವನ್ನು ಹರಿದೊಗೆಯುವ ಕಾರಣವೇನಿತ್ತು? ಅದೇನು ತಿನ್ನಲಿಕ್ಕೆ ಬೇಕಾಗುತ್ತಿತ್ತೇ? ಉಣ್ಣಲಿಕ್ಕೆ ಬೇಡುತ್ತಿತ್ತೇ? ಅದನ್ನು ಅವಳು ನನಗೆ ಸಹಜವಾಗಿ ತೋರಿಸಿದ್ದರೆ ಏನು ಕೆಡುತ್ತಿತ್ತು?

ವಿ:—ಅಪ್ಪಾ, ನಿಮಗೆ ಇನ್ನೂ ಏಕೆ ಹೇಳಬೇಕು? ಮಾಯಿಯು ಕೂಡ ಕುಳಿತು ಸುಖಸಮಾಧಾನದಿಂದ ಮಾತಾಡುವ ಅಭ್ಯಾಸವು ನಿಮಗೆಂದಾದರೂ ಇದೆಯೋ? ಹಾಗಿದ್ದರೆ ಮಾತಿಗೆ ಮಾತು ಬೆಳೆಯುತ್ತಿತ್ತು; ಮತ್ತು ಮೋಜಿಗಾಗಿ ಅವಳು ಆ ಪತ್ರವನ್ನು ನಿಮಗೂ ಸಹಜವಾಗಿ ತಿಳಿಸುತ್ತಿದ್ದಳು; ಆದರೆ ಅಪ್ಪಾ, ಮನೆತನದ ಬೇಕು-ಬೇಡೆಂಬ ವ್ಯವಹಾರದ ಕಾರ್ಯದ ಬಗ್ಗೆ ನೀವು ಅವಳೊಡನೆಂದಾದರೂ ಮಾತನಾಡುತ್ತಿರುವಿರಾ? ಪತ್ರ ಬರೆದವಳು ಅವಳಿಗೆ ಗಂಡನ ಸಂಬಂಧಿಕಳೇನೋ ಅಹುದು; ಆದರೆ ಆಕೆಯ ಕ್ಷೇಮಸಮಾಚಾರವು ನಿಮ್ಮ ತನಕ ಬರುವ ಸಂಬಂಧವೇನು? ಅಲ್ಲದೆ ಆ ಹಳೇ ಪದ್ಧತಿಯ ಭಾಗಾನಗರವಾಸಿ ಹೆಣ್ಣುಮಗಳು ಜನ್ಮದಲ್ಲಿ ಅದೆಷ್ಟನೇ ಪತ್ರವನ್ನು ಬರೆದಿದ್ದಳೋ ದೇವರೇ ಬಲ್ಲನು! ಅವಳ ಆ ಪತ್ರದ ಅಕ್ಷರಗಳೆಂದರೆ, ನಾಯಿ ನರಿಗಳ ಕಾಲುಗಳೇ ಸರಿ! ಅಂಥ ಪತ್ರವನ್ನು ನಿಮಗೆ ತೋರಿಸಲಿಕ್ಕೆ ಅವ್ವನಿಗೆ ನಾಚಿಕೆಯುಂಟಾಗಲಿಕ್ಕಿಲ್ಲವೇ? ಹೆಂಗಸರ ಲಜ್ಜೆಯನ್ನು ಹೆಂಗಸರೇ ಬಲ್ಲರು.

ಭಾ:—ಸಾಕು--ಸಾಕು. ಅದನ್ನು ಮೇಲುಗಟ್ಟಬೇಡ. ತಂಗೀ, ನಿಜವಾಗಿಯೂ ಹೇಳು, ಈ ಪತ್ರದ ಬಗ್ಗೆ ನಿನಗೇನೂ ಚಮತ್ಕಾರವೆನಿಸುವದಿಲ್ಲವೆ?

ವಿ:—ಅಪ್ಪಾ, ಖಂಡಿತವಾಗಿಯೂ ನನಗೆ ಹಾಗೆನಿಸುವದಿಲ್ಲ.

ಭಾ:—ಮಗಳೇ, ಶಿಕ್ಷಣದ ಮೂಲಕ ನಿನ್ನ ಮಜಲು ಬಹು ದೂರ ಮುಟ್ಟಿದೆಯೆನ್ನಬೇಕಾಯಿತು.

ವಿ:—ಅಪ್ಪಾ, ಹಾಗಲ್ಲ; ಆದರೆ ಸಂಶಯಪಿಶಾಚಿಯಿಂದ ನಿಮ್ಮ ಮಜಲೇ ಬಹು ದೂರ ಮುಟ್ಟಿರುವ ಬಗ್ಗೆ ಸಂದೇಹವಿಲ್ಲ. ಆ ಪತ್ರದ ಮೂಲಕ ಅವ್ವನ

ವಿಷಯವಾಗಿ ನಿಮ್ಮ ಮನಸ್ಸಿನಲ್ಲಿ ಯಾವ ಯಾವ ವಿಚಾರಗಳುಂಟಾಗಿರಬಹು ದೆಂಬದನ್ನು ನನ್ನಿಂದ ಉಚ್ಚರಿಸಲೂ ಆಗಲಿಕ್ಕಿಲ್ಲ.

ಭಾ:—ತಂಗೀ, ವೃದ್ಧಾಪ್ಯದಲ್ಲಿ ಇನ್ನು ಹೀಗೆಯೇ ನಡೆಯತಕ್ಕದ್ದು. ನಾನು ಈ ಮೂರನೇ ಲಗ್ನದ ಗೊಂದಲದಲ್ಲೇಕೆ ಬದ್ದನೋ ತಿಳಿಯದು! ಮರ್ಯಾದೆಯಿಂದೊಮ್ಮೆ ಕಣ್ಣು ಮುಚ್ಚಿದವೆಂದರೆ ಪಾರಾದೆನು.

ಭಾವೂಸಾಹೇಬರ ಬಾಯ ಈ ಶಬ್ದಗಳನ್ನು ಕೇಳುತ್ತಲೆ, ವಿಮಲೆಯು ತಟ್ಟನೆ ಎದ್ದು ದೂರ ಸರಿದು ನಿಂತಳು; ಹಾಗು ಅಲ್ಪಾವಧಿಯಲ್ಲೇ ಮರಳಿ ಬಂದು ತಂದೆಯ ಪಕ್ಕದಲ್ಲಿ ಕೂಡ್ರದೆ, ಸಮ್ಮುಖದಲ್ಲಿಯೇ ಕುಳಿತು, ಆತನನ್ನು ದುರ ದುರನೆ ನೋಡಲಾರಂಭಿಸಿದಳು. ಆಗ ಆಕೆಯ ದನಿಯು ತನ್ನಷ್ಟಕ್ಕೆ ತಾನೇ ತುಸ ಏರಿತು. ಅದರಿಂದ ಅವಳು ತಂದೆಯನ್ನು ಕುರಿತು ಗಟ್ಟಿಮುಟ್ಟಾಗಿ ಹೇಳಿದಳೇನಂದರೆ;

ವಿ:—ಶಿವ! ಶಿವ! ಶಿವ!!! ಅಪ್ಪಾ, ನಿಮ್ಮ ಬಾಯಿಂದ ಇಂಥ ಹೇಸಿ ಶಬ್ದಗಳು ಹೊರಡುವವಾದರೂ ಹೇಗೆ? ನಾನು ಸಣ್ಣಬಾಯಿಲೆ ದೊಡ್ಡ ತುತ್ತು ತಕ್ಕೊಳ್ಳುವದಿಲ್ಲ; ಆದರೆ ಅಪ್ಪಾ, ಅವ್ವನಂತಹ ಕೇವಲ ಶುದ್ಧ ಪವಿತ್ರ ಹೆಣ್ಣು ಮಗಳ ಬಗ್ಗೆ ಹೀಗೆ ನೀವು ಸಂದೇಹಪಡಹತ್ತಿದರೆ, ನಿಮಗೇನೆನಬೇಕೋ ತಿಳಿಯುವದಿಲ್ಲ.

ಮಗಳ ಈ ನುಡಿಯನ್ನು ಕೇಳಿ ಭಾವೂಸಾಹೇಬರು ತುಸ ಮೆತ್ತಗಾದರು; ಮತ್ತು ಯಾವನೊಬ್ಬ ಅಪರಾಧಿಯು ತನ್ನ ಅಪರಾಧವು ಮಂದಿಗೆ ತಿಳಿಯಿತೆಂದು ದೈನ್ಯದಿಂದ ಹೇಗೆ ಮಾತನಾಡುವನೋ, ಅದೇ ಪ್ರಕಾರದ ದೈನ್ಯವಾಣಿಯಿಂದ ಭಾವೂಸಾಹೇಬರು:—"ತಂಗೀ, ಹಾಗಲ್ಲs, ಹಾಗಲ್ಲs ಸುಮ್ಮನೆ ಅಂದೆನು" ಎಂದರೂ ವಿಮಲೆಯು ತಂದೆಯನ್ನು ಅಷ್ಟಕ್ಕೇ ಬಿಡಲಿಲ್ಲ. ತಾಯಿಯ ಪ್ರೇಮದ ಮೂಲಕ ಯಾವನೊಬ್ಬ ನಿಷ್ಠುರ ನ್ಯಾಯಾಧೀಶನ ಆವೇಶದಿಂದ ಒದರಿ, ಅವಳು:- "ಹಾಗಲ್ಲದಿದ್ದರೆ ಹೇಗೆ? ಅಪ್ಪಾ ನಾನು ನಿಮ್ಮ ಮಗಳಿದ್ದೇನೆ; ಮತ್ತು ಮೊ-ಮ್ಮಗಳೆಂದರೂ ಶೋಭಿಸಬಹುದಾಗಿದೆ. ಇಂಥಕೆಲಸದಲ್ಲಿ ನೀವು ನನಗೆ ನಿರ್ಭಿಡೆಯವಳೆಂದರೂ ಅನ್ನಿರಿ; ಆದರೆ ಯೋಗ್ಯ ತೋರಿದ್ದನ್ನು ಆಡದಿರುವದು ನನ್ನಿಂದಾಗಲಿಕ್ಕಿಲ್ಲ. ನಮ್ಮ ಹೆಣ್ಣುಮಕ್ಕಳ ಶಿಕ್ಷಣವಿಷಯದ ಬಗ್ಗೆ ನಿಮ್ಮ ಕಟಾಕ್ಷವೆಷ್ಟಿರುವದೆಂಬದು ನನಗರಿಯದೇ? ನನ್ನನ್ನು ನೀವು ಕಲಿಯಗೊಟ್ಟಿರೆಂದರೇನು, ನನ್ನ ಮೇಲಿನ ನಿಮ್ಮ ನಿಸ್ಸೀಮ ಪ್ರೇಮಕ್ಕಾಗಿ. ನನ್ನ ಹುಚ್ಚು ಚಾಚರದ ಅಚ್ಛೆಯೆಂದು ನೀವದನ್ನು ಪೂರೈಸುತ್ತಿರುವಿರಷ್ಟೆ?"

ಈ ಶಬ್ದಗಳನ್ನುಚ್ಚರಿಸುವಾಗ ವಿಮಲೆಯ ಕಂಠವು ಬಿಗಿದು ಬಂದಿತು,

ಆದರಿಂದ ಅವಳು ಹೆಚ್ಚು ಮಾತನಾಡದಾದಳು. ಪ್ರೇಮಭರದಿಂದ ಅವಳು ಮತ್ತೆ ತನ್ನ ಸ್ಥಳದಿಂದೆದ್ದು ಅಚ್ಚೆಯಿಂದ ತಂದೆಯ ಪಕ್ಕದಲ್ಲಿ ಹೋಗಿ ಕುಳಿತು ಕೊಂಡು ಅನ್ನುತ್ತಾಳೆ:—ಅಪ್ಪಾ, ನಾನು ನಿಮ್ಮ ಮಗಳು; ಮತ್ತು ನನ್ನ ತಾಯಿಯು ನಿಮ್ಮ ಹೆಂಡತಿ. ಆದರೇನಾಯಿತು? ಹೆಂಡತಿಯನ್ನು ನಡೆಸಿಕೊಳ್ಳುವ ದಕ್ಕಾದರೂ ಕೆಲ ಮರ್ಯಾದೆಯಿರುತ್ತದಷ್ಟೇ? ನನ್ನ ತಾಯಿಯ ಆಚರಣವು ಒಳ್ಳೇ ಪವಿತ್ರವಾಗಿರುವದರಿಂದ, ದಿನಾಲು ಬೆಳಿಗ್ಗೆದ್ದು ಅವಳ ಚರಣತೀರ್ಥ ತಕೊಳ್ಳಬೇಕೆಂದು ನಾನು ಸ್ಪಷ್ಟವಾಗಿ ಅನ್ನುತ್ತೇನೆ; ಆದರೆ ಅಪ್ಪಾ, ಮಾಲಕಿಯ ಹೆಂಡತಿಯೆಂದು ನಿಮಗವಳ ಬೆಲೆಯು ತಿಳಿಯುವದಿಲ್ಲವಷ್ಟೇ!

ಆ ಮಾತ್ರೆಯು ಭಾವೂಸಾಹೇಬರಿಗೆ ಹತ್ತಿ ಚೆನ್ನಾಗಿಯೇ ಕೆಲಸ ಕೊಟ್ಟಿತು. ಆದರಿಂದ ಅವರು ನಿರುತ್ತರರಾದರು; ಇಷ್ಟೇ ಅಲ್ಲ, ಖೇದವನ್ನೂ ತಾಳಿದರು. ಇನ್ನು ಈ ಹುಡಿಗೆಯ ಭಾಷಣವು ಮುಗಿಯುವದಾದರೂ ಹೇಗೆ? ಎಂದು ಅವರಿ ಗನಿಸಿತು. ಆಗ ಆ ಮುದುಕನ ತಲೆಯಿಂದೊಂದು ಯುಕ್ತಿಯು ಹೊರಬಿದ್ದಿತು:

ಭಾ:—ತಂಗೀ, ಇರಲಿ. ನಾನು ನನ್ನ ಮಾತನ್ನು ಹಿಂದೆಗೆದುಕೊಳ್ಳು ತ್ತೇನೆ. ಆ ಬಗ್ಗೆ ನನ್ನಿಂದ ತಪ್ಪಾಯಿತು. ತಂಗೀ, ನೀನು ಸಿಟ್ಟಾಗಬೇಡ. ನಿನ್ನ ಬುದ್ಧಿವಂತಿಕೆಯ ಬಗ್ಗೆ ನನಗೆಷ್ಟೋ ಅಭಿಮಾನವೆನಿಸುತ್ತಿದೆ. ನನ್ನ ವಿಮಲೆಯು ಬ್ಯಾರಿಷ್ಟರಳಾಗಿದ್ದರೆ ದೊಡ್ಡ ದೊಡ್ಡ ನ್ಯಾಯಾಧೀಶರನ್ನು ಕೂಡ ಸುಮ್ಮನಿರ ಹಚ್ಚುತ್ತಿದ್ದಳು. ಹಾಗಾದರೆ ಹೇಳು ನೋಡೋಣ, ನಾನು ಮನಃಪೂರ್ವಕವಾಗಿ ಸ್ತ್ರೀಶಿಕ್ಷಣದ ವೈರಿಯಿರುವೆನೇನೆಂಬನ್ನು. ತಂಗೀ, ನಾವು ಹಳೇ ಪೀಳಿಗೆಯ ಜನರು! ನಿಮ್ಮ ಹಾಗೆ ನಮಗೆ ಯಾತರ ಬಗ್ಗೆ ಯಾವಾಗ ಮತ್ತು ಏನು ಮಾತಾಡ ಬೇಕೆಂಬುದೆಲ್ಲಿ ತಿಳಿಯುತ್ತದೆ? ಅದೆಲ್ಲವೂ ಇರಲಿ. ನಾನು ನಿನಗೆ ಹೊಸ ಸುದ್ದಿ ಹೇಳಹೋಗಲು, ಅದರದಿದೊಂದು ರಾಮಾಯಣವೇ ಆಗಿಬಿಟ್ಟಿತು. ತಂಗೀ, ಇನ್ನು ನೀನು ನಿನ್ನ ಹೊಸ ಸುದ್ದಿ ಹೇಳು ನೋಡೋಣ.

ವಿಮಲೆಗಾದರೂ ತನ್ನ ದನಿ ಬದಲಿಸಲಿಕ್ಕೆ ನೆವವೇ ಬೇಕಾಗಿದ್ದಿತು. ಅದ ರಿಂದ ವಾದದ ಆ ವಿಷಯವು ಮುಗಿಯಿತೆಂದು ತೋರಿಸುವದಕ್ಕಾಗಿ ನಸುನಕ್ಕು, ಅವಳು ಅಚ್ಚುಚ್ಚೆಯಿಂದ:—"ಅಪ್ಪಾ, ನಿಮ್ಮ ಸುದ್ದಿಯದು ರಾಮಾಯಣ ವಾಯಿತು! ಅದರಂತೆ ನನ್ನ ಹೊಸ ಸುದ್ದಿಯ ಬಗ್ಗೆ ಭಾರತವಾಗದಿರಲೆಂದರೆ ಸಾಕು. ಆದರೆ ಅಪ್ಪಾ, ನನ್ನ ಸಂಗತಿಯು ಬಹು ಮೋಜಿನದಿದೆ. ಅಪ್ಪಾ, ನಿನ್ನೆ ಬೆಳಗಿನ ಜಾವದಲ್ಲಿ ಒಂದು ಅತ್ಯದ್ಭುತವಾದ ಸಂಗತಿಯು ಘಟಿಸಿತು.

ಭಾ:—ಏನದೇನದು? ಅದನ್ನು ಬೇಗನೆ ತಿಳಿಸು.

ವಿ:—ಆಗ-ನಮ್ಮ-ಪ್ರಭಾಕರಣ್ಣನು..........

ಭಾ:—ಯಾರು, ಪ್ರಭಾಕರಣ್ಣನೇ?

ವಿ:—ಹೀಗೇಕೆ ಮಾತಾಡುವಿರಪ್ಪಾ? ಪ್ರಭಾಕರಣ್ಣನೆಂದರೆ, ನನ್ನ ಅಣ್ಣನೇ! ನಿಮ್ಮ ಮಗನಾದ ಪ್ರಭಾಕರನೇ. ತಿಳಿಯಿತೇ?

ಭಾ:—ಮುಂದೇನಾಯಿತು?

ವಿ:—ಅವನು-ನಿನ್ನೆ-ರಾತ್ರಿ ಬಂದನು,--ಮತ್ತು-ನನ್ನ-ಎದುರಿಗೆ-ನಿಂತು-ಕೊಂಡನು.-ಪ್ರಭಾಕರಣ್ಣನು-ಯಾವುದೊಂದು-ಮೂಕ-ಕಂಬದಂತೆ-!

ಅವಳು ಈ ಎಲ್ಲ ಶಬ್ದಗಳನ್ನು ಬಹು ಸಾವಕಾಶವಾಗಿ ಜಪ ಮಾಡುವವರು ಮಣಿಗಳನ್ನೆಣಿಸುವಂತೆ ಉಚ್ಚರಿಸಿದಳು; ಮತ್ತು ಕೊನೆಯ ಶಬ್ದಗಳನ್ನಂತೂ ಒಳ್ಳೇ ಹಿಡತದಿಂದ ಉಚ್ಚರಿಸಿದ್ದರಿಂದ ಅವು 'ಪ್ರಭಾಕರಣ್ಣನು' ಈ ಶಬ್ದಕ್ಕಾದರೂ ಸಂಬಂಧವಾಗಬೇಕು; ಇಲ್ಲವೆ 'ಬಂದನು; ಮತ್ತು ಎದುರಿಗೆ ಬಂದು ನಿಂತುಕೊಂಡನು.' ಎಂಬ ಶಬ್ದಗಳಿಗೂ ಸಂಬಂಧವಾಗಬೇಕು. ಪ್ರಭಾಕರನು ಬರುವದೇ ಮೊದಲು ಅದ್ಭುತವು! ಮತ್ತು ಬಂದರೂ ಹೀಗೆ ಒಮ್ಮೆಲೆ ಎದುರಿಗೆ ಬಂದು ನಿಲ್ಲುವದಂತೂ ಪರಮಾದ್ಭುತವು!! ಒಟ್ಟಿನಲ್ಲಿ ತಂದೆಯು ತುಸ ಗೊಂದಲಕ್ಕೊಳಗಾಗಬೇಕು; ಮತ್ತು ಪ್ರಭಾಕರನ ಸಂಬಂಧವಾಗಿ ಅವನ ಬಾಯಿಂದ ಸ್ವಾಭಾವಿಕ ಉದ್ಗಾರಗಳು ಹೊರಬೀಳಬೇಕು. ಇದೇ ಉದ್ದೇಶದಿಂದ ಅವಳು ಹಾಗೆ ನುಡಿದಿದ್ದಳು. ಕಡೆಗೆ ಅವಳ ಯುಕ್ತಿಯು ಸಾಧಿಸಿತು; ಯಾಕಂದರೆ ಪ್ರಭಾಕರನ ಹೆಸರು ಮತ್ತೆ ಕಿವಿಗೆ ಬಿದ ಕೂಡಲೆ ಭಾವೂಸಾಹೇಬರು ಮೆಟ್ಟಿಬಿದ್ದರು; ಮತ್ತು ಅವಿಶ್ವಾಸದ ದನಿಯಿಂದ:- ಏನು? ನೀನು ಅನ್ನುವದಾದರೂ ಏನು? ಪ್ರಭಾಕರನು ನಿನ್ನೆದುರಿಗೆ ಬಂದು ನಿಂತನೇ? ಹುಚ್ಚಿಯು ನೀನು! ನಿನಗೆ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೇ? ಹುಚ್ಚಿಲ್ಲದಿದ್ದರೆ ಮತ್ತೇನು? ಇಷ್ಟು ವರ್ಷಗಳಿಲ್ಲದಂತಾದವನೇನೋ ಬಂದನಂತೆ! ಸೆರೆಮನೆಯಿಂದ ಪಾರಾಗಿ ಬರಲಿಕ್ಕೆ ಇಡಿ ಹಿಂದುಸ್ತಾನದೊಳಗಿನ ಯಾವುದೊಂದು ಸೆರೆಮನೆಯಲ್ಲಿ ಕೂಡ ಆತನಿರಲಿಕ್ಕಿಲ್ಲ. ಸರಕಾರದವರು ಅವನನ್ನು ಅಂದಮಾನ ದ್ವೀಪಕ್ಕೆ ಕೂಡ ಕಳುಹಿಸಿರಬಹುದಾಗಿದೆ. ಅವನು ಅಲ್ಲಿಂದ ಪಾರಾಗಿ ಸಮುದ್ರವನ್ನೀಸಿ ಈ ದೇಶಕ್ಕೆ ಬರುವನೇ! ಅಂತೆಯೋ ಮಗಳೇ, ನಿನಗೆ ನಿಜವಾಗಿಯೂ ಹುಚ್ಚು ಹಿಡಿದಿರುವದು.

ತಂದೆಯು ತನಗೆ ಹುಚ್ಚೇ ಹಿಡಿದಿದೆಯೆನ್ನುತ್ತಿರುವಾಗ, ತಾನು ಆ ಹುಚ್ಚಿನ ಭರದಲ್ಲಿ ಇನ್ನೂ ತುಸ ಮುಂದಕ್ಕೆ ಹೋಗಬೇಕು; ಅಂದರೆ ಪ್ರಭಾಕರನ ವಿಷಯವಾಗಿ ಅಪ್ಪನ ಇಂಗಿತ ಮತವೇನೆಂಬದಾದರೂ ತಿಳಿದೀತೆಂದು ಯೋಚಿಸಿ, ವಿಮಲೆಯು ತನ್ನ ಆ ಅದ್ಭುತ ಪುರಾಣವನ್ನು ಮತ್ತೆ ಹೇಳತೊಡಗಿದಳು. ಆಕೆಯು ಆಗ ತುಸ ನಕ್ಕು, ಆದರೆ ಮನಸ್ಸಿನಲ್ಲಿ ನಿಜವಾಗಿಯೂ ಅಂದೆ, ಮತ್ತೆ

ಒಂದೊಂದೇ ಶಬ್ದವನ್ನು ಎಳೆಎಳೆದು ಅನ್ನುತ್ತಿದ್ದಳು:

ವಿ:—ನನಗೆ ಹುಚ್ಚೇ ಹಿಡಿದಿರುವುದಿಲ್ಲ, ಬೇಕಾದರೆ; ಆದರೆ ಅಪ್ಪಾ, ಆತನು ಒಂದುವೇಳೆ ಸಮುದ್ರವನ್ನೀಸಿ ಬರಲಿ; ಇಲ್ಲವೆ ಆಕಾಶದೊಳಗಿಂದ ಹಾರಿ ಬರಲಿ; ಹೇಗಾದರೂ ಮಾಡಿ ಬಂದೇಬಿಟ್ಟನೆಂದರೆ,....

ಭಾ:—ಬಂದೇಬಿಟ್ಟನೆಂದರೊ? ಹಾಗೊಂದು ವೇಳೆ ಬಂದರೂ ಅವನು ಮೊದಲಿನ ಸ್ವಭಾವದವನೇ ಆಗಿದ್ದರೆ, ನನಗವನ ಅವಶ್ಯಕತೆಯಿಲ್ಲ; ನಾನವನಿಗೆ ಆಶ್ರಯ ಕೊಡುವವನಲ್ಲ; ಆತನ ಮೋರೆ ಕೂಡ ನೋಡಲಿಕ್ಕಿಲ್ಲ!

ವಿಮಲೆಯು ಸಂಪೂರ್ಣ ನಿರಾಶೆಗೊಂಡಳು. ಗುಡ್ಡದ ತುದಿಯಿಂದ ಕೆಳಗೆ ನೂಕಿದಂತೆ ಅವಳಿಗನಿಸಿತು. ಅವಳಿಂದ ತನ್ನ ಮನಸೋದ್ಗಾರಗಳನ್ನು ತಡೆಯುವ ದಾಗಲಿಲ್ಲ. ಆದರಿಂದ ಅವಳು ಬಿಕ್ಕಿಬಿಕ್ಕಿ ಅಳುತ್ತ:—ಹರ ಹರ! ನನ್ನ ಆಶಾ ವಲ್ಲಿಯು ಪೂರಾ ಬತ್ತಿಹೋಯಿತು! ಹನ್ನೆರಡು ವರ್ಷಗಳಾಗುತ್ತ ಬಂದರೂ ಅಪ್ಪಾ, ಅಣ್ಣನ ಮೇಲಿನ ನಿಮ್ಮ ಸಿಟ್ಟು ಕಡಿಮೆಯಾಗುವದಿಲ್ಲವಲ್ಲವೇ? ಪ್ರಭಾ ಕರಣ್ಣನು ಮರಳಿ ಬಂದರೆ, ನೀವು ಆತನ ಮೋರೆ ಕೂಡ ನೋಡಲಾರಿರಾ? ಹೀಗೆ ನಿಮ್ಮ ಅಪರಾಧವನ್ನಾದರೂ ಆತನೇನು ಮಾಡಿರುತ್ತಾನೆ? ಒಂದು ವೇಳೆ ಅವ ನಿಂದ ಸರಕಾರದ ಅಪರಾಧವಾಗಿದ್ದೀತು; ಆದರೆ ಆತನು ನಿಮ್ಮ ಅಪರಾಧವನ್ನೇನು ಮಾಡಿರುವನು?

ಭಾ:—ಅಪರಾಧವಲ್ಲದಿದ್ದರೇನು? ಸಂಸ್ಥಾನದ ದರ್ಬಾರಿನ ಅಪರಾಧವೇ ನನ್ನ ಅಪರಾಧವೆಂದು ನಾನು ತಿಳಿಯುತ್ತಿರುತ್ತೇನೆ. ತಂಗೀ, ನೀನಾಗ ಚಿಕ್ಕವ ಳಿದ್ದೆ. ಆದರಿಂದ ನಿನಗದರೊಳಗಿನದೇನು ಗೊತ್ತಾಗಬೇಕು? ಈಗ ಹೇಳಿದರೆ ಅಲ್ಪಸ್ವಲ್ಪಾದರೂ ತಿಳಿದೀತು. ಅಂತೆಯೇ ಹೇಳುವೆನು ಕೇಳು: ಪರೋಪ ಕಾರದ ಇಲ್ಲದ ಉಸಾಬರಿ ಮಾಡಬೇಡೆಂದು ನಾನಾತನಿಗೆ ಹೇಳಿ ಹೇಳಿ ಬೇಸ ತ್ತೆನು; ಆದರೆ ಆತನು ನನ್ನ ಆ ಮಾತು ಕೇಳದೆ, ದರಬಾರದ ರಾಜಕಾರಣದಲ್ಲಿ ಮನಸ್ಸು ಹಾಕಿದನು. ರಾಜಕಾರಣದಲ್ಲಿಯೇ ತೊಡಗಿದನೆಂತಲ್ಲ; ಮೇಲೆ ರಾಜ ದ್ರೋಹದಲ್ಲಿಯೂ ಸಿಕ್ಕನು! ಮತ್ತು ಖುದ್ದ ದಿವಾಣಸಾಹೇಬರ ಕೊಲೆಯು ಕಟ್ಟು ಮತ್ತು ಪ್ರಯತ್ನಕ್ಕೆ ಪ್ರಾರಂಭಿಸಿವನು! ತಂಗೀ, ವಿಮಲಾ, ನಿನ್ನ ತಂದೆಯು ತನ್ನ ಇಡೀ ಜನ್ಮವನ್ನು ನೌಕರಿಯಲ್ಲಿ ಕಳೆದವನು. ಕೆಲವು ವರ್ಷ ಬ್ರಿಟಿಶ ಮುಲುಖಿನಲ್ಲಿಯೂ ಕೆಲವು ವರ್ಷ ಸಂಸ್ಥಾನೀ ದರಬಾರದಲ್ಲಿಯೂ ಹೆಸರು ಪಡೆದಿರುವನು. ರಾಜನಿಷ್ಠೆಯ ವ್ರತವನ್ನು ಸ್ವೀಕರಿಸಿ ಅದನ್ನು ನಡೆಸಿದವನು. ಆದರಿಂದ ನನಗೆಷ್ಟೋ ಉತ್ತಮ ಸರ್ಟಿಫಿಕೇಟುಗಳೂ, ಬಹುಮಾನದ ಉಡುಗೊರೆ ಗಳೂ ದೊರೆತಿರುವವು. ದೇವರ ದಯೆಯಿಂದ ನಾಲ್ಕು ದುಡ್ಡು ಸಂಪಾದಿ

ಸಿದೆನು. ಇಂಥ ಸ್ಥಿತಿಯಲ್ಲಿ ನನ್ನ ಕರೇ ಕೂದಲುಗಳು ಬೆಳ್ಳಗಾಗಿ, ಪೆನ್‌ಶನ್ ಪಡೆಯುವ ಸಮಯದಲ್ಲಿ ಆ ಪ್ರಭಾಕರನು-ಪ್ರತ್ಯಕ್ಷ ನನ್ನ ಮಗನು-ಹೀಗೆ ರಾಜದ್ರೋಹಿಯೂ ಕೊಲೆಗಾರನೂ ಆಗುವದು ನಿನಗಾದರೂ ಯೋಗ್ಯವೆನಿಸೀತೇ? ಅದರಿಂದ ನನಗೆಷ್ಟು ಲಾಂಛನವೆನಿಸಿದ್ದೀತು? ದಿವಾಣಸಾಹೇಬರ ಕೊಲೆಯ ಖಟ್ಲೆಗೆ ಪ್ರಾರಂಭವಾಗುವ ಮೊದಲೇ ಆತನು ಫರಾರಿಯಾದನೆಂದು ವಿಹಿತವಾಯಿತು; ಇಲ್ಲದಿದ್ದರೆ ನಾನಾಗಿ ಆತನನ್ನು ದರ್ಬಾರಕ್ಕೊಪ್ಪಿಸುವ ಪ್ರಸಂಗವಿತ್ತು! ಆದದ್ದಾಯಿತು; ಆದರೆ ಸಟಿ-ದಿಟಗಳ ನಿರ್ಣಯ ಮಾಡಲಿಕ್ಕೆ ಅವನೇ ಇಲ್ಲ. ಒಬ್ಬಿಬ್ಬ ಸಂಗಡಿಗರೊಡನೆ ಆತನ ನಿರ್ಣಯವೂ ಆಯಿತು. ಆತನ ಗೈರಹಾಜರಿಯಲ್ಲೇ ಅವನಿಗೆ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತು. ಅವನು ಸಿಕ್ಕಾಗ ಚೌಕಶಿ ಮಾಡದೆ ಆತನನ್ನು ಅಂದಮಾನ ದ್ವೀಪಕ್ಕೆ ಕಳಿಸುವ ಹುಕುಮೂ ಆಯಿತು; ಮತ್ತು ಇಷ್ಟರಲ್ಲಿ ಅವನೆಲ್ಲಿಯಾದರೂ ಸಿಕ್ಕಿದ್ದರೆ, ಅವನನ್ನು ಅಲ್ಲಿಗೆ ಕಳಿಸಿಯೂ ಬಿಟ್ಟಿದ್ದಾರು.

ವಿ:—ಆದರೆ ಅಪ್ಪಾ, ನಾನು ಕೇಳುವ ಪ್ರಶ್ನೆಗೆ ಸಿಟ್ಟಾಗದೆ ಉತ್ತರ ಕೊಡುವಿರಾ? ಅಣ್ಣನ ಮೇಲೆ ದಿವಾಣಸಾಹೇಬರ ಕೊಲೆಗೆ ಪ್ರಯತ್ನಿಸಿದ ಆರೋಪವಿದ್ದೀತು; ಆದರೆ ಅದರ ಸಟಿ-ದಿಟಗಳ ಖಾತ್ರಿಯನ್ನು ನೀವು ಸ್ವಂತ ಮಾಡಿಕೊಂಡಿದ್ದೀರೇನು?

ಭಾ:—ತಂಗೀ, ಅದರಲ್ಲಿ ಖಾತ್ರಿಯೇನು ಮಾಡಿಕೊಳ್ಳತಕ್ಕದ್ದು? ಅವನು ಓಡಿಹೋದ-ಫರಾರಿಯಾದ. ಅಂದಮೇಲೆ ಆತನ ಗುನ್ಹೆಗೆ ಪುರಾವೆಯದೇನು ಕಾರಣವು? ಅಲ್ಲದೆ, ಆತನ ಸ್ವಭಾವವು ಎಷ್ಟು ಸಿಡಕಿನದಿದ್ದಿತು? ಅವನು ತಲೆತಿರುಗಿದವರ ಹಾಗೆ ಹೇಗೆ ಮಾಡುತ್ತಿದ್ದನು? ಇದರ ಕಲ್ಪನೆಯು ನಿನಗೆ ಹೇಗೆ ಆಗಬೇಕು? ಆತನು ಈಗ ಬಂದರೆ ನೀವೇನು ಮಾಡುವಿರೆಂದು ನೀನು ನನ್ನನ್ನು ಕೇಳುತ್ತಿರುವೆ. ಏನು ಮಾಡುವೆನೆಂದೆಯಾ? ಈ ಮೊದಲು ಏನು ಮಾಡುತ್ತಿದ್ದೆನೋ ಈಗಲೂ ಅದನ್ನೇ ಮಾಡುವೆನು. ದರಬಾರದೊಳಗಿನ ನನ್ನ ಮಾನ ಮರ್ಯಾದೆಯ ಬೆಲೆಯು ಇಂಥ ಹುಡುಗನಿಗಿಂತ ನನಗೆ ಹೆಚ್ಚು ತೋರುತ್ತದೆ. ತಿಳಿಯಿತೇ? ಕುಸಂತಾನಕ್ಕಿಂತ ನಿಸ್ಸಂತಾನವೇ ಲೇಸು!

ಆಯಿತು! ಹೋಳೀಹುಣ್ಣಿವೆಯೇ ಆಗಿಹೋಯಿತು! ಇನ್ನು ಇದೇ ವಿಷಯವಾಗಿ ಮಾತನಾಡುವದರಲ್ಲಿ ಅರ್ಥವಿಲ್ಲೆಂದು ತಿಳಿದು, ವಿಮಲೆಯು ಬೇರೆ ವಿಷಯ ತೆಗೆಯುವದನ್ನು ಮನಸ್ಸಿನಲ್ಲಿ ಗೊತ್ತು ಮಾಡಿಕೊಂಡು:—"ಅಪ್ಪಾ; ಅದಿರಲಿ ಬಿಡಿರಿ. ಸುಮ್ಮನೆ ವಾದವೇತಕ್ಕೆ?" ಎಂದಳು. ಇಂಥ ಅಪ್ರಿಯ ಮತ್ತು ಕಟುತರ ಸಂಭಾಷಣವನ್ನು ಕೊನೆಗೆ ಏನಾದರೂ ಹಾಸ್ಯ-ವಿನೋದದಿಂದಲೇ ಸಮಾಪ್ತಿ

ಗೊಳಿಸದಿದ್ದರೆ ವಿಹಿತವಾಗುವದಿಲ್ಲೆಂಬದನ್ನು ತಿಳಿದ ಅವಳು, ಒಂದು ಯುಕ್ತಿ ಮಾಡಿದಳು. ಕೂಡಲೆ ಅವಳೊಂದು ನಿಟ್ಟುಸಿರುಗರೆದು ತುಸ ಸ್ಮಿತವದನದಿಂದ:-ಅಪ್ಪಾ, ಕಡೆಗೆ ನಾನು ಅಂದಂತೆಯೇ ಆಯಿತಲ್ಲವೆ? ಭಾ:—ತಂಗೀ, ಅದೇನು?

ವಿ:—ನಾನೂ ನೀವೂ ಪರಸ್ಪರರಿಗೆ ಏನಾದರೂ ಅದ್ಭುತ ಇಲ್ಲವೆ ಸೋಜಿಗದ ಹೊಸ ಸುದ್ದಿ ಹೇಳುವದನ್ನು ಗೊತ್ತುಮಾಡಿಕೊಂಡಿದ್ದೆವಷ್ಟೆ? ನೀವು ಹೇಳಿದ ಸುದ್ದಿಯು ರಾಮಾಯಣವಾಯಿತೆಂದಂದಿರಿ; ಅದರಂತೆ ನಾನು ಹೇಳಿದ್ದು ಭಾರತವಾಗಬಾರದೆಂದು ನಾನು ಆಗಲೆ ಅಂದಿದ್ದೆನು; ಆದರೆ ಕಡೆಗೆ ಅದು ಹಾಗೆಯೇ ಆಗಿಹೋಯಿತು!

ಭಾ:—ಹೀಗೆಯೋ? ಅದು ಹೇಗೆ ಹೇಳು ನೋಡುವಾ.

ವಿ:—ಪ್ರಭಾಕರಣ್ಣನು ಬಂದು ನನ್ನೆದುರಿಗೆ ನಿಂತುಕೊಂಡಂತಾಯಿತೆಂಬ ಶಬ್ದಗಳನ್ನಷ್ಟೇ ನಾನು ಉಚ್ಚರಿಸಿದೆನು; ಆದರೆ ಮುಂದೆ ಇನ್ನೂ ಕೆಲ ಶಬ್ದಗಳನ್ನುಚ್ಚರಿಸತಕ್ಕವಳಿದ್ದೆನು. ಅಷ್ಟರಲ್ಲಿಯೇ ನೀವು ಸಿಟ್ಟಿಗೆದ್ದ ಮೂಲಕ ಆ ನನ್ನ ಶಬ್ದಗಳು ನನ್ನ ಬಾಯೊಳಗೇ ಉಳಿದು ಬಿಟ್ಟವು.

ಭಾ:—ಆ ಶಬ್ದಗಳಾವವು?

ವಿ:—ಅಣ್ಣನು ಬಂದು ನನ್ನೆದುರಿಗೆ ನಿಂತಂತಾಯಿತು! ಇಷ್ಟರಲ್ಲಿ ನನಗೆ ಎಚ್ಚರವಾಯಿತು. ಬೆಳಗಿನ ಜಾವವೇ ಅದು; ಮತ್ತು ಆಗ ನನಗಂತಹ ವಿಚಿತ್ರ ಸ್ವಪ್ನ ಬಿದ್ದಿತಲ್ಲರೀ! ಇದು ಅದ್ಭುತವಲ್ಲದೆ ಮತ್ತೇನು? ಅಪ್ಪಾ, ನಸುಕಿನಲ್ಲಿ ಕಂಡ ಸ್ವಪ್ನಗಳು ನಿಜವಾಗುತ್ತವೆಂದು ಅನ್ನುವರಲ್ಲ; ಅದು ನಿಜವೇ?

ಭಾ:—ಇಷ್ಟೇ ಅಲ್ಲವೇ? ಒಟ್ಟಿನಲ್ಲಿ ಅದು ಸ್ವಪ್ನವೇ ಅನ್ನು. ನಡೆ ಹಾಗಾದರೆ, ನನ್ನ ಸುದ್ದಿಯೇ ಹೊಸದು; ಮತ್ತು ನಿಜವು. ನಿನ್ನದು ಕೇವಲ ಸುಳ್ಳು.

ಹೀಗೆಂದು ಆ ಮುದುಕನು ಪ್ರೇಮಭರದಿಂದ ತನ್ನ ಮಗಳ ಬೆನ್ನಮೇಲೆ ಕೈಯಾಡಿಸಿ, ಗಟ್ಟಿಯಾಗಿ ನಕ್ಕುಬಿಟ್ಟನು.

---

## ೭ ಚಂಡಾಳ-ಚೌಕಳಿಯ ಗುಜಗೋಷ್ಠಿ.

ಇಂದು ಪೋಲಿಟಿಕಲ್ ಏಜಂಟಸಾಹೇಬರ ಕಚೇರಿಯು ಜನರಿಗೆ ದಿವಾಣಸಾಹೇಬರ ಮನೆಯು ಮೇಜವಾನಿಯಿದ್ದಿತು. ಆ ಕಚೇರಿಯು ಜೋದ್ಯಪುರ ಸಂಸ್ಥಾನಕ್ಕೆ ವರ್ಷಕ್ಕೊಮ್ಮೆ ತಪ್ಪದೆ ಬರುತ್ತಿತ್ತು. ವಾರ್ಷಿಕ ತಪಾಸಣೆಯ ಕೆಲಸವೇ ಭೆಟ್ಟಿಯು ಪ್ರಾಮುಖ್ಯವಾದ ಉದ್ದೇಶವು; ಆದರೆ ಆ ಭೆಟ್ಟಿಯಲ್ಲಿ ಎಷ್ಟೋ ಗುಪ್ತ ಮತ್ತು ಎಷ್ಟೋ ಪ್ರಕಟವಾದ ಕೆಲಸಗಳ ನಿಕಾಲೆಯಾಗುತ್ತಿತ್ತು. ಖುದ್ದ ಯಜಮಾನರು ಮತ್ತು ಖುದ್ದ ಏಜಂಟಸಾಹೇಬರು ಇವರ

ಭೆಟ್ಟಿ-ಪ್ರತಿಭೆಟ್ಟಿಗಳು, ಒಂದು ದೊಡ್ಡ ದರಬಾರ ಹಾಗು ಒಂದು ಸಮೋಚೀನ ವಾದ ಔತಣ-ಖಾನಾ, ಇಷ್ಟಾದವೆಂದರೆ ಸರಕಾರೀ ಕೆಲಸವು ಬಹುಮಟ್ಟಿಗೆ ಪೂರೈಸಿದಂತಾಗುತ್ತಿತ್ತು; ಆದರೆ ಅರ್ಧ ಸರಕಾರೀ, ಖಾಸಗೀ ಹಾಗು ತೀರ ಖಾಸಗೀ, ಅಂದರೆ ಗುಪ್ತ ಕೆಲಸಗಳೇ ಹೆಚ್ಚಾಗಿರುತ್ತಿದ್ದವು; ಮತ್ತು ಖುದ್ದ ಯಜಮಾನ-ಏಜಂಟಸಾಹೇಬರ ಕೆಲಸಗಳಿಗೆ ಒಂದೇ ದಿನವು ಸಾಕಾದರೆ, ಇನ್ನುಳಿದವರ ಅವಾಂತರ ಕೆಲಸಗಳಿಗೆ ಮೂರು-ನಾಲ್ಕು ದಿನಗಳು ಬೇಕಾಗುತ್ತಿದ್ದವು. ಆ ಕೆಲಸಗಳ ಅಂತರಂಗ ಮಾಹಿತಿಯು ಯಜಮಾನರಿಗೂ ಏಜಂಟರಿಗೂ ಕೂಡಿಯೇ ಇರುತ್ತಿತ್ತು; ಆದರೂ ಅವರೆದುರಿಗೆ ಆ ಕೆಲಸಗಳಾಗಲಿಕ್ಕೆ ಸಹಜವಾಗಿಯೇ ನಾಚಿಕೆ ಮತ್ತು ಕಳವು ಎನಿಸುತ್ತಿತ್ತು. ಅದಕ್ಕಾಗಿಯೇ ಆ ಮೂರು-ನಾಲ್ಕು ದಿನಗಳ ವರೆಗೆ ಸಂಸ್ಥಾನಿಕರೂ ಏಜಂಟಸಾಹೇಬರೂ ಕೂಡಿಯೇ ರಾಜಧಾನಿ ಬಿಟ್ಟು ಬೇರೆ ಕಡೆಗೆ ಬೇಟೆ ಮುಂತಾದ ನೆವದಿಂದ ಹೊರಟು ಹೋಗುವ ಹಳೇ ರೂಢಿಯು ಬಿದ್ದಿರುತ್ತದೆ.

ಆದರೆ ಜೋಧ್ಯಪುರದ ಹೊಸ ಸಂಸ್ಥಾನಿಕನಾದ ಜೋಜಿಗರಾಯನು ಈ ರೀತಿಯಲ್ಲಿ ವಿಶೇಷ ಹೆಚ್ಚು ಕಡಿಮೆ ಮಾಡಿದನು. ಆತನು ಭೆಟ್ಟಿ-ಪ್ರತಿಭೆಟ್ಟಿಗಳ ಕಾರ್ಯಕ್ರಮವನ್ನಿಟ್ಟನು; ಆದರೆ ದರ್ಬಾರವನ್ನು ಅಷ್ಟು ಭವ್ಯವಾಗಿ ನೆರಿಸದೆ, ಕೆಲಸದ ಮಟ್ಟಿಗಷ್ಟೇ ಕೂಡಿಸಿದನು. ಔತಣಕ್ಕೆ ಹೊರಗಿನ ಹತ್ತೆಂಟು ಜನರಿಗೂ ನಿಮಂತ್ರಣವನ್ನೀಯಲಿಲ್ಲ. ಭಾಷಣಗಳಿಗೆ ಬಹಿಷ್ಕಾರವನ್ನಿಕ್ಕಿ, ಕೇವಲ ಬಾದಶಹರ ಹೆಸರಿನ ಜಯಘೋಷವನ್ನು ಮಾತ್ರ ಇಟ್ಟನು. ಬೇಟೆ ಮುಂತಾದವುಗಳಿಗಂತೂ ಒಮ್ಮೆಲೆ ಅರ್ಧಚಂದ್ರವನ್ನೇ ತೋರಿಸಿದನು! ಅದರಿಂದ ಏಜಂಟಸಾಹೇಬರು ಬಂದ ಮರುದಿನವೇ, ಬಂದ ದಾರಿಗೆ ಸುಂಕವಿಲ್ಲೆಂಬಂತೆ ಹೊರಟರು; ಆದರೆ ಶಿರಸ್ತೆದಾರರ ಕಚೇರಿಯು ಒಂದು ದಿನ ಹಿಂದುಳಿಯಿತು. ಯಾಕಂದರೆ, ಅವರೆಲ್ಲರೂ ದಿವಾಣಸಾಹೇಬರ ಮನೆಯ ಮೇಜವಾನಿ ಹೊಡೆಯುವದುಳಿದಿತ್ತು. ಕಾರಕೂನ, ಶಿಪಾಯಿಗಳ ಇನಾಮು-ಬಕ್ಷೀಸುಗಳನ್ನೆಬ್ಬಿಸುವ ಕಾರ್ಯವು ಇಡೀ ದಿವಸ ನಡೆದೇ ಇದ್ದಿತು. ಸಂಜೆಯ ಮುಂದೆ ಸಾರ್ವಜನಿಕ ಮೇಜವಾನಿಯೂ, ನಾಚು-ರಂಗಿನ ಬೈಠಕಗಳೂ ಆದ ಮೇಲೆ ಕೇವಲ ಹಿತಗುಜದ ಎರಡು-ಮೂರು ಖಾಸ ಜನರು ಮಾತ್ರ ದಿವಾಣಸಾಹೇಬರ ಮೂರನೇ ಅಂತಸ್ತಿನ ದಿವಾಣಖಾನೆಯಲ್ಲಿ ಹರಟೆ ಕೊಚ್ಚುತ್ತ ಕುಳಿತಿದ್ದರು. ಖಾನಾದ ಸಮಾರಂಭವು ಕೆಳಗಿನ ಅಂತಸ್ತಿನಲ್ಲಿ ತೀರಿಹೋಗಿತ್ತು. ಇನ್ನು ಪಾನದ-ಕುಡಿಯುವ-ಸಮಾರಂಭವು ಮಾತ್ರ ಅಲ್ಲಿ ನಡೆಯಬೇಕಾಗಿತ್ತು. ಆ ಕಾಲಕ್ಕೆ ಸಂಭಾಷಣವು ಒಳ್ಳೇ ಸಂಪಿಗೆ ಬಂದಿದ್ದರೇನು ನೋಜಿಗವು?

ಇಷ್ಟರಲ್ಲಿ ಸುಭೇದಾರರೂ ಅಲ್ಲಿಗೆ ಬಂದು ಸೇರಿದರು. ಅವರಿಗೆ ದಿವಾಣಸಾಹೇಬರ ಅಂತರಂಗದಲ್ಲಿ ಯಾವಾಗಲೂ ಪ್ರವೇಶವಿದ್ದದ್ದೇ. ಸುಭೇದಾರರ ಬೇಳೆಯು ಭಾವೂಸಾಹೇಬರ ಹತ್ತರ ಚೆನ್ನಾಗಿ ಬೆಂದಿರಲಿಲ್ಲ; ಆದರೆ ಸುಭೇದಾರರ ಮಗನು ಭಾವೂಸಾಹೇಬ ಡಬೀರರಿಗೆ ದತ್ತಕಾಗುವದರಿಂದ ದಿವಾಣಸಾಹೇಬರಿಗೂ ಚೆನ್ನಾಗಿ ಲಾಭವಿತ್ತು. ಆದರಿಂದ ಈ ವಿಷಯದಲ್ಲಿ ಏನೇನಾಗುವದೋ ಅದೆಲ್ಲವನ್ನೂ ಉಪ್ಪುಕಾರ ಹಚ್ಚಿ ಹೇಳುವ ಕೆಲಸವು ಅವರದೇ ಆಗಿತ್ತು.

ದಿವಾಣಸಾಹೇಬ: - ಸುಭೇದಾರರೇ, ನಿಮ್ಮ ಬೇಟೆಯು ಎಲ್ಲಿಗೆ ಬಂದಿತು?

ಸುಭೇದಾರ:—ಬೇಟೆಯು ಪ್ರತ್ಯಕ್ಷ ಸಾಧಿಸಿದಾಗಲೇ ನಿಜವು. ಭಾವೂಸಾಹೇಬರೊಡನೆ ದತ್ತಕದ ಬಗ್ಗೆ ಮಾತು-ಕಥೆಗಳನ್ನೇನೋ ಆಡಿರುತ್ತೇನೆ.

ದಿ:—ಅದಕ್ಕೆ ಅವರೇನೆಂದರು?

ಸು:—ನನ್ನ ನಾಲಿಗೆಯ ಮೋಹಿನಿಯು ಯಾರ ಮೇಲಾದರೂ ತನ್ನ ಪ್ರಭಾವವನ್ನು ತೋರದಿದ್ದೀತೆಂದು ತಮಗನಿಸುವದೇ? ದಿವಾಣಸಾಹೇಬರೆ, ನಾನು ತಮಗೊಂದು ಮಾತು ಹೇಳಿಡುತ್ತೇನೆ, ಮನುಷ್ಯನು ಮುದುಕನಾದನೆಂದರೆ, ಆತನ ಮನಸ್ಸು ಅಂಜುಬುರುಕ ಹಾಗು ಶಕ್ತಿಹೀನವಾಗುತ್ತದೆ; ಹಾಗಾಯಿತೆಂದರೆ, ಆತನಿಗೆ ಧರ್ಮದ ಹುಚ್ಚು ಹಿಡಿಯಿತೆಂದೇ ತಿಳಿಯಬೇಕು.

ದಿ:—ಆದರೆ ಭಾವೂಸಾಹೇಬ ಮತ್ತು ಧರ್ಮ ಇವೆರಡೂ ಶಬ್ದಗಳನ್ನು ಒಂದೇ ನಾಲಿಗೆಯಿಂದ ಉಚ್ಚರಿಸಬೇಕೋ-ಬಾರದೋ ಎಂಬ ಬಗ್ಗೆ ನನಗೆ ಸಂದೇಹವೇ ಎನಿಸುತ್ತದೆ; ತೀರ ಇತ್ತೀಚೆಗಿನ ಅವರ ಸಂಗತಿಯು ನನಗೆ ಗೊತ್ತಿಲ್ಲ; ಆದರೆ ಭಾವೂಸಾಹೇಬರ ಪೂರ್ವಾಶ್ರಮದ ಚರಿತ್ರವು ಯಾರಿಗೆ ಗೊತ್ತಿದೆಯೋ, ಅವರಿಗೆ ನಿಮ್ಮ ಭಾಷಣವು ಹೇಗೆ ಹೇಗೋ ಅನಿಸೀತು! ಭಾವೂಸಾಹೇಬರಿಂದಾಗದಂತಹ ಪಾತಕವು ಈ ಲೋಕದಲ್ಲಿಯೇ ಇರಲಾರದೆಂದು ನನ್ನ ಪ್ರಾಮಾಣಿಕವಾದ ಮತವಿದೆ.

ಸು: —ಆದರೆ ಮನುಷ್ಯಸ್ವಭಾವದ ಮೋಜೇನಂದರೆ, ಪೂರ್ವಾಶ್ರಮದ ಪಾಪಾಚರಣವು ಎಷ್ಟು ಅಧಿಕವೋ, ಅಷ್ಟು ಹೆಚ್ಚು ಧರ್ಮಾಚರಣವು ಉತ್ತರಾಶ್ರಮದಲ್ಲಿ ಚೆನ್ನಾಗಿ ಶೋಭಿಸುತ್ತದೆ. ಯಾರು ಯಾವ ಗಿಂಡಿಯೊಳಗಿಂದ ತಮ್ಮ ತಾರುಣ್ಯದಲ್ಲಿ ಮನಸೋಕ್ತವಾಗಿ ಮಧ್ಯಪ್ರಾಶನ ಮಾಡಿದ್ದರೋ, ಅದೇ ಗಿಂಡಿಯೊಳಗಿನ ಗಂಗೋದಕವು ಕೈ ಮೇಲೆ ಬೀಳದ ಹೊರತು ಊಟದ ಆಪೋಶನವನ್ನೇ ತೆಗೆದುಕೊಳ್ಳದಂತಹ ಒಂದೆರಡಲ್ಲ, ಹತ್ತಿಪ್ಪತ್ತು ಜನ ಪೆನ್‌ಶನ್‌ದಾರರನ್ನು ನಾನು ನೋಡಿರುತ್ತೇನೆ. ಮೊದಲಿನ ಅಭಕ್ಷ್ಯಭಕ್ಷಣದ ಅಜೀರ್ಣಕ್ಕೆ ಮದ್ದೆಂದು ಅವರು ಇತ್ತೀಚೆಗೆ ಉಪೋಣಗಳ ಮೇಲೆ ಉಪೋಣಗಳನ್ನು ನಡಿಸಿರುತ್ತಾರೆ.

ಪೆನ್‌ಶನ್ನಿನ ಅರ್ಜಿಗೆ ಸಹಿ ಮಾಡುವಾಗ ಕೈ ಬೆರಳುಗಳೊಳಗಿಂದ ಯಾವ ಧರ್ಮದ ಹುಚ್ಚೊಮ್ಮೆ ಅವರ ಮೈಯನ್ನಡರಿ ಬಿಡುವುದೋ, ಮುಂದೆ ಏನು ಮಾಡಿದರೂ ಅದು ಅವರನ್ನು ಬಿಡುವದಿಲ್ಲ.

ದಿ:—ಭಲೆ! ಹಾಗಾದರೆ. ನಾವಿನ್ನು ಎಚ್ಚರದಿಂದಲೇ ವರ್ತಿಸಬೇಕಾಯಿತು! ಯಾಕಂದರೆ, ಮುಂದಿನ ವರ್ಷವೇ ನಾವು ಪೆನ್‌ಶನ್ ಪಡೆಯತಕ್ಕವರು; ಮತ್ತು ಬೇರೆ ಉಪಂಗ ಮುದುಕರಂತೆ ಧರ್ಮದ ಹುಚ್ಚಿಗೆ ಎಡೆಗೊಡಬಾರದೆಂದು ನಮ್ಮ ನಿಶ್ಚಯುವಿರುತ್ತದೆ.

ಸು:—ತಮ್ಮ ಮಾತೇ ಬೇರೆ. ನಾನು ತಮ್ಮ ಸ್ತುತಿ ಮಾಡಹೋದರೂ ಅದು ನಿಂದೆಯೋ ಎಂದು ಭಾಸವಾದೀತು! ಧರ್ಮದ ಪ್ರತ್ಯಕ್ಷ ತಂದೆ ಬಂದರೂ ಅದರ ಪಾಶವು ತಮ್ಮ ಮೇಲೆ ಬೀಳಲಿಕ್ಕಿಲ್ಲ. ಗಟ್ಟಿ ಮನಸ್ಸಿನ ಖಂಬೀರರ ರೀತಿಯೇ ಇದು.

ದಿ:—ಅದಿರಲಿ. ಭಾವೂಸಾಹೇಬರೇನೆಂದರೆಂಬದನ್ನು ನೀವು ತಿಳಿಸಲಿಲ್ಲವಲ್ಲ?

ಸು:—ಭಾವೂಸಾಹೇಬರ ಮಾನಸಿಕ ದೃಷ್ಟಿಯ ಎದುರಿಗೆ ನಾನು ಧರ್ಮಶಾಸ್ತ್ರದ ದುರ್ಬಿಣು ಹಿಡಿಯಲು ಮತ್ತು ಪರಲೋಕದೊಳಗೆ ನಿಪುತ್ರಿಕರಿಗಾಗಿ ಒಡಿಸಿಟ್ಟ ನರಕವನ್ನು ತೋರಿಸಲು, ಕೂಡಲೆ ಅವರು:—"ಒಳ್ಳೇದು. ವಿಚಾರ ಮಾಡುತ್ತೇನೆ" ಎಂದು ಅಂದರಲ್ಲದೆ, ನನ್ನ ಮಗನನ್ನು ದತ್ತಕ ಮಾಡಿಕೊಳ್ಳಬೇಕೆಂಬ ನನ್ನ ಕಲ್ಪನೆಯೂ ಅವರಿಗೆ ಸಮ್ಮತವಾದಂತೆ ತೋರಿತು. ನಾವೀವ್ಹರೂ ಒಂದೇ ಗೋತ್ರಜರಲ್ಲವೆ? ಆಯಿತು. ಅದೆಲ್ಲವೂ ಆಯಿತು. ಆದರೆ....

ಎಂದಂದು, ತಾನಿನ್ನು ಒಳ್ಳೇ ಅದ್ಭುತ ಸಂಗತಿ ತಿಳಿಸಕ್ಕವನೆಂಬದರ ಒಹು ಮೋಜಿನ ಕಪಟದ ಆವಿರ್ಭಾವವನ್ನು ಆ ಸುಭೇದಾರನು ಮಾಡಿದನು. ಆತನು ತನ್ನ ಹುಬ್ಬುಗಳನ್ನೇರಿಸಿದನು. ಮೈಮುರಿದಂತೆ ಮಾಡಿದನು. ಎರಡೆರಡು ಸಾರೆ ಅತ್ತಿತ್ತ ಹೊರಳಿ ನೋಡಿದನು. ಕಿವಿಯಾನಿಸಿ ನೋಡಿದಂತೆ ಮಾಡಿದನು. ಕೆಮ್ಮಿದನು. ಖೇಕರಿಸಿದನು. ದನಿಯನ್ನು ಕಿರಿ ಸಪ್ತಕಕ್ಕಿಳಿಸಿದನು. ಅದನ್ನು ಕಂಡು ದಿವಾಣಸಾಹೇಬರು:—ಆದರೇನು? ನಡುವೇ ನೊಣ ಸೀತಿತೇನು? ಆ ಮುದುಕನ ಮನಸ್ಸು ಧರ್ಮದ ಹುಚ್ಚಿನಿಂದ ಎಷ್ಟು ತುಂಬಿರುತ್ತದೋ, ಅಷ್ಟೇ ಚಂಚಲವೂ ಆಗಿರುತ್ತದೆ.

ಸು:—ಛೇ! ನಾನು ಚಂಚಲತನದ ದೋಷವನ್ನು ಆ ಭಾವೂಸಾಹೇಬರಿಗೆ ಕೊಡಲಾರೆನು. ನನಗೆ ಇನ್ನು ಸ್ವಲ್ಪ ಅವಕಾಶ ದೊರೆತಿದ್ದರೆ ನನ್ನ ಕೆಲಸವನ್ನು ಪೂರೈಸಿಕೊಂಡೇ ಬರುತ್ತಿದ್ದೆನು; ಅಷ್ಟರಲ್ಲಿ ಪೋಷ್ಟಮನ್ನನು ಹಿತ್ತಲಬಾಗಿಲದಿಂದ ಮಾಯಿಸಾಹೇಬರಿಗೊಂದು ಪತ್ರ ಕೊಟ್ಟು ಹೋದನೆಂಬ

ಸುದ್ದಿಯು ಅಲ್ಲಿಗೆ ಬಂದಿತು. ಆ ಮೇಲೆ ಕೇಳುವದೇನು? ಭಾವೂಸಾಹೇಬರ ಸವಾರಿಯು ಒಮ್ಮೆಲೆ ತಾಳಬಿಟ್ಟಿತು! ಮತ್ತು ಅದಕ್ಕಾಗಿಯೇ ನಾನಲ್ಲಿಂದ ಹೊರಟು ಬರಬೇಕಾಯಿತು.

ದಿ: - ನಿಮ್ಮ ಮಾತಿನ ಸಂದರ್ಭವು ತಿಳಿಯಿತು; ಮಾಯಿಸಾಹೇಬರಿಗೆ ಪತ್ರ ಬಂದದ್ದರಿಂದ ಭಾವೂಸಾಹೇಬರೇಕೆ ತಾಳ ಬಿಟ್ಟರೆಂಬದೂ ತಿಳಿಯಿತು. ಅದು ನಿಮಗೂ ಹೊಳೆದಿದ್ದೀತು.

ಕೇವಲ ಬುದ್ಧಿಹೀನರ ವೇಷ ಧರಿಸಿ, ಸುಭೇದಾರನು ಬಸವಣ್ಣನಂತೆ ತಲೆಯನ್ನಲ್ಲಾಡಿಸುತ್ತ:—ಛೇ! ನನಗದೇನೂ ಹೊಳೆಯುಲಿಲ್ರೆಪ್ಪಾ!

ದಿ:—ಭಾವೂಸಾಹೇಬರು ಇನ್ನು ಬೇಗನೆ ಆ ತಮ್ಮ ತರುಣ ಪತ್ನಿಯನ್ನು ಬಿಟ್ಟು, ಎಂದೂ ತಿರುಗದ ಲೋಕಕ್ಕೆ ಹೊರಟುಹೋಗತಕ್ಕವರು. ಅಂದಮೇಲೆ ಹಿಂದುಳಿಯುವ ಆ ಮಾಯಿಸಾಹೇಬರಾದರೂ ತಮಗೆ ಯಾವನೊಬ್ಬ ಸಂಗಡಿಗನನ್ನು ನೋಡಿಕೊಳ್ಳಬೇಡವೇ? ಆ ಸಿದ್ಧತೆಯೇ ಅದಾಗಿರಬಹುದು. ಅದಿರದಿದ್ದರೆ ಭಾವೂಸಾಹೇಬರು ಸುಮ್ಮಸುಮ್ಮನೆ ಏಕೆ ತಾಳಗೆಡುವರು? ಮಾಯಿಸಾಹೇಬರು ಪರಸ್ಪರ ಪತ್ರವ್ಯವಹಾರವನ್ನಷ್ಟೇ ಮಾಡುವರು; ಮನೆಗೆ ಯಾವನೊಬ್ಬ ಗೆಳೆಯ-ಮಿಂಡನನ್ನಿನ್ನೂ ಬರಮಾಡಿಕೊಳ್ಳದಿರುವದು ಭಾವೂಸಾಹೇಬರ ಭಾಗ್ಯವೆಂದೇ ಅನ್ನಬೇಕು.

ಸುಭೇದಾರರು ಮತ್ತೂ ಹುಚ್ಚು ಮೈಮೇಲೆ ಹಾಕಿಕೊಂಡು:—ಛೇ! ಛೇ! ನಾನಂತೂ ಹೀಗೆ ಯಾರ ನಿಂದೆಯನ್ನೂ ಮಾಡಲಾರೆನು.

ದಿ:— ಛೇ! ಛೇ! ನಿಮಗೆ ಮಂದಿಯ ನಿಂದೆ ಮಾಡುವದು ಹೇಗೆಂಬದು ಗೊತ್ತೇ ಇರಲಿಕ್ಕಿಲ್ಲ. ಪಾಪ!

ಸು:—ಆದರೆ ಈ ಬಗ್ಗೆ ತಮ್ಮ ತರ್ಕವೇನೆಂಬದು ತಿಳಿಯುಲಿಲ್ಲವಲ್ಲ?

ದಿ:—ನಮ್ಮ ತರ್ಕವನ್ನೇನು ಹೇಳಬೇಕು? ಆ ಪತ್ರವು ಆ ಮಾಯಿಸಾಹೇಬರ ಯಾವನೊಬ್ಬ ಪ್ರಿಯಕರನಿಂದ ಬಂದಿರಬೇಕು; ಆ ಲಫಂಗ ಪೋಷ್ಟಮನ್ನನು ಕುಂಟಲತನದ ಕೆಲಸ ಮಾಡುತ್ತಿದ್ದು, ಆ ಖಾಸಗೀ ಪತ್ರವನ್ನು ಟಪಾಲಿಗೆ ಬಂದದ್ದೆಂದು ಹೇಳಿ ಅವರಿಗೆ ತಂದು ಕೊಟ್ಟಿರಬೇಕು ಪತ್ರವು ಟಪಾಲಿನಿಂದ ಬಂದಿತೆಂದರೆ ಅದು ಪರವೂರಿಂದಲೇ ಬಂದಿರಬೇಕೆಂದು ಸಹಜ ಅನುಮಾನವಾಗಿ, ಆ ಪತ್ರದ ಬಗ್ಗೆ ಸಂಶಯಪಡಬಾರದೆಂಬ ಇಂಗಿತವೇ ಅದಿರಬಹುದಾಗಿದೆ; ಆದರೆ ಭಾವೂಸಾಹೇಬರಿಗೆ ಅದೆಲ್ಲವೂ ಚೆನ್ನಾಗಿ ಗೊತ್ತಿರಬೇಕು; ಮತ್ತು ಅದಕ್ಕಾಗಿಯೇ ಅವರು ಒಳ್ಳೇ ರೊಚ್ಚಿಗೊಂಡಿರಬೇಕು. ಒಳ್ಳೇದಾಯಿತು. ಒಟ್ಟಿನಲ್ಲಿ ಮಾದರಿ ತಕ್ಕೊಳ್ಳುವ ಕುಟುಂಬವೇ ಅದಾಗಿದೆ.

ಸು:—ಅದು ಹೇಗೆ?

ದಿ:—ಹೇಗೆನ್ನುವಿರಾ? ತಂದೆಯು ನೌಕರಿಯ ಕಾಲಕ್ಕೆ ಸುಳ್ಳುಸೊಟ್ಟು ಮಾಡಿ ಲಕ್ಷಾಂತರ ಹಣ ಗಳಿಸಿದನು; ಮತ್ತು ಈಗ ಅದರ ಬಡ್ಡಿಯಲ್ಲಿ ನೈವೇದ್ಯ-ವೈಶ್ವದೇವ ಹಾಗು ಧರ್ಮಕೃತ್ಯಗಳನ್ನು ನಡಿಸಿರುತ್ತಾನೆ. ಒಬ್ಬನೇ ಒಬ್ಬನಾದ ಮಗನು ಬದ್‌ಮಾಷನೂ, ರಾಜದ್ರೋಹಿಯೂ, ಕೊಲೆಗಡಕನೂ ಆದನು. ಹೆಂಡತಿಯ ವಿಷಯುವನ್ನಂತೂ ನಾವೀಗ ಮಾತಾಡುತ್ತಲೇ ಇದ್ದೇವೆ; ಮತ್ತು ಒಬ್ಬೊಂಟಿಗಳಾದ ಅವರ ಮಗಳು ಲೋಕದ ಲಜ್ಜೆಯನ್ನೇ ತೊರೆದುಬಿಟ್ಟಿರುತ್ತಾಳೆ!

ಸು:—ಅದೇನರೀ? ಅವಳು ಹಾಗೆ ಮಾಡಿದ್ದಾದರೂ ಏನು?

ದಿ:—ಮಹಿಲಾವಿದ್ಯಾಲಯ ಮತ್ತು ವಸತಿಗೃಹಗಳನ್ನು ತೆರೆದಿಲ್ಲವೆ ಅವಳು? ಆಯಿತು ಹಾಗಾದರೆ. ಶಾಲೆಯಲ್ಲಿ ಹೆಣ್ಣು ಹುಡಿಗೆಯರಿಗೆ ಓದು ಬರೆಯಲಿಕ್ಕೆ ಕಲಿಸಬೇಕು; ಆ ಮೇಲೆ ಅವರು ಆ ಶಿಕ್ಷಣವನ್ನು ಪ್ರಿಯಕರರಿಗೆ ಪತ್ರ ಬರೆಯುವದಕ್ಕೆ ಉಪಯೋಗಿಸಬೇಕು, ಇದೇ ಅಲ್ಲವೆ ಆ ಮಹಿಲಾವಿದ್ಯಾಲಯದ ಧ್ಯೇಯವು? ಇಂಥ ಸಂಸ್ಥೆಗಳೆಂದರೆ, ಕುಂಟಲ ಕಸಬಿನ-ಹಾದರಗಲಿಸುವ-ತಾಲೀಮುಖಾನೆಗಳೆಂದು ನಾನಂತೂ ತಿಳಿಯುತ್ತೇನೆ, ಒಟ್ಟಿನಲ್ಲೇನು? ಸುಭೇದಾರರೇ, ನಿಮ್ಮ ಈ ಡಬೀರರ ಮನೆತನವು ಹೀಗೆ ಎಲ್ಲ ಕಡೆಯಿಂದಲೂ ಹುಳಿತುಬಿಟ್ಟಿದೆಯೆಂದಂತಾಯಿತು.

ಸು:—ಒಂದೇ ಗೊತ್ರದ ಹಾಗು ಒಂದೇ ಅಡ್ಡಹೆಸರಿನವರಾದ ಮಾತ್ರಕ್ಕೆ ಅದರಲ್ಲಿಯ ಎಲ್ಲ ಕುಟುಂಬಗಳೂ ಹಾಗೆಯೇ ಇರುತ್ತವೇನು? ಭಾವೂಸಾಹೇಬರ ಔರಸ ಮನೆತನವು ನಿಸ್ಸಂತಾನವಾದೀತು; ಆದರೆ ನಾನು ನನ್ನ ಮಗನನ್ನು ಅವರಿಗೆ ದತ್ತಕ ಕೊಟ್ಟು, ಆ ಮನೆತನಕ್ಕೆ ನಮ್ಮ ಮನೆತನದ ಕಲಮುನ್ನಷ್ಟು ಚೆನ್ನಾಗಿ ಕಟ್ಟುತ್ತೇನೆಂಬುದನ್ನು ನೋಡುವಿರಂತೆ! ನನ್ನ ಬಾಜೀರಾಯನು ಭಾವೂಸಾಹೇಬ ಡಬೀರರ ಶಾಖೆಯೊಳಗೆ ಜನ್ಮವೆತ್ತಿರುವದಿಲ್ಲ. ಅಂದಮೇಲೆ ತೀರಿತು. ಅವರ ಮನೆತನಕ್ಕೆ ಹತ್ತಿದ ಹುಳವನ್ನು ನಾನು ಕಿತ್ತೊಗೆದು, ನಾಶಗೊಳಿಸಿ ಬಿಡುವೆನು.

ದಿ:—ಸುಭೇದಾರರೇ, ನೀವು ಎಂಥ ಪರೋಪಕಾರಿಗಳಪ್ಪಾ! ಮತ್ತು ಭಾವೂಸಾಹೇಬರ ಸಂಗ್ರಹದಲ್ಲಿರತಕ್ಕ ಆ ಲಕ್ಷಾಂತ ರೂಪಾಯಿಗಳ ಹುಳಗಳನ್ನು ನೀವೇ ಕಿತ್ತೊಗೆಯುವವರಲ್ಲವೆ?

ಸು:—ಅದು ಮಾತ್ರ ಹಾಗಲ್ಲ. ಆ ಕೆಲಸವು ನನ್ನೊಬ್ಬನಿಂದ ಆಗಲಾರದು. ಆ ಕೆಲಸದಲ್ಲಿ ನನಗೆ ತಮ್ಮ ನೆರವು ಬೇಕು; ಮತ್ತು ನಾನದನ್ನು ಪಡೆಯುವವನೇ! ನನ್ನ ಬಾಜೀರಾಯನು ನಾಳೆ ಭಾವೂಸಾಹೇಬರ ದತ್ತಕ ಮಗನಂತೂ ಆಗಲಿ; ಆ ಮೇಲೆ ನೋಡುವಿರಂತೆ, ಆ ರೊಕ್ಕದ ಹುಳಗಳನ್ನು ಹೇಗೆ ಕೊಡು

ವೆವೆನೆಂಬದನ್ನು. ಆ ರೊಕ್ಕಕ್ಕೆ ಹೊರಗಿನ ಪ್ರಖರವಾದ ಬಿಸಿಲು ತಾಕಿತೆಂದರೆ, ಅದರೊಳಗಿನ ಹುಳಗಳೆಲ್ಲ ನಾಶಗೊಂಡಾವು.

ದಿ:—ಹೀಗೆಯೋ? ಈಗಿನ ನಿಮ್ಮ ಪ್ಲ್ಯಾನು ನಿಹಿತವಾಯಿತು; ಆದರೆ ಆ ಇಮಾರತಿಯ ನೆಲಗಟ್ಟಿನ ವ್ಯವಸ್ಥೆಯೇನು? ಯಾಕಂದರೆ ದತ್ತವಿಧಾನಕ್ಕೆ ಸಂಸ್ಥಾನಿಕರು ಪ್ರತಿಕೂಲರಿರುತ್ತಾರೆಂಬದು ನಿಮಗೆ ಗೊತ್ತೇ ಇದೆ. ತೈನಾತ ನಡೆಯ ಬೇಕಾದರೆ ದರ್ಬಾರದ ಮಂಜೂರಿಯು ಬೇಕು. ಯಜಮಾನ ಸಾಹೇಬರು ಅದನ್ನು ಇನ್‌ಕಾರಿಸಿದರೆ, ಮೇಲೆ ಪೋಲೀಟಿಕಲ್ ಏಜಂಟರ ಕಡೆಗೆ ಹೋಗ ಬೇಕಾದೀತು. ಅತ್ತ ಕಡೆಗೆ ಹೋಗುವದೆಂದರೆ, ಅಂತಃಸ್ಥ ದರಬಾರ ಖರ್ಚನ್ನು ಸಹಿಸಬೇಕಾಗುತ್ತದೆ. ಆಗ ಶಿರಸ್ತೆದಾರ ಸಾಹೇಬರನ್ನು ಸಂತುಷ್ಟಗೊಳಿಸಿಕೊಳ್ಳ ಬೇಕಾಗುತ್ತದೆ. ಅದಕ್ಕೆಂದು ಐದು ಸಾವಿರದ ಸಿದ್ಧತೆ ಬೇಕು. ಈಗಲೆ ಸಾಲ ಕೊಡುವ ಮಾರವಾಡಿಯನ್ನು ಶೋಧಿಸಿದಿರಿ.

ಸು:—ರತನಚಂದನಿಗೆ ಆಗಲೆ ಹೇಳಿಬಿಟ್ಟಿದ್ದೇನೆ; ಮತ್ತು ಆತನನ್ನು ತಮ್ಮೆಡೆಗೆ ಆತನ ಕೆಲಸಕ್ಕೆಂದು ಈ ಮೊದಲೇ ಕಳಿಸಿದ್ದೆನು. ಆಗ ಅವನು ತಮ್ಮೆದುರಿಗೇನಾದರೂ ತೆಗೆದಿದ್ದನೋ?

ದಿ:—ತೆಗೆದಿದ್ದನು; ಆದರೆ ನಿಮಗೆ ಸಾಲ ಕೊಡಲಿಕ್ಕೆ ಮಾತ್ರ ಆತನು ತುಸ ಒಡ್ಡಮುರಿಯುತ್ತಾನೆ. "ಹಣವು ಸಿದ್ಧವಿದೆ; ಆದರೆ ಅದು ಅಲ್ಪ ಸ್ವಲ್ಪಾಗಿಲ್ಲ. ಆಸಾಮಿಯಂತೂ ಹೀಗೆ!" ಎಂದಂದನು.

ಹೀಗೆ ಪರಸ್ಪರವಾಗಿ ಸುಭೇದಾರನ ಕುಚೇಷ್ಟೆ ಮಾಡದೊರೆತರೆ ದಿವಾಣ ಸಾಹೇಬರು ಸುಮ್ಮನೆ ಬಿಡುವರೇ? ಸುಭೇದಾರನಿಗೆ ಆ ಮಾತು ನಟ್ಟಿತು; ಆದರೆ ಆತನು ದಿವಾಣಸಾಹೇಬರನ್ನು ಬಿಟ್ಟು ಮಾರವಾಡಿಯ ಮೇಲೆಯೇ ರೇಗಿಗೆದ್ದು ತನ್ನ ಸಮಾಧಾನ ಮಾಡಿಕೊಂಡನು. ಸುಭೇದಾರನು ಸಿಟ್ಟಿನಿಂದ:—ಆ ಮೂರುಜುಟ್ಟಿನ ಲಫಂಗನು 'ಆಸಾಮಿಯು ಹೀಗೆ' ಎಂದಂದನಲ್ಲವೆ? ಒಳ್ಳೇದು. ಮಾರವಾಡೀ, ನಿನಗೆ ತೋರಿಸುವೆನು, ಈ ಆಸಾಮಿಯು ಹೇಗಿದೆಯೆಂಬದನ್ನು!

ಆದರೆ ಆ ಕುಚೇಷ್ಟೆಯೊಳಗಿಂದಲೇ ಕುಚೇಷ್ಟೆ ತೆಗೆಯುವ ಉದ್ದೇಶದಿಂದ ಸುಭೇದಾರನು ಮತ್ತೆ:—ನನ್ನದಂತೂ ಇರಲಿ; ತಮ್ಮ ಜಾಮೀನಾದರೂ ಆತನಿಗೆ ನಂಬಿಕೆಯಾದೀತಲ್ಲವೆ?

ದಿ:—ನಾನು ಜಾಮೀನಾದೇನು; ಆದರೆ ಕೇವಲ ಬಾಯಿಮಾತಿನಿಂದ. ಯಾಕಂದರೆ, ನಾನು ದಿವಾಣನಿದ್ದೇನೆ. ಬರಹ ಮೂಲಕ ಇಂಥ ಕೆಲಸದಲ್ಲಿ ನನಗೆ ತೊಡಗಲಿಕ್ಕೆ ಬರುವದಿಲ್ಲೆಂಬದು ನಿಮಗೆ ಗೊತ್ತೇ ಇದೆ. ಬಾಯಿ ಮಾತಿನಿಂದ ನಾನು ಆತನಿಗೇನು ಹೇಳಬೇಕಾಗಿದ್ದಿತೋ, ಅದನ್ನೆಲ್ಲ ಹೇಳಿಬಿಟ್ಟ

ದ್ದೇನೆ. ಆ ಬಗ್ಗೆ ನಿಮಗೆ ಯೋಚನೆ ಬೇಡ.

ಸು:—ಅಂದರೇನು? ಬೇಟೆಯನ್ನೂ ನಾನೇ ಎಬ್ಬಿಸಬೇಕು; ಗುಂಡನ್ನೂ ನಾನೇ ಹೊಡೆಯಬೇಕೇ?

ದಿ:—ಛೇ! ಛೇ! ಅದೇಕೆ? ಬಂದೂಕು ಬಾರ ಮಾಡಿ ನಿಮ್ಮ ಕೈಯಲ್ಲಿ ಕೊಡಲಿಕ್ಕೆ ನಾನು ಯಾವಾಗಲೂ ಸಿದ್ಧನೇ ಇರುವೆನಲ್ಲ! ಹಾಗಾದರಾಯಿತು. ಅಲ್ಲದೆ ಸುಭೇದಾರರೇ, ಶ್ರೀಮಂತರ ಮನೆಗೆ ದತ್ತಕನಾಗಿ ಹೋಗುವ ಹುಡುಗನು ನಿಮ್ಮ ಮಗನು; ನನ್ನ ಮಗನಲ್ಲ. ಔರಸ ಪುತ್ರನನ್ನು ಹಡೆಯುವ ಶ್ರಮವನ್ನು ಜನಕ ತಾಯಿಯು ಹೇಗೆ ಸಹಿಸಬೇಕಾಗುವದೋ, ಹಾಗೆಯೇ ಔರಸ ಪುತ್ರನನ್ನು ಶ್ರೀಮಂತರ ಮನೆಗೆ ದತ್ತಕ ಕೊಡುವ ಶ್ರಮವನ್ನು ಜನಕ ತಂದೆಯೇ ಮಾಡಬೇಕಾಗುತ್ತದೆ. ಹುಟ್ಟಿದ ಹಬ್ಬದಂತೆ ದತ್ತವಿಧಾನದ ಮೇಜವಾನಿಗೆ ಹಾಜರಿದ್ದು, ಮೃಷ್ಟಾನ್ನ ಭುಂಜಿಸುವ ಕೆಲಸವು ಮಾತ್ರ ನಮ್ಮಂತಹ ತ್ರಯಸ್ಥರದಿರುತ್ತದೆ; ಮತ್ತು ಅದನ್ನು ಮಾಡಲಿಕ್ಕೆ ನಾನೆಂದಾದರೂ ಇಲ್ಲೆಂದೆನೇ? ನೀವೇ ಹೇಳಿರಿ ನೋಡೋಣ.

ದಿವಾಣಸಾಹೇಬರು ಹೀಗೆ ಕಡ್ಡಿಯಿಂದಲೇ ಕಡ್ಡಿ ಕೊಡವಿದಂತೆ ಮಾಡಿದ್ದನ್ನು ಕಂಡು ಸುಭೇದಾರನಿಗೆ ಮನಸ್ಸಿನರ ಬಹು ಸಿಟ್ಟು ಬಂದಿತು; ಆದರೆ ಮಾಡುತ್ತಾನೇನು? ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿರಲಿಲ್ಲ, ಅದರಿಂದ ಅವನು ಅದನ್ನು ನುಂಗಿಕೊಂಡು, ಆರ್ಜವವೃತ್ತಿಯಿಂದ ಮತ್ತೆ:—ದತ್ತವಿಧಾನವಂತೂ ಆಗಲಿ! ಆ ಮೇಲೆ ಮೃಷ್ಟಾನ್ನಗಳಿಗೇನು ಕೊರತೆ? ಆದರೆ ಆ ವಿಷಯದ ಎಲ್ಲ ಕರ್ತುಮಕರ್ತುಮ ಶಕ್ತಿಯು ತಮ್ಮ ಕಡೆಗೇ ಇರುತ್ತದೆ. ಕೈಲಾಗದ ನನ್ನಿಂದ ಏನಾಗುವಂತಿದೆ? ರತನಚಂದನಿಗೆ ತಾವೇ ಮುರವತ್ತು ಹಾಕಬೇಕು; ಮತ್ತು ಸರಕಾರ ದರಬಾರದೊಳಗಿನ ದತ್ತಕದ ಪರವಾನಿಗೆಯ ವಿಷಯದ ಕೆಲಸವನ್ನು ಪೋಲಿಟಿಕಲ್ ಏಜಂಟ ಸಾಹೇಬರ ವರೆಗೂ ತಾವೇ ಪಾರುಗಾಣಿಸಬೇಕು. ದಿವಾಣಸಾಹೇಬರೇ, ನಾನು ಎಲ್ಲ ಬಗೆಯಿಂದಲೂ ನಿಮ್ಮವನೇ ಆಗಿರುತ್ತೇನೆ. ನನ್ನನ್ನು ನಿಮ್ಮ ಆಶ್ರಯಕ್ಕಿಟ್ಟುಕೊಳ್ಳಿರೆಂದರಾಯಿತು.

ಹೀಗೆಂದು ಸುಭೇದಾರನು ಪ್ರತ್ಯಕ್ಷವಾಗಿ ದಿವಾಣಸಾಹೇಬರ ಕಾಲುಗಳನ್ನೇ ಹಿಡಿದನು; ಆದರೆ ಮನಸ್ಸಿನಲ್ಲಿ ಮಾತ್ರ 'ಪ್ರಸಂಗ ಬಿದ್ದಾಗ ಕತ್ತೆಯ ಕಾಲನ್ನಾದರೂ ಹಿಡಿ' ಎಂದಂದುಕೊಂಡನು.

ಇದಾದ ಮೇಲೆ ಅತ್ತಿತ್ತಣದ ಹರಟೆಗಳಾದವು. ಬಳಿಕ ಆ ಸಂಭಾಷಣದ ಒಲವು ಜೋದ್ಯಪುರದ ಹೊಸ ಮಹಾರಾಜರಾದ ಜೋಜಿಗರಾಯರ ಕಡೆಗೆ ಒಲಿದು, ಅವರ ಕುತ್ಸಿತ ಟೀಕೆಗಳಿಗಾರಂಭವಾಯಿತು.

"ಏನರೀ ದಿವಾಣಸಾಹೇಬರೇ, ಈ ಸಾರೆಯು ನಿಮ್ಮ ಸಂಸ್ಥಾನದೊಳಗಿನ ಆದರಾತಿಥ್ಯವೊಂದು ಬೇರೆ ಬಗೆಯುದೇ ಆಗಿದೆಯಲ್ಲ?" ಎಂದು ಶಿರಸ್ತೆದಾರನು ಪ್ರಶ್ನೆ ಮಾಡಿದನು.

ದಿ:—ಇಷ್ಟಾದರೂ ಆಗಿದೆಯೆಂಬುದು ನಿಮ್ಮ ಭಾಗ್ಯವೆಂದೇ ತಿಳಿಯಿರಿ. ಈ ಕ್ರಮವೇ ಮುಂದೂ ಸಾಗಿದರೆ ಈ ಜೋದ್ಯಪುರಕ್ಕೆ ಪೋಲೀಟಿಕಲ್ ಏಜಂಟ ಸಾಹೇಬರ ಭೆಟ್ಟಿಯು ಚಟುಶ್ರಾದ್ಧದಂತೆ ಆಗಿ ಹೋದೀತು! ನನ್ನದೇನು? ಇನ್ನೊಂದು ವರ್ಷಕ್ಕೆ ಸೇವಾನಿವೃತ್ತನಾಗುವವನು! ಆದರೆ ನಿಮ್ಮ ಶಿರಸ್ತೆದಾರಿ ಕೆಯು ಐದು ವರ್ಷಗಳಾದರೂ ಪಾರಾಗಬೇಕಾಗಿರುತ್ತವೆ.

ಶಿರಸ್ತೆದಾರನು ಕಣ್ಣು ಒಡಿದು ಮೆಲ್ಲನೆ:—ನೀವು ಹೋಗುವಿರೋ-ನಿಮ್ಮ ಯುಜಮಾನ ಸಾಹೇಬರೇ ಹೋಗುವರೋ, ಅಂದರೆ ಅಧಿಕಾರಭ್ರಷ್ಟ-ಸಂಸ್ಥಾನ ಚ್ಯುತರಾಗುವರೋ ಇದನ್ನಾರು ಹೇಳಬೇಕು?

ಸು:—ಅಹುದಹುದು. ಈ ದಿವಾಣಸಾಹೇಬರು ಈ ಸಂಸ್ಥಾನಕ್ಕೆ ಕಾಲಿಗೆ ಜಿಗುಳಿ ಹಿಡಿದಂತೆ ಇಲ್ಲವೆ ಬಂಗಾರಕ್ಕೆ ಕುಂದಣ ಹಾಕಿದಂತೆ ಒಳ್ಳೇ ಬಲವಾಗಿ ಅಂಟಿಕೊಂಡಿರುತ್ತಾರೆ. ಅದರಿಂದ ಇವರೆಲ್ಲಿ ಹೋಗುತ್ತಾರೆ? ಹೊಸ ಯುಜಮಾನರು ಮಾತ್ರ ತಂತಿಯ ಮೇಲಿನ ಕಸರತ್ತು ಮಾಡುವ ಡಂಬರವನಂತೆ ಒಳಿಕಾಡುತ್ತಾರೆ; ಯಾವಾಗ ಉರುಳಿ ಬಿದ್ದಾರೆಂಬ ನಿಯಮವೇ ಇಲ್ಲ.

ಶಿರ:—ನಿಮ್ಮ ಹೊಸ ಯುಜಮಾನರ ಬಗ್ಗೆ ಊರ ಜನರ ಅಭಿಪ್ರಾಯವಾದರೂ ಏನಿದೆ?

ದಿ:—ಅದನ್ನೆಲ್ಲ ಸುಭೇದಾರರೇ ನಿಮಗೆ ಹೇಳುವರು. ಅವರು ಅದನ್ನು ಚೆನ್ನಾಗಿ ವಿವರಿಸಬಲ್ಲರು.

ಶಿರ:—ಏನರೀ ಸುಭೇದಾರರೇ, ನಿಮ್ಮ ಯುಜಮಾನ ಸಾಹೇಬರು ಹೇಗಿರುತ್ತಾರೆ?

ಸು:—ಹೇಗಿರಬೇಕೋ ಹಾಗೆಯೇ ಇರುತ್ತಾರೆ. ಅವರ ಕಣ್ಣು-ಮೂಗು ಇವುಗಳೆಲ್ಲ ಎಲ್ಲಿರಬೇಕೋ ಅಲ್ಲಿಯೇ ಇವೆ.

ಶಿರ:—ಜನರಂತೂ ಅವರನ್ನು ಹೆಚ್ಚಾಗಿ ಹೊಗಳುತ್ತಾರೆ.

ಸು:—ಹೊಗಳತಕ್ಕವರೇ! ಹರೆಯದ ಹುಡುಗ! ಒಡೆದು ಕಾಣುವನು! ಉಡುಗೆ-ತೊಡಿಗೆಗಳು ಕೇವಲ ಸಾದಾ ಇದ್ದರೂ ಶಿಸ್ತಿನಿಂದ ಧರಿಸುವನು. ಅಂದಮೇಲೆ ಜನರು ಹೊಗಳದೇನು ಮಾಡುವರು?

ಶಿರ:—ಹೊಸ ಯುಜಮಾನರು ಒಳ್ಳೇ ವಿದ್ವಾಂಸರಿರುವರೆಂದು ಕೆಲವರನ್ನುತ್ತಾರೆ.

ಸು:  ಅಹುದು! ವಿದ್ವಾಂಸರಲ್ಲದೇನು? ಸುತ್ತಲೂ ಪುಸ್ತಕಗಳ ಗುಡ್ಡಗಳನ್ನು ರಚಿಸಿಕೊಂಡು, ನಡುವೆ ಅದೃಶ್ಯರಾಗಿ ಕೂಡುತ್ತಿರುವುದೇನೋ ನಿಜವು. ಆಗ ಅವರು ಓದುವರೋ, ನಿದ್ದೆ ಮಾಡುವರೋ ಅದಾರಿಗೆ ಗೊತ್ತು?

ಶಿರ: -- ಹೊಸ ಯಜಮಾನರು ಒಳ್ಳೇ ಉದ್ಯೋಗಿಗಳಿರುವರೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಸು:—ಉದ್ಯೋಗವೆಂತಹದು? ಬೇಕಾದರೆ ಅವರನ್ನು ಕಿಡಿಗೇಡಿಗಳೆಂದೆನ್ನಿರಿ. ತುಸ ಹೊತ್ತಾದರೂ ಒಂದೆಡೆಯಲ್ಲಿ ಕುಳಿತರೆ ಆಣೆ. ವ್ಯಾಯಾಮ ದುಡಿಯುವದರಲ್ಲೇ ಬಾಲ್ಯತನವು ಕಳೆಯಿತು. ಅದರಿಂದ ಸುಮ್ಮನೆ ಕೂಡ್ರುವದೆಲ್ಲಾಗುತ್ತದೆ? ಅಂತೆಯೇ ಕೈಗೆ ಸಿಕ್ಕ ಆಡಳಿತವನ್ನು ಚಿವುರುತ್ತ ನಡೆದಿರುವರು.

ಶಿರ:—ಹೊಸ ಯಜಮಾನರು ಒಳ್ಳೇ ಮರ್ಯಾದಶೀಲರಿರುವಂತೆ.

ಸು:—ಮರ್ಯಾದಶೀಲರೇ? ಛೀ! ಹೇಡಿಗಳೆನ್ನಿರಿ ಬೇಕಾದರೆ. ಇಂಗ್ಲಿಷ ಸರಕಾರದ ಕೃಪೆಯಿಂದ ಯಾರಿಗೆ ಬೇಕಾದರೂ ಸಂಸ್ಥಾನದ ಪಟ್ಟವು ಲಭಿಸೀತು; ಆದರೆ ಶ್ರೀಮಂತಿಕೆಯ ಥಾಟು, ದೊಡ್ಡಿಸ್ತಿಕೆ ಮುಂತಾದವು ಹುಟ್ಟುಗುಣಗಳೇ ಆಗಿರಬೇಕಾಗುತ್ತವೆ. ಭಿಕ್ಷುಕರ ಪೋರನು ಜಂಬ ಮತ್ತು ನೊಕ್ಕುಗಳನ್ನು ಕಡ ತಂದುಕೊಳ್ಳಬೇಕೆಂದರೂ ಅವು ಅವನಿಗೆ ಲಭಿಸುವ ಬಗೆ ಹೇಗೆ?

ಶಿರ:—ಹೊಸ ಯಜಮಾನರು ಒಳ್ಳೇ ಉದಾರರೂ ಕೈಸಡಿಲು ಬಿಟ್ಟು ವೆಚ್ಚ ಮಾಡುವವರೂ ಇರುತ್ತಾರಂತೆ.

ಸು:---ಪುಕ್ಕಟೆಯ ದುಡ್ಡು! ಹಾಳು ಮಾಡಲಿಕ್ಕೆ ಅವರ ಚಿಕ್ಕಪ್ಪನದೇನು ಹೋಗಬೇಕಾಗಿದೆ?

ಶಿರ:—ಹೊಸ ಯಜಮಾನರು ಭಿಕ್ಷುಕರ ಪರಾಂಬರಿಕೆಯನ್ನು ಕೂಡ ಚೆನ್ನಾಗಿ ತಕ್ಕೊಳ್ಳುತ್ತಾರಂತೆ.

ಸು:—ಅಹುದು. ಸ್ವಜಾತಿಯವರ ವಿಷಯವಾಗಿ ಅವರ ಪ್ರೇಮವೇ ಹಾಗಿದೆ!

ಶಿರ:—ಯಾರಿಗೂ ಇಲ್ಲವೆನ್ನುವದಿಲ್ಲವಂತೆ.

ಸು: —ಇಲ್ಲೆನ್ನಲಿಕ್ಕೆ ಹೃದಯದಲ್ಲಿ ಧೈರ್ಯವಿರಬೇಕಷ್ಟೇ?

ಶಿರ: — ಅವರ ಅಮಲು ಒಳ್ಳೇ ತೀಕ್ಷ್ಣವಾಗುವದಂತೆ.

ಈಗ ಮಾತ್ರ ನಡುವೆ ಬಾಯಿ ಹಾಕದ ಹೊರತು ದಿವಾಣರಿಂದ ಸುಮ್ಮನಿರಲಾಗಲಿಲ್ಲ. ಅವರು ತಮ್ಮ ಕಲ್ಲೀವಿಮೊಸೆಗಳ ಮೇಲೆ ಕೈ ಎಳೆಯುತ್ತ:—ಹೋಗರೀ ಹೋಗರಿ. ನನ್ನಂತಹ ಚತುರ ದಿವಾಣನಿರಲಿಕ್ಕೆ ಬೇರೆಯವರು ತೀಕ್ಷ್ಣವಾದಮಲು ನಡಿಸುವ ಮಾತೇ ಎತ್ತಕೂಡದು. ಬಹಳವಾದರೆ 'ಮುತ್ತಲ

ಹೂವಿನ ಬಣ್ಣ ಮೂರೇ ದಿನ'ವೆಂಬಂತಾದೀತು. ಕೂಳಿನ ಹಪಾಪಿ ಹುಟ್ಟಿದವರಂತೆ, ಇವರ ಕೆಲಸ ನೋಡಲಿಯಾ? ಅಥವಾ ಅವರ ಕೆಲಸದ ಚೌಕಶಿ ಮಾಡಲಿಯಾ? ಇಲ್ಲವೆ ಅದನ್ನು ಶಿಸ್ತು ಹಚ್ಚಲಿಯಾ? ಎಂದು ಅವರು ನಾಲ್ಕು ದಿನ ಮಾಡಿಯಾರು; ಹಾಗು ಮುಂದೆ ಸಹಜವಾಗಿಯೋ ಆ ಆಡಳಿತದ ಅಜೀರ್ಣವಾದಂತಾಗಿ, ಹೋಗಿ ಬಿದ್ದುಕೊಂಡಾರು ತಿಂಗಳುಗಟ್ಟಲೆ ಯಾವುದೊಂದು ಪರ್ವತದ ತುದಿಯ ಮೇಲೆ ತಂಪುಹವೆಯನ್ನು ಸೇವಿಸುತ್ತ. ಆ ಮೇಲೆ ಇತ್ತ ನಾವಿದ್ದೇವೆ; ಸಂಸ್ಥಾನದ ಆಡಳಿತವಿದೆ. ನೋಡಿಕೊಂಡೇವು; ಮತ್ತು ಈ ಮೂರು ದಿನಗಳ ಆಡಳಿತದ ಹಪಾಪಿಯಾದರೂ ಇವರಿಗೇಕಿದೆ ಎಂಬದನ್ನು ಹೇಳಲೋ?

ಶಿರ:—ಹೇಳಿರಿ ನೋಡೋಣ.

ದಿ:—ಇನ್ನೂ ಲಗ್ನವಾಗಿಲ್ಲೆಂದು. ಲಗ್ನವಾದ ಕೆಲ ಸಂಸ್ಥಾನಿಕರಿಗೆ ತಮ್ಮ ರಾಣೀಸಾಹೇಬರ ಸಮಾಚಾರ ತಕ್ಕೊಳ್ಳಲಿಕ್ಕೆ ದಿನದ ಇಪ್ಪತ್ನಾಲ್ಕು ತಾಸುಗಳೂ ಸಾಲುತ್ತಿರುವದಿಲ್ಲ.

ಶಿರ:—ದಿವಾಣಸಾಹೇಬರೇ, ನೀವು ನಿಮ್ಮ ಯಜಮಾನರಿಗೊಂದು ಚಲೋ ವಧುವನ್ನು ನೋಡಬಹುದಲ್ಲವೆ? ಅಂದರೆ ನಿಮಗುಂಟಾಗಿರುವ ಈ ತೊಂದರೆಯು ತುಸ ಕಡಿಮೆಯಾದೀತು.

ಸು:—ಶಿರಸ್ತೆದಾರಸಾಹೇಬರೇ, ಅವರಿಗೆ ವಧುಗಳಿಗೇನು ಕೊರತೆ? ಆದರೆ ಯಜಮಾನಸಾಹೇಬರು ಬಾಸಿಂಗ ಕಟ್ಟಿಕೊಳ್ಳಲಿಕ್ಕೊಂದು ಸಿದ್ಧರಾಗಬೇಕಲ್ಲವೆ? ಇದುವರೆಗೆ ಇಷ್ಟು ವಯಸ್ಸಿನ ಯಾವ ಸಂಸ್ಥಾನಿಕನಾದರೂ ಅವಿವಾಹಿತನಾಗಿದ್ದದ್ದನ್ನು ನೋಡಿರುವಿರಾ?

ಶಿರ:—ನಮ್ಮ ಏಜಂಟಸಾಹೇಬನಂತೂ ಮನಸ್ಸಿನಲ್ಲಿ ಆಶ್ಚರ್ಯಗೊಂಡು ಬಿಟ್ಟಿದ್ದಾನೆ! ಅವನು ಒಮ್ಮೆ ನನ್ನನ್ನೊತ್ತಟ್ಟಿಗೆ ಕರೆದು, ಮೆಲ್ಲನೆ:-"ಏನು ಶಿರಸ್ತೆದಾರರೇ? ಇವನಾವ ಕ್ಯಾಥೊಲಿಯನ್ ಮಂಕನೋ ಪೋಪನೋ ಈ ಜೋದ್ಯಪುರದ ಪಟ್ಟವನ್ನೇರಿದವನು. ಇವನು ಲಗ್ನವಾಗದ ಆಣೆ ಮಾಡಿಯೇ ಪಟ್ಟವನ್ನೇರಿರುವಂತೆ ತೋರುತ್ತದೆ" ಎಂದಂದು ನಕ್ಕನು.

ಸು:—ಅವರು ಲಗ್ನವಾಗುವದಿಲ್ಲೆಂದು ಬಾಯಿಂದೇನೂ ಆಣೆ ಮಾಡಿರುವಂತಿಲ್ಲ; ಆದರೆ ಬ್ರಹ್ಮನೇ ಹಾಗೆ ನಿರ್ಮಿಸಿ ಕಳಿಸಿದ್ದರೆ ಅದಾರಿಗೆ ಗೊತ್ತು? ಅವರ ಜನ್ಮವು ಹೀಗೆ ಲಗ್ನವಿರಹಿತವಾಗಿಯೇ ಕಳೆಯುವದೆಂದು ನನಗಂತೂ ತೋರುತ್ತದೆ. ಅದಿರಲಿ. ಒಂದು ವೇಳೆ ಅವರು ಇನ್ನು ಲಗ್ನವಾಗ ಹೊರಟರೂ ಅವರಿಗೆ ತಕ್ಕ ಮುದಿಹೆಣ್ಣು ಅದೆಲ್ಲಿ ದೊರೆಯಬೇಕು?

ದಿ:—ಅದೇಕೆ? ಭಾವೂಸಾಹೇಬ ಡಬೀರರ ಮಗಳಾದ ವಿಮಲೆಯಿರುವ

ಳಿಲ್ಲ. ಹೇಗೂ ಅವಳಿನ್ನೂ ಅವಿವಾಹಿತಳಾಗಿರುವಳು.

ಸು:—ಅಹುದರೀ-ಅಹುದು! ಯಾವನೊಬ್ಬ ಆಯ್-ಸಿ-ಎಸ್. ಇಲ್ಲವೆ ಸಂಸ್ಥಾನಿಕನು ಗಂಡನಾಗಬೇಕೆಂದು ಹುಟ್ಟಿದಂದಿನಿಂದ ಪಣ ತೊಟ್ಟು ಕುಳಿತಿರುವಂತೇನೋ ಕಾಣುವದು ನಿಜ; ಆದರೆ ಅವಳು ಲಗ್ನವಾಗಿ, ಕಡೆಗೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಸಿದ್ಧಳಾಗುವಳೋ ಇಲ್ಲವೋ ಅದಾರು ಹೇಳಬೇಕು?

ಶಿರ:—ಒಂದುವೇಳೆ ಆದಳೆಂದರೆ, ಆ ಮೇಲೆ ಯಜಮಾನರೂ ವಿದ್ವಾಂಸರು; ಯಜಮಾನಿಯೂ ವಿದುಷಿಯು. ಆ ಮೇಲಿನ ಆಡಂಬರವನ್ನೇನು ಹೇಳಬೇಕು? ಎಲ್ಲಿಗೆ ಹೊರಟರೂ ಆ ದಂಪತಿಗಳು ಮುಚ್ಚುಮರೆಯಿಲ್ಲದೆ ಬೈಲುಗಾಡಿಯಲ್ಲಿಯೇ! ಹೀಗೆಯೇ ಅಲ್ಲವೆ?

ದಿ:—ಥೂ! ಅವರೇನು ಆಡಂಬರವನ್ನಿಳಿಸುವರು? ಆಡಂಬರ ಮಾಡುವವರ ಮುಸುಡೆ ನೋಡಿರಿ! ಆಡಂಬರ ನೋಡಬೇಕಾಗಿದ್ದರೆ ನಮ್ಮ ಹಳೇ ಯಜಮಾನರನ್ನೇ ನೋಡಬೇಕು. ಅವರ ಆ ಲೋಕೋತ್ತರ ಆಡಂಬರದ ಗಂಧವುಕೂಡ ಇವರಲ್ಲಿಲ್ಲ.

ಶಿರ:— ನಾನು ನಿಮ್ಮ ಹಳೇ ಯಜಮಾನರನ್ನೆಂದೂ ನೋಡಲಿಲ್ಲ. ಅದರಿಂದ ಅವರ ಆಡಂಬರವು ಹೇಗಿತ್ತೆಂಬದನ್ನಾದರೂ ಹೇಳಿರಿ ನೋಡೋಣ.

ದಿ:—ಈ ಹೊಸ ಯಜಮಾನರು ಬಹಳವಾದರೆ ಒಬ್ಬ ವಧುವನ್ನು ಲಗ್ನವಾಗಿ, ಅವಳನ್ನೇ ಕಂಡಕಂಡಲ್ಲಿ ಮೆರಿಸುವವರು! ಆದರೆ ನಮ್ಮ ಹಳೇ ಯಜಮಾನರ ಝುನಾನಖಾನೆಯೆಂದರೆ, ದರಬಾರದ 'ಅಠರಾ ಕಚೇರಿ'ಗಳನ್ನುಳಿದು, ಹತ್ತೊಂಬತ್ತನೆಯ ಕಾರಖಾನೆಯೇ ಅದಾಗಿದ್ದಿತೆಂದೆನ್ನಿರಿ ಬೇಕಾದರೆ! ಹೋದ ಹೋದಲ್ಲಿ ಹೊಸ ಸಂಸ್ಥಾನಿಕಳೇ! ಅವರ ಅಂತಃಪುರದ ವೈಭವವನ್ನೆಂತು ವರ್ಣಿಸುವದಿದೆ? ಪಾಲಕನೂ ಭೋಕ್ತಾರನೂ ಎಂದು ಆತನಿಗೇ ಅನ್ನಬೇಕು! ಅವರ ಹೆಸರಿನಿಂದ ಕುಂಕುಮ ಹಚ್ಚಿಕೊಳ್ಳುವ ಹೆಂಗಸರಿಗೆ ಒಂದೇ ಬೈಠಕಿನಲ್ಲಿ ಇಡೀ ಕುಂಕುಮದ ಭರಣಿಯೇ ಸಾಲದಾಗುತ್ತಿತ್ತು! ದಸರೆಯ ಹಬ್ಬದ ದಿವಸ ಅವರ ಮೆರವಣಿಗೆಯು ಹೊರಟಿತೆಂದರೆ, ಪಟ್ಟದ ಗಂಡಾನೆ-ಹೆಣ್ಣಾನೆಗಳ ಹಿಂದೆ ಝುನಾನಖಾನೆಯೊಳಗಿನ ಪಲ್ಲಕ್ಕಿಗಳ ಸಾಲೇ ಸಾಲಾಗಿ ಕಾಣುವದು. ಆ ಗುಂಪಿನೊಳಗಿದ್ದ ನಮ್ಮ ಯಜಮಾನನು ನಕ್ಷತ್ರಸಮೂಹದೊಳಗಿನ ಚಂದ್ರನಂತೆ ಕಾಣುತ್ತಿದ್ದನು. ಅದಕ್ಕೇ ಇಂದ್ರನ ಐಶ್ವರ್ಯವೆನ್ನಬೇಕು! ನಮ್ಮ ಈ ಹೊಸ ಯಜಮಾನರೆಂದರೆ, ತಟ್ಟು ಕುದುರೆಯನ್ನೇರಿ ಹೊರಟಿರುವ ಭಟ-ಬಿಕ್ಷುಕರೇ ಸರಿ!

ಶಿರ:-ಅದಿರಲಿ. ಇವರು ಲಗ್ನವಾದರೂ ಮತ್ತೆ ದತ್ತಕದ ಪ್ರಸಂಗವೇ ಅನ್ನಿರಿ.

ದಿ:—ಆದರೆ ಇವರಿಗೆ ದತ್ತಕ ಸಂಸ್ಥೆಯೇ ಸಮ್ಮತವಿಲ್ಲೆಂದು ಕೇಳಿರುತ್ತೇನೆ. ಇವರು ದತ್ತಕದ ವಿರುದ್ಧ ಕಾಯಿದೆ ಮಾಡಲಿರುವರಂತೆ!

ಶಿರ:—ಸರಕಾರಕ್ಕೆ 'ತೂಕಡಿಕೆ ಬಂದವರಿಗೆ ಹಾಸಿಕೊಟ್ಟಂತಾ'ದೀತು. ಇವರು ತೀರಿಕೊಂಡ ಮೇಲೆ ಇವರ ಆ ಕಾಯಿದೆಯನ್ನೇ ಮುಂದು ಮಾಡಿ, ಈ ಜೋದ್ಯಪುರ ಸಂಸ್ಥಾನವನ್ನು ಖಾಲಸಾ ಮಾಡಿ ತಮ್ಮ ಮುಲುಖಿಗೆ ಸೇರಿಸಿಕೊಂಡು ಬಿಡುವರು. ಒಂದು ವೇಳೆ ಇವರು ಲಗ್ನವನ್ನೇ ಮಾಡಿಕೊಳ್ಳದಿದ್ದರೆ, ದತ್ತಕವನ್ನು ಯಾರಿಗೆ ಮಾಡುವದು? ನಿಮಗೋ-ನನಗೋ? ಮತ್ತು ದತ್ತಕದ ಅರ್ಜಿ ಕೊಡುವವರಾರು? ಸಂಸ್ಥಾನೀ ಪ್ರಜೆಗಳಿಗಂತೂ ಆ ಅಧಿಕಾರವು ಪ್ರಾಪ್ತವಾಗುವದಿಲ್ಲ. "ನಿಮ್ಮ ತಂದೆಯು ಸತ್ತನು. ಆದರಿಂದ ಅವನ ಸ್ಥಳದಲ್ಲಿ ಅವನ ಅಪ್ಪಂದಿರಾದ ನಾವು ಬಂದಿರುವೆವು. ನೀವು ಸುಮ್ಮನೆ ತೆರಿಗೆ ಕೊಡಿರಿ. ಯಾವನೇ ರಾಜನಿರಲೊಲ್ಲನೇಕೆ? ನಿಮಗೇಕದು? ರಾಜ್ಯವು ನಡೆದಿದೆಯಷ್ಟೆ?" ಎಂದು ಬ್ರಿಟಿಶ ಸರಕಾರವು ಸಂಸ್ಥಾನೀ ಪ್ರಜೆಗಳಿಗೆ ಜೋರಕ್ಕಾದ ಉತ್ತರವನ್ನು ಕೊಟ್ಟುಬಿಡುವದು.

ಇರಲಿ. ಈ ಬಗೆಯಾಗಿ ಹಲವರ ಕುಚೇಷ್ಟೆಗಳನ್ನು ಹಲವು ಬಗೆಯಿಂದ ಮಾಡಿದ ನಂತರ ಸೆರೆಯ ಅಮಲು ಆ ಮೂವರಿಗೂ ಏರಿತು. ಆ ಬಳಿಕ ಅವರ ಬಾಯಿಂದ ಯಾವ ಯಾವ ಪ್ರಲಾಪಗಳು ಹೊರಟವು, ಅವರ ಕೈಯಿಂದ ಯಾವ ಯಾವ ಚೇಷ್ಟೆಗಳಾಗಹತ್ತಿದವು ಇವುಗಳನ್ನು ವರ್ಣಿಸದಿರುವದೇ ವಿಹಿತವು! ಹೊಟ್ಟೆಯೊಳಗೇನೂ ಉಳಿಯದಂತಹ ಸ್ಥಿತಿಯು ಪ್ರಾಪ್ತವಾಯಿತೆಂದರೆ, ಸತ್ಯ ಮಾತಾಡುವದು, ಕಾವ್ಯ ಮತ್ತು ವಕ್ತೃತ್ವಗಳನ್ನು ಸುರಿಸುವದು, ಈ ಗುಣಗಳಲ್ಲಿ ಸೆರೆಗುಡುಕರನ್ನು ಯಾರೂ ಸರಿಗಟ್ಟಲಾರರು.

---

## ೮ ಭಾವೂಸಾಹೇಬರ ಭೂತ-ಭವಿಷ್ಯತ್ತು.

ಪೋಷ್ಟಿನೊಳಗಿಂದ ಬಂದ ಪತ್ರದ ಪತ್ತೆಯನ್ನು ಹತ್ತಗೊಡದೆ, ತಮ್ಮ ಹೆಂಡತಿಯು ಅದನ್ನು ಹರಿದೊಗೆದೆನೆಂದು ಹೇಳಿದ ಸಂಗತಿಯು ಭಾವೂಸಾಹೇಬರ ಮನಸ್ಸಿಗೆ ಹತ್ತಿಬಿಟ್ಟಿತ್ತು. ಭಾಗಾನಗರದಿಂದ ಯಾವಳೊಬ್ಬ ಚಿಕ್ಕಮ್ಮನಿಂದ ಆ ಪತ್ರ ಬಂದಿತ್ತೆಂದು ಹೇಳಿದ ಅವಳ ಮಾತಿನ ಮೇಲೆ ಅವರ ವಿಶ್ವಾಸ ಕೂಡ್ರದಿರುವದು ಸಹಜವೇ ಆಗಿತ್ತು. ಅವರ ಸ್ವಭಾವವು ಮೊದಲೇ ಸಂಶಯಗ್ರಸ್ತವಾದದ್ದು. ತಮ್ಮ ಹೆಂಡತಿಯ ಆಚರಣದಲ್ಲಿ ಎಂದೂ ಏನೂ ಹುಚ್ಚು-ಹುಳುಕು ಅವರಿಗೆ ಈ ವೊದಲು ಕಂಡು ಬರದಿದ್ದರೂ, ತಮ್ಮ ಹೆಂಡತಿಯ ಚಾರಿತ್ರ್ಯದ ಬಗ್ಗೆ ಗಂಡಸರಿಗೆ ಯಾವಾಗ ಮತ್ತು ಹೇಗೆ ಸಂಶಯವುಂಟಾದೀತೆಂಬದನ್ನು ಹೇಳಬರಲಾರದು. ನಿಷ್ಠಾವಂತನಾದ ನಳರಾಜನು ಕಾಲು ತೊಳೆದಾಗ ಕಾಲಿನ ಹಿಂಬಡಕ್ಕೆ ನೀರು

ಹತ್ತಿದ ಬಿಂದುಮಾತ್ರ ಪ್ರದೇಶದೊಳಗಿಂದ ಕಲಿಯು ಆತನ ದೇಹದಲ್ಲಿ ಪ್ರವೇಶ ಮಾಡಿದನು. ಪರೀಕ್ಷಿತ ಮಹಾರಾಜನು ಹಾವಿನ ಅಂಜಿಕೆಯಿಂದ ನೀರಲ್ಲಿ ಮಹಾಲು ಕಟ್ಟಿಕೊಂಡು ನೆಲಿಸಿದರೂ, ಬಾಗವಾನಳ ಬುಟ್ಟಿಯೊಳಗಿನ ಬಾರೀಹಣ್ಣಿನಲ್ಲಿ ತಕ್ಷಕನು ಬಾಲದ ಹುಳದ ರೂಪದಿಂದ ಆ ಮಹಾಲಿನಲ್ಲಿ ಪ್ರವೇಶಿಸಿ ಪರೀಕ್ಷಿತನನ್ನು ಕಚ್ಚಲಿಲ್ಲವೆ? ಸ್ತ್ರೀಯರ ನಡತೆಯ ಸಂಬಂಧದ ಪುರುಷರ ಸಂಶಯವಾದರೂ ಇದೇ ಬಗೆಯಾಗಿರುತ್ತದೆ. ಕಲಿ ಇಲ್ಲವೆ ತಕ್ಷಕರಂತೆ ಆ ಸಂಶಯವು ಪುರುಷ ದ್ವೇಷಬುದ್ಧಿಯಿಂದ ಬೇಕಂತ ಉಂಟಾಗುವದಿಲ್ಲೆಂಬದು ನಿಜವು; ಆದರೆ ಅದರ ಭೂಮಿಕೆಯು ಸಹಜವಾಗಿಯೇ ಸಿದ್ಧವಿರುವದರಿಂದ ಅದಕ್ಕೆ ತುಸ ನೆವವುಂಟಾದರೆ ತೀರಿತು; ಆ ಪೌರಾಣಿಕ ಕಾಲದ ಬಾಲದ ಹುಳದಂತೆ ಆ ಸಂಶಯವು ಕೂಡಲೆ ವಿಷಯುಕ್ತವಾದ ಹಾವಿನ ರೂಪವನ್ನು ಧರಿಸುವದು; ಇಲ್ಲವೆ ಅರಳೆಯ ಗುಂಪಿನ ಮೇಲೆ ಬಿದ್ದ ಕಿಡಿಯಂತೆ ಅದು ಒಮ್ಮೆಲೆ ಜ್ವಾಲಾರೂಪದಿಂದ ಉರಿಯ ಹತ್ತುವದು!

ಮನುಷ್ಯನು ಹೆಚ್ಚಾಗಿ ನಿರುದ್ಯೋಗಿಯಾದನೆಂದರೆ ಆತನಿಗೆ ಭ್ರಮೆಯ ಬಾಧೆಯು ವಿಪರೀತವಾಗುತ್ತದೆ. ಭಾವೂಸಾಹೇಬರಿಗೆ ವೃತ್ತಪತ್ರಗಳ ಹೊರತು ಬೇರೆ ಏನು ಓದುವದೂ ಸೇರುತ್ತಿರಲಿಲ್ಲ. ಒಂದಾನೊಂದು ದಿನ ವೃತ್ರಪತ್ರಗಳು ಕಡಿಮೆ ಬಂದರೆ, ಅವರು ತಮ್ಮ ಸರಕಾರೀ ನೌಕರಿಯ ಕಾಲದ ಕಾಗದ-ಪತ್ರಗಳನ್ನೇ ನೋಡುತ್ತ ಕೂಡ್ರುವರು.

ಇಂದು ಭಾವೂಸಾಹೇಬರು ಇದೇ ಮೇರೆಗೆ ಆ ಕಾಗದ ಪತ್ರಗಳನ್ನು ನೋಡುತ್ತಿದ್ದರು. ಅಷ್ಟರಲ್ಲಿ ಸುಭೇದಾರರ ಸವಾರಿಯು ಮತ್ತೆ ಅಲ್ಲಿಗೆ ಆಗಮಿಸಿತು. ದತ್ತಕ ಸಂಬಂಧದ ಉಳಿದ ಮಾತುಗಳನ್ನು ಇಂದು ಆಡಬೇಕೆಂದು ಅವರ ಉದ್ದೇಶವಿತ್ತು. ಸುಭೇದಾರರು ಭಾವೂಸಾಹೇಬರ ಮನೆತನದವರೇ ಆದ ಒಬ್ಬ ದೂರಿನ ಆಪ್ತರು. ಅದರಿಂದ ಅವರು ಸುಭೇದಾರರೊಡನೆ ಮಾತು-ಕಥೆಯಾಡುತ್ತಿದ್ದರು. ಆದರೂ ಉಭಯತರಲ್ಲಿ ವಿಶೇಷ ರಹಸ್ಯವಿರಲಿಲ್ಲ; ಅದರಂತೆಯೇ ಹೆಚ್ಚಾದ ತಿರಸ್ಕಾರವೂ ಇರಲಿಲ್ಲ. ಸುಭೇದಾರರ ಅನುಸರಣಪ್ರಿಯ ಸ್ವಭಾವದ ಮೂಲಕ ಭಾವೂಸಾಹೇಬರ ಬಾಯಿಂದ ಯಾವುದೊಂದು ಆದೇಶವು ಹೊರಟಿತೆಂದರೆ, ಸುಭೇದಾರರು ಕೂಡಲೆ ಅದನ್ನು ಎತ್ತಿ ಹಿಡಿದು, ಮಾಡುವ ಸಿದ್ಧತೆ ತೋರಿಸಬೇಕು; ಅದರಿಂದ ಒಮ್ಮೊಮ್ಮೆ ಆ ಕೆಲಸವೂ ಅವರಿಗೆ ಒಪ್ಪಿಸಲಾಗುತ್ತಿತ್ತು. ಇಂದು ಕಾಗದ-ಪತ್ರಗಳನ್ನು ನೋಡುತ್ತಿರುವಾಗ ತಮಗೆ ಬೇಕಾಗಿದ್ದ ಕಾಗದಗಳು ಭಾವೂಸಾಹೇಬರಿಗೆ ಸಿಗದಾಗಲು, ಅನಾಯಾಸವಾಗಿ ಅಲ್ಲಿಗೆ ಬಂದಿದ್ದ ಸುಭೇದಾರರನ್ನು ಕುರಿತು:—ಸುಭೇದಾರರೇ, ಹತ್ತಿರಿ ಆ

ಸ್ಟೂಲಿನ ಮೇಲಷ್ಟು; ಮತ್ತು ಆ ಮತ್ತಿಯ ಹಲಗೆಯ ಮೇಲಿನ ಕೆಂಪು ರೇಶ್ಮಿಯ ಅರಿವೆಯೊಳಗಿರುವ ಕಾಗದಗಳನ್ನು ಕೆಳಗೆ ತಕ್ಕೊಳ್ಳಿರಿ ನೋಡೋಣ, ಎನ್ನಲು,

ಭಾವೂಸಾಹೇಬರ ಈ ಕೆಲಸವನ್ನು ಮಾಡುವ ಸಂಧಿಯು ಸುಭೇದಾರರಿಗೆ ಪರ್ವಣಿಯಂತೆಯೇ ತೋರಿತು. ಕೂಡಲೆ ಅವರು ಚಟಕ್ಕನೆ ಸ್ಟೂಲನ್ನೇರಿ ಆ ಕಾಗದಗಳನ್ನು ತೆಗೆದು ಭಾವೂಸಾಹೇಬರ ಮುಂದಿರಿಸಿದರು; ಮತ್ತು ಭಾವೂ ಸಾಹೇಬರು ಅವುಗಳನ್ನು ನೋಡತೊಡಗುವಷ್ಟರಲ್ಲಿಯೇ:—"ತಾವೇತಕ್ಕೆ ತೊಂದರೆ ಪಡುವಿರಿ? ಧೂಳದ ಕೈಯಹತ್ತಿ ತಮ್ಮ ಚಾಳೀಸು ಕೆಟ್ಟೀತು. ನಾನೇ ತೆಗೆದು ಯಾವ ಯಾವ ಕಾಗದಪತ್ರಗಳಿರುವವೆಂಬದನ್ನು ಹೇಳುತ್ತೇನೆ."

ಈ ಯುಕ್ತಿಯಿಂದ ಭಾವೂಸಾಹೇಬರ ಮನೆಯ ಕಾಗದ-ಪತ್ರಗಳ ಮೇಲೆ ತಮ್ಮ ಕೈಯಾಡಿದರೆ ಅದು ಸುಭೇದಾರರಿಗೆ ಇಷ್ಟವೇ ಇಗಿತ್ತು; ಆದರೆ ಸುಭೇದಾರರು ಅದಕ್ಕಾಗಿ ಯಾವ ಕಾರಣವನ್ನು ಮುಂದು ಮಾಡಿದ್ದರೋ, ಅದೇ ಅದಕ್ಕೆ ತುಸ ವಿಘ್ನಕರವಾಯಿತು. ಭಾವೂಸಾಹೇಬರ ಮನೆಯಲ್ಲಿ, ಅದೂ ಕೈಗೆ ಹತ್ತುವಂತೆ, ಯಾವದೊಂದು ಸಾಮಾನಿನ ಮೇಲೆ ಧೂಳವೇ? ಇದು ಕಾಲತ್ರಯದಲ್ಲಿಯೂ ಘಟಿಸದ ಸಂಗತಿಯು. ಆ ಧೂಳಿಯೆಂದರೆ ಅದು ಬರೇ ಸಾಮಾನಿನ ಮೇಲಿರದೆ, ತಮ್ಮ ಮರ್ಯಾದೆಯ ಮೇಲೆ ತೂರಲ್ಪಡುವ ಕಸವೇ ಎಂದು ಆ ಸಂಸಾರದಕ್ಷ ಮುದುಕನಿಗೆ ಅನಿಸುತ್ತಿತ್ತು; ಅದೇ ಭಾವನೆಯಿಂದ ಅವರು ಸುಭೇದಾರರನ್ನು ಕುರಿತು:—"ಏನಂದಿರಿ ಸುಭೇದಾರರೇ? ನಮ್ಮ ಮನೆಯಲ್ಲಿ ಸಾಮಾನುಗಳ ಮೇಲೆ ಕಸವೆ? ಹೀಗೆಂದೂ ಆಗಲಿಕ್ಕಿಲ್ಲ. ನೋಡಿರಿ ಬೇಕಾದರೆ, ಕೈಹಚ್ಚಿ ನೋಡಿಕೊಳ್ಳಿರಿ. ಧೂಳದ ಒಂದು ಕಣವಾದರೂ ದೊರೆತರೆ, ಪಣ ತೊಟ್ಟೇನು; ದಂಡ ತೆತ್ತೇನು!

ಸುಭೇದಾರನು ಆ ಸ್ವಚ್ಛತೆಯ ಕೌತುಕವನ್ನೇ ತೋರಿ:-"ಭಲೆ! ಇದಕ್ಕೆ ಅನ್ನಬೇಕು ಸ್ವಚ್ಛತೆಯೆಂದು!" ಹೀಗೆಂದು ಲಗುಬಗನೆ ಕಾಗದಗಳನ್ನು ತಿರುತಿರುವಿ ನೋಡಲಾರಂಭಿಸಿದನು. ನಾಲ್ಕಾರು ಕಾಗದಗಳನ್ನು ನೋಡುತ್ತಲೇ ಅವನು:—ಭಾವೂಸಾಹೇಬರೇ, ಇದಂತೂ ನಿಮ್ಮ ಸರ್ಟಿಫಿಕೀಟಿನ ಪುಡಿಕೆಯಾಗಿದೆ.

ಭಾ:—ಸರಿ-ಸರಿ. ಹಾಗಾದರೆ ನನಗೆ ಬೇಕಾಗಿದ್ದ ಪುಡಿಕೆಯೇ ದೊರೆತಂತಾಯಿತು. ಇಂದು ತುಸ ಬಿಡುವಿದ್ದ ಮೂಲಕ, ಆ ಸರ್ಟಿಫಿಕೀಟುಗಳನ್ನಾರಿಸಿ ಅವುಗಳದೊಂದು ಚಿಕ್ಕ ಪುಸ್ತಕ ಛಾಪಿಸಿಡಬೇಕೆಂದೆನಿಸಿದ್ದರಿಂದ ಅವುಗಳನ್ನು ನೋಡಬೇಕೆಂದಿದ್ದೇನೆ.

ಸು:—ಅದಂತೂ ಹಿರದಿನ ಕೆಲಸವಾದೀತು. ಹಳೆಯ ನೆನಪುಗಳು ಅವ

ರವು ಅವರಿಗೇ ಅಲ್ಲದೆ, ವಿಷಯಪರತ್ವನಿಂದ ಬೇರೆಯವರಿಗೂ ಮನೋರಂಜಕ ಗಳಾಗುತ್ತವೆ; ಮತ್ತು ಇತಿಹಾಸವನ್ನು ಇಂತಹ ನೆನಪುಗಳ ಸಹಾಯದಿಂದಲೇ ಬರೆಯುತ್ತಿರುತ್ತಾರೆ. ತಮ್ಮ ನೌಕರಿಯ ಅನುಭವವೆಂದರೆ, ಇದೊಂದು ಕಾಲದ ಐತಿಹ್ಯವೇ ಅನ್ನಬಹುದು. ನಾನು ಇದರೊಳಗಿನ ಒಂದೊಂದೇ ಸರ್ಟಿಫಿಕೀಟು ತೆಗೆದು ಓದಲೊ? ಅಂದರೆ ಆ ಸಂಬಂಧದ ಅವಾಂತರ ಸಂಗತಿಗಳನ್ನು ತಾವು ನನಗೆ ಹೇಳುವಿರಂತೆ.

ಸ್ತುತಿಪರ ಶಬ್ದಗಳನ್ನು ತನ್ನಷ್ಟಕ್ಕೆ ತಾನೇ ಓದಿದರೂ ಆನಂದವಾಗುತ್ತದೆ; ಆದರೆ ಆ ಎರಡನೆಯವರ ಕೈಯ ಶಬ್ದಗಳನ್ನು ಮೂರನೆಯವನು ಓದಿ ಹೇಳಿದ ನೆಂದರೆ, ಆ ಸುಖವು ತ್ರಿಗುಣಿತವಾಗುತ್ತದೆ! ಇದರಿಂದ ಸುಭೇದಾರರಿಗೆ ಬೇಕಾ ಗಿದ್ದ ಪರವಾನಿಗೆಯು ಭಾವೂಸಾಹೇಬರಿಂದ ಸಹಜವಾಗಿಯೇ ದೊರಕಿತು. ಬಳಿಕ ಅವರು ಒಂದೊಂದೇ ಸರ್ಟಿಫಿಕೀಟು ತೆಗೆದು ಓದುವ ಕ್ರಮ ನಡೆಸಿದರು.

ಸು:—ಇದು ನೋಡಿರಿ, ಈ ಮೊದಲನೇ ಸರ್ಟಿಫಿಕೀಟನ್ನು. ಇದರ ಕೆಳಗೆ 'ಎಡಮುಟ್ಟ' ಅಥವಾ 'ಅಡಮುಟ್ಟ' ಎಂಬ ಸಹಿಯ ಅಕ್ಷರಗಳಿರುತ್ತವೆ.

ಭಾ:—ಅಹುದಹುದು. ಅಡಮುಟ್ಟ ಸಾಹೇಬನ ಸರ್ಟಿಫಿಕೀಟೇ ಅದು. ಆ ಅಡಮುಟ್ಟ ಸಾಹೇಬನೆಂದರೆ, ಬಹು ದೊಡ್ಡ ಮನುಷ್ಯನು. ಅವನು ಅದ ರಲ್ಲೇನು ಬರೆದಿರುವನು?

ಸು:—"ಭಾವೂಸಾಹೇಬ ಪಟೀರನು ನನ್ನ ಶಿರಸ್ತೇದಾರನಿದ್ದನು; ಆಗ ಎರಡೆರಡು ಕತ್ತೆಗಳೊಜ್ಜೆಯ ಟಪಾಲನ್ನು ಇವನೊಬ್ಬನೇ ನಿಸ್ತರಿಸಿಕೊಳ್ಳುತ್ತಿ ದ್ದನು!"....ಭಾವೂಸಾಹೇಬ, ಇದರ ಭಾಷೆಯು ತುಸ ಸಂದಿಗ್ಧವಾಗಿಲ್ಲವೆ?

ಭಾ:—ಛೇ! ಛೇ! ಸಾಹೇಬಜನರು ಶಬ್ದಗಳನ್ನು ಸಂದಿಗ್ಧವಾಗಿ ಇಲ್ಲವೆ ಒಮ್ಮೊಮ್ಮೆ ತ್ಯಾಜ್ಯವನ್ನಾದರೂ ಉಪಯೋಗಿಸಿಯಾರು; ಆದರೆ ಅವರ ಹೇತುವು ಮಾತ್ರ ಸ್ಪಷ್ಟವೂ ಸ್ತುತ್ಯವೂ ಆಗಿರುವದರಿ. ಆ ಸರ್ಟಿಫಿಕೀಟನ್ನು ಛಾಪಿಸು ವದೇ. ಅದರಲ್ಲಿ ನನ್ನ ಕೆಲಸದ ತೀಕ್ಷ್ಣತೆಯು ಮತ್ತು ಚಟುವಟಿಕೆಯು ದಾಖಲೆ ಯಿದೆ. ಹೂಂ, ಮುಂದೆ ಸಾಗಲಿ.

ಸು:—ಕಾರ್ನಾಯೋ, ಕರೇ ನಾಯಿಯೋ ಎಂಬ ಎಂತಹದೋ ಸಹಿ ಯಿದೆ ಈ ಎರಡನೇ ಸರ್ಟಿಫಿಕೀಟಿನ ಮೇಲೆ.

ಭಾ:—ಹಾ! ನೆನಪಾಯಿತು. ನಮ್ಮ ಕರೇ ನಾಯಿ ಸಾಹೇಬನಂತಹ ಸುಸ್ವಭಾವದ ಅಧಿಕಾರಿಯು ಎಲ್ಲಿಯೂ ದೊರೆಯಲಾರನು. ಪ್ರಸಂಗದಲ್ಲಿ ಹುಚ್ಚು ನಾಯಿಯಂತೆ ಅವನು ಮೈಮೇಲೆ ಏರಿ ಬಂದಾನು; ಆದರೆ ಎಂದೂ ಹಲ್ಲು ಹಚ್ಚು ತಕ್ಕವನಲ್ಲ. ಇರಲಿ. ಅವನು ಆ ಕಾಗದದಲ್ಲೇನು ಬರೆದಿರುವನು?

ಸು: —ನಮ್ಮ ಮಡಮ್ಮ ಸಾಹೇಬರು ವಿಲಾಯತಿಗೆ ಹೋದರು; ಅದ ರಿಂದ ಮನೆಯಲ್ಲಿ ನೋಡಿಕೊಳ್ಳುವವರಾರೂ ಇರಲಿಲ್ಲ. ನಮ್ಮ ಎಲ್ಲ ಬಗೆಯ ಸರಬರಾಯಿಯನ್ನು ಅವರು ಬಹು ಚನ್ನಾಗಿ ಇರಿಸಿದರು. ಸರಬಾಯಿ ಮಾಡ ಬೇಕು, ಡಬೀರರೇ!''

ಭಾ: —ಒಳ್ಳೇದು. ಈ ಸರ್ಟೀಫಿಕೀಟನ್ನು ಅವರು ನನಗೆ ಅನಪೇಕ್ಷಿತವಾಗಿ ಬರಕೊಟ್ಟಿರುವರು. ಯಾವಾತನು ತನ್ನ ಸ್ವಂತದ ಇಲ್ಲವೆ ಮುಂದಿಯ ಸರಬರಾಯಿ ಯನ್ನು ಚೆನ್ನಾಗಿರಿಸಿಕೊಳ್ಳಲಾರನೋ, ಆತನೆಂಥ ಅಮಲ್ದಾರನು? ಇರಲಿ. ಇದನ್ನೂ ಛಾಪಿಸುವದೇ. ಮುಂದೆ.

ಸು: —ಇದು ಬಾಲಗೆಯ್ಯೋ ಬಲಗ್ಯೆಯೋ ಎಂಬ ಸಹಿಯ ಕಾಗದವು. ಇದರ ಅಕ್ಷರವು ಎಷ್ಟು ಗಿಜಿಬಿಜಿಯಾಗಿದೆಯನ್ನಲಿ! ಮಾಸ್ತರನು ಈತನಿಂದ ಸಾಲೆಯಲ್ಲೆಂದೂ ಬರಡು ತೀಡಿಸಿರಲಿಕ್ಕಿಲ್ಲೆಂದು ತೋರುತ್ತದೆ

ಭಾ: —ಛೇ! ಛೇ! ಬಹು ಜನ ಸಾಹೇಬರ ಅಕ್ಷರಗಳೇ ಹಾಗಿರುತ್ತವೆ. ಆ ಗಜಿಬಿಜಿ ಅಕ್ಷರಗಳಿಗೇ ಅವರಲ್ಲಿ ಒಳ್ಳೇ ಸುಂದರವೆನ್ನುವ ರೂಢಿಯಿದೆ. ಅದಿ ರಲಿ. ಆ ಬಲಗ್ಯೆ ಸಾಹೇಬನೇನೆನ್ನುತ್ತಾನೆ?

ಸು: —''ಎಸ್ಟರ ಡಬೀರನು ಕೊತವಾಲನಾಗಿದ್ದಾಗ ಆತನ ಸರ್ಕಾಲ್ಲಿನಲ್ಲಿ ದಿನವಹಿ ಹೆಚ್ಚಾಗಿ ಕಳವಾಗುತ್ತಿದ್ದವು; ಆದರೆ ಬಹುತರವಾಗಿ ಯಾರ ಫಿರ್ಯಾ ದಿಯೂ ದಾಖಲಾಗುತ್ತಿರಲಿಲ್ಲ. ಈ ಬಗೆಯಾಗಿ ಆತನ ಅಮಲು ತೀಕ್ಷ್ಣವಾಗಿ ದ್ದಿತು.'' ಭಾವೂಸಾಹೇಬರೇ, ಈ ವಾಕ್ಯಗಳ ಅರ್ಥವನ್ನು ಜನರು ವಿಪರೀತವಾಗಿ ಮಾಡಬಹುದು; ಕಾರಣ ನೀವು ಇದನ್ನು ಛಾಪಿಸಕೂಡದೆಂದು ನನಗಂತೂ ಅನಿಸುತ್ತದೆ.

ಭಾ: —ಜನರ ಅರ್ಥವನ್ನು ತಕ್ಕೊಂಡು ನಾವೇನು ಮಾಡಬೇಕಾಗಿದೆ? 'ಅಮಲು ತೀಕ್ಷ್ಣವಾಗಿದ್ದಿತು ಎಂಬದರಲ್ಲಿಯೇ ನಿಜವಾದ ಸ್ತುತಿಯಿರುತ್ತದೆ. ಆದರಿಂದ ಈ ಸರ್ಟೀಫಿಕೀಟನ್ನಂತೂ ಅತ್ಯವಶ್ಯವಾಗಿ ಮುದ್ರಿಸತಕ್ಕದ್ದು.

ಹೀಗೆಯೇ ಮಿಕ್ಕ ಎಲ್ಲ ಸರ್ಟಿಫಿಕೀಟುಗಳ ವಾಚನ, ಟೀಕೆ, ಸ್ಪಷ್ಟೀ ಕರಣ, ಮಂಜೂರಿಗಳಾದ ಮೇಲೆ, ಆ ರೇಶ್ಮಿಬಟ್ಟೆಯನ್ನೊಮ್ಮೆ ಕೊಡವಿ, ಅದರಲ್ಲಿ ಆ ಎಲ್ಲ ಸರ್ಟಿಫಿಕೀಟುಗಳ ಪುಡಿಕೆಯನ್ನು ಕಟ್ಟಿದ ಬಳಿಕ, ಸುಭೇದಾರರು: — ಭಾವೂಸಾಹೇಬರೇ, ತಮ್ಮ ಅಮಲ್ದಾರರ ಕೀರ್ತಿಯನ್ನು ನಾನು ಕೇಳಿದ್ದೆನು; ಆದರೆ ಈ ತಮ್ಮ ಸರ್ಟಿಫಿಕೀಟುಗಳು ಮಾತ್ರ ನನಗೆ ಓದಲಿಕ್ಕೆ ದೊರೆತಿರಲಿಲ್ಲ. ಈ ತಮ್ಮ ಸರ್ಟಿಫಿಕೀಟುಗಳೆಂದರೆ, ತಮ್ಮ ಒಬ್ಬ ವ್ಯಕ್ತಿಯ ಭೂಷಣವಾಗಿರದೆ, ಈ ಡಬೀರ-ಸುಭೇದಾರರ ಮನೆತನದ ಭೂಷಣವಾಗಿರುತ್ತದೆ. ಆದರಿಂದ ನಾನು

ತಮಗೆ ಬಿನ್ನಯಿಸುವದೇನಂದರೆ, ಈ ಸರ್ಟಿಫಿಕೀಟುಗಳನ್ನು ನಾನು ನನ್ನ ಖರ್ಚಿನಿಂದ ಸುಂದರವಾಗಿ ಮುದ್ರಿಸಿ, ಇವುಗಳ ಪುಸ್ತಕ ಮಾಡುತ್ತೇನೆ. ಅದಕ್ಕಾಗಿ ನನಗೆ ತಮ್ಮ ಅಪ್ಪಣೆ ಬೇಕು.

ಭಾವೂಸಾಹೇಬರು ಸಂತುಷ್ಟರಾದರು. ಅವರು ಸುಪ್ರಸನ್ನ ಮೊಗದಿಂದ: ನೌಕರದಾರನಿಗೆ ತಕ್ಕ ಬಕ್ಷೀಸು ಇಲ್ಲವೆ ಭೂಷಣವೆಂದರೆ, ಸರ್ಟಿಫಿಕೀಟುಗಳದೇ ಆಗಿದೆ. ದುಡ್ಡೇನು, ಇಂದು ಸಿಕ್ಕೀತು; ನಾಳೆ ಖರ್ಚಾದೀತು; ಆದರೆ ಸರ್ಟಿಫಿಕೀಟುಗಳೊಳಗಿನ ಗೌರವವೇ ಬಾಳತಕ್ಕ ವಸ್ತುವು; ಮತ್ತು ಬೆಲೆಯುಳ್ಳ ಸಂಪಾದನೆಯು, ಎಂದು ನಾನಂತೂ ತಿಳಿಯುತ್ತೇನೆ. ಈ ಬಗ್ಗೆ ನಿಮಗೇನೆನಿಸುವದೋ-ಅನಿಸಲಿ.

ಭಾವೂಸಾಹೇಬರ ಆ ಕಡೆಯ ವಾಕ್ಯದಿಂದ ಸುಭೇದಾರನ ಅಂತಃಕರಣಕ್ಕೆ ಸರ್ಪದಂಶವಾದಂತಾಯಿತು. ಸಾತ್ವಿಕ ಸಿಟ್ಟೇ ಅದು! ಅಂದಮೇಲೆ ಹಾಗೇಕೆನಿಸಬಾರದು? ಸರ್ಟಿಫಿಕೀಟುಗಳನ್ನು ತಮ್ಮ ಖರ್ಚಿನಿಂದ ಮುದ್ರಿಸಿ ಕೊಡುವ ಉದಾರತನವನ್ನು ಆ ಮಹಾತ್ಮನು ಇದೀಗಲೆ ಪ್ರಕಟಿಸಿದ್ದನು. ಹೀಗಿದ್ದರೂ ಅವನನ್ನುದ್ದೇಶಿಸಿ ಭಾವೂಸಾಹೇಬರು:— "ನಿಮಗೇನೆನಿಸುವದೋ-ಅನಿಸಲಿ" ಅನ್ನುತ್ತಾರೆ. ಇದಕ್ಕೇನು ಅನ್ಯಾಯವೆನ್ನಬೇಕೋ? ವಿಪರೀತ ನ್ಯಾಯವೆನ್ನಬೇಕೋ? ಆಗ ಸುಭೇದಾರರು ಅಳುಮೋರೆಯಿಂದ:—ಭಾವೂಸಾಹೇಬರೇ, ಕ್ಷಮಿಸಿರಿ. ಈ ಮಾತು ತಮಗೆ ಒಪ್ಪುವದೇ? ತಮ್ಮ ಸರ್ಟಿಫಿಕೀಟುಗಳನ್ನು ನಾನು ಆಗಲೆ ಹೊಗಳಲಿಲ್ಲವೆ? ಅಂದಮೇಲೆ ತಮಗೆ ಮತ್ತೆ ಸಂದೇಹವೇಕುಂಟಾಯಿತು, ನನಗೆ ಅವುಗಳ ಬಗ್ಗೆ ಏನೆನಿಸುವದಕ್ಕೆ? ಯಾವಾತನಿಗೆ ಈ ಸರ್ಟಿಫಿಕೀಟುಗಳು ದೊರೆತವೋ, ಅಂದರೆ ಯಾವಾತನು ನೌಕರಿಯ ಕಠಿಣಕೆಲಸದಲ್ಲಿ ಸುಯಶ ಸಂಪಾದಿಸಿದನೋ, ಅಂದರೆ ಯಾವನ ಕರ್ತವ್ಯಬುದ್ಧಿಯು ಇಷ್ಟು ಲೋಕೋತ್ತರವಾಗಿದೆಯೋ, ಅಂದರೆ ಯಾವಾತನು ತಂದೆಯೆಂದು ಮಗನೆದುರಿಗೆ ಆದರ್ಶಪ್ರಾಯನೆಂದೆನಿಸಲಿಕ್ಕೆ ತಕ್ಕವನಾಗಿರುವನೋ, ಆತನ ತೊಡೆಯ ಮೇಲೆ ನನ್ನ ಮಗನನ್ನು ಕೂಡ್ರಿಸದೆ ಬಿಡಲಿಕ್ಕಿಲ್ಲೆಂಬದೇ ನನ್ನ ಪಣವು! ದಯವಿಟ್ಟು ನನಗೆ ದತ್ತವಿಧಾನದ ತಿಥಿಯನ್ನು ಗೊತ್ತುಪಡಿಸಿ ತಿಳಿಸಿರಿ. ದತ್ತಕದ ಈಶ್ವರೀ ಸಂಕೇತವಿರದಿದ್ದರೆ, ಮತ್ತೆ ಮತ್ತೆ ನನ್ನ ಮನಸ್ಸಿನಲ್ಲಿ ಆ ಬಗ್ಗೆ ಇಷ್ಟು ಸ್ಫೂರ್ತಿಯು ಏಕುಂಟಾಗುತ್ತಿತ್ತು? ನಾನು ಬೇರೆ, ತಾವು ಬೇರೆ, ಹೀಗೆ ನಾನು ತಿಳಿಯುವದೇ ಇಲ್ಲ. ನನ್ನ ಹುಡುಗನ ದೈವದಲ್ಲಿ ಈ ದತ್ತಕದ ಯೋಗವಿದೆಯೆಂಬದನ್ನು ನನಗೆ ಜ್ಯೋತಿಷ್ಕರು ಹೇಳಿರುತ್ತಾರೆ. ಇನ್ನು ತಮಗೆ ಆ ಜ್ಯೋತಿಃಶಾಸ್ತ್ರದ ಬಗ್ಗೆ ಏನೆನಿಸುತ್ತದೋ ಅನಿಸಲಿ! ತಮ್ಮ ಪ್ರಭಾಕರನು ಜೀವದಿಂದಿ

ದ್ದರೆ, ನನ್ನೀ ಸ್ವಾರ್ಥತ್ಯಾಗವು ಅನವಶ್ಯಕವಾಗಿತ್ತು; ಆದರೆ ಆತನು ಕರಿಸೀರಿಗೆ ಹೋದ ಮೂಲಕ ನಿಮಗುಂಟಾಗಿರುವ ದುಃಖವೂ, ನನ್ನ ಬಾಜೀರಾಯನನ್ನು ನಿಮಗೆ ದತ್ತಕ ಕೊಟ್ಟು 'ಇನ್ನು ಮುಂದೆ ಈತನು ನನ್ನವನಲ್ಲ; ನಿಮ್ಮವನೇ ಆದನು' ಎಂದು ಹೇಳುವಾಗ ನನಗಾಗುವ ದುಃಖವೂ ಒಂದೇ ಪಡಿಕಟ್ಟಿನವೆಂದು ತಿಳಿಯಿರಿ. ಹೀಗೆಂದು ನುಡಿದು, ನಿಷ್ಣಾತ ನಟನಂತೆ ಸುಭೇದಾರರು ತಮ್ಮ 'ನಿಷ್ಕ್ರಮಣ'ವನ್ನು ಮಾಡಿದರು.

ಸುಭೇದಾರರು ಹೊರಟು ಹೋದ ಬಳಿಕ ಭಾವೂಸಾಹೇಬರೊಬ್ಬರೇ ಆತ್ಮಗತವಾಗಿ ಯೋಚಿಸುತ್ತ ಕುಳಿತರು. ಈ ಸುಭೇದಾರನು ನಿಷ್ಕಾರಣವಾಗಿ ನನ್ನ ಸರ್ಟಿಫಿಕೀಟುಗಳನ್ನು ತನ್ನ ಖರ್ಚಿನಿಂದ ಸುಂದರವಾಗಿ ಛಾಪಿಸಿ ಪುಸ್ತಕ ಮಾಡುವನಂತೆ. ಇದರ ಮೇಲಿಂದ ಆತನು ನನ್ನ ವಿಷಯವಾಗಿ ಒಳ್ಳೇ ಆದರವುಳ್ಳವನಿರುವ ಬಗ್ಗೆ ಸಂದೇಹವೇ ಇಲ್ಲವೆಂದು ಅವರಿಗನಿಸಲು, ಅವರು ಆ ಸರ್ಟಿಫಿಕೀಟುಗಳ ಪುಡಿಕೆಯನ್ನು ಸುಭೇದಾರನಿಗೆ ಕಳಿಸಿಕೊಡುವದನ್ನು ನಿಶ್ಚಯಿಸಿ, ಅದಕ್ಕಾಗಿ ತಮ್ಮ ಆಳಾದ ದೌಲತನನ್ನು ಕೂಗಿದರು. ಬಳಿಕ ಅವರೊಂದು ಚೀಟಿ ಬರೆದು, ಆ ಚೀಟಿಯನ್ನೂ ಆ ಸರ್ಟಿಫಿಕೀಟುಗಳ ಪುಡಿಕೆಯನ್ನೂ ಆತನ ಕೈಯಲ್ಲಿ ಕೊಟ್ಟು:—"ಇವುಗಳನ್ನು ಖುದ್ದ ಸುಭೇದಾರರಿಗೇ ಮುಟ್ಟಿಸಿ, ಅವರಿಂದ ಉತ್ತರ ತರಬೇಕೆ"ಂದು ತಿಳಿಸಿದರು.

ಇಷ್ಟರಲ್ಲೊಬ್ಬ ಜಟಾಧಾರಿಯಾದ 'ಬುವಾ' ಬಂದಿರುವ ವರದಿಯು ಅಲ್ಲಿಗೆ ಬಂದಿತು; ಅಪ್ಪಣೆ ದೊರೆತ ಕೂಡಲೆ ದೌಲತನು ಆ ಬುವಾನನ್ನು ಮೇಲೆ ಕರೆದೊಯ್ದು ಬಿಟ್ಟು, ತಾನು ತನ್ನ ಕೆಲಸಕ್ಕೆ ಹೊರಟು ಹೋದನು.

ಆ ಜಟಾಧಾರಿಯಾದ ಬುವಾನು ಮೈಮೇಲೆ ಶಾಲು ಹೊತ್ತಿದ್ದನು. ಬಗಲಲ್ಲೊಂದು ಹೊತ್ತಿಗೆ, ಕೈಯಲ್ಲಿ ರುದ್ರಾಕ್ಷಿಯ ಮಾಲೆ, ಹಣೆಯ ಮೇಲೆ ಕಾಶೀಕಡೆಯವರಂತೆ ಸಿಂದೂರದ ನಾಮ! ಈ ಬಗೆಯ ವೇಷದವನಿದ್ದನು.

ಬರ್ರಿ, ಕೂಡ್ರಿ ಎಂದಾದ ಕೂಡಲೆ, ಬುವಾನು ಬಾಯಿಂದ ಏನೂ ಮಾತನಾಡದೆ, ಭಾವೂಸಾಹೇಬರ ಮುಖದ ಕಡೆಗೆ ಟಕಮಕವೆಂದು ಒಂದೇಸವನೆ ನೋಡತೊಡಗಿದನು; ಮತ್ತು ಸಾಮುದ್ರಿಕ ನೋಡುವ ಸಲುವಾಗಿ ನಿರ್ಭೀಡೆಯಿಂದ ಕೈಕೊಡಿರೆಂದನು. ಕೊಡಿರೆಂದೆನ್ನುವದಕ್ಕಿಂತ, ತಾನೇ ತಾನಾಗಿ ಅವರ ಕೈಯನ್ನು ಬಂದಿಷ್ಟು ಜಗ್ಗಿಕೊಂಡನೆಂದರೂ ಅಡ್ಡಿಯಿಲ್ಲ.

ಜ್ಯೋತಿಷ್ಕರಿಗೂ ಸಾಮುದ್ರಿಕರಿಗೂ ಈ ಬಗೆಯ ಅತಿಪ್ರಸಂಗಗಳು ಬಹುಶಃ ಕ್ಷಮ್ಯವೇ ಆಗಿರುತ್ತವೆ. ಫೀಯು ಕರಾರಾದ ನಂತರವೇ ಪಕ್ಷಕಾರನ ಕಾಗದಗಳಿಗೆ ಕೈಹಚ್ಚುವ ವಕೀಲರಂತಹ ವೃತ್ತಿಯು ಈ ಬುವಾ ಜನರದಲ್ಲ.

ಬ್ರಹ್ಮಚರ್ಯ, ನಿಸ್ಪೃಹತೆ ಮತ್ತು ಗೂಢ ವಿದ್ಯೆಯ ಜ್ಞಾನ ಇವುಗಳ ಬಲದಿಂದ ಜಗತ್ತನ್ನೇ ಕಡ್ಡಿಯಂತೆ ತಿಳಿಯುವ ಹಕ್ಕು ಯಾರಿಗಾದರೂ ಸಹಜವಾಗಿ ಬರುತ್ತದೆ! ಈ ಪ್ರತಿಯೊಂದರಲ್ಲಿಯ ಸಟೆ-ದಿಟಗಳ ಪರೀಕ್ಷೆಯು ಮುಂದೆ ಆಗಲಿ-ಆಗದಿರಲಿ; ಆದರೆ ತಲೆಯ ಮೇಲಿನ ಜಟೆ, ಕೈಯೊಳಗಿನ ರುದ್ರಾಕ್ಷಿಯ ಮಾಲೆ, ಮೈಮೇಲಿನ ಶಾಲು ಮತ್ತು ಹಣೆಯ ಮೇಲಿನ ಶಾಕ್ತಪಂಥದ ಸಿಂದೂರದ ನಾಮ ಇವುಗಳು ಮಾತ್ರ ಮೇಲಿನ ಗುಣಗಳು ಅವರಲ್ಲಿರುತ್ತವೆಂಬದಕ್ಕೆ ಗೃಹೀತ ಪ್ರತ್ಯಯಗಳೆಂದೂ, ಮುಂಗಡದ ಅರ್ಥ್ಯಾನ್ಸೆಂದೂ, ಜಾಮೀನೆಂದೂ ಹೇಳಲಿಕ್ಕೆ ಸಂದೇಹವಿಲ್ಲ. ಯಾರಿಗೆ ಜ್ಯೋತಿಷ್ಯದಲ್ಲಿ ವಿಶ್ವಾಸವಿರುವದೋ, ಅದರೊಡನೆ ಅವರಿಗೆ ಮತ್ತೊಂದು ಬಗೆಯ ವಿಶ್ವಾಸವೂ ಇರುವದು ಸೋಜಿಗವೇ ಸರಿ. ಅದೇನೆಂದರೆ, ದೈವದಲ್ಲಿ ಅಂಥ ಯೋಗವೇ ಇರುತ್ತದೆ; ಇಲ್ಲವೆ ಈಶ್ವರೇಚ್ಛೆಯ ವಿಶಿಷ್ಟ ಪ್ರೇರಣೆಯೋ ಇರುತ್ತದೆಂದು ಜ್ಯೋತಿಷ್ಯನು ಕರೆಕಳುಹದೆ ತನ್ನ ಕಾಲಿನಿಂದ ತಮ್ಮಲ್ಲಿಗೆ ನಡೆದು ಬರುವ ಬುದ್ಧಿಯುಂಟಾಗುವದು; ಮತ್ತು ಆತನು ಬಂದಾಗ ತಮ್ಮ ಆತನ ಗಂಟು ಬೀಳುವದು! ಅಡವಿಯಲ್ಲಿ ಹುಲಿಯ ಹಾಗು ಅದರ ಭಕ್ಷ್ಯದ ಗಂಟು ಬೀಳುವದರ ಮೀಮಾಂಸೆಯನ್ನಾದರೂ ಹೀಗೆಯೇ ಮಾಡಬರಲಿಕ್ಕಿಲ್ಲವೇ? ಜ್ಯೋತಿಷ್ಯ-ಸಾಮುದ್ರಿಕರು ಬರಿಯ ಕೈಯನ್ನು ಜಗ್ಗಿಕೊಳ್ಳುತ್ತಾರೆ; ಆದರೆ ಹುಲಿಯು ದನಕರುಗಳ ಕುತ್ತಿಗೆಯನ್ನೇ ಹಿಡಿಯುತ್ತದೆ. ಹೇಗಿದ್ದರೂ ಯೋಗಾಯೋಗಗಳ ಉಪಪತ್ತಿಯು ಒಂದೇ! ಜ್ಯೋತಿಷ್ಯನು ಕೈಜಗ್ಗಿಕೊಂಡ ಕೂಡಲೆ ಭಾವೂಸಾಹೇಬರು ಹುಲಿಯ ಬಾಯೊಳಗಿನ ಪಶುವಿನಂತೆ ಸ್ತಂಭಿತರಾಗಿ ಬಿಟ್ಟರು! ಮುಂದೆ ಕೆಲಹೊತ್ತಿಗೆ ಸಂಭಾಷಣಕ್ಕಾರಂಭವಾಯಿತು:

ಭಾ: —ಬುವಾಸಾಹೇಬರ ಸವಾರಿಯು ಎತ್ತಕಡೆಯಿಂದ ಆಗಮಿಸಿತು?

ಈ ಪ್ರಶ್ನೆಗೆ ಬುವಾನು ಒಂದು ಕ್ಲಿಷ್ಟ ಸಂಸ್ಕೃತ ಶ್ಲೋಕವನ್ನಂದು ಉತ್ತರವಿತ್ತನು. ಅರ್ಥವಾಗದ ಸಂಸ್ಕೃತ ಶ್ಲೋಕಗಳೆಂದರೆ, ಭ್ರಮದ ವಾತಾವರಣವನ್ನುಂಟು ಮಾಡುವ ಸಲುವಾಗಿ ಬಾಗಿಲು ಮುಚ್ಚಿದ ಗರ್ಭಗುಡಿಯೊಳಗೆ ಹಾಕಿದ ಧೂಪದಂತೆಯೇ ಸರಿ!

ಭಾ: —ಬುವಾಸಾಹೇಬರೇ, ತಾವು ಎಲ್ಲಿಯವರು? ಇಂದು ಇತ್ತೆತ್ತ ಬಂದಿರಿ?

'ತುಸ ತಡೆಯಿರಿ' ಎಂದು ತಿಳಿಸುವದಕ್ಕೆ ಗೋಣಿನಿಂದ ಸಂಜ್ಞೆ ಮಾಡಿ, ಆ ಬುವಾನು ಮತ್ತೊಂದು ಅರ್ಥವಿಹೀನ ಶ್ಲೋಕ ಹೇಳಿದನು.

ಭಾ:-ಅಲ್ಲಾ ಅಂದೆ, ತಾವು ಯಾವ ಶಾಸ್ತ್ರಗಳ ಅಧ್ಯಯನಮಾಡಿರುತ್ತೀರಿ?

ಇನ್ನು ಶ್ಲೋಕಗಳ ತೋಫಿನ ಹೊಡತವು ಸಾಕೆಂದೂ ಅನುಸರಣರೂಪ ಭಾಷಣದ ಕಾಲಾಳುಗಳನ್ನು ಮುಂದೂಡಲಿಕ್ಕೆ ಅಡ್ಡಿಯಿಲ್ಲೆಂದೂ ಬುವಾನು ನಿಶ್ಚಯಿಸಿಕೊಂಡು:—ಶಾಸ್ತ್ರವೆಂತಹದು? ಅಧ್ಯಯನವೆಂತಹದು? ಶಾಸ್ತ್ರವು ಮನುಷ್ಯನ ಜೀವಿತಕ್ಕಿಂತಲೂ ಮಿಗಿಲಾದದ್ದು; ಮತ್ತು ಅಧ್ಯಯನವೆಂದರೆ ಅದಕ್ಕೆ ವಿಘ್ನಗಳೇ ಹೆಚ್ಚು. ಇನ್ನು ತಾವು ಕೇಳುತ್ತಿರುವದರಿಂದ, ಈ ಗುರು ನಾಥನ ಮನೆಯ ಹುಚ್ಚನು ಜ್ಯೋತಿಷ್ಯ-ಸಾಮುದ್ರಿಕಗಳನ್ನು ತಕ್ಕಮಟ್ಟಿಗೆ ನೋಡಿಕೊಂಡಿರುತ್ತಾನೆ. ಹೀಗೆಂದು ಹೇಳಿ, ಭಾವೂಸಾಹೇಬರ ಕೈ ನೋಡುತ್ತ-ನೋಡುತ್ತ ಆತನು 'ಗುರುರಾಯ-ಗುರ್ರ್ರಾಯ-ಗುರ್ರ್ರಾಯ' ಎಂಬ ಮಂತ್ರ ವನ್ನು ಒಳ್ಳೇ ಒತ್ತರದಿಂದ ಜಪಿಸತೊಡಗಿದನು. ಸಾಮುದ್ರಿಕವನ್ನು ನೋಡು ವಾಗ ಏನು ಜ್ಞಾನವಾಗುತ್ತಿತ್ತೋ, ಅದರಿಂದ ಆ ಬುವಾನಿಗೆ ವಿಸ್ಮಯವೆನಿಸುತ್ತಿರ ಬೇಕೆಂಬದನ್ನು ಹಲವು ಲಕ್ಷಣಗಳಿಂದ ಅವನು ವ್ಯಕ್ತಪಡಿಸಿದನು. ಒಮ್ಮೆ ಆಶ್ಚರ್ಯ-ಒಮ್ಮೆ ಖೇದ, ಒಮ್ಮೆ ದುಃಖ-ಇನ್ನೊಮ್ಮೆ ಸಂತೋಷ; ಒಮ್ಮೆ ಆಶೆ. ಮತ್ತೊಮ್ಮೆ ನಿರಾಶೆ! ಹೀಗೆ ಪರಸ್ಪರ ವಿರುದ್ಧ ವಿಕಾರಗಳ ದ್ವಂದ್ವಯುದ್ಧವೇ ಆತನ ಮನೋಭೂಮಿಕೆಯ ಸಮರಾಂಗಣದಲ್ಲಿ ನಡೆವಿರುವಂತೆ ತೋರಿತು. ಕೆಲ ಹೊತ್ತಿನ ಮೇಲೆ ಆ ಸಾಮುದ್ರಿಕ ಫಲಗಳಿಂದ ಭಾವೂಸಾಹೇಬರ ಭೂತ-ಭವಿ ಷ್ಯತ್ತುಗಳ ಕಥನ ಮಾಡುವದನ್ನು ಬಿಟ್ಟುಬಿಟ್ಟು, ತನ್ನ ಆತ್ಮಚರಿತ್ರವನ್ನೇ ಅವ ರಿಗೆ ತಿಳಿಸುವ ಸ್ಫೂರ್ತಿಯು ಆ ಬುವಾನಿಗಾಯಿತು; ಆದರೆ ಅದನ್ನು ಕೇಳುವದಕ್ಕೆ ಬೇಸತ್ತು, ಭಾವೂಸಾಹೇಬರು ಉತಾವಳಿತನದಿಂದ:-ತಾವು ನನ್ನ ಕೈ ನೋಡಿ ದ್ದರ ಬಗ್ಗೆ ಹೇಳುವದು ಹಾಗೆಯೇ ಉಳಿದಿದೆ, ಎಂದಂದರು.

ಜ್ಯೋ:—ಅದನ್ನು ನಾನು ಹೇಗೆ ಮರೆಯಲಿ? ತಮಗೆ ತೀವ್ರವೇ ಕುಲ ದೀಪಕನಾದ ಮಗನು ಲಭಿಸತಕ್ಕವನಿದ್ದಾನೆ.

ಅದನ್ನು ಕೇಳಿ, ಭಾವೂಸಾಹೇಬರು ವಿಚಾರಮಗ್ನರಾದರು. ಆಗ ಆ ಬುವಾನು:—ಭಾವೂಸಾಹೇಬರೇ, ವಿಚಾರವನ್ನೇನು ಮಾಡುವಿರಿ? ತಮ್ಮ ಸಂಪ ತ್ತಿಗೆ ದೇವರು ಅಮರ ಸಂತತಿಯನ್ನೊದಗಿಸಿ ಕೊಡಲಿಲ್ಲೆಂಬದನ್ನು ನಾನರಿಯೆನೇ? ತಮಗೆ ಹೊಟ್ಟೆಯ ಮಗನಿರಬೇಕು; ಆದರೆ ಇಡಿ ಜನ್ಮ ಆತನ ವಿಯೋಗವಾಗ ಬೇಕು. ಹೀಗೆ ಯೋಗವಿದ್ದಂತೆ ತೋರುತ್ತದೆ. ಇದರಂತೆ ಇನ್ನು ಮುಂದೆ ತಮ್ಮ ಹೊಟ್ಟೆಯಲ್ಲಿ ಪುತ್ರಸಂತಾನವಿಲ್ಲೆಂಬದೂ ಇಲ್ಲಿ ಚೆನ್ನಾಗಿ ಕಾಣುತ್ತದೆ.

ಭಾ:—ಇತ್ತ ಇದೂ ಇಲ್ಲ; ಅತ್ತ ಅದೂ ಇಲ್ಲ. ಅಂದಮೇಲೆ ಕುಲದೀ ಪಕನಾದ ಮಗನು ಲಭಿಸುವ ಬಗೆ ಹೇಗೆ?

ಜ್ಯೋ:—ತಮಗೆ ಲಭಿಸತಕ್ಕ ಸುಪುತ್ರನು ದತ್ತಕದವನು! ಮತ್ತು ಆ

ಯೋಗವಾದರೂ ಶೀಘ್ರವೇ ಕಾಣುತ್ತದೆ. ಒಳ್ಳೇದು. ನಾನಿನ್ನು ಹೊರಡಲೊ?

ಆ ಜ್ಯೋತಿಷ್ಕನು ಕೇವಲ ನಿರಪೇಕ್ಷೆಯಾಗಿ ಕಂಡನು; ಮತ್ತು ಆತನಿಗೇನಾದರೂ ಕೊಡಬೇಕೆಂದು ಭಾವೂಸಾಹೇಬರ ಮನಸ್ಸಿನಲ್ಲಿಯೂ ಬರಲಿಲ್ಲ; ಆದರೆ ಕೇವಲ ಶಿಷ್ಟಾಚಾರಕ್ಕೆಂದು ಭಾವೂಸಾಹೇಬರು ಆತನನ್ನು ಮತ್ತೆ ಕೆಲ ಕ್ಷಣ ಕುಳ್ಳಿರಿಸಿಕೊಳ್ಳಲಿಕ್ಕೆ:—ಬುವಾಸಾಹೇಬರೇ, ನನಗೂ ಈ ನಿಮ್ಮ ಶಾಸ್ತ್ರದಲ್ಲಿ ತುಸ ಗತಿಯಿರುವದರೀ.

ಜ್ಯೋ:—ತಿಳಿಯಿತು-ತಿಳಿಯಿತು. ವ್ಯಾಸಂಗವಿದ್ದದ್ದು ಯೋಗ್ಯವೇ ಆಯಿತು.

ಭಾ:—ಛೇ! ಛೇ! ವ್ಯಾಸಂಗವೇತರದು? ತುಸ ಗತಿಯಿದೆ. ಅದೂ ಇತ್ತೀಚಿಗೇ.

ಜ್ಯೋ:-ವೃದ್ಧಾಪ್ಯದಲ್ಲಿ ದೃಷ್ಟಿಯು ಅಂತರ್ಮುಖವಾಗುತ್ತದೆ. ಆದರಿಂದ ಅತೀಂದ್ರಿಯ ಸಂಗತಿಗಳ ಜ್ಞಾನವು ತೀವ್ರವೂ ತಪ್ಪದೆಯೂ ಆಗಹತ್ತುತ್ತದೆ.

ಭಾ:—ಪೆನ್‌ಶನ್ ಪಡೆಯುವ ಮೊದಲೇ ನನಗೀ ಚಟವಿದ್ದಿತು; ಆದರೆ ಆ ಜ್ಯೋತಿಷ್ಯವು ಬೇರೆ; ಈ ಜ್ಯೋತಿಷ್ಯವು ಬೇರೆ. ಇಷ್ಟೇ.

ವಿಶ್ವಾಸವುಂಟಾಯಿತೆಂದರೆ ತುಸ ವಿನೋದವೂ ಸೂಚಿಸುವದು; ಯಾಕಂದರೆ, ಆಗ ಮನಸ್ಸು ನಿಸ್ಸಂಕೋಚವೂ ಪ್ರಸನ್ನವೂ ಆಗಿರುತ್ತದೆ.

ಜ್ಯೋ: - ಅದು ಬೇರೆಯೆಂದರೆ ಹೇಗೆ?

ಭಾ: -ಅದು ಹೀಗೆ. ನಿಮ್ಮ ಜ್ಯೋತಿಷ ಶಾಸ್ತ್ರಕ್ಕೆ ನವಗ್ರಹಗಳ ಅವಶ್ಯಕತೆಯಿರುತ್ತದೆ; ಆದರೆ ನಮ್ಮ ಜ್ಯೋತಿಷಶಾಸ್ತ್ರದಲ್ಲಿ ನಾನು ನೌಕರಿ ಮಾಡುತ್ತಿರುವ ವರೆಗೆ ನನಗೆ ಎರಡೇ ಗ್ರಹಗಳು ಗೋಚರವಾಗುತ್ತಿದ್ದವು.

ಜ್ಯೋ:—ಅವಾವು? ಭಾ: -ಸೂರ್ಯ ಮತ್ತು ಚಂದ್ರ.

ಜ್ಯೋ:-ಅವುಗಳಂತೂ ನಮ್ಮ ಜ್ಯೋತಿಷಶಾಸ್ತ್ರದೊಳಗಿನ ಪ್ರಾಮುಖ್ಯ ಗ್ರಹಗಳು.

ಭಾ:—ಆದರೆ ನನ್ನ ಸೂರ್ಯನಾರೆಂಬದು ನಿಮಗೆ ಗೊತ್ತಿದೆಯೊ?

ಜ್ಯೋ:—ಈ ಬಡ ಹುಚ್ಚನಿಗೇನು ಗೊತ್ತು?

ಭಾ:—ನನ್ನ ಸೂರ್ಯನೆಂದರೆ, ನಮ್ಮ ಕಚೇರಿಯೊಳಗಿನ ಸಾಹೇಬನ ಮುಖಚರ್ಯೆಯು! ಆ ಮುಖಚರ್ಯೆಯ ಕಡೆಗೆ ನೋಡಿ, ನಾನು ಅಂದಿನ ನನ್ನ ಶುಭಾಶುಭ ಯೋಗ-ಶಕುನಗಳೆಲ್ಲ ಗೊತ್ತುಮಾಡಿಕೊಳ್ಳುತ್ತಿದ್ದೆನು. ಅದೇ ಗ್ರಹದಿಂದಲೇ ನನ್ನ ಸಂಸಾರ ಸುಖಕ್ಕೆ ಬೇಕಾಗುವ ಉಷ್ಣತೆಯು ಪ್ರಾಪ್ತವಾಗುತ್ತಿತ್ತು. ಸಾಹೇಬನ ಆ ಮುಖಚರ್ಯೆಯು ದಿನದಂತೆ ಬಿಳಿಛಾಯದ ಬಣ್ಣದ್ದಾ

ಗಿದ್ದರೆ, ನನ್ನ ಅಂದಿನ ಗ್ರಹಗಳು ಅನುಕೂಲವಾಗಿ ನನ್ನ ಮೇಲೆ ಸುಖದ ಮಳೆಯನ್ನೇ ಕರೆಯುಹತ್ತುವವು; ಆದರೆ ಆ ಮುಖಚರ್ಯೆಯು ಸಿಟ್ಟಿನಿಂದ ಕೆಂಪಡರಿತೆಂದರೆ, ಆ ಬಳಿಕ ಮಿಕ್ಕ ಗ್ರಹಗಳೆಲ್ಲವೂ ದ್ವಾದಶ ಸ್ಥಾನವನ್ನೇ ಹಿಡಿದು ಬಿಡುತ್ತಿದ್ದವು! ಹೀಗಾಯಿತೆಂದರೆ, ನನ್ನ ಸುಖಕ್ಕೆ ಬೇಸಿಗೆಯುಂಟಾಗಿ, ಎಲ್ಲ ಕಡೆಗೂ ತಾಪವೇ ತಾಪವಾಗುತ್ತಿತ್ತು! ನನ್ನ ದಿನಮಾನ-ಋತುಮಾನಗಳು ಆ ಸೂರ್ಯನನ್ನೇ ಅವಲಂಬಿಸಿರುತ್ತಿದ್ದವು.

ಜ್ಯೋ:—ಹಃ! ಹ! ಹ! ತಮ್ಮ ಮಾತಿನಲ್ಲಿ ವಿನೋದವಿರುವಂತೆ, ಸತ್ಯವೂ ಇಲ್ಲೆನ್ನುವಂತಿಲ್ಲ. ಅದಿರಲಿ. ತಮ್ಮ ಚಂದ್ರನಾರು?

ಭಾ:—ಸರಕಾರೀ ನೌಕರನ ಚಂದ್ರನೆಂದರೆ, ಆತನ ಪ್ರೀತಿಯ ಹೆಂಡತಿಯ ಮುಖಬಿಂಬವು! ಕಚೇರಿಯಲ್ಲಾದ ಎಲ್ಲ ಬಗೆಯ ಪೀಡೆ-ತೊಂದರೆಗಳನ್ನು ಮನೆಯೊಳಗಿನ ಕುಟುಂಬದ ಮುಖಚಂದ್ರನನ್ನು ನೋಡಿಯೇ ನೀಗಿಕೊಳ್ಳಬೇಕಲ್ಲದೆ, ಅವರಿಗೆ ಬೇರೆ ಸಾಧನವೇನಿರಬೇಕು? ಅದಿರಲಿ. ಆದರೆ ನಾನು ತಮಗೆ ಕೆಲವು ಪ್ರಶ್ನೆ ಮಾಡಬೇಕೆಂದಿರುವೆನು-ಕೇಳಲೋ!

ಜ್ಯೋ:—ಕೇಳಿರಿ; ಅವಶ್ಯವಾಗಿ ಕೇಳಿಕೊಳ್ಳಿರಿ. ಮೃದಂಗದ ಮೇಲೆ ಬಾರಿಸುವವನು ಛಾಪು ಹಾಕಿ ನುಡಿಸುವಂತೆ, ಗುರುರಾಯನು ನುಡಿಸಿದ್ದನ್ನು ಈ ದೇಹವು ನುಡಿಯುವದು.

ಆದರೆ ಪ್ರಶ್ನೆ ಕೇಳುವ ಮೊದಲೇ ಅಲ್ಪ ಸ್ವಲ್ಪ ಗೊಂದಲವನ್ನೆಬ್ಬಿಸಿರಬೇಕು; ಅಂದರೆ ಹೇಳಿದ ಉತ್ತರಗಳಲ್ಲಿ ಸಂಶಯದ ಲಾಭಪಡೆದು ತುಸ ಅದಲು ಬದಲು ಮಾಡಬಗುತ್ತದೆಂಬ ಉದ್ದೇಶದಿಂದ ಜ್ಯೋತಿಷ್ಕನು ಭಾವೂಸಾಹೇಬರಿಗೆ ಮತ್ತೆ:-ತಮ್ಮ ಪ್ರಶ್ನೆಯು ತ್ರಿಪ್ರಶ್ನಾಧಿಕಾರದೊಳಗಿನದೋ, ಪಂಚಪ್ರಶ್ನಾಧಿಕಾರದೊಳಗಿನದೊ?

ಭಾವೂಸಾಹೇಬರು ಜ್ಯೋತಿಷ್ಕರ ಈ ಪ್ರಶ್ನೆಗೆ ಮೊದಲು ಉತ್ತರ ಕೊಟ್ಟು, ಆ ಮೇಲೆಯೇ ತಮ್ಮ ಪ್ರಶ್ನೆಗಳನ್ನು ಕೇಳಬೇಕಾಯಿತು. ಅದರಿಂದ ಅವರಿಗೊಳ್ಳೇ ತೊಂದರೆಯಾಯಿತು; ಆದರೆ ತಮ್ಮ ಅಜ್ಞಾನವು ಒಡೆದು ಕಾಣಬಾರದೆಂದು, ತ್ರಿಪ್ರವರ-ಪಂಚಪ್ರವರಗಳಂತೆ ತೋರುವ ಆ ತೊಂದರೆಯನ್ನು ನೀಗಿಸುವದಕ್ಕಾಗಿ ಅವರು ತುಸ ವಿನಯವನ್ನು ತಾಳಿ:—ತಮ್ಮಂತಹ ಪ್ರಸಿದ್ಧ ಜ್ಯೋತಿಷ್ಕರೆದುರಿಗೆ ನನ್ನ ಅಧಿಕಾರವೆಷ್ಟರದು? ನನಗೆ ಜ್ಯೋತಿಷದ ಚಟವಿದ್ದರೂ ಒಂದೊಂದು ಪ್ರಶ್ನೆಯಲ್ಲಿ ಮೂರು ಮೂರು, ಐದೈದು ಪ್ರಶ್ನೆ ಕೇಳುವ ಅಧಿಕಾರವು ನನ್ನದಲ್ಲ; ಅಂದರೆ ನನ್ನ ಅಭ್ಯಾಸವೇ ಅಷ್ಟಾಗಿರುವದಿಲ್ಲ. ನನಗೆ ತೋರಿದಂತೆ ಒಂದೇ ಪ್ರಶ್ನೆಯನ್ನು ಕೇಳುತ್ತೇನೆ.

ಜ್ಯೋ:— ಹಾಗೆಯೂ ಆಗಬಹುದು.

ಭಾ: —ನನಗೆಷ್ಟು ಜನ ಹೆಂಡಂದಿರ ಯೋಗವಿರುತ್ತದೆ?

ಜುವಾನು ಮನಸ್ಸಿನಲ್ಲಿ ತರ್ಕದ ಗಣಿತಕ್ಕೆ ಪ್ರಾರಂಭಿಸಿದನು. ಆತನೆದುರಿಗಿನ ಗೋಡೆಯ ಮೇಲೆ ಭಾವೂಸಾಹೇಬ ಮತ್ತು ಅವರ ಹೆಂಡತಿಯ ಫೋಟೋಗಳಿದ್ದವು. ಅದರಲ್ಲಿ ಭಾವೂಸಾಹೇಬರು ಇಳಿವಯಸ್ಸಿನವರಿದ್ದು, ಅವರ ಕುಟುಂಬವು ಮಾತ್ರ ತರುಣ ವಯಸ್ಸಿನದಿತ್ತು. ಆಗ ದ್ವಿತೀಯ ಕುಟುಂಬವೆಂದು ಹೇಳಿ ಬಿಡಬೇಕೆಂದು ನಿರ್ಧರಿಸಿ, ಜ್ಯೋತಿಷ್ಯನು:—ತಮಗೀಗ ಎರಡನೇ ಹೆಂಡತಿಯಿರಬೇಕೆಂದೆನಿಸುತ್ತದೆ.

ಭಾ: -ಛೇ! ತುಸ ತಪ್ಪಿತು. ನನಗೀಗ ಮೂರನೇ ಹೆಂಡತಿಯಿರುತ್ತಾಳೆ.

ಜ್ಯೋ: —ಸರಿ ಸರಿ! ಹಾಗಾದರೆ ತಪ್ಪಿತೆಲ್ಲಿ? ನಮ್ಮ ಜ್ಯೋತಿಃಶಾಸ್ತ್ರದಲ್ಲಿ ಭಾರ್ಯಾಯೋಗ ನೋಡುವಾಗ ಮೊದಲನೇ ಕುಟುಂಬವನ್ನು ಬಿಟ್ಟೇಬಿಡಬೇಕಾಗುತ್ತದೆ; ಯಾಕಂದರೆ, ಗಂಡಸರ ಮೊದಲನೇ ಲಗ್ನವು ಆಗಿಯೇ ಆಗತಕ್ಕದ್ದು. ಆದರಿಂದ ಏಕ ಭಾರ್ಯೆಯ ಯೋಗವೆಂದರೆ ಎರಡನೇ ಹೆಂಡತಿ, ದ್ವಿಭಾರ್ಯಾ ಯೋಗವೆಂದರೆ ಮೂರನೇ ಹೆಂಡತಿ ಹೀಗೆ ತಿಳಿಯುವದಿರುತ್ತದೆ. ನಾನು ತಮಗೆ ಇದೇ ಅರ್ಥದಿಂದ ದ್ವಿಭಾರ್ಯಾಯೋಗವೆಂದು ಹೇಳಿದ್ದೆನು.

ಇಷ್ಟರಲ್ಲಿ ನಡುಮನೆಯ ಅಟ್ಟದಿಂದ:—"ಅಪ್ಪಾ, ಅಪ್ಪಾ, ನಾನು ಬರಲ್ಯಾ?" ಎಂಬ ಉಲುಕೋಚಿತನದ ಹಾಗು ತುಸ ಸಿಟ್ಟಿನ ಧ್ವನಿಯು ಕೇಳಬಂದಿತು. "ತಂಗೀ, ಬಾರವ್ವಾ!" ಎಂದು ಭಾವೂಸಾಹೇಬರು ಅದಕ್ಕೆ ಉತ್ತರವಿತ್ತರು. ಬಳಿಕ ಭಾವೂಸಾಹೇಬರೂ ಜ್ಯೋತಿಷ್ಯರೂ ಕೂಡಿಯೇ ಎದ್ದುನಿಂತರು. ಜುವಾನು ಅವಸರವಸರದಿಂದ ಮೆಟ್ಟಿಲುಗಳನ್ನಿಳಿಯುಹತ್ತಿದನು. ಅವನನ್ನು ಮೆಟ್ಟಿಲುಗಳ ವರೆಗೆ ಕಳಿಸಿ ಬಂದ ಭಾವೂಸಾಹೇಬರು ತಮ್ಮ ಗಾದಿಯನ್ನಾಶ್ರಯಿಸಿ ಕುಳಿತು, ಚಿರೂಟ ಹೊತ್ತಿಸಿದರು.

---

## ೯ ವಿಕ್ರಮನೊ, ಹರೂನ-ಅಲ್-ರಶೀದನೊ?

ಇಂದು ಶ್ರಾವಣ ಬಹುಳ ಅಮಾಸಿಯು. ಅಮಾಸಿಯೆಂದರೆ ಕಾರಿರುಳಿನ ಪರಮಾವಧಿಯು! ಆದರೆ ಅದೇ ಕಾರಿರುಳೇ ಒಂದು ಬಗೆಯಿಂದ ಮುಂದಿನ ಬೆಳದಿಂಗಳ ರಾತ್ರಿಯ ಪೀಠಿಕೆಯಾಗಿರುತ್ತದೆ. ರೋಗಗಳು ಅಮಾಸಿಯ ಮಧ್ಯರಾತ್ರಿಯ ವರೆಗೆ ಬಲಿತು ಮೃತ್ಯುವನ್ನುಂಟು ಮಾಡುತ್ತವೆ; ಆದರೆ ಅಮಾಸಿಯ ಮಧ್ಯರಾತ್ರಿಯು ಮೀರುವ ವರೆಗೆ ಯಾವ ರೋಗಿಯು ಬದುಕಿರುವನೋ, ಅವನು ಮುಂದೆ ಗುಣ ಹೊಂದುವ ದಾರಿ ಹಿಡಿದನೆಂದು ಅನ್ನುತ್ತಾರೆ. ಅಂತೆಯೇ

ಅಮಾಸಿಯೆಂದರೊಂದು ಯುಗಾಂತರದ ಸಂಧಿಕಾಲವೇ ಸರಿ. ನಮ್ಮ ಜೋಧ್ಯಪುರದ ಈ ಕಥಾನಕದಲ್ಲೂ ಈ ಅಮಾಸಿಯು ಹೀಗೆಯೇ ಯುಗಾಂತರಗೊಳಿಸುವಂತಹದೆಂದು ನಿಶ್ಚಿತವಾಯಿತು.

ಇಂದು ಬೆಳಿಗ್ಗೆ ಆ ಇಬ್ಬರು ಮಿತ್ರರು ಮಾತನಾಡುತ್ತ ಕುಳಿತಿರಲು, ಜೋಜಿಗರಾಯನು ಮನೋಹರನ ಮೇಲೆ ಸಿಟ್ಟಾಗಿ:—ಮನೋಹರ, ನಾನು ಈ ಮೊದಲು ಐವತ್ತು ಸಾರೆ ಹೇಳಿದ ಸಂಗತಿಯನ್ನೇ ಮತ್ತೆ ಇಂದು ಇನ್ನೊಮ್ಮೆ ಹೇಳುತ್ತೇನೆ ನನ್ನ-ನಿನ್ನಲ್ಲಿ ಭೇದವನ್ನೇನೂ ಎಣಿಸಕೂಡದು. ಬಾಲಮಿತ್ರತ್ವದ ಸಂಬಂಧವೇ ನಮ್ಮ ನಿಜ ಸಂಬಂಧವು. ನೀನು ನನಗೆ "ಮಹಾರಾಜ-ಮಹಾರಾಜ, ಬರುವದಾಗಬೇಕು-ತೆರಳುವದಾಗಬೇಕು" ಮುಂತಾದ ಬಹುಮಾನವಾಚಕ ಶಬ್ದಗಳನ್ನು ಪಯೋಗಿಸುವದು ಕೊಂಚವೂ ರುಚಿಸುವದಿಲ್ಲ.

ಮನೋಹರ:—ಸೇರಲಿಕ್ಕಿಲ್ಲ; ಆದರೆ ನಿಮ್ಮ ರಾಜ್ಯಪದದ ಗತಿಯೇನು?

ಜೋ:—ರಾಜ್ಯಪದದ ಮೂಲಕ ಪ್ರೇಮಲಮಿತ್ರವ್ಯವಹಾರ ಸುಖವು ನಷ್ಟವಾಗುವಂತಿದ್ದರೆ, ಆ ರಾಜ್ಯಪದವನ್ನು ತ್ಯಜಿಸಲಿಕ್ಕೆ ಕೂಡ ನಾನು ಸಿದ್ಧನಿದ್ದೇನೆ. ಕೇವಲ ರಾಜನೆಂದು ಯಾರೊಡನೆಯೂ ಸರಿಕತನದಿಂದ ಮನಬಿಚ್ಚಿ ಮಾತಾಡುವದಕ್ಕೂ ವ್ಯವಹರಿಸುವದಕ್ಕೂ ನನಗೆ ಆತಂಕವಾದರೆ, ನಾನು ಮತ್ತು ನನ್ನ ಸೆರೆಮನೆಯೊಳಗಿನ ಬಂದಿಜನಗಳು ಇವರಲ್ಲಿ ಭೇದವೇನುಳಿಯಿತು?

ಮ: ಮಹಾರಾಜರೇ, ಇಲ್ಲದ ಆಗ್ರಹ ತಾಳುವದರಿಂದೇನು ಪ್ರಯೋಜನ? ನಿಮ್ಮೊಡನೆ ಚಿಕ್ಕಂದಿನಂತೆ ಕೇವಲ ಸಲಿಗೆಯಿಂದ ನಡೆಯಬೇಕೆಂದು ನನಗೂ ಅನಿಸುವದಿಲ್ಲವೆನ್ನುವಿರೇನು? ಆದರೆ ನಿಮ್ಮ ಮರ್ಯಾದೆಯು ನಿಮಗಿಲ್ಲದಿದ್ದರೂ, ಮಂದಿಯ ದೆಸೆಯಿಂದಾದರೂ ನಾನು ಕಾಯಲೇ ಬೇಕಾಗುತ್ತದೆ; ಮತ್ತು ಜನರಲ್ಲಿರುವಾಗ ನನ್ನಿಂದ ತಪ್ಪಿ ಕೂಡ ತಮ್ಮ ಅಮರ್ಯಾದೆಯಾಗಕೂಡದೆಂದು, ಖಾಸಗೀ ವ್ಯವಹಾರದಲ್ಲಿಯೂ ಆ ಮರ್ಯಾದೆಯ ರೀತಿಯನ್ನು ನಾನು ಹಚ್ಚಿಕೊಳ್ಳಬೇಕಾಗುತ್ತದೆ. ನೀವು ಮನಸ್ಸಿನಿಂದ ಎಷ್ಟೋ ಉದಾರರೂ ಸ್ವಪರಭೇದ ರಹಿತರೂ ಉಚ್ಚ-ನೀಚ ಭಾವನಾ ವಿರಹಿತರೂ ಆಗಿದ್ದರೂ ಕೂಡ ನೀವೀಗ ರಾಜ್ಯಪದದ ಮೇಲಿರುತ್ತೀರಿ. ಸಂಸ್ಥಾನಿಕರಿರುತ್ತೀರಿ. ಬಾಲ್ಯಮಿತ್ರನೆಂದು ನಾನು ನಿಮ್ಮ ಮರ್ಯಾದೆಯನ್ನಿಡದಿದ್ದರೆ ಜನರು ನನಗೆ ನಕ್ಕಾರು? ಜನರು ನಿಮ್ಮನ್ನು ಹುಚ್ಚನೆಂದೂ ನನ್ನನ್ನು ಮೂರ್ಖನೂ ಉನ್ಮತ್ತನೂ ಎಂದಂದಾರು. ನಮ್ಮ ತಾಯಿಯ ಚಿತ್ರವನ್ನು ನೀವು ನಿಮ್ಮ ಕೋಣೆಯಲ್ಲಿ ದೇವತೆಯಂತೆ ಪೂಜಿಸುತ್ತಿರುವಿರಿ. ನನ್ನದು ಅದಕ್ಕೊಪ್ಪಿಗೆ; ಆದರೆ ಆ ತಾಯಿಯು ಇಂದು ಜೀವಿಸಿದ್ದರೆ ಅವಳಾದರೂ ನಾಲ್ಕು ಜನರೆದುರಿಗೆ ನಿಮಗೆ 'ಬಾರೋ-ಹೋಗೋ'

ಎಂದೆನ್ನುತ್ತಿದ್ದಳೇ? ಅವಳೂ ನೀವೂ ಕೇವಲ ಒತ್ತಟ್ಟಿಗಿರುವಾಗ ಮಾತ್ರ ಒಮ್ಮೊಮ್ಮೆ ಅವಳು ಪ್ರೇಮದಿಂದ ಬಾರೋ-ಹೋಗೋ ಎಂದು ಅಂದಿದ್ದರೂ, ಒಮ್ಮೊಮ್ಮೆ ಕಿವಿ ಹಿಂಡಿದ್ದರೂ, ತಪರಾಕಿ ಕೊಟ್ಟಿದ್ದರೂ ನಡೆಯುತ್ತಿತ್ತು; ಆದರೆ ಅದು ಮಂದಿಯ ಎದುರಿಗಲ್ಲ! ಬೇರೆ ಯಾರ ಮುಂದಾದರೂ ಅವಳು ನಿಮ್ಮನ್ನು ಮಹಾರಾಜ ಎಂದು ಸಂಬೋಧಿಸದೆ ಗತ್ಯಂತರವಿದ್ದಿಲ್ಲ. ಬಹುಮಾನ ಮಾಡು ವದು ವ್ಯಕ್ತಿಮಾಹಾತ್ಮ್ಯಕ್ಕಿಂತ ಸ್ಥಾನಮಾಹಾತ್ಮ್ಯಕ್ಕೇ ಇರುತ್ತದೆ. ದಿಲೀಪ ರಾಜನು ಅಜನನ್ನು ಸ್ವಹಸ್ತದಿಂದ ಪಟ್ಟಕ್ಕೆ ಕೂಡ್ರಿಸಿದನು; ಮತ್ತು ಹಾಗೆ ಮಾಡಿದ ಕೂಡಲೆ ಅವನು ತನ್ನ ಆ ಮಗನಿಗೇ ರಾಜನೆಂದು ನಮಸ್ಕರಿಸಿದನು. ಶ್ರೀ ಶಂಕ ರಾಚಾರ್ಯರು ಯಾವ ಕಾಲಕ್ಕೆ ಸಂಸ್ಥಾನದೊಳಗಿನ ಉಪಸಂನ್ಯಾಸವನ್ನು ಸ್ವೀಕ ರಿಸಿ, ತಮ್ಮ ಯಾವನೊಬ್ಬ ಶಿಷ್ಯನನ್ನು ತಮ್ಮ ಗುರುಪೀಠದ ಮೇಲೆ ಕೂಡ್ರಿಸು ವರೋ, ಆಗ ಆ ಶಿಷ್ಯನನ್ನು ಗುರುವೆಂದು ಒಮ್ಮೆ ಅಭಿವಂದಿಸುತ್ತಾರೆ. ರಾಜ್ಯವು ಬೇಕಾದರೆ ರಾಜನು ಪ್ರತ್ಯಕ್ಷ ತಾಯಿಯಿಂದಲೂ ಮಹಾರಾಜನೆಂದೆನಿಸಿಕೊಳ್ಳಲೇ ಬೇಕು. ಇನ್ನು ಇದರ ಸಲುವಾಗಿಂದು ನೀವು ನನ್ನನ್ನು ಬರೇ ಮನೋಹರನೆಂದೆ ನ್ನದೆ, ಮನೋಹರಪಂತನೆಂದು ಕರೆದರೆ ನಾನು ಆ ತೊಂದರೆಯನ್ನು ಹೇಗಾ ದರೂ ಸಹಿಸುವೆನು. ನಿಮ್ಮನ್ನು ಮೊದಲೇ ಸುಧಾರಕರೆಂದು ಜನರು ತಿಳಿಯು ತ್ತಿರುವರೆಂಬ ಬಗ್ಗೆ ನನಗೆ ಸಂಶಯ ಬಂದಿದೆ; ಅದರಲ್ಲಿ ಈ ವಿಕ್ಷಿಪ್ತ ಮತ್ತು ವ್ಯವಹಾರಶೂನ್ಯ ವಿಶೇಷಣಗಳ ಸಮುಚ್ಚಯವಾಗುವದು ಬೇಡ. ನಿಮ್ಮ ದತ್ತ ವಿಧಾನವಾದಾಗ ನಾನೂ ನೀವೂ ವಯಸ್ಸಿಗೆ ಬಂದವರಾಗಿದ್ದರೂ ರಾಜ್ಯವೆಂದ ರೇನೆಂಬದರ ನಿಜಸ್ವರೂಪ ತಿಳಕೊಳ್ಳುವಷ್ಟು ದೊಡ್ಡವರಾಗಿರಲಿಲ್ಲ; ಆದರೆ ಈಗ ನಿಮಗೆ ಭಾಗ್ಯವಂತರೆಂದೇಕೆನ್ನಬೇಕೆಂಬ ಮರ್ಮವು ತಿಳಿಯುವಷ್ಟು ದೊಡ್ಡ ವನು ನಾನಾಗಿರುತ್ತೇನೆ; ಮತ್ತು ಆ ಭಾಗ್ಯವು ಹೇಗೆ ಎಂಬದನ್ನು ತಿಳಕೊಳ್ಳು ವಷ್ಟು ದೊಡ್ಡವರು ನೀವೂ ಆಗಿರುತ್ತೀರಿ. ನಮ್ಮ ತಾಯಿಯೇನೂ ಜೋಯಿಸ ಳಿರಲಿಲ್ಲ; ಆದರೂ ಅವಳು ಈ ಜೋಜಿಗರಾಯನ ಕಣ್ಣಿನ ತೇಜದಲ್ಲಿ ನನಗೆ ರಾಜಯೋಗವು ಕಾಣತ್ತದೆಂದು ಯಾವಾಗಲೂ ಅನ್ನುತ್ತಿದ್ದಳು!

ಜೋ:—ಆದರೆ ಮನೋಹರ, ಇಂದಿನ ನನ್ನ ವೇಷ-ನಡತೆಗಳನ್ನು ಕಂಡು ಅವಳೇನೆನ್ನುತ್ತಿದ್ದಳು?

ಮ:—ನಿಮ್ಮ ಈ ಸಾದಾ ವೇಷವನ್ನು ಕಂಡು ಅವಳಿಗೆ ಕೆಡಕೆನಿಸುತ್ತಿತ್ತೆ ನ್ನುವಿರಾ? ಇಲ್ಲ. ಆದರೆ ಅವಳು: "ಈ ಹುಡುಗನು ತನ್ನ ಹೆಸರಿನಂತೆಯೇ ಆದನು. ಹುಡುಗನೇನೋ ಜೋಜಿಗದವನೇ! ಯಾಕಂದರೆ ಇಂಥ ರಾಜ್ಯವು ಲಭಿಸಿಯೂ ತಾನು ಮತ್ತೆ ಮೊದಲಿನಂತೆಯೇ!" ಎಂದೆನ್ನದಿರುತ್ತಿದ್ದಿಲ್ಲ.

ಜೋ: — ಆದರೆ ನಾನು ಇನ್ನು ಮುಂದೆ ಮತ್ತೆ ಯಾವ ಕೆಲ ಸಂಗತಿ ಗಳನ್ನು ಮಾಡತಕ್ಕವನಿರುವೆನೋ ಅವುಗಳನ್ನು ಕಂಡು ಮಾತ್ರ ಅವಳಿಗೆ ಹೀಗೆ ಕೌತುಕವೆನಿಸದೆ, ಒಂದು ಬಗೆಯ ಕೆಡಕೆನಿಸಬಹುದಾಗಿತ್ತು.

"ಮಹಾರಾಜ, ತಾವು ಮತ್ತೇನು ಮಾಡುವದನ್ನು ಯೋಜಿಸಿರುತ್ತೀರಿ?" ಎಂದು ಮನೋಹರನು ಸಾಶ್ಚರ್ಯದಿಂದ ಕೇಳಿದನು.

ಜೋ: —ಹಳೇ ಪೀಳಿಗೆಯ ಜನರು ಪ್ರೇಮಲರೂ ಉದಾರ ಮನಸ್ಸಿ ನವರೂ ಆಗಿರುತ್ತಿದ್ದರು; ಆದರೆ ರಾಜನು ಉದಾರತನ ತೋರಿಸುವ ಆಗಿನವರ ಕಲ್ಪನೆಗಳೂ, ನನ್ನಂತಹ ಹೊಸ ಪೀಳಿಗೆಯ ರಾಜನ ಕಲ್ಪನೆಗಳೂ ಕೂಡುವದು ಕಠಿಣವೇ ಸರಿ. ನಮ್ಮ ತಾಯಿಯು ಭಾವಿಕವಾದ ಧಾರ್ಮಿಕ ಸ್ವಭಾವದವಳಿ ದ್ದಳು. ನಾನು ಬ್ರಾಹ್ಮಣ ಭೋಜನ ಮಾಡಿಸಿದ್ದರೆ ಇಲ್ಲವೆ ರುದ್ರಸ್ವಾಹಾಕಾರ ಮಾಡಿಸಿದ್ದರೆ ಅಥವಾ ಕೋಟಿ ಲಿಂಗಾರ್ಚನೆಗೊಳಿಸಿದ್ದರೆ ಮತ್ತು ಅನ್ನ ಸಂತ ರ್ಪಣಗಳಿಗಾಗಿ ಸಾವಿರಾರು ರೂಪಾಯಿ ಖರ್ಚು ಮಾಡಿ ದಾನ ಧರ್ಮ ಮಾಡಿ ದ್ದರೆ ಅವಳಿಗೆ ಸಮಾಧಾನವಾಗುತ್ತಿತ್ತು; ಆದರೆ ರಾಜ್ಯದಾನ ಮಾಡುವ ನನ್ನ ಕಲ್ಪನೆಯು ಅವಳಿಗೆ ಸೇರುತ್ತಿದ್ದಿಲ್ಲ.

ಮ: — ಮತ್ತು ಅದು ಚೆನ್ನಾಗಿ ತಿಳಿಯದ ಹೊರತು, ನನಗಾದರೂ ಸೇರೀ ತೆಂದು ಹೇಗೆ ಹೇಳಬೇಕು? ನನಗೆ ಆ ನಿಮ್ಮ ಕಲ್ಪನೆಯನ್ನು ಕೇಳಬೇಕೆಂದೆನಿಸು ತ್ತದೆ. ಹೇಳಿರಿ ನೋಡೋಣ.

ಜೋ: —ಹಳೇ ಪೀಳಿಗೆಯ ಜನರಿಗೆ ರಾಜ್ಯವು ಯಾವ ಅರ್ಥದಿಂದ ತಮ್ಮ ದೆಂದು ಅನಿಸುವದೋ, ಆ ಅರ್ಥವು ಹೊಸ ಮನ್ವಂತರದಲ್ಲಿ ಸ್ಥಿರವಾಗುಳಿಯ ಲಾರದು. ರಾಜ್ಯದ ಅರ್ಥವು ಹಿಂದಿನ ಕಾಲಕ್ಕೆ ಕೇವಲ ಒಬ್ಬ ರಾಜನೆಂದಿತ್ತು. ಈ ಹೊಸ ಯುಗದಲ್ಲಿ ರಾಜ್ಯದ ಅರ್ಥವು ರಾಜನೂ ಪ್ರಜೆಗಳೂ ಕೂಡಿಯೇ ಎಂಬಂತಾಗುತ್ತದೆ; ಮತ್ತು ಈ ಅರ್ಥವನ್ನು ಯಾವ ರಾಜರು ಮನ್ನಿಸುವದಿಲ್ಲ ವೋ ಅವರು ಬೇಗನೆ ಅದರ ಪ್ರಾಯಶ್ಚಿತ್ತವನ್ನು ಭೋಗಿಸುವರು.

ಮ: —ಮಹಾರಾಜರೇ, ಈ ನಿಮ್ಮ ಸಮತ್ವದ ವಾದವು ಕಿವಿಯಿಂದ ಕೇಳಲಿಕ್ಕೆ ಇಂಪಾಗಿರುತ್ತದೆ; ಆದರೆ ಯುರೋಪ-ಅಮೇರಿಕೆಗಳ ಕಡೆಗೆ ನೋಡಿ ರೊಮ್ಮೆ. ಆ ಜನರು ಸ್ವತಂತ್ರರಾಗಿದ್ದರೂ ಲೋಕಸತ್ತೆಯನ್ನು ಗವಸಣಿಗೆಯಲ್ಲಿ ಹಾಕಲಿಕ್ಕೆ ಸಿದ್ಧರಾಗಿರುತ್ತಾರೆ. ಆ ಮೂರ್ಖರ ಗಲಭೆಯ ಬಗ್ಗೆ ಅವರಿಗೆ ಬೇಸ ರಿಕೆ ಬಂದಿದೆ. ಕುಂಟಲ್ಪಿಯ ಆಟದಲ್ಲಿ ಕುಂಟಿ ಕುಂಟಿ ಕಾಲು ದಣಿದವೆಂದರೆ, ತಮ್ಮ ಬದಲು ಮತ್ತೊಬ್ಬನನ್ನು ಕುಂಟಲಿಕ್ಕೆ ಹಚ್ಚುತ್ತಾರೆ. ಹಾಗೆ ಬದಲು ಕುಂಟುವವನಿಗೆ ಮರಾಠೀ ಭಾಷೆಯಲ್ಲಿ "ನವರಾ"ಅಂದರೆ ಗಂಡನೆಂದೆನ್ನುತ್ತಾರೆ.

ಪಾಶ್ಚಾತ್ಯದೇಶಗಳೊಳಗಿನ ದಣಿದು ಹಣ್ಣಾದ ಲೋಕಶಾಹಿಯು ಡಿಕ್ಟೇಟರ ಸ್ವರೂಪದ ಗಂಡಸನ್ನು ತನ್ನ ಮೇಲೆ ರಾಜ್ಯಾಧಿಕಾರ ನಡೆಸಲಿಕ್ಕೆ ಅಪೇಕ್ಷಿಸುತ್ತಿದೆ! ಇತ್ತ ನೀವು ಸಮಾನತ್ವದ ತಂಬೂರಿಯನ್ನು ಗವಸಣಿಗೆಯೊಳಗಿಂದ ತೆಗೆದು, ಲೋಕಶಾಹಿಯ ಅಂತ್ಯಕಾಲದ ಅಳುಗೀತವನ್ನು ಹಾಡಲಿಕ್ಕೆ ಸಿದ್ಧರಾಗಿರುತ್ತೀರಿ! ಇದು ವಿಪರೀತ ಸ್ಥಿತಿಯಲ್ಲವೆ? ಮುಸೋಲಿನಿ, ಹಿಟ್ಲರರಿಗೆ ತುರಂಗವಾಸವನ್ನು ಅನುಭೋಗಿಸಿದ ನಂತರವೇ ಯಾವ ಅಧಿಕಾರವು ಪ್ರಾಪ್ತವಾಯಿತೋ, ಅದು ನಿಮಗೆ ಈ ಉಡಲಿನಿಂದ ಆ ಉಡಲಿಗೆ ಹೋದ ಕೂಡಲೆ ದೊರಕಿರುತ್ತದೆ. ಹೀಗಿದ್ದು ಅವರಂತೆ, ಅಂದರೆ ರಾಜ್ಯದ ಅಂತಿಮ ಹಿತಕ್ಕಾಗಿ ಆ ಆಡಳಿತವನ್ನು ಏಕತಂತ್ರದಿಂದ ನಡಿಸುವದನ್ನು ಬಿಟ್ಟು, ಲೋಕಶಾಹಿಯ ಇಲ್ಲದ ದಾರಿ ಹಿಡಿಯ ಹಚ್ಚುವ ಇದಿಲಕ್ಷ್ಮಿಯು ನಿಮಗೇಕೆ ಗಂಟುಬಿದ್ದಳು?

ಜೋ:--ಎಲೋ, ಮುಸೋಲಿನಿ, ಹಿಟ್ಲರರೊಳಗಿನ ಬಲವು ಅವರ ಸ್ವಂತದ್ದಲ್ಲೆಂಬದು ನಿನಗೆ ಗೊತ್ತಿಲ್ಲ; ಅದು ಪ್ರಜೆಗಳದೇ ಆಗಿರುತ್ತದೆ ಅದು ಅವರ ದೇಹದಲ್ಲಿ ಕೇವಲ ಸಂಕ್ರಾಮಿತವಾಗಿರುತ್ತದಷ್ಟೇ. ಈ ಡಿಕ್ಟೆಟರರು ಬೇಟೆಯ ನಾಯಿ, ಹಸಿದ ಹುಲಿ ಇಲ್ಲವೆ ಕೊಬ್ಬೇರಿದ ಟಗರು ಇವುಗಳಂತೆ ತೋರುತ್ತಿದ್ದರೂ, ಅವರನ್ನು ಕಣ್ಣೆ ಬಿಚ್ಚಿ ಬಿಡುವ ಅಥವಾ ಬೇಟೆಯ ಕೆಲಸವಾಯಿತೆಂದರೆ ಹಿಂದಕ್ಕೆ ಜಗ್ಗಿಕೊಳ್ಳುವ ಬೇಟೆಗಾರರೇ ಬೇರಿರುತ್ತಾರೆ. ಹಿಂದಿನ ಕಾಲದ ರಾಜರಾದರೂ ಒಂದು ಬಗೆಯ ಡಿಕ್ಟೆಟರರೇ ಆಗಿದ್ದರು; ಆದರೆ ಅವರಲ್ಲಿಯ ದುರಾಗ್ರಹದ ಬಲವು ಕೇವಲ ಅವರೊಬ್ಬರದೇ ಆಗಿರುತ್ತಿತ್ತು. ದೇಶದೊಳಗಿನ ಜನರ ಬೆಂಬಲವು ಅವರಿಗಿರುತ್ತಿರಲಿಲ್ಲ. ಅದರಿಂದ ಪದಚ್ಯುತರಾದಂಥ ಎಲ್ಲ ರಾಜರು ಪರದೇಶಗಳಿಗೇ ಹೋಗಿ, ಪರಕೀಯರ ಆಶ್ರಯಕ್ಕೇ ಇರಬೇಕಾಗುತ್ತಿತ್ತು ಅದಕ್ಕೆ ವಿಪರೀತವಾಗಿ ಈಗಿನ ಡಿಕ್ಟೇಟರರು ನಾಳೆ ಅಧಿಕಾರ ಭ್ರಷ್ಟರಾದರೂ ತಮ್ಮ ದೇಶದಲ್ಲಿ ಮತ್ತು ತಮ್ಮ ಮನೆಯಲ್ಲಿಯೇ ನಿರಾತಂಕವಾಗಿ ವಾಸಿಸುವರು; ಹಾಗು ಜನರನ್ನು ಕುರಿತು:—“ಅಧಿಕಾರದ ಒಡೆಯರು ನೀವು. ಒಪ್ಪಿಸಿದ ಅಧಿಕಾರವನ್ನು ನಾವು ನಿಮ್ಮ ಕಲ್ಯಾಣಕ್ಕಾಗಿಯೇ ನಡೆಸಿದೆವು. ನೀವು ಅದನ್ನು ಹಿಂದೆಗೆದುಕೊಂಡರೂ ವಿಹಿತವೇ. ಅದನ್ನು ಮತ್ತಾರಿಗಾದರೂ ಕೊಡಿರಿ. ನಾವು ಸುಮ್ಮನಿದ್ದು ನಿಮ್ಮ ಮೋಜು ನೋಡುತ್ತ ಕೂಡ್ರುವೆವು.” ನಿಮ್ಮ ಮುಸೋಲಿನಿ, ಹಿಟ್ಲರರಂತೆ ನನ್ನನ್ನು ನನ್ನ ಪ್ರಜೆಗಳೇ ಡಿಕ್ಟೇಟರನೆಂದು ನೇಮಿಸಿದರೆ, ನಾನು ಅವರ ಮುಖಂಡನಾದೇನೋ ಇಲ್ಲವೊ? ಆದರೆ ಆ ಮುಖಂಡತ್ವವನ್ನು ಮಾತ್ರ ಅವರಾಗಿಯೇ ನನಗೊಪ್ಪಿಸಬೇಕು.

ಮ:—ಯುರೋಪ-ಅಮೇರಿಕೆಯ ಜನರೆತ್ತ, ಈ ಸಂಸ್ಥಾನೀ ಪ್ರಜೆಗಳೆತ್ತ?

ನೀವು ಮೊದಲು ನಿಮ್ಮ ಪ್ರಜೆಗಳ ಸ್ಥಿತಿಗತಿಗಳನ್ನು ಚೆನ್ನಾಗಿ ಪರಿಶೀಲಿಸಬೇಕು; ಆ ಮೇಲೆ ಅವರಿಗೆ ದೊಡ್ಡಸ್ತಿಕೆ ಕೊಟ್ಟು ಅವರಿಂದ ಮುಖಂಡತ್ವವನ್ನು ಪಡೆಯುವ ವಿಚಾರ ಮಾಡಬೇಕು.

ಜೋ:—ನಿಜ; ಕೇವಲ ನನ್ನ ಮನಸ್ಸಿನಂತೆಯೇ ನುಡಿದೆ. ನನ್ನ ಪ್ರಜೆಗಳ ಸ್ಥಿತಿಗತಿಗಳನ್ನು ಕಣ್ಣಾರೆ ಕಾಣಬೇಕೆಂದು ಇನ್ನು ಮೇಲೆ ನಾನು ದಿನಾಲು ರಾತ್ರಿ ಪಟ್ಟಣದಲ್ಲಿ ಗಸ್ತಿ ತಿರುಗಲಿಕ್ಕೆ ನಡುನಡುವೆ ಹೋಗಬೇಕೆಂದು ನಿಶ್ಚಯಿಸಿರುತ್ತೇನೆ; ಮತ್ತು ಆ ಕೆಲಸಕ್ಕೆ ಇಂದಿನ ರಾತ್ರಿಯೇ ಪ್ರಾರಂಭಿಸತಕ್ಕವನು. ಈ ಬಗ್ಗೆ ನಿನ್ನ ಅಭಿಪ್ರಾಯವೇನೆಂಬದನ್ನು ಹೇಳು ಬೇಗನೆ.

ಮ:—ಅಮಾಸಿಯ ಒಳ್ಳೇ ಮುಹೂರ್ತ ಹುಡುಕಿದಿರಲ್ಲ! ನನ್ನನ್ನು ಕೇಳಿದರೆ, ನೀವು ಆ ವಿಚಾರವನ್ನು ಬಿಟ್ಟು ಬಿಡುವದೇ ಹಿತವಾಗಿದೆ.

ಜೋ:—ಅದೇಕೆ? ಮ:—ಅದೇಕೆಂದರೆ, ಪಟ್ಟಣದ ಬೀದಿಗಳಲ್ಲಿ ಅಪರಾತ್ರಿಯೊಳಗೆ ತಿರುಗುವದು ನಿಮಗೆ ಅಪಾಯಕರವಾಗಿದೆ; ಅಲ್ಲದೆ ಅಪರಾತ್ರಿಯಲ್ಲಿ ತಿರುಗಾಡುವ ನಿಮ್ಮನ್ನು ಯಾರಾದರೂ ನೋಡಿದರೆಂದರೆ, ನಿಮ್ಮ ಪ್ರಜೆಗಳು ನಿಮ್ಮಲ್ಲಿ ಹುಚ್ಚು ಹುಳುಕುಗಳನ್ನೆಣಿಸಲಿಕ್ಕೆ ಹಿಂದು ಮುಂದೆ ನೋಡಲಿಕ್ಕಿಲ್ಲ. ಸಂಸ್ಥಾನಿಕರ ಬಳಿಯ ಜನರು ಮಹಾ ಘಾತುಕರಿರುತ್ತಾರೆ. ಆ ಜನ-ಪರಿವಾರವು ಎಷ್ಟು ದೊಡ್ಡದೋ, ಸಂಸ್ಥಾನಿಕರ ಹೆಸರು ಅಷ್ಟು ಹೆಚ್ಚು ಕೆಟ್ಟು ಹೋಗುವದು!

ಜೋ:—ನಾವು ಸ್ವತಃ ಸದಾಚಾರಿಗಳಿದ್ದರೆ ತೀರಿತು; ಆ ಲೋಕಾಪವಾದಕ್ಕೇಕೆ ಅಂಜಬೇಕು?

ಮ: ಭಲೆ-ಭಲೆ! ಅರಸರುಗಳ ಬಗ್ಗೆ ನಾನು ಇದಕ್ಕೆ ತೀರ ವಿಪರೀತವಾಗಿಯೇ ಅಂದೇನು. ಅವರು ಎಲ್ಲಕ್ಕೂ ಮೊದಲು ಲೋಕಾಪವಾದಕ್ಕೇ ಅಂಜಬೇಕು; ಬಳಿಕ ಅವರೊಂದು ವೇಳೆ ಪ್ರತ್ಯಕ್ಷ ಸದಾಚಾರಿಗಳಿಲ್ಲದಿದ್ದರೂ ನಡೆದೀತು.

ಜೋ:—ಹೀಗೆ ವಿಪರೀತ ಮಾರ್ಗವೇಕೆ?

ಮ:—ಅದ. ಹಾಗೆಯೇ ಇದೆ. ರಾಜರುಗಳ ಮಾರ್ಗವು ಹೀಗೆ ವಿಪರೀತವಾಗಿಯೇ ಇರತಕ್ಕದ್ದು; ಆದರೆ ಗಸ್ತಿಗೆ ಹೋಗುವ ಬಗ್ಗೆ ನಿಮಗಷ್ಟು ಉತ್ಸಾಹವೇಕಿರುವದೆಂಬದನ್ನು ನನಗೆ ಹೇಳಿರಿ ನೋಡೋಣ.

ಜೋ:—ಹೇಳುತ್ತೇನೆ ಕೇಳು. ನಾನು ಪಟ್ಟಣದೊಳಗೆ ಇಂಥ ಕಡೆಗೆ ಹೋಗುತ್ತೇನೆಂಬದು ತಿಳಿದ ಕೂಡಲೆ ಅತ್ತಕಡೆಯ ಬೀದಿಗಳನ್ನಷ್ಟೇ ಉಡುಗಿ ಸ್ವಚ್ಛಗೊಳಿಸುವದು ರೂಢಿಯಾಗಿದೆ.

ಮ;—ಇದೊಳ್ಳೇ ಸೋಜಿಗವೇ ಸರಿ! ಹಾಗಾದರೇನು, ಮಹಾರಾಜರು

ಯಾವ ಬೀದಿಗೆ ಹೋಗುತ್ತಾರೆಂಬದು ತಿಳಿಯುವದೋ, ಆ ಬೀದಿಯ ಜನರು ಊರೊಳಗಿನ ಕಸವನ್ನೆಲ್ಲ ತಂದು ಅಲ್ಲಿ ಚಲ್ಲಬೇಕೊ? ಅಥವಾ ಅಲ್ಲಿಯ ಜನರು ಹಾಗೆ ಚಲ್ಲಲೊಪ್ಪದಿದ್ದರೆ, ಗ್ರಾಮಸೇವಕರು ಆ ಕೆಲಸವನ್ನು ಬೇಕಂತ ಮಾಡಿಡ ಬೇಕೋ?

ಜೋ:—ಏನಾದರೊಂದು ಹೇಳುತ್ತೀ! ಅದರಂತೆ ನಾನು ಯಾವಾಗ ಯಾವ ಬೀದಿಗೆ ಹೋಗಬೇಕಾಗಿದ್ದೀತೋ, ಆಗ ಆ ಬೀದಿಯ ರಹದಾರಿಯನ್ನೇ ನಿಲ್ಲಿಸಿ ಬಿಡುತ್ತಾರೆ. ಅದನ್ನು ಕಂಡು, ನಾನು ರಾಜಧಾನಿಯ ಪಟ್ಟಣದಲ್ಲಿ ನಡೆದಿರುವೆನೋ, ಯಾವುದೊಂದು ಕಟ್ಟಡವಿಯಲ್ಲಿ ಸಾಗಿರುವೆನೋ ಇಲ್ಲವೆ ಸುಡು ಗಾಡಿನೊಳಗಿಂದ ಹೊರಟಿರುವೆನೋ ಎಂಬದು ನನಗೆ ತಿಳಿಯದಾಗುವದು.

ಮ:—ಹಾಗಂದರೇನು? ನೀವು ಹೊರಟಾಗ ನಿಮ್ಮ ದಾರಿಯಲ್ಲಿ ಜನ ಸಂದಣಿಯ ಮೂಲಕ ನಿಮ್ಮ ಗಾಡಿ ಇಲ್ಲವೆ ಮೋಟರಿಗೆ ಮುಂದಿನ ಮಾರ್ಗ ತೆಗೆಯುವ ಸಲುವಾಗಿ ಕ್ಷಣಕ್ಷಣಕ್ಕೆ ನಿಲ್ಲುವ ಪ್ರಸಂಗ ಒರಬೇಕೇ? ಅಂದರೆ ನಿಮಗೆ ಆ ಮಾರ್ಗಕ್ರಮಣಕ್ಕೆ ಬೇಕಾಗುವ ಹತ್ತು ನಿಮಿಷಗಳ ಬದಲು, ಹತ್ತು ತಾಸು ಹಿಡಿಯುವವು.

ಜೋ:—ಮತ್ತೆ ನುಡಿದ, ಬುದ್ಧಿವಂತಪ್ಪನಂತೆ! ನಾನು ಹೊರಟಾಗ ದಾರಿಯಲ್ಲಿ ಸುಮ್ಮನೆ ನೋಡಿದರೆ ಸಾಕು, ನನ್ನನ್ನು ಕಂಡವರೆಲ್ಲರೂ ರಾಮ-ರಾಮ, ನಮಸ್ಕಾರ, ಸಲಾಮು-ಮುಜುರೆಗಳನ್ನು ಮಾಡಹತ್ತಿ, ಅವರಿಗೆ ಪ್ರತಿ ಯಾಗಿ ರಾಮ-ರಾಮ, ನಮಸ್ಕಾರ, ಸಲಾಮು ಮಾಡುವಾಗ ನನಗೆ ಸಾಕು ಸಾಕಾಗಿ, ನನ್ನ ತುರಿಯಿಟ್ಟ ಮೂಗನ್ನು ತುರಿಸಿಕೊಳ್ಳಲಿಕ್ಕೆ ಕೂಡ ನನಗೆ ಅವ ಕಾಶ ದೊರೆಯಬಾರದು.

ಮ:—ಛೀ! ಎಂಥ ಮೂರ್ಖ ಜನರವರು! ದಾರಿಯಲ್ಲಿ ಮಹಾರಾಜರು ಆಕಸ್ಮಿಕವಾಗಿ ಕಂಡರೂ ಯಾವ ಪ್ರಜೆಯೂ ಅವರಿಗೆ ನಮಸ್ಕಾರ ಸಲಾಮು ಮಾಡಕೂಡದು; ಇಷ್ಟೇ ಅಲ್ಲದೆ ತುರಿಯಿಟ್ಟ ತಮ್ಮ ಮೂಗನ್ನು ಕೂಡ ತುರಿಸಿ ಕೊಳ್ಳಲಿಕ್ಕೆ ಕೈ ಎತ್ತಕೂಡದು! ಯಾಕಂದರೆ ಹಾಗೆ ಕೈ ಎತ್ತುವದೇ ನಿಮಗೆ ಮುಜುರೆಯೆಂದು ತೋರುವದು! ಇಲ್ಲವೆ ತನ್ನ ದೈವಕ್ಕೆ ದೋಷ ಕೊಟ್ಟು ಯಾವನೂ ತನ್ನ ಹಣೆಗೆ ಕೈ ಹಚ್ಚಕೂಡದು! ಯಾಕಂದರೆ ಅದು ನಿಮಗೆ ರಾಮ-ರಾಮವೆಂದೆನಿಸುವದು!

ಜೋ:—ನೀನು ಏನೇ ಹೇಳು; ನಾನು ನನ್ನ ತಕರಾರನ್ನು ಮತ್ತೆ ಹೇಳು ವವನೇ. ನನ್ನ ಮಾರ್ಗದಲ್ಲಿ ಊರ ಕಸವೆಲ್ಲ ಬಂದು ಬಿದ್ದಿರಬೇಕೆಂದು ನಾನ ನ್ನುವದಿಲ್ಲ; ಆದರೆ ನಾನು ಇಂಥ ಕಡೆಗೇ ಹೋಗುವೆನೆಂಬದು ಗೊತ್ತಾಯಿ

ತೆಂದರೆ, ಊರ ಬೇರೆ ಬೀದಿಗಳಲ್ಲೆಲ್ಲ ಸ್ವಾಭಾವಿಕವಾಗಿ ಎಷ್ಟು ಕಸ ಬಿದ್ದಿರುತ್ತ ದೆಂಬದು ನನಗೆ ಕಾಣಬರುವದಿಲ್ಲ. ನಾನು ಬರುತ್ತೇನೆಂದು ಸಾರ್ವಜನಿಕ ದಾರಿಯೊಳಗಿನ ರಹದಾರಿ ನಿಲ್ಲಿಸುವದು ಪ್ರಜೆಗಳಿಗೆ ಅನ್ಯಾಯ ಮಾಡಿದಂತಾಗುವ ದಿಲ್ಲವೆ? ರಾಜಮಾರ್ಗವೆಂದರೆ, ಅದು ಕೇವಲ ರಾಜನಿಗಾಗಿಯೇ ಕಾದಿಟ್ಟದಾರಿ ಯಾಗಿರದೆ, ಯಾವ ದಾರಿಯಲ್ಲಿ ಪ್ರಜೆಗಳೊಡನೆ ರಾಜನೂ ಹೋಗಿ ಬರಬ ಹುದೋ ಇಂಥ ದಾರಿಯೆಂಬರ್ಥವು. ನನ್ನನ್ನು ಕಂಡ ಪ್ರತಿಯೊಬ್ಬನೂ ಸಲಾಮು ನಮಸ್ಕಾರ ಮಾಡಿದರೆ ಅದು ಕೃತ್ರಿಮತನವೇ ಸರಿ. ಯಾವಾತನ ಮನ ಸ್ಸಿನಲ್ಲಿ ನನ್ನ ವಿಷಯದ ನಿಜವಾದ ಆದರವಿರುವದೋ, ಅವನು ನಮಸ್ಕರಿಸಿದರೆ ಸಾಕು. ತಾತ್ಪರ್ಯವಿಷ್ಟೇ, ರಾಜನೆಂದು ನಾನು ಹಗಲು ಹೊರಬೀಳುತ್ತೇನೆ; ಕುದುರೆ, ಮೋಟಾರು, ಶಿಪಾಯಿ, ಸರಂಜಾಮುಗಳ ಥಾಟಿನಿಂದ ಅಡ್ಡಾಡುತ್ತೇನೆ. ಅದರಿಂದಲೇ ಈ ಎಲ್ಲ ನಾಟಕ-ಭಾಸುರ ನನ್ನ ಕಣ್ಣಿಗೆ ಬೀಳುತ್ತದೆ. ರಾಜನಿಷ್ಠೆಯ ಕವಾಯತಿನ ಈ ಛಾಪಿಸಿದ ಚಿತ್ರಗಳು ನನ್ನ ಕಣ್ಣಿಗೆ ಆನಂದವನ್ನುಂಟು ಮಾಡು ವದಿಲ್ಲ; ಮನಸ್ಸಿಗೆ ಆನಂದವನ್ನುಂಟು ಮಾಡುವದಿಲ್ಲ; ಬುದ್ಧಿಗೂ ಬೋಧ ಗೊಳಿಸಲು ಶಕ್ತವಾಗುವದಿಲ್ಲ.

ಮ:—ಹಾಗಾದರೆ ನೀವು ಇದಕ್ಕೇನು ಹಂಚಿಕೆ ಹಾಕಿದ್ದೀರಿ? ಯಾವ ಸಂಗತಿಗಳು ನಿಮಗೆ ಸೇರುವದಿಲ್ಲವೋ ಅವುಗಳನ್ನು ಜನರು ಮಾಡಕೂಡದೆಂಬ ಖಾಸ ಹುಕುಮನ್ನು ಹೊರಡಿಸಬೇಕೊ? ಇಲ್ಲವೆ ಅವುಗಳ ಪ್ರಸಿದ್ಧ ಪತ್ರಿಕೆ ಗಳನ್ನು ಹಚ್ಚಬೇಕೋ?

ಜೋ:—ಹಾಗೆ ಮಾಡುವದರಿಂದ ಜನರಲ್ಲಿ ತಪ್ಪು ತಿಳುವಳಿಕೆಯು ಮಾತ್ರ ಆದೀತು; ಮತ್ತು ನನ್ನ ಉದ್ದೇಶವೂ ಸಾಧಿಸಲಿಕ್ಕಿಲ್ಲ; ಯಾಕಂದರೆ ಹಗಲಿನಲ್ಲಿ ಜನರು ನನ್ನನ್ನು ಕಂಡರೆ, ಅವರು ನನ್ನನ್ನು ಗುರ್ತಿಸುವವರೇ. ಅಂತೆ ಯೇ ರಾತ್ರಿಯ ಹೊತ್ತಿನಲ್ಲಿ ನಡುನಡುವೆ ಗಸ್ತುತಿರುಗಬೇಕೆಂದು ನಾನು ಯೋಚಿ ಸಿರುತ್ತೇನೆ. ಅದರಲ್ಲಿ ಪ್ರಜೆಗಳ ಸಂರಕ್ಷಣಕ್ಕಿಂತಲೂ ಸ್ವಾಭಾವಿಕವಾದ ಲೋಕ ಸ್ಥಿತಿಯು ಕಣ್ಣಿಗೆ ಕಾಣಬೇಕು; ಇಲ್ಲವೆ ಕಿವಿಗೆ ಕೇಳಬೇಕು, ಎಂಬ ಉದ್ದೇ ಶವೇ ಪ್ರಾಮುಖ್ಯವಾಗಿರುತ್ತದೆ. ಬೇರೆ ಬೇರೆ ಜನರಲ್ಲಿ ನಡುನಡುವೆ ಸಮಯ ತಪ್ಪಿಸಿ ಅಡ್ಡಾಡಿದರೆ, ಲೋಕಸ್ಥಿತಿಯ ನಿಜರೂಪವು ಕಣ್ಣಿಗೆ ಕಂಡೀತು. ಯಾವ ಚಿತ್ರವು ಅಕೃತ್ರಿಮವಾದದ್ದೋ ಅದೇ ಮನೋಹರವು.

ಮ:—'ಮನೋಹರ' ಎಂದು ತಾವು ಅಂದದ್ದು ನನ್ನನ್ನುದ್ದೇಶಿಸಿಯೋ, ಚಿತ್ರವನ್ನುದ್ದೇಶಿಸಿಯೊ?

ಮನೋಹರನ ಈ ಚಾಪಲ್ಯವನ್ನು ಕಂಡು ಜೋಜಿಗರಾಯನಿಗೆ ನಗುವು

ಬಂದಿತು. ಅದರಿಂದ ನಕ್ಕು, ಅನನು:—ನಾನು ದ್ವಯಾರ್ಥದಿಂದಲೂ ಅಂದೆನು.

ಮ:—ಹಾಗಾದರೆ ನಾನು ಅದಕ್ಕೊಂದು ಉತ್ತರಕೊಡುತ್ತೇನೆ ಕೇಳಿರಿ. ರಾತ್ರಿಯಲ್ಲಿ ಪಟ್ಟಣದೊಳಗೆ ಯಾವ ಮನೋಹರ ಚಿತ್ರ ಕಾಣಿಸುತ್ತದೆಂಬದನ್ನು ನಿಮಗೆ ಈ ಮನೋಹರನು ಹೇಳುವನು. ದಾರಿಯಲ್ಲೆಲ್ಲ ಒಹುಮಟ್ಟಿಗೆ ಕತ್ತಲೆಯಾಗಿರುವದು. ಓಣಿಯೊಳಗಿನ ದೀಪಗಳನ್ನು ಹಚ್ಚುವವನು ಎಣ್ಣೆಯ ದುಡ್ಡನ್ನೆಲ್ಲ ಸ್ವಾಹಾಕಾರ ಮಾಡಿದ್ದರಿಂದ ಅವನು ತಮ್ಮ ಸ್ವಾಹಾಕಾರಕ್ಕೆ ಅಡ್ಡಿ ಮಾಡಿರುವನೆಂದು ಲಾಂದರದೊಳಗಿನ ಬತ್ತಿಗಳು ದುಃಖದಿಂದ ಸೊರಗಿ ಉದಾಸಗೊಂಡು ಬಿಟ್ಟಿರುವವು! ದಾರಿಯಲ್ಲಿ ಹಗಲು ಕಸ-ಕಡ್ಡಿ ಒಗೆಯಲಿಕ್ಕೂ, ಹೊಲಸು ನೀರು ಚಲ್ಲಲಿಕ್ಕೂ, ಮಲಮೂತ್ರಗಳಿಗೆ ಕೂಡ್ರಲಿಕ್ಕೂ ಜನರಿಗೆ ನಾಚಿಗೆಯೆನಿಸುತ್ತದೆ; ಆದರೆ ರಾತ್ರಿಯಲ್ಲಿ ಹಾಗೆನಿಸುವದಿಲ್ಲವಾದ್ದರಿಂದ ನೀವು ಹೋದ ಕಡೆಗಳ ದಾರಿಗಳನ್ನುಡುಗಿ ಸ್ವಚ್ಛಗೊಳಿಸುತ್ತಾರೆಂಬ ನಿಮ್ಮ ತಕರಾರು ಆಗ ಉಳಿಯುವದಿಲ್ಲ; ಆದರೆ ಕಾಲಲ್ಲಿ ಹೇಸಿಗೆ ತುಳಿಯುತ್ತಲೇ ಹೋಗಬೇಕಾದೀತು. ಕಾಗರ್ತ್ತಲೆಯಲ್ಲಿ ದಾರಿಯು ಕಣ್ಣಿಗೆ ಚೆನ್ನಾಗಿ ಕಾಣದಿದ್ದಾಗ ಪ್ರಯತ್ನದಿಂದ ಅದನ್ನು ಕಂಡುಕೊಂಡು ನಡೆಯಬೇಕಾದೀತು; ಅದರಿಂದ ತೆಗ್ಗು-ದಿನ್ನೆಗಳ ಹಾಗು ಸಂದಿಗೊಂದಿಗಳ ಪರಿಚಯವು ಚೆನ್ನಾಗಿ ಆದೀತು; ಮತ್ತು ಒಮ್ಮೊಮ್ಮೆ ಕಾಲು ಕೂಡ ಒಳೆದೀತು; ತಲೆಗೆ ಪೋಟೆ ಬಿದ್ದರೂ ಬಿದ್ದೀತು! ಶಾಂತತಾಪ್ರಿಯರಾದ ಯಾವ ಜನರು ತಮ್ಮ ಮನೆಯ ಬಾಗಿಲುಗಳನ್ನಿಕ್ಕಿ ಚಿಲಕ-ಕೊಂಡಿಗಳನ್ನು ಜಡೆದಿರುವರೋ, ಅವರು ನಿಮಗೆ ಕಾಣಿಸಲಾರರು; ಅದರಿಂದ ಪಾಪ! ಅವರು ತಮ್ಮ ಸುಖ-ಗಳನ್ನು ನಿಮಗೆ ಹೇಗೆ ಹೇಳಬೇಕು? ಹೇಗೆ ತೀಸಬೇಕು? ಇದಕ್ಕೆ ವಿರುದ್ಧವಾಗಿ, ಯಾವ ಜನರು ರಾತ್ರಿ-ಅಪರಾತ್ರಿಗಳಲ್ಲಿ ದಾರಿಯೊಳಗೆ ಕಾಣುವರೋ ಅವರೆಲ್ಲ ಜನರು ಲಫಂಗರೂ, ಬದ್‌ಮಾಷರೂ ಆಗಿರತಕ್ಕವರು. ಅವರ ಭೆಟ್ಟಿಯಿಂದ ನಿಮಗೇನು ಬೋಧವಾಗಬೇಕು? ಸಾಕಷ್ಟು ಸೆರೆ-ಗಾಂಜಿ ಅಫುಗಳನ್ನು ಭುಂಜಿಸಿಯೇ ಸ್ವಂತದ ದುಃಖವನ್ನು ಯಾರು ಮರೆಯಬೇಕಾಗುತ್ತದೆಯೋ, ಅಂಥ ಅವರು ತಮ್ಮ ದುಃಖವನ್ನು ನಿಮಗೆ ಹೇಗೆ ಹೇಳಬೇಕು? ಅವರು ಅದನ್ನು ಹೇಳದ್ದರಿಂದ ಹಾಗು ಅವರ ಮನಸೋಕ್ತ ಜೈನಿಬಾಜಿಯನ್ನು ಕಂಡದ್ದರಿಂದ ಆ ಪ್ರಜೆಗಳು ಸುಖಿಗಳಾಗಿರುತ್ತಾರೆಂದು ನಿಮ್ಮ ವಿಪರೀತ ಗ್ರಹವಾಗಬಹುದು. ಯಾವ ಜನರು ಯಾವ ನಿಶೆಯನ್ನೂ ಮಾಡದೆ, ಸ್ವಾಭಾವಿಕವಾಗಿ ಅಡ್ಡಾಡುತ್ತಿರುವರೋ, ಅವರ ವಿಚಾರವಾದರೂ ಜನರಿಗೆ ಇಲ್ಲದ ದುಃಖವು ಹೇಗುಂಟಾಗುವದೆಂಬ ಬಗ್ಗೆಯೇ ಇರುತ್ತದೆ; ಆದರೆ ಇಂಥ ಜನರು ಬಾಯಿಗಿಂತ ಕೈಯ ಮೇಲೆಯೇ ಹೆಚ್ಚು ಅವಲಂಬನವಿಡುತ್ತಾರೆ. ಅದರಿಂದ ಅವರ ವಿಚಾರಗಳೂ ನಿಮಗೆ

ತಿಳಿಯಲಾರವು. ಅಲ್ಲದೆ, ತಮ್ಮಂತೆಯೇ ಎಚ್ಚರಿಕೆಯಿಂದ ರಾತ್ರಿಯಲ್ಲಿ ಸಂಚರಿಸುವವನು ಅವರಿಗೆ ಶತ್ರುವಿನಂತೆ ಕಾಣುತ್ತಾನೆ. ಆದರಿಂದ ಅವರು ಕೂಡಲೆ ಜಗಳಗಂಟತನಕ್ಕೆ ಪ್ರವೃತ್ತರಾಗುತ್ತಾರೆ. ಅವರಂತೆ ರಾಜನು ತನ್ನ ಜೀವವನ್ನು ಸಂಕಟಕ್ಕೇಕೆ ಗುರಿಮಾಡಬೇಕು? ಇನ್ನು ಬೀದಿಯ-ಯಾಗ ಮಾಲಕಿಗೂ ಒಳಪಡದಿದ್ದ-ನಾಯಿಗಳು ಮಾತ್ರ ನಿಮ್ಮೆದುರಿಗೆ ಚೆನ್ನಾಗಿ ಬಾಯ್ಬಿಟ್ಟು ಮಾತನಾಡುವವು; ಆದರೆ ಆ ಬೊಗಳುವಿಕೆಯು ಅವುಗಳ ದೋಷಸ್ವಭಾವದ ನಿದರ್ಶಕವಾಗಿರುವುದಲ್ಲದೆ ಮತ್ತೇನೂ ಇರುವದಿಲ್ಲ. ಆದರಿಂದಲೂ ನಿಮಗೆ ಯಾವ ಬೋಧವೂ ಆಗಲಾರದು. ಇನ್ನು ಪಟ್ಟಣದಲ್ಲಿ ಕಳವು-ದರವಡೆಗಳಾಗುತ್ತವೆನ್ನಬೇಕೆ? ಸದ್ಯಕ್ಕೆ ಹಾಗೆ ನಡೆದಿರುವುದೂ ಕೇಳಿಕೆಯಲ್ಲಿಲ್ಲ.

ಜೋ:--ನೀನು ಎಷ್ಟು ಮುರಿಹಾಕಿದರೂ ನಾನು ನನ್ನ ಬೇತನ್ನು ಬದಲಿಸಲಾರೆನು. ನೀನು ವರ್ಣಿಸಿದ ಸ್ಥಿತಿಯು ಮನೋಹರವಾಗಿರದಿದ್ದರೂ ಅದೊಂದು ಬಗೆಯಿಂದ ಬೋಧಪ್ರದವೇ ಆಗಿಲ್ಲವೇನು? ಅಂತೆಯೇ ನಾನು ಅದನ್ನು ಪ್ರತ್ಯಕ್ಷ ಮತ್ತು ಪ್ರಮಾಣಿಸಿಯೇ ನೋಡಬೇಕಾಗಿದೆ.

ಮ:--ನಾನು ಹೇಳಿ ನಿಮ್ಮ ಬೇತನ್ನು ಬದಲಿಸುವನೆಂಬ ಉಮೇದನ್ನು ನಾನೆಂದೂ ತಾಳಿರುವದಿಲ್ಲ. ನೀವು ಸಲಹೆಯನ್ನೇ ಕೇಳಿದಿರೆಂದು ಹೇಳಿದೆನಿಷ್ಟೇ; ಆದರೆ ಅದನ್ನು ಕೂಡ ಸ್ನೇಹಿತನೆಂದು; ಪ್ರಾಯವ್ಹೇಟ ಸೆಕ್ರೆಟರಿಯಂತಲ್ಲ. ಯಾಕಂದರೆ, ಪ್ರಾಯವ್ಹೇಟ ಸೆಕ್ರೆಟರಿಯು ಮಹಾರಾಜರ ಒಲವು ನೋಡಿಕೊಂಡು ಅದರಂತೆಯೇ ಅಭಿಪ್ರಾಯಪಡಬೇಕಾಗುತ್ತದೆ. ಹಾಗಿಲ್ಲದಿದ್ದರೆ ಮರುದಿನವೇ ಅಲ್ಲಿಂದ ಗಂಟು-ಮೊಟ್ಟೆ ಕೀಳಬೇಕಾಗುವದವನಿಗೆ. ಅದಿರಲಿ. ಮಹಾರಾಜರೇ, ಬಹು ಯೋಗ್ಯ ಮಾಡಿದಿರಿ. ಬಗದಾದದ ಬಾದಶಹರಾದ ಹರೂನ್-ಅಲ್-ರಶೀದ ಇಲ್ಲವೆ ಅವಂತಿಯ ವಿಕ್ರಮರಾಜರ ಚರಿತ್ರೆಗಳನ್ನೋದಿ ನಿಮಗೀ ಬೇತು ಹೊಳೆದಿರಬೇಕೆಂದು ನನಗನಿಸಿದೆ. ಅವರ ಅದ್ಭುತ ರಮ್ಯವಾದ ಲೀಲೆ-ಲಹರಿಗಳನ್ನು ಅನುಕರಣ ಮಾಡುವ ಬುದ್ಧಿಯೇ ನಿಮಗೆ ಹುಟ್ಟಿರಬಹುದಾಗಿದೆ.

ಹೀಗೆಂದು ಮನೋಹರನು ಕುಳಿತ ಸ್ಥಳದಿಂದೆದ್ದನು; ಮತ್ತು ನಾಟಕದ ಆವಿರ್ಭಾವದಿಂದ ಮಹಾರಾಜರೆದುರಿಗೆ ಬಾಗಿ ಸಲಾಮು ಮಾಡಿ:—"ಬಂದಗೀ ಖಲೀಫಸಾಹೇಬ, ಬಂದಗೀ! ತರಿಸಿರಿನ್ನು ಕೃತ್ರಿಮ ಗಡ್ಡ-ಮೀಸೆಗಳನ್ನು; ಮತ್ತು ಹೊರಡಲಿ, ಈ ನಿಮ್ಮ ಜೋದ್ಯಪುರಸಂಸ್ಥಾನದಲ್ಲಿ ಹಳೇ ಅರೆಬಿಯನ್ ನಾಯಿಟ್ಸಿನ ಹೊಸ ಆವೃತ್ತಿಯು!

ಜೋ:—ಕೃತ್ರಿಮ ಗಡ್ಡ-ಮೀಸೆಗಳೇತಕ್ಕೊ? ನಾನೇನು ಕಳ್ಳನಿರುವೆನೆ?

ಮ:—ಅರೆಹುಚ್ಚೆಂದು ಇದಕ್ಕೇ ಅನ್ನುವರು! ಗಸ್ತಿಗೆ ಹೊರಡಬೇಕಾದರೆ

ದಿನದ ಈ ನಿಮ್ಮ ಸಾಪಾ ಉಡುಪಿನಿಂದ ಹೇಗೆ ಸಾಧಿಸಬೇಕು? ಅದಕ್ಕಾಗಿ ವೇಷಾಂತರವು ಅವಶ್ಯವು. ಅದು ನಿಮ್ಮ ಲಕ್ಷ್ಯದಲ್ಲಿ ಹೇಗೆ ಬರಲೊಲ್ಲದು? "ಗಸ್ತಿ ತಿರುಗುವ ನಾನೇನು ಕಳ್ಳನೊ?" ಎಂಬ ನಿಮ್ಮ ಪ್ರಶ್ನೆಗೆ, ಪ್ರಜೆಗಳ ನಿಜಸ್ಥಿತಿಯನ್ನು ನೋಡಬೇಕಾದರೆ ಕದ್ದೇ ನೋಡಬೇಕು; ಹಾಗಿಲ್ಲದಿದ್ದರೆ ನಿಮ್ಮನ್ನು ನೋಡಿ ಜನರು ಬೀದಿಗಳನ್ನು ಹೇಗೆ ಉಡಗುವರು, ದಾರಿಯೊಳಗಿನ ದಟ್ಟಣೆಯನ್ನು ಹೇಗೆ ಕಡಿಮೆ ಮಾಡುವರು, ಸಲಾಮು ನಮಸ್ಕಾರಗಳನ್ನು ಮಾಡಿ ನಿಮಗೆ ಹೇಗೆ ತೊಂದರೆ ಕೊಡುವರು ಇತ್ಯಾದಿಗಳ ವರ್ಣನೆಯನ್ನು ನೀವು ಆಗಲೆ ಮಾಡಿರುವಿರಿ. ಗಸ್ತಿ ತಿರುಗುವ ರಾಜನ ಹಾಗು ಕಳವು ಮಾಡುವ ಕಳ್ಳನ ರಾತ್ರಿಯ ಸಂಚಾರದ ಸಿದ್ಧತೆಯು ಏಕಪ್ರಕಾರವಿರಬೇಕಾಗುತ್ತದೆ. ಕೃತ್ರಿಮಗಳಾದ ಗಡ್ಡ-ಮೀಸೆ, ಗುಪ್ತ ಲಾಂದರ, ಕರಿಯ ಉಡುಪು, ನಾನಾ ಬಗೆಯ ಶಸ್ತ್ರಾಸ್ತ್ರ ಇವೆಲ್ಲ ಇರಬೇಕಾಗುವವು; ಮತ್ತು ಕೀಲೀಕೈಗಳ ಗೊಂಚಲ ವನ್ನೂ ಸಂಗಡ ತಕ್ಕೊಂಡಿರಬೇಕು.

ಜೋ:—ಅವುಗಳೇತಕ್ಕೋ?

ಮ:—ಮಂದಿಯ ಮನೆಯ ಕೀಲೀ ತೆಗೆಯಲಿಕ್ಕೆ! ತಾವು ಲೋಕಸ್ಥಿತಿ ಯನ್ನು ನೋಡಹೋದಾಗ ಅದು ಯಾವುದೊಂದು ಮನೆಯಲ್ಲಿ ಕುಳಿತು, ಹೊರಗಿ ನಿಂದ ಕೀಲೀ ಹಾಕಿಸಿಕೊಂಡಿದ್ದರೆ?

ಜೋ:—ಮಾಡು-ಮಾಡು, ನನ್ನ ಚೇಷ್ಟೆಯನ್ನು ಬೇಕಾದಷ್ಟು ಮಾಡು.

ಮ:—ಇದರಲ್ಲಿ ಚೇಷ್ಟೆಯೇತರದು? ಅದಿರಲಿ; ಆದರೆ ಗಸ್ತಿ ತಿರುಗ ಹೊರಟಾಗ, ಸಶಸ್ತ್ರ ಅಂಗರಕ್ಷಕ ಶಿಪಾಯಿಯನ್ನು ಸಂಗಡ ಕರೆದೊಯ್ಯು ವಿರೋ-ಇಲ್ಲವೊ? ನಾನಿದನ್ನು ಹುಡುಗಾಟಿಕೆಗೆ ಕೇಳುವದಿಲ್ಲ.

ಜೋ:—ಹುಡುಗಾಟಿಗೆ ಬಿಟ್ಟು ಹೀಗೆ ಸರಳವಾಗಿ ಮಾತನಾಡು; ಅಂದರೆ ಸರಳವಾದ ಉತ್ತರ ಕೊಟ್ಟೇನು. ಅಹುದು. ಯಾವನೊಬ್ಬ ಸಶಸ್ತ್ರ ಶಿಪಾಯಿ ಯನ್ನು ಸಂಗಡ ಕರೆದೊಯ್ಯುತ್ತೇನೆ. ಹಾಗೆಯೇ ಹೋಗುವದು ಅಪಾಯ ದ್ದಿದೆ. ನಾನು ಹಾಗೇಕೆ ಮಾಡೇನು?

ಮ:-ಹಾಗೇಕೆಂದರೆ? ಒಬ್ಬರೇ ಹೋದರೆ ಧೈರ್ಯವು ಹೆಚ್ಚು. ಧೈರ್ಯವು ಹೆಚ್ಚಿದ್ದಂತೆ ಪುರುಷಾರ್ಥವು ಹೆಚ್ಚು. ಪುರುಷಾರ್ಥವು ಹೆಚ್ಚಿದ್ದಂತೆ ಭೂಷ ಣವು ವಿಶೇಷ. ಭೂಷಣವು ವಿಶೇಷವಿದ್ದಂತೆ ಮಹಾರಾಜರ ಮಹಾರಾಜತ್ವವೂ ಅಧಿಕವು. 'ರೋಮಾನ್ಸ' ಶಾಸ್ತ್ರದಂತೆ ಹೀಗೆ ನಿಮ್ಮ ವಿರಿಕೆಯ ರೂಪಾಂತರವೇ ನಡೆಯತಕ್ಕದ್ದು. ಅದಕ್ಕೆ ತಡೆಯೇಕೆ?

ಜೋ:-ಒಳ್ಳೇದು. ನೀನು ನನ್ನನ್ನು ಲಹರಿಯವನೆಂದು ನಿಶ್ಚಯಿಸಿದೆಯಾ?

ಮ:—ಹಾಗೆಂದರೆ ಅದರಲ್ಲೇನು ಕೆಟ್ಟಿತು? ಲಹರಿಯು ಸ್ವಭಾವವು ಅರಸರುಗಳಲ್ಲಿಯು ಒಂದು ದೊಡ್ಡ ಗುಣವೇ ಆಗಿದೆ; ಮತ್ತು ಆ ಹಕ್ಕೂ ಅವರಿಗಿದೆ.

ಅದಕ್ಕೆ ಜೋಜಿಗರಾಯನು ನಕ್ಕು:—ಅರಸರುಗಳು ಲಹರಿಯುವರಿರಲಿ-ಇಲ್ಲದಿರಲಿ; ಆದರೆ ಅವರ ಪ್ರತಿಯೊಂದು ಕೃತಿಯನ್ನು ವಿಕೃತಗೊಳಿಸಿ, ಅವರ ನಿಂದೆ ಮಾಡುವ ಜನರಾದರೂ ಕಡಿಮೆಯುವರಿರುವದಿಲ್ಲ.

ಮನೋಹರನಿಗೆ ಆ ಗಸ್ತಿಯು ಉಪಕ್ರಮದ ಬಗ್ಗೆ ನಿಜವಾಗಿಯೂ ಬಹು ಚಿಂತೆಯೆನಿಸಿತು. ದಿವಾಣಸಾಹೇಬರು ಮೊದಲೇ ಇವರ ಬಗ್ಗೆ ದೂಷಿತ ಮನಸ್ಕರು; ಅದಲ್ಲದೆ, ಪಟ್ಟಣವೆಂದ ಬಳಿಕ ರಾತ್ರಿಯಲ್ಲಿ ಬೀದಿಗಳೊಳಗಿನ ಸಂದಿ-ಗೊಂದಿಗಳಲ್ಲಿ ಬದ್‌ಮಾಷ ಜನರು ಸಂಚರಿಸುತ್ತಿರುವದು ಸಹಜವು. ಹಗಲಿನಲ್ಲಿ ಮಹಾರಾಜರನ್ನು ಗುರ್ತಿಸಬಹುದು. ಆಗ ಶಿಷ್ಟಾಚಾರದ ಯಾವ ಹೊಲ್ಲದ ಪ್ರಕಾರಗಳಾಗುವವೆಂದು ಮಹಾರಾಜರು ತಕರಾರು ಮಾಡುವರೋ, ಅದಕ್ಕೆ ತೀರ ವಿಪರೀತವಾಗಿಯೇ ರಾತ್ರಿಯಲ್ಲಾಗುವದು; ಯಾಕಂದರೆ, ಆಗ ಸಾಕ್ಷಿಭೂತವಾಗಿ ನೋಡುವವರು ಬೇರೆ ಯಾರೂ ಇರರು; ಅಲ್ಲದೆ ಮಹಾರಾಜರು ಕೃತಿಮ ವೇಷ ಧರಿಸಿ ಅಡ್ಡಾಡುವವರು. ಇವೆಲ್ಲ ಸಂಗತಿಗಳನ್ನು ಆಲೋಚಿಸಿ, ಮನೆಗೆ ಹೋದ ಮೇಲೆ ಲಾಯದೊಳಗಿನವನೊಬ್ಬ ನಂಬಿಗೆಯ ಸವಾರನನ್ನು ಕರೆದು, ಮನೋಹರನು ಮಹಾರಾಜರ ಗುಪ್ತ ಸಂರಕ್ಷಣೆಯ ಯೋಗ್ಯ ಬಂದೋಬಸ್ತನ್ನು ಮಾಡಿದನು; ಆದರೆ ಆ ವ್ಯವಸ್ಥೆಯು ತಿಳಿದರೆ ಅದು ಮಹಾರಾಜರಿಗೆ ಸೇರಲಿಕ್ಕಿಲ್ಲ. ಅವರ ರೋಮಾನ್ಸವು ವಿರಸವಾದೀತೆಂದು ಇದರ ಸುದ್ದಿಯನ್ನು ಮಹಾರಾಜರಿಗೆ ಹತ್ತಗೊಡಬೇಡೆಂದು ಆ ಸವಾರನಿಗೆ ಬಜಾಯಿಸಿ ಹೇಳಿದನು.

ಇರಲಿ. ಇತ್ತ ಅದೇ ಅಮಾಸಿಯ ದಿವಸ ಭಾವೂಸಾಹೇಬ ಡಬೀರರ ಮನೆಯಲ್ಲಿ ಕೆಲ ವಿಶೇಷ ಬಗೆಯ ಯೋಜನೆಯು ನಡೆದಿತ್ತು. ಅದೇನೆಂಬದು ಮುಂದಿನ ಪ್ರಕರಣದಲ್ಲಿ ಗೊತ್ತಾದೀತು.

---

## ೧೦ ಡಬೀರರ ವಿಮಲೆ.

ವಿಮಲೆಯು ಗಟ್ಟಿಯಾಗಿಯೂ ಉಲುಕೋಚಿತನದಿಂದಲೂ ಕೂಗಿದ ಕೂಡಲೆ ಜ್ಯೋತಿಷ್ಕನು ಲಗುಬಗೆಯಿಂದ ಹೊರಟು ಹೋಗಲಿಕ್ಕೂ ವಿಮಲೆಯು ಆ ದಿವಾಣಖಾನೆಯನ್ನು ಬಂದು ಸೇರಲಿಕ್ಕೂ ಗಂಟೆಬಿದ್ದಿತು. ಆಕೆಯು ಬಂದ ಮೇಲೆ ಅವಸರದಿಂದ ಕೂಗಿದಂತೆ ಯಾವ ಮಾತನ್ನೂ ತೆಗೆಯಲಿಲ್ಲ. ಅವಳು ಆಗ ಸಿಟ್ಟಿನ ಭರದಲ್ಲಿದ್ದಳು. ಅದರಿಂದ ಏನು ಮಾತಾಡಬೇಕೆಂಬ ಬಗ್ಗೆ ಅವಳ ಮನಸ್ಸಿನಲ್ಲಿ ನಿಶ್ಚಯವಾದಂತೆ ತೋರಲಿಲ್ಲ. ಅವಳು ಈ ಮೊದಲು ಮುಮ್ಮ

ಗ್ಗಲಿನ ಅಟ್ಟಕ್ಕೆ ಒಳಗಿನ ಅಟ್ಟದಿಂದ ಬಂದಾಗ ಭಾವೂಸಾಹೇಬ ಮತ್ತು ಸುಭೇದಾರ ಇವರಲ್ಲಿ ಸಂಭಾಷಣ ನಡೆದಿತ್ತು. ಅದರಿಂದ ಅವಳು ಮರೆಗೆ ನಿಂತು ಕೊಂಡು ಅದೆಲ್ಲವನ್ನೂ ಕೇಳಿಕೊಂಡಿದ್ದಳು. ಸುಭೇದಾರರು ಹೊರಟು ಹೋಗಲು, ಅವಳು ಮತ್ತೆ ಈ ಅಟ್ಟಕ್ಕೆ ಬರಬೇಕೆನ್ನುವಷ್ಟರಲ್ಲಿ ಜ್ಯೋತಿಷ್ಯನು ಅಲ್ಲಿಗೆ ಬಂದಿದ್ದನು. ಅವನ ಸಂಭಾಷಣವನ್ನೂ ಮರೆಗೆ ನಿಂತೇ ಕೇಳಿದಳು. ಅವೆರಡೂ ಸಂಭಾಷಣಗಳನ್ನು ಕೇಳಿಕೊಂಡ ಬಳಿಕ ಅವಳಿಗೆ ಬಹು ಕೆಡಕೆನಿಸಿತು. ಮರೆಗೆ ನಿಂತು ಕೇಳಿದ್ದ ಎರಡೂ ಸಂಭಾಷಣಗಳಲ್ಲಿ ದತ್ತಕದ ವಿಷಯವು ಅವಳ ಕಿವಿಗೆ ಮೊಟ್ಟಮೊದಲೇ ಬಿದ್ದುದರಿಂದ, ಅವಳಿಗೆ ಹೆಚ್ಚಾಗಿ ಆಶ್ಚರ್ಯವೂ ಅನಿಸಿತು. ಯಾಕಂದರೆ ಭಾವೂಸಾಹೇಬರು ಹಳೇ ಪೀಳಿಗೆಯ ಜನರಾದ್ದರಿಂದ ಅವರಿಗೆ ದತ್ತಕದ ಕಲ್ಪನೆಯು ಸೂಚಿಸುವದು ಸ್ವಾಭಾವಿಕವಾಗಿತ್ತು; ಆದರೆ ಇದುವರೆಗೆ ಆ ಕಲ್ಪನೆಯು ಅವರ ಬಾಯಿಂದ ಹೊರಟದ್ದನ್ನು ಅವಳೆಂದೂ ಕೇಳಿರಲಿಲ್ಲ; ಅದರಂತೆ ಮಾಯಿಸಾಹೇಬರ ಬಾಯಿಂದಲೂ ಆ ಸಂಗತಿಯನ್ನು ಕೇಳಿದ್ದಿಲ್ಲ.

ಇದರ ಕಾರಣವು ಹೀಗಿರಬೇಕು. ಪ್ರಭಾಕರನಿಗೆ ಜೀವಾವದಿ ಕರಿನೀರಿನ ಶಿಕ್ಷೆಯಾಗಿದ್ದರೂ ಜೀವಾವಧಿಯ ಎಲ್ಲ ಬಂದಿಗಳು ಸೆರೆಮನೆಯಲ್ಲಿಯೇ ಸಾಯುತ್ತಿರುವದಿಲ್ಲ. ಕೆಲವು ವರ್ಷಗಳ ಶಿಕ್ಷೆಯನ್ನನುಭವಿಸಿದ ಬಳಿಕ ಪ್ರಭಾಕರನು ಹಿಂದಿರುಗಿ ಬರುವ ಆಶೆಯನ್ನು ಅವರೇಕೆ ತಾಳಿರಬಾರದು? ರಾಜ್ಯಾರೋಹಣವಾದರೆ, ರಾಜನಿಗೆ ಪುತ್ರರತ್ನ ಲಭಿಸಿದರೆ ಅಥವಾ ಮತ್ತಾವ ವಿಶೇಷ ಕಾರಣ ಸಂಭವಿಸಿದರೆ, ಅಂಥ ಆನಂದದ ಪ್ರಸಂಗಗಳಲ್ಲಿ ಬಂದಿಗಳ ಬಂಧಮುಕ್ತತೆಯಾಗುವ ರೂಢಿಯಿರುವಂತೆ, ಯಾವದೊಂದು ಕಾರಣದಿಂದ ಒಂದುವೇಳೆ ಪ್ರಭಾಕರನೂ ಬಿಡಲ್ಪಡುವನೆಂದು ಅವರೇಕೆ ತಿಳಕೊಳ್ಳಕೂಡದು? ಈ ವಿಚಾರಸರಣಿಯು ತೀರ ಸ್ವಾಭಾವಿಕವಾಗಿತ್ತು. ಪ್ರಭಾಕರನ ಮೇಲೆ ಭಾವೂಸಾಹೇಬರ ಸಿಟ್ಟಿದ್ದರೂ, ಆತನು ಎಂದೂ ಮರಳಿ ಬರಬಾರದು; ಇಲ್ಲವೆ ಫರಾರಿ ಸ್ಥಿತಿಯಲ್ಲಿಯೇ ಸತ್ತುಹೋಗಬೇಕು ಹೀಗೆನಿಸುವಷ್ಟು ಆ ಸಿಟ್ಟಿನ ತೀವ್ರತೆಯಾಗುವದು ಶಕ್ಯವಿಲ್ಲೆಂದು ಆ ಉಭಯ ತಾಯಿ-ಮಗಳಿಗೂ ಅನಿಸುತ್ತಿತ್ತು. ಎಷ್ಟೋ ಜನರಿಗೆ ದತ್ತುಮಾಡಿಕೊಳ್ಳಬೇಕೆಂದೆನಿಸಿದರೂ, ತಮ್ಮ ಮೃತ್ಯುಕಾಲವು ತೀರ ಸಮೀಪಿಸುವ ವರೆಗೆ ಅವರು ಆ ಬಗ್ಗೆ ಆಲೋಚನೆ ಕೂಡ ಮಾಡುವದಿಲ್ಲ. ಪ್ರಭಾಕರನ ಬಗ್ಗೆ ನಿರಾಶೆಯಾಗಿತ್ತೆಂದರೂ, ಭಾವೂಸಾಹೇಬರಿಗೆ ತಮ್ಮ ಹೆಂಡತಿ ಹಾಗು ಮಗಳು ಇವರಿಬ್ಬರು ವಾರಸದಾರರು ಇದ್ದೇ ಇದ್ದರು; ಮತ್ತು ಮಗಳ ಮೇಲಂತೂ ಅವರ ಪ್ರೇಮವು ಮಗನಂತೆಯೇ ಇತ್ತು; ಇಷ್ಟೇ ಅಲ್ಲ, ಒಂದಿಷ್ಟು ಹೆಚ್ಚೇ ಆಗಿತ್ತು. ಅದರಿಂದಲೂ ಭಾವೂಸಾಹೇಬರ ಮನಸ್ಸಿನೊಳಗೆ ದತ್ತಕದ ಕಲ್ಪ

ನೆಯು ಬಾರದಿರುವದು ಸಂಭವನೀಯವಾಗಿತ್ತು. ತಾತ್ಪರ್ಯವೇನಂದರೆ, ಹೇಗೆ ಯೋಚಿಸಿದರೂ ಇಂದು ತಾನು ಕೇಳಿದ ದತ್ತಕದ ಕಲ್ಪನೆಯು ಹೊಸದೆಂದು ಅವಳ ಖಾತ್ರಿಯಾಯಿತು; ಅಲ್ಲದೆ ಇಂದು ಮರೆಗೆ ನಿಂತು ಕೇಳಿದ ಎರಡೂ ಸಂಭಾಷಣ ಗಳಲ್ಲಿ ಈ ದತ್ತಕದ ಕಲ್ಪನೆಯು ಪುರಸ್ಕಾರವಾಗುತ್ತಿದ್ದುದು ಭಾವೂಸಾಹೇಬ ರಿಂದಲ್ಲ. ಸುಭೇದಾರ-ಜ್ಯೋತಿಷ್ಕರಿಂದಲೇ ಆಗಿದೆಯೆಂಬ ಸಂಗತಿಯು ಅವಳ ಲಕ್ಷ್ಯಕ್ಕೆ ಬಾರದಿರಲಿಲ್ಲ. ಅದರಿಂದ ಅವಳು ನಿಜವಾಗಿಯೂ ಬಹು ವಿಸ್ಮಯ ಗೊಂಡಳು. ಈ ಬಗ್ಗೆ ತನ್ನ ತಾಯಿಯಿಂದಲೇ ತಂದೆಗೆ ಹೇಳಿಸಬೇಕೆಂದು ಅವಳಿ ಗೊಮ್ಮೆ ಅನಿಸಿತು; ಆದರೆ ಅಲ್ಪವಿಚಾರದ ನಂತರ ಅವಳಿಗೆ ಮತ್ತೆ ಅನಿಸಿತೇನಂ ದರೆ, ಅವಳೇನು ಸಭ್ಯಗೋವು! ಈ ಯೋಚನೆಯಲ್ಲಿ ಸೇರಿಸಿಕೊಳ್ಳುವಷ್ಟು ಮಹತ್ವವನ್ನು ತನ್ನ ತಂದೆಯು ಅವಳಿಗೆಲ್ಲಿ ಕೊಡುವನು?

ಅದರಿಂದ ದತ್ತಕದ ವಿಷಯದ ಬಗ್ಗೆ ಈಗಲೆ ಯಾರೊಡನೆಯೂ ಮಾತ ನಾಡಕೂಡದೆಂಬ ನಿಶ್ಚಯದಿಂದ ಅವಳು ತಂದೆಯ ಕೂಡ ಗೊಡ್ಡು ಹರಟೆ ಗೆಂದು ಒಂದೆರಡು ಮಾತು ತೆಗೆದಳು; ಸಮೀಪದಲ್ಲಿ ಬಿದ್ದುಕೊಂಡಿದ್ದ ವೃತ್ತ ಪತ್ರಗಳೊಳಗಿನ ಒಂದೆರಡು ಪತ್ರಗಳನ್ನು ನೋಡಿದಂತೆ ಮಾಡಿದಳು. 'ನಿಮಗೆ ಹಾಲು..ಗೀಲು ಏನಾದರೂ ಕೊಡಲೇನೆ'ಂದು ಕೇಳಿದಳು. 'ಸದ್ಯಕ್ಕೆ ಬೇಡ'ವೆಂದು ಭಾವೂಸಾಹೇಬರು ಹೇಳುತ್ತಲೆ 'ಒಳ್ಗೀದು ಬರುತ್ತೇನೆ' ಎಂದು ನುಡಿದವಳೇ, ಅವಳು ತಟ್ಟನೆ ಒಳ ಅಟ್ಟಕ್ಕೆ ಹೊರಟು ಹೋದಳು. 'ಇಷ್ಟು ಅವಸರದಿಂದ ಕೂಗುತ್ತಬಂದ ನಿನ್ನ ಕೆಲಸವೇನಿತ್ತೆ'ಂದು ಭಾವೂಸಾಹೇಬರೂ ಅವಳನ್ನು ಆಗ ವಿಚಾರಿಸಲಿಲ್ಲ!

ವಿಮಲೆಯು ಅಟ್ಟದಿಂದ ಕೆಳಗಿಳಿದು ಹೋಗುವಷ್ಟರಲ್ಲಿ ಮಾಯಿಸಾಹೇ ಬರ ಸೋಮವತಿಯ ಸಿದ್ಧತೆಗೆ ತೊಡಗಿರುವದೆಂದು ಕಂಡು ಬಂದಿತು. ಅವರು ತಮ್ಮ ಗುರ್ತಿನವನೊಬ್ಬ ಬಾಗವಾನನ ಕಡೆಯಿಂದ ನೂರೆಂಟು ಕಮಲಗಳನ್ನು ತರಿಸಿದ್ದರು. ಅವುಗಳನ್ನು ಒರಒರಸಿ ತಬಕದಲ್ಲಿಡುವ ಕೆಲಸವು ನಡೆದಿತ್ತು. ಅದ ರಿಂದ ವಿಮಲೆಯೂ ಅವರ ಬಳಿಗೆ ಹೋಗಿ ಕುಳಿತು ಅವರಿಗೆ ಸಹಾಯ ಮಾಡತೊಡ ಗಿದಳು. ಆಗ ಮಾಯಿಸಾಹೇಬರು ಸಹಜವಾಗಿ:—"ತಂಗೀ,ಆ ನಮ್ಮ ಬಾಗ ವಾನರ ರಾಮನು ಹೇಳಿದ ಕೆಲಸ ಮಾಡಿದನು. ಇಂದು ಸೋಮವತಿಯ ಅಮಾ ಸಿಯು. ಅದರಲ್ಲಿಯೂ ಶ್ರಾವಣ ಸೋಮವಾರ. ಅದರಿಂದ ಇಂದು ದೇವರಿಗೆ ಕಮಲಗಳನ್ನೇ ಏರಿಸಬೇಕೆಂದು ನನಗೆ ಸಹಜವಾಗಿ ಅನಿಸಿತು. ನನ್ನ ಬಾಯಿಂದ ಬಂದ ಕೂಡಲೆ ಅವನು ಇವುಗಳನ್ನು ತಂದು ಕೊಟ್ಟನು" ಹೀಗೆಂದು ಹೇಳಿದ್ದನ್ನು ಕೇಳಿ, ಒದ್ದೆಪಂಜೆಯಿಂದ ಕಮಲಗಳನ್ನೊರಿಸುತ್ತಿದ್ದ ವಿಮಲೆಯು:-ಮಾಯಿ,

ನೀನು ನನ್ನನ್ನು ಬೇಕಾದರೆ ಸಾಸ್ತಿಕಳನ್ನು; ಆದರೆ ದೇವರಿಗೇರಿಸಲಿಕ್ಕೆ ಕಮಲಗಳನ್ನು ತಂದುಕೊಡೆಂದು ನೀನು ಬಾಗವಾನರ ರಾಮುನಿಗೆ ಹೇಳಲು ಆತನು ಹೇಗೆ ತಂದುಕೊಟ್ಟು ನಿನ್ನ ಮಾತು ನಡೆಸಿದನೋ, ಅದರಂತೆಯೇ ನೀನು ಈ ನೂರೆಂಟು ಕಮಲಗಳನ್ನು ದೇವರಿಗರ್ಪಿಸಿ, ದೇವರನ್ನು ಕುರಿತು ಯಾವದೊಂದು ವಿಷಯಕ್ಕೆ ಪ್ರಾರ್ಥಿಸಿ ಕೇಳಿಕೊಂಡರೆ, ಅವನಾದರೂ ಅದನ್ನು ನಡೆಸಿಕೊಡಬೇಕಲ್ಲವೆ?

ಮಾ:— ನಡೆಸಿಕೊಡದೇನು? ನಡಿಸಿಯೇ ನಡಿಸುವನು; ಆದರೆ ನಮ್ಮ ಪ್ರಾರ್ಥನೆಯು ಏನಾದರೊಂದು ಇಲ್ಲವೆ ಸ್ವಾರ್ಥಮೂಲಕವಾದದ್ದಿದ್ದರೆ ಅಥವಾ ಜನರಿಗೆ ದುಃಖವನ್ನುಂಟು ಮಾಡುವಂಥದಿದ್ದರೆ ಅವನು ಅದನ್ನೇಕೆ ಮನ್ನಿಸಬೇಕು?

ವಿ:— ಮಾಯಿ, ನಿನ್ನ ವಿಚಾರಸರಣಿಯು ಸರಳವಾಗಿದೆ. ಪ್ರಭಾಕರಣ್ಣನ ಪತ್ರಬಂದ ಮೇಲೆ ಇಂದಿನದೇ ಮೊದಲನೇ ಅಮಾಸಿಯು. ಆ ಪತ್ರದಲ್ಲಿ ಸೂಚಿಸಿರುವಂತೆ ಇಂದು ಆತನು ಸೂಖರೂಪದಿಂದ ಮನೆಗೆ ಬರಬೇಕೆಂಬ ಪ್ರಾರ್ಥನೆಯನ್ನು ಕಮಲಗಳನ್ನರ್ಪಿಸಿದ ನಂತರ ದೇವರಲ್ಲಿ ನೀನು ಮಾಡಿದರೆ, ಆತನು ಅದನ್ನು ಸಫಲಗೊಳಿಸಬೇಕಲ್ಲವೆ? ಈ ಪ್ರಾರ್ಥನೆಯಲ್ಲಿ ಬೇರೆ ಯಾರದಾದರೂ ಹಾನಿಯಿದೆಯೇ? ನಿನ್ನ ಸ್ವಾರ್ಥವಿದ್ದರೂ ಅದಕ್ಕೆ ಕಾರಣವು ಕೇವಲ ಪುತ್ರವಾತ್ಸಲ್ಯವೇ ಅಲ್ಲವೆ? ಅಲ್ಲದೆ ಅಣ್ಣನಾದರೂ ಸಹಿಸಿದ ಹನ್ನೆರಡು ವರ್ಷಗಳ ದುಃಖವು ಸಾಕಾಗಲಿಲ್ಲವೆ? ನಿನ್ನಂತಹ ಪುಣ್ಯವಂತಳ ಆತ್ಮದ ನಿಃಸ್ವಾರ್ಥ ಪ್ರಾರ್ಥನೆಯನ್ನು ಪಾಲಿಸದಿದ್ದರೆ ಆ ದೇವರಿಗೆ ನಾನು ಹೆಸರೇಕಿಡಬಾರದು?

ವಿಮಲೆಯು ಒಂದಿಷ್ಟು ಹಳೇ ಪೀಳಿಗೆಯ ಒಂದಿಷ್ಟು ಹೊಸ ಪೀಳಿಗೆಯ ಹೆಂಗಸರಲ್ಲಿ ಸಮಾವೇಶವಾಗತಕ್ಕ ಹುಡುಗಿಯಾಗಿದ್ದಳ.. ಉಡುಪು-ತೊಡಪಿನಲ್ಲಿ ಹಳೇ ಪದ್ಧತಿಯೂ, ವಿಚಾರದಲ್ಲಿ ಹೊಸ ಪದ್ಧತಿಯೂ ಹೀಗೆ ಉಭಯ ಕಡೆಗೂ ಅವಳ ಒಲವಿದ್ದಿತು. ಅವಳು ಮ್ಯೆಮುಚ್ಚುವಂತೆ ನೆರಗಿರಿಸಿ ಸೀರೆ ಯುಡುತ್ತಿದ್ದರೂ, ಅದು ಭಾರೀ ಬೆಲೆಯುಳ್ಳದ್ದಿರುತ್ತಿತ್ತು; ಮತ್ತು ಸ್ವಚ್ಛತೆಯ ಹೊಸ ಪದ್ಧತಿಯು ಅದರಲ್ಲಿ ಯಾವಾಗಲೂ ಒಡೆದು ಕಾಣಿಸುತ್ತಿತ್ತು. ಅವಳು ಒಳ್ಳೇ ರೇಶ್ಮಿಯ ಪೋಲಕವನ್ನು ತೊಡುತ್ತಿದ್ದಳು; ಆದರೆ ಅದು ಸೀರೆಯ ಉದ್ದನ್ನ ನೆರಗಿನಿಂದ ಮುಚ್ಚಿ ಹೋಗಿರುತ್ತಿತ್ತು. ಅಲ್ಲದೆ ಅದರ ತುದಿಗೆ ಝಾಲರ ವಿರದೆ ತೀರ ಸಾದಾ ಇರುತ್ತಿತ್ತು. ಅವಳು ಕರವಸ್ತ್ರವನ್ನುಪಯೋಗಿಸುತ್ತಿದ್ದಳು. ಕಾಲೊಳಗೆ ರಬ್ಬರಿನ ಚಪ್ಪಲೆ ಹಾಕುತ್ತಿದ್ದಳು; ಆದರೆ ಅವಳು ಬರಿಗಾಲಿನಿಂದ ಎಂದೂ ಹೊರಡದ್ದನ್ನು ಯಾರೂ ನೋಡಿಲ್ಲವೆಂಬತಿರಲಿಲ್ಲ, ಮನೆಯಿಂದ ತುಸ ಅಂತರದ ಮೇಲಿದ್ದ ದೇವಾಲಯಕ್ಕೆ ಹೋಗುವಾಗ ಅವಳು ದಿನಾಲು ಬರೆಗಾಲಿ

ನಿಂದಲೇ ಹೋಗುತ್ತಿದ್ದಳು; ಆದರೆ ಮಾರ್ಕೆಟ್ಟಿಗೆ ಇಲ್ಲವೆ ದೂರ ವಾಯುವಿಹಾರಕ್ಕೆ ಹೊರಡುವಾಗ ಅವಳು ಒಮ್ಮೊಮ್ಮೆ ಬೂಟುಗಳನ್ನು ಕೂಡ ಧರಿಸುತ್ತಿದ್ದಳು. ಅವಳ ಕೈಯಲ್ಲಿ ಬಂಗಾರದ ಗೋಟು-ಪಾಟ್ಲಿಗಳೂ, ಬಿಲ್ವಾರಗಳೂ ಇರುತ್ತಿದ್ದವು; ಮತ್ತು ಅವುಗಳ ಜೊತೆಗೆ ಕಾಜಿನ ಬಿಲೋರಿ ಬಳೆಗಳೂ ಇರುತ್ತಿದ್ದವು. ಹಣೆಗೆ ಸುಂದರವಾಗಿ ಕಾಣುವ ಹಾಗೆ ಬಿದಿಗೆಯ ಚಂದ್ರನಂತೆ ಕುಂಕುಮವನ್ನು ಹಚ್ಚುತ್ತಿದ್ದಳು; ನವನೀತಿಯ ಜನರಂತೆ ಹುಬ್ಬುಗಳ ನಡುವೆ ತೀರ ಚಿಕ್ಕ ಬಿಂದುವನ್ನಿರಿಸುತ್ತಿರಲಿಲ್ಲ. ದಿನಾಲು ಎಣ್ಣೆ ಹಚ್ಚುವದರಿಂದ ಅವಳ ಕಪ್ಪುಕೂದಲುಗಳು ಯಾವಾಗಲೂ ಸ್ನಿಗ್ಧ ಹಾಗು ಹೊಳಪಿನವಾಗಿರುತ್ತಿದ್ದವು. ಅವು ಒಳ್ಳೇ ದಟ್ಟ ಹಾಗು ಉದ್ದವಾಗಿ ಬೆಳೆದದ್ದರಿಂದ ಅವುಗಳನ್ನು ಚೆನ್ನಾಗಿ ಹಿಕ್ಕಿ ಹಿಂಡಿ ತಲೆಯ ಮೇಲೆ ಕೂಡ್ರಿಸಬೇಕಾಗುತ್ತಿತ್ತು. ಉಂಗುರಗೂದಲುಗಳಿರದ್ದರಿಂದ ಮತ್ತೆ ಮತ್ತೆ ಹಣೆಯ ಮೇಲೆ ಬರುವ ಸೊಟ್ಟ ಬಟ್ಟ ಕೂದಲುಗಳನ್ನು ಆಗಾಗ್ಗೆ ತೀಡುವ ಆಪತ್ತಿಯಿರಲಿಲ್ಲ; ಮತ್ತು ಅದನ್ನುಂಟು ಮಾಡಿಕೊಳ್ಳುವ ಬಗ್ಗೆ ಅವಳ ಪ್ರಯತ್ನವೂ ಇರಲಿಲ್ಲ. ಕೂದಲುಗಳ ಮುಡಿಕಟ್ಟುವದು ಬ್ರಾಹ್ಮಣಧರ್ಮವಲ್ಲ; ಆದರೆ ಸ್ವತಃ ಮಾತ್ರ ಮೋಟಾರಿನಲ್ಲಿ ಕುಳಿತು ಸಂಚರಿಸುವ ಶಂಕರಾಚಾರ್ಯರ ಅಪ್ರಯೋಜಕ ದಂಡಕವು ಅವಳಿಗೆ ಮಾನ್ಯವಿರಲಿಲ್ಲ. ಅದರಿಂದ ಅವಳು ಅವಸರದಲ್ಲಿದ್ದಾಗ ತಾನೇ ಕೂದಲುಗಳನ್ನು ಹಿಕ್ಕಿ, ಹಿಂಡಿ ಅವುಗಳ ಮುಡಿಯನ್ನು ಕಟ್ಟುತ್ತಿದ್ದಳು; ಆದರೆ ಅವಳಿಗೆ ಸಮಯವಿದ್ದರೆ ಹಾಗು ತಾಯಿಯ ಕೈ ತೆರವಿದ್ದರೆ ಅವಳು ಬೇಕಂತ ತಾಯಿಯ ಮುಂದೆ ಹೋಗಿ ಕೂರುವಳು, ಮತ್ತು ಅವಳಿಂದ ಜಡೆ ಹೆಣೆಸಿಕೊಳ್ಳುವಳು. ಅದರಲ್ಲಿ ಅವಳ ಮನಸ್ಸಿನೊಳಗಿನ ಒಂದು ಉದ್ದೇಶವಿದ್ದಿತೇನಂದರೆ, ಜಡೆ ಹೆಣೆಸಿಕೊಳ್ಳುವಾಗ ತಾಯಿಯೊಡನೆ ನಾಲ್ಕು ಮಾತನಾಡಲಿಕ್ಕೆ ಸಹಜವಾಗಿಯೇ ಲಭಿಸುತ್ತದೆ. ಗೃಹಸರ್ವಸ್ವವಾಗಿರುವ ಈ ಹುಡುಗಿಯು ಹೆಳಲು ಹಾಕಿಕೊಳ್ಳಲಿಕ್ಕೆ ಎದುರಿಗೆ ಬಂದು ಕುಳಿತಳೆಂದರೆ ತಾಯಿಗೂ ಪ್ರೇಮವೆನಿಸುವದು; ಮತ್ತು ಜಡೆ ಹೆಣೆಯುವದು ಮುಗಿದು ತುದಿಗೆ ಗಂಟುಹಾಕುವ ಸಮಯದಲ್ಲಿ ತಾಯಿಯು ಮಗಳ ಬೆನ್ನ ಮೇಲೆ ಎರಡೂ ಕೈಗಳಿಂದ ಉತ್ಸಾಹದ ಏಟನ್ನು ಕಿವಿಗೆ ಕೇಳಬರುವಂತೆ ಚೆನ್ನಾಗಿ ಕೊಡುವಳು! ಒಂದು ದಿನ ವಿಮಲೆಯು ವಿನೋದದಿಂದ ತಾಯಿಯನ್ನುದ್ದೇಶಿಸಿ:—"ಯಾಕವ್ವಾ, ಹೊಡೆಯುತ್ತಿರುವೆ? ನಾನೇನು ನಿನ್ನ ತಪ್ಪು ಮಾಡಿದೆನು?" ಎಂದು ಕೇಳಿದಳು. ಆಗ ಮಾಯಿಸಾಹೇಬರೂ ವಿನೋದದಿಂದಲೇ:-"ತಪ್ಪಲ್ಲದಿದ್ದರೇನು? ಇದುವರೆಗೆ ನೀನು ನನ್ನ ಸಮಯವನ್ನು ವಿನಿಯೋಗಿಸಲಿಲ್ಲವೆ?" ಎಂದರು. ಅದಕ್ಕೆ ವಿಮಲೆಯು:-"ಲಗುಬಗನೆ ಜಡೆ ಹೆಣೆದು ಮುಗಿಸುವದನ್ನು ಬಿಟ್ಟು, ನಡುವೆ ಹೀಗೆ ಇಲ್ಲದ ಹರಟೆ ಹೊಡೆಯಲಿಕ್ಕೆ

ನಾನೆಲ್ಲಿ ನಿನಗೆ ಹೇಳಿದ್ದೆನು?'' ಅನ್ನಲು, ''ತಂಗೀ, ಹಿಂದುಗಡೆ ನೀನೆಲ್ಲಿ ದೊರಕುವವಳು ಹೀಗೆ ಸ್ವಸ್ಥವಾಗಿ? ನೀನು ಯಾವಾಗಲೂ ಅವಸರ-ಗೊಂದಲಗಳಲ್ಲಿಯೇ ಇರುವೆ. ಅಂತೆಯೇ ನಾನು ನಿನ್ನ ಹೆಳಲಿಗೆ ಬೇಕಂತ ತುಸ ತಡಮಾಡುತ್ತೇನೆ; ಮತ್ತು ಇಂಥ ಸುಂದರವಾದ ಕೂದಲಿನ ಕಾಲುಗಳು ಕೈಯಲ್ಲಿ ಬಂದವೆಂದರೆ, ಜಡೆ ಹೆಣೆಯುವ ತಮ್ಮ ಕೌಶಲ್ಯವನ್ನು ತೋರಬೇಕೆಂದು ಅವರಿಗೆ ಅನಿಸಲಿಕ್ಕಿಲ್ಲ? ಹೆಳಲಿಗೆ ಹೆಳಲಾಯಿತು; ಮತ್ತು ಮಾತಿಗೆ ಮಾತಾಯಿತು!'' ಹೆಳಲು ಹಾಕುವವಳಿಗೆ ಜಡೆ ಹೆಣಿಸಿಕೊಳ್ಳುವವಳು ನಮಸ್ಕಾರ ಮಾಡುವದಿರುತ್ತದೆ. ಅದನ್ನು ಜಡೆ ಹೆಣಿಸಿಕೊಂಡ ಬಳಿಕ ವಿಮಲೆಯು ಎರಡೆರಡುಸಾರೆ ಮಾಡುತ್ತ ಬಾಯಿಂದ:— ''ಮಾಯಿ, ಒಂದು ನಮಸ್ಕಾರವು ಹೆಳಲಿನದಾಯಿತು; ಎರಡನೇದು ನಿನ್ನ ಪ್ರೇಮಕ್ಕಾಗಿ. ತಿಳಿಯಿತೇ? ಗೊತ್ತಿಟ್ಟುಕೊ.'' ಎಂದು ಅನ್ನುತ್ತಿದ್ದಳು.

ಆ ಮನೆಯಲ್ಲಿ ಎಂಕ, ನಣ, ಶೀನರಂತೆ ಮೂವರೇ ಜನರು! ಅವರಲ್ಲಿಯು ಭಾವೂಸಾಹೇಬರು ತಮ್ಮ ಅಟ್ಟದ ಮೇಲಿನ ದಿವಾಣಖಾನೆ, ದಿವಾಣಖಾನೆಯೊಳಗಿನ ಗಾದಿ ಹಾಗು ಕೈಯೊಳಗಿನ ಚಿರೂಟ ಇವುಗಳನ್ನೆಂದೂ ಬಿಡತಕ್ಕವರಲ್ಲ. ತಾಯಿಯು ಹಗಲು ಹೊತ್ತು ಮೈಲಿಗೆಗಿಂತ ಮಡಿಯಲ್ಲಿಯೇ ಹೆಚ್ಚು ಕಳೆಯುವದು. ಅದರಿಂದ ವಿಮಲೆಯು ಮನೆಯಲ್ಲಿದ್ದಳೆಂದರೆ, ಬರ-ಹೋಗುವವರೊಡನೆ ಮಾತು-ಕಥೆಯಾಡುವದು, ಅತಿಥಿ-ಅಭ್ಯಾಗತರ ಪರಾಮರ್ಷ ತಕ್ಕೊಳ್ಳುವದು, ಇದರಂತೆಯೇ ಮನೆಯೊಳಗಿರದ ಜೀನಸುಗಳನ್ನು ಪೇಟೆಯೊಳಗಿಂದ ತರಸುವದು, ಆಳು-ಹೋಳುಗಳ ಕಡೆಯಿಂದ ಎಲ್ಲ ಮನೆಗೆಲಸಗಳನ್ನು ಮಾಡಿಸಿಕೊಳ್ಳುವದು ಇವೆಲ್ಲ ಕೆಲಸಗಳು ವಿಮಲೆಯ ಕಡೆಗೇ ಬರುತ್ತಿದ್ದವು; ಮತ್ತು ಅವಳು ಅವುಗಳನ್ನು ಮನಃಪೂರ್ವಕವಾಗಿಯೂ, ಉತ್ಸಾಹದಿಂದಲೂ ಮಾಡುತ್ತಿದ್ದಳು. ಮನೆಯೊಳಗೆ ಸ್ವಚ್ಛತೆಯಿರಿಸುವ ವಿಷಯದಲ್ಲಿ ಮಾತ್ರ ವಿಮಲೆಯ ಮತವು ಭಾವೂಸಾಹೇಬರ ಮತಕ್ಕೆ ಹೊಂದುತ್ತಿತ್ತು; ಮತ್ತು ಒಮ್ಮೊಮ್ಮೆ ಆದರೆ ತಾಯಿಯೊಡನೆಯೇ ತುಸ ಮತಭೇದವಾಗುತ್ತಿತ್ತು. ಮಾಯಿಸಾಹೇಬರ ಸ್ವಚ್ಛತೆಯ ದೃಷ್ಟಿಯು ಹಿತ್ತಲೊಳಗಿನ ತುಳಸೀಕಟ್ಟೆ ಹಾಗು ನಡುಮನೆ-ಅಡಿಗೇ ಮನೆಗಳ ಮಟ್ಟಿಗೆ ಇರುತ್ತಿತ್ತು; ಮತ್ತು ಅವುಗಳನ್ನೆಲ್ಲ ಅವರು ಸ್ವಚ್ಛಕರಿಸುತ್ತಿದ್ದರು. ತಾತ್ಪರ್ಯವೇನಂದರೆ, ಒಬ್ಬರಿಗೆ ಒಂದು, ಇನ್ನೊಬ್ಬರಿಗೆ ಇನ್ನೊಂದು ಹೀಗೆ ಈ ತುದಿಯಿಂದ ಆ ತುದಿಯ ವರೆಗಿನ ಆ ಮನೆಯು ಬಹು ಸ್ವಚ್ಛವೂ, ನಿರ್ಮಲವೂ, ಪ್ರಸನ್ನವೂ ಆಗಿ ತೋರಿ, ಆ ಚೋದ್ಯಪುರ ಪಟ್ಟಣದಲ್ಲಿ ಅಂತಹ ಬೇರೆ ಮನೆಯೇ ಸಿಗುವಂತಿರಲಿಲ್ಲೆಂದು ಬೇಕಾದವರು ಪಣತೊಡಬಹುದಾಗಿತ್ತು.

ವಿಮಲೆಯು ತನ್ನ ಓದು-ಬರಹಗಳನ್ನಂತೂ ತಾನು ಮಾಡಿಯೇ

ಮಾಡುವಳು; ಅಲ್ಲದೆ ಭಾವೂಸಾಹೇಬರ ಚೀಟಿ-ಚಪಾಟಿಗಳನ್ನೂ ಅವಳು ಮುಂದರಿದು ಹೋಗಿ ಬರೆದುಕೊಡುತ್ತಿದ್ದಳು; ಮತ್ತು ಅವಳು ಏನು ಮಾಡುವಳೋ ಅದು ನಿರ್ದೋಷವೇ ಆಗಿರುತ್ತದೆಂದು ಅವಳ ತಾಯಿಯಂತೆ ಅವಳ ತಂದೆಯು ಖಾತ್ರಿಯೂ ಆಗಿತ್ತು. ದುರ್ದೈವದಿಂದ ವಿಮಲೆಯ ಬುದ್ಧಿವಂತಿಕೆಯೆಲ್ಲವೂ ಉಪಯೋಗವಾಗುವಂತೆ ಆ ಮನೆಯ ಪ್ರಪಂಚವು ವಿಸ್ತೃತವಾಗಿರಲಿಲ್ಲ. ಮನೆಯ ಮಗನು ಮನೆಯಲ್ಲಿದ್ದಿದ್ದರೆ, ಇಂದಿಗೆ ಆತನ ಲಗ್ನವಾಗಿ ಮನೆಯಲ್ಲಿ ಎರಡು ಹುಡುಗರು ಆಡುತ್ತಿದ್ದವು; ಆದರೆ ಆತನು ಫರಾರಿಯಾಗಿದ್ದನು; ಮತ್ತು ತಂದೆ-ತಾಯಿಗಳನ್ನಗಲಿ ಹೋಗಬಾರದೆಂದು ವಿಮಲೆಯೂ ಲಗ್ನಮಾಡಿಕೊಂಡಿರಲಿಲ್ಲ. ಅಂದ ಬಳಿಕ ಸಂಸಾರ ಬೆಳೆಯುವ ಬಗೆ ಹೇಗೆ? ಆದರೂ ಇದ್ದದ್ದರೊಳಗಿನ ಮನೆಯ ಆಡಳಿತವೆಲ್ಲವೂ ವಿಮಲೆಯ ಕಡೆಗೇ ಬಂದಿತ್ತು; ಮತ್ತು ಅವಳು ಅದನ್ನು ಒಳ್ಳೇ ದಕ್ಷತೆಯಿಂದ ನಡೆಸಿದ್ದಳು. ಮನೆಯಲ್ಲಿ ತಾಯಿಯು ಕುಲದೇವತೆಯ ಉಡಿತುಂಬಲಿಕ್ಕೆ ಮುತ್ತೈದೆಯರನ್ನು ಕರೆದರೆ ಇಲ್ಲವೆ ಸತ್ಯನಾರಾಯಣ ಪೂಜೆ ಮಾಡಿಸಿದರೆ ಅದರ ಸಿದ್ಧತೆ ಮಾಡಲಿಕ್ಕೆ ಅವಳು ಹೇಗೆ ಸನ್ನದ್ಧಳೋ, ಅದರಂತೆಯೇ ಯಾವನೊಬ್ಬನು ಆಪ್ತರಿಷ್ಟರೊಳಗಿನ ಸುಶಿಕ್ಷಿತ ಅತಿಥಿ ಮನುಷ್ಯನು ಮನೆಗೆ ಬಂದರೆ ಅವನೊಡನೆ ಸಂಕೋಚವಿಲ್ಲದೆ ಮಾತು-ಕಥೆಯಾಡಿ ಆದರಾತಿಥ್ಯ ಮಾಡಲಿಕ್ಕೂ ಅವಳು ಸನ್ನದ್ಧಳೇ ಆಗಿರುತ್ತಿದ್ದಳು. ಅವಳಿಗೆ ಹೆಚ್ಚಾಗಿ ಮಾತು-ಕಥೆಯಾಡಲಿಕ್ಕೆ ಬೇಕಾಗುತ್ತಿತ್ತು. ಅದರಿಂದ ಸಮಯಕ್ಕೆ ಬೇರೆ ಯಾರೂ ಸಿಗದಿದ್ದರೆ, ಮನೆಯೊಳಗಿನ ಮುದುಕ ಆಳು, ಮುದುಕಿಯಾದ ತೊತ್ತು ಇವರೊಡನೆ ಅವಳು ಮಾತಾಡುತ್ತ ಕೂಡ್ರುವಳು; ಮತ್ತು ಅವರೊಡನೆಯೇ ಹಾಸ್ಯ-ವಿನೋದವನ್ನು ಮಾಡುವಳು.

ಆದರೆ ಮಿಕ್ಕ ವೇಳೆಗಳೆಯುವ ಆಕೆಯ ಪ್ರಾಮುಖ್ಯ ಸಾಧನವೆಂದರೆ, ತಾನು ಸ್ವಂತಾಗಿ ಇಟ್ಟಿದ್ದ ಚಿಕ್ಕಮಕ್ಕಳ ಛಾತ್ರಾಲಯವು. ಸ್ವಂತದ ಮಕ್ಕಳಿರದಿದ್ದರೂ ಮಕ್ಕಳ ಮಾನಸಶಾಸ್ತ್ರವು ಅವಳಿಗೆ ಹುಟ್ಟ ಬುದ್ಧಿಯಿಂದಲೇ ತಿಳಿಯುತ್ತಿತ್ತು; ಮತ್ತು ಅವರೊಡನೆ ನಗೆದಾಡಿ-ಕೆಲೆದಾಡುವಲ್ಲಿ, ಮೋಜಿನ ಜಗಳಾಟದಲ್ಲಿ, ಅವರಿಗೆ ಶಿಕ್ಷಣ ಕೊಡುವಲ್ಲಿ ಅವಳ ವೇಳೆಯು ಎಷ್ಟು ವಿನಿಯೋಗವಾಗುತ್ತಿತ್ತೋ ಅದರ ಸದ್ವಿನಿಯೋಗವೇ ಆಯಿತೆಂದು ಅವಳಿಗನಿಸುತ್ತಿತ್ತು ಈ ಕೆಲಸಗಳಿಗಾಗಿ ಖರ್ಚು ಮಾಡುವ ದುಡ್ಡನ್ನು ತಾನು ಸಂಪಾದಿಸುವದಿಲ್ಲ; ಆದರೆ ತನ್ನ ತಂದೆಯೇ ತನಗೆ ಕೊಡುವನೆಂಬ ಸಂಗತಿಯು ಅವಳಿಗೆ ಹೊಳೆಯುತ್ತಿದ್ದರೂ ಆ ಬಗ್ಗೆ ಅವಳಿಗೆ ಕೊಂಚವೂ ಕೆಡಕೆನಿಸುತ್ತಿರಲಿಲ್ಲ. ಒಮ್ಮೊಮ್ಮೆ ಅವಳು ತಂದೆ ಇಲ್ಲವೆ ತಾಯಿಯೊಡನೆ ಚೇಷ್ಟೆಯಿಂದ ಜಗಳಾಡಿ: -"ನನ್ನ ಲಗ್ನವಾಗ

ದಿರುವ ವರೆಗೆ ನಾನೀ ಮನೆಯ ಮಗನೇ ಆಗಿರುತ್ತೇನೆ. ನನ್ನ ಪಾಲಿನ ಖರ್ಚಿನ ಹಣವು ಮಗನಷ್ಟೇ ನನಗೆ ದೊರೆಯಲಿಕ್ಕೆ ಬೇಕು. ನಾನು ವಿಲಾಯತಿಗೆ ಕಲಿಯಲಿಕ್ಕೆ ಹೋಗಿದ್ದರೆ ನನಗೆ ಹತ್ತು-ಹನ್ನೆರಡು ಸಾವಿರ ರೂಪಾಯಿ ಬೇಕಾ ಗುತ್ತಿರಲಿಲ್ಲವೆ? ಅದರ ಬಡ್ಡಿಯನ್ನಷ್ಟೇ ನಾನೀಗ ವೆಚ್ಚ ಮಾಡುತ್ತೇನೆ'' ಎಂದು ಅನ್ನುತ್ತಿದ್ದಳು. ಅವಳ ಸಾಲೆಯೊಳಗಿನ ಹುಡುಗರ ಶಿಕ್ಷಣವು ಕೇವಲ ಪುಸ್ತಕ ಗಳ ಸಹಾಯದಿಂದ ನಡೆಯದೆ, ಕಿಂಡರ ಗಾರ್ಡನ್ ಪದ್ಧತಿಯ ಆಟಗಳ ಸಹಾಯ ದಿಂದ ನಡೆಯುತ್ತಿತ್ತು; ಮತ್ತು ಆ ಆಟಗಳಲ್ಲಿ ಮನರಂಜನ ಮಾಡುವ ಹೊಸ ಹೊಸ ಪ್ರಕಾರಗಳೂ ಅವಳಿಗೆ ತೋಚುತ್ತಿದ್ದವು. ಅದರಿಂದ ಅವಳಿಗೂ ಉತ್ಸಾಹ ವುಂಟಾಗಿ, ಹುಡುಗರು ಆನಂದದಲ್ಲಿರುತ್ತಿದ್ದವು; ಆದರೆ ಅವಳು ಆ ಛಾತ್ರಾ ಲಯವನ್ನು ತೀರ ಖಾಸಗೀ ಸ್ವರೂಪದ್ದನ್ನಾಗಿಟ್ಟಿದ್ದಳು. ಅದರಿಂದ ಅಲ್ಲಿಗೆ ಸರಕಾರೀ ಇಲ್ಲವೆ ಸಂಸ್ಥಾನೀ ಅಧಿಕಾರಿಗಳನ್ನು ಕರೆಯುವಂತಿರಲಿಲ್ಲ; ಮತ್ತು ಅಸಭ್ಯರಾದ ಯಾರನ್ನೂ ಅವಳು ಆ ತನ್ನ ಸ್ಥಳದಲ್ಲಿ ಕಾಲಿಡಗೊಡುತ್ತಿರಲಿಲ್ಲ.

ವಿಮಲೆಯು ಮ್ಯಾಟ್ರಿಕ್ ಪರೀಕ್ಷೆ ಪಾಸಾದ ನಂತರ ಕಾಲೇಜಿಗೆ ಹೋಗ ಬೇಕೆಂದು ಮೊದಲು ಅವಳಿಗನಿಸಿತು; ಆದರೆ ಹಾಗೆ ಮಾಡುವದರಿಂದ ತಂದೆ ತಾಯಿಗಳಿಂದ ಪ್ರತಿವರ್ಷ ಎಳೆಂಟು ತಿಂಗಳು ದೂರವಿರಬೇಕಾಗುವದೆಂದೂ, ಮನೆಯಲ್ಲಿ ಬೇರೆ ಯಾರೂ ಇಲ್ಲೆಂದೂ ಯೋಚಿಸಿ, ಅವಳು ಆ ದಾರಿಯನ್ನು ಬಿಟ್ಟು ಹಾಯಕೋರ್ಟ ಪ್ಲೀಡರ ಪರೀಕ್ಷೆಯ ಅಭ್ಯಾಸವನ್ನು ಮನೆಯಲ್ಲೇ ಮಾಡಿ ಪಾಸಾದಳು; ಆದರೆ ಅವಳು ಕಾಯಿದೆಯ ಅಭ್ಯಾಸ ಮಾಡಿದುದು ವಕೀಲೀ ವೃತ್ತಿ ಯನ್ನು ಸ್ವೀಕರಿಸಲಿಕ್ಕೆಂದಲ್ಲ; ಕೇವಲ ಉಮೇದಿಗಾಗಿ. ಅವಳು ಜೋಧ್ಯಪುರ ವನ್ನು ಬಿಟ್ಟು ಹೊರಡುವಂತಿರಲಿಲ್ಲ; ಮತ್ತು ಸಂಸ್ಥಾನದ ನ್ಯಾಯಾಧೀಶರೆದು ರಿಗೆ ವಕೀಲಳೆಂದು ಹೋಗುವ ಇಚ್ಛೆಯೂ ಅವಳಿಗಿರಲಿಲ್ಲ. ಆ ಪರೀಕ್ಷೆಯು ಪಾಸಾದ ಬಳಿಕ ಭಾವೂಸಾಹೇಬರು ಒಂದು ದಿನ ಅವಳನ್ನು ಕುರಿತು:—ತಂಗೀ, ವಿಮಲಾ, ನೀನು ಇನ್ನು ಎಷ್ಟು ರೂಪಾಯಿಗಳ ಸನದು ಪಡೆಯುವದು? ಐದ ರದೋ, ಐನೂರರದೊ? ನೀನು ಹೇಳಿದ್ದಕ್ಕೆ ನನ್ನ ಸಿದ್ಧತೆಯಿದೆ.

ವಿ:—ಅಪ್ಪಾ, ನಿಮ್ಮ ಸಿದ್ಧತೆಯಿದ್ದೀತು; ಆದರೆ ನನ್ನ ಸಿದ್ಧತೆಯಿರಬೇ ಕಷ್ಟೇ? ನಾನು ಯಾವ ಸನದನ್ನೂ ಪಡೆಯಲಿಚ್ಛಿಸುವದಿಲ್ಲ. ಕೈಯಲ್ಲಿ ಸನದಿನ ಕಾಗದವಿರುವದೊಂದು ಮೋಹಕ್ಕೆ ಕಾರಣವಾಗುವದು. ಸನದು ಸಿದ್ಧವಿದ್ದಿ ತೆಂದರೆ, ಊರಲ್ಲಿಯೇ ವಕೀಲಿ ಧಂದೆ ಮಾಡಬೇಕೆಂದೆನಿಸಹತ್ತುವದು; ಆದರೆ ಈ ಸಂಸ್ಥಾನೀ ಅಧಿಕಾರಿಗಳೆದುರಿಗೆ ಹೋಗುವದೆಂದರೆ, ತನ್ನ ಅವಮಾನವನ್ನು ತಾನೇ ಮಾಡಿಕೊಂಡಂತಾಗುವದು. ಅಲ್ಲದೆ, ಚಿಕ್ಕಮಕ್ಕಳ ಶಿಕ್ಷಣವನ್ನೇ ನನ್ನ

ಧ್ಯೇಯವೆಂದು ನಾನಿಟ್ಟುಕೊಂಡಿದ್ದೇನೆ; ಮತ್ತು ಅದಕ್ಕಾಗಿ ಬೇಕಾಗುವ ಧನ ಸಹಾಯವು ನಿಮ್ಮಿಂದ ಆಗುತ್ತಲೇ ಇದೆ.

ಭಾ: – ಹಾಗಾದರೆ ನಿನ್ನ ಕಾಯಿದೆಯ ಜ್ಞಾನದ ಉಪಯೋಗವೇನು?

ವಿ: ಪ್ರತ್ಯಕ್ಷ ಉಪಯೋಗದ ಗುರಿಯನ್ನಿಟ್ಟುಕೊಳ್ಳದ ಹೊರತು ಯಾವ ಜ್ಞಾನವನ್ನೂ ಪಡೆಯಬಾರದೇನು? ಜ್ಞಾನಕ್ಕಾಗಿಯೇ ಜ್ಞಾನ ಸಂಪಾದಿಸುವದು ಹೆಚ್ಚು ಒಳಿತಲ್ಲವೆ?

ಭಾ:—ತಂಗೀ, ಇವೆಲ್ಲ ನಿಮ್ಮ ಹೊಸ ಯುಗದ ವಿಚಾರಗಳು. ನಮ್ಮ ಹಳೇ ಪೀಳಿಗೆಯವರ ವಿಚಾರಗಳೆಂದರೆ, ಒಂದು ಕೈಯಿಂದ ಜ್ಞಾನ ಸಂಪಾದಿಸಬೇಕು; ಮತ್ತು ಎರಡನೇ ಕೈಯಿಂದ ಅದರ ವ್ಯಾಪಾರ ಮಾಡಬೇಕು. ಕಾಯಿದೆಯ ಜ್ಞಾನದಿಂದ ದುಡ್ಡುಗಳಿಸುವ ಇಚ್ಛೆಯಿರದಿದ್ದರೂ ಆ ಜ್ಞಾನದ ಉಪಯೋಗವು ಬಡಬಗ್ಗರಿಗೆ ಆಗಬೇಡವೆ?

ವಿ:—ಅಪ್ಪಾ, ನೀವಿದನ್ನು ಸರಿಯಾಗಿ ಹೇಳಿದಿರಿ. ಬಡಬಗ್ಗರಿಗೇ ಏಕೆ, ಶ್ರೀಮಂತರಿಗೂ ಅದರ ಉಪಯೋಗವು ಏಕಾಗಬಾರದು? ಅನ್ಯಾಯವಾಗುತ್ತಿದ್ದರೆ ಅದನ್ನು ನಿವಾರಿಸುವದೇ ಕಾಯಿದೆಯ ಜ್ಞಾನದ ಉಪಯೋಗವು. ಅಂದ ಮೇಲೆ ಶ್ರೀಮಂತರಿಗೂ ಅದರ ಉಪಯೋಗವಾಗುವದೇ. ತದ್ವಿರುದ್ಧವಾಗಿ ಅನ್ಯಾಯದ ಕೆಲಸದಲ್ಲಿ ಬಡವರಿಗೂ ನೆರವಾಗಕೂಡದು!

ಅವಳ ಈ ಮತದ ಪ್ರೇರಣೆಗೆ ತನ್ನ ಕಾಯಿದೆಯ ಜ್ಞಾನದ ಉಪಯೋಗವು ಅವಳಿಗೆ ಇದು ವರೆಗೆ ಮನೆಯ ಹೊರಗೆಲ್ಲಿಯೂ ಆಗುವ ಸಂಧಿಯು ದೊರೆತಿರಲಿಲ್ಲ; ಆದರೆ ಬಿನ್‌ಸನದೀ ವಕೀಲಿಯ ಕೆಲಸ ಮಾಡುವ ಪ್ರಸಂಗಗಳು ಅವಳಿಗೆ ಮನೆಯಲ್ಲೇ ಹಲವು ಸಾರೆ ಬರುತ್ತಿದ್ದವು. ಆ ಕಾಲಕ್ಕೆ ಅವಳ ತಂದೆಯೇ ಫಿರ್ಯಾದಿಯು; ತಾಯಿಯು ಆರೋಪಿಯು ಹೀಗಿರುತ್ತಿತ್ತು. ಮಾಯಿಸಾಹೇಬರಿಂದ ಒಂದಿಷ್ಟು ತಪ್ಪಿದರೂ, ತಮ್ಮ ಮನಸ್ಸಿನಂತಾಗದಿದ್ದರೂ ಭಾವೂಸಾಹೇಬರ ಸಿಟ್ಟು ಸಿದ್ಧವೇ! ಆಗ ತಾಯಿಯಿಂದ ನಡೆದ ಸಂಗತಿಯನ್ನೆಲ್ಲ ತಿಳಕೊಂಡು, ತಂದೆಯೊಡನೆ ಯುಕ್ತಿವಾದ ಮಾಡುವ ಕೆಲಸವು ವಿಮಲೆಯ ಕಡೆಗೇ ಬರುತ್ತಿತ್ತು; ಮತ್ತು ಅವಳು ತನ್ನ ವ್ಯವಹಾರ ಚಾತುರ್ಯದಲ್ಲಿ, ಬುದ್ಧಿವಂತಿಕೆಯನ್ನೂ ಪ್ರೇಮದ ಜೇವಾಳವನ್ನೂ ಬೆರಿಸಿ ತನ್ನ ವಕೀಲಿಯನ್ನು ಹೇಗೆ ಯಶಸ್ವಿಗೊಳಿಸುವಳೆಂಬದನ್ನು ವಾಚಕರು ಈ ಮೊದಲಿನ ಒಂದು ಪ್ರಕರಣಗಳಲ್ಲಿ ಕಂಡುಕೊಂಡಿರುತ್ತಾರೆ. ಇರಲಿ.

ಇಂದು ಅಪರಾಹ್ಣ ಕಾಲದಲ್ಲಿ ಮಾಯಿಸಾಹೇಬರ ಕೋಣೆಯಲ್ಲಿ ಕುಳಿತು ತಾಯಿ-ಮಗಳಲ್ಲಿ ಗುಜಗೋಷ್ಠಿಗಳು ನಡೆದಿದ್ದವು. ಭಾವೂಸಾಹೇಬರೊಡನೆ ಈ ಮೊದಲು ನಡೆದ ಮಾತು-ಕಥೆಗಳನ್ನು ಅವಳು ತಾಯಿಗೆ ಮತ್ತೆ

ಹೇಳಿ:-"ಹರಳು ಒಗೆದು ಅಪ್ಪನ ಅಂತಃಕರಣದ ನೆಲೆ ನೋಡಿದೆನು; ಆದರೆ ಪ್ರಭಾಕರಣ್ಣನ ವಿಷಯವಾಗಿ ಹನ್ನೆರಡು ವರ್ಷಗಳ ಹಿಂದೆ ಅವರ ಮನಸ್ಸೊಮ್ಮೆ ಕಲುಷಿತವಾದದ್ದು ಇನ್ನೂ ಹಾಗೆಯೇ ಇದೆ.'' ಈ ಬಗೆಯಾದ ತನ್ನ ಅಭಿಪ್ರಾಯವನ್ನು ತಿಳಿಸಿ, ಅದರ ಮೇಲೆ ಅವಳು:-"ಮುದುಕ ಮನುಷ್ಯರ ಮತ ಪರಿವರ್ತನಗೊಳಿಸುವದು ಬಹು ಕಠಿಣವು. ವಯಸ್ಸು ಹೆಚ್ಚು ಹೆಚ್ಚಾದಂತೆ ಅವರ ದುರಾಗ್ರಹವೂ ಹೆಚ್ಚುತ್ತ ಹೋಗುತ್ತದೆ. ಅದರಿಂದ ಅವರು 'ನಾಫೇರ' ಪಂಥದವರಾಗುತ್ತಾರೆ. ಫೇರ ಅಂದರೆ ತಿರುಗಿ ವಿಚಾರ ಮಾಡಲಿಕ್ಕೆ ಯಾವ ವಿವೇಚಕ ಶಕ್ತಿಯು ಬೇಕಾಗುತ್ತದೋ, ಅದು ಅವರಲ್ಲಿರುವದಿಲ್ಲ" ಎಂದು ಟೀಕೆ ಮಾಡಿದಳು.

ಮಾಯಿಸಾಹೇಬರಿಗೂ ಈ ಅನುಭವವಿತ್ತು; ಆದರೆ ವಿಮಲೆಯ ಈ ವಿಚಾರಕ್ಕೆ ಸಮ್ಮತಿ ಕೊಡುವದರ ಹೊರತು ಅವರಿಂದ ಹೆಚ್ಚಿಗೇನೂ ಆಗುವಂತಿರಲಿಲ್ಲ. ಆಗ ಅವರಿಬ್ಬರೂ ಗೊತ್ತುಪಡಿಸಿದ್ದೇನಂದರೆ, ಪ್ರಭಾಕರನು ಸಾಂಕೇತಿಕ ಪತ್ರದಲ್ಲಿ ಸೂಚಿಸಿರುವಂತೆ ಇಂದು ಅಮಾಸಿಯಿದ್ದದರಿಂದ ಹಾಗೆ ಆಗುವದೋ ಇಲ್ಲವೋ ಎಂಬದನ್ನು ನಿರೀಕ್ಷಿಸುವದು. ಆತನು ಇಂದಿಗೆ ಬರದಿದ್ದರೆ ದುರ್ದೈವದ ಮೂಲಕ ಸದ್ಯಕ್ಕೆ ಆ ಪ್ರಶ್ನೆಯೇ ಮುಗಿದಂತಾಗುವದು. ಪ್ರಭಾಕರನು ಆಶೆದೋರಿದನು; ಆದರೆ ಪೂರೈಸಲಿಲ್ಲವೆಂದಂದು ನಿಟ್ಟುಸಿರುಗರೆದರೆ ಕೆಲಸ ತೀರುವದು. ಅವನು ಬರೆದಿರುವಂತೆ ನಿಜವಾಗಿಯೂ ಬಂದರೆ ಮಾತ್ರ ಮುಂದೇನು ಮಾಡುವದೆಂಬ ಪೇಚೇ ಬಹು ದೊಡ್ಡದಿದ್ದಿತು! ಆಶೆಯೇ ದುಃಖವು, ನಿರಾಶೆಯೇ ಸುಖವು, ಎನ್ನುವದು ಈ ಬಗೆಯಿಂದಲೂ ನಿಜವಿದೆ. ಪ್ರಭಾಕರನು ಮರಳಿ ಬರಬೇಕೆಂಬದು ಇಚ್ಛೆಯು; ಆದರೆ ಅದು ಸಫಲವಾಯಿತೆಂದರೆ, ಮುಂದೊಂದು ಅಡಚಣಿಯು ಬಡಿಸಿಯೇ ಇಟ್ಟಿತ್ತು.

ಅಮಾಸಿಯ ಗುರ್ತು ಇಬ್ಬರ ಮನಸ್ಸಿನಲ್ಲಿಯೂ ಬಿಂಬಿಸಿದ್ದಿತು. ಅದರಿಂದ ರಾತ್ರಿಯಲ್ಲೇನು ಮಾಡಬೇಕೆಂಬ ಚರ್ಚೆಯನ್ನು ಬಾಗಿಲವನ್ನಿಕ್ಕಿಕೊಂಡು ಅವರಿಬ್ಬರೂ ಮಾಡುತ್ತಿದ್ದರು. ಮಾಯಿಸಾಹೇಬರು ಒಮ್ಮೊಮ್ಮೆ ಮೇಲಟ್ಟವನ್ನು ಬಿಟ್ಟು ಕೆಳಗಿನ ನಡುಮನೆಯೊಳಗಿನ ವಿಮಲೆಯ ಕೋಣೆಯಲ್ಲೇ ಮಲಗುತ್ತಿದ್ದರು. ಹಾಗಾಯಿತೆಂದರೆ, ವಿಮಲೆಯು ಯಾವುದೊಂದು ಪುಸ್ತಕವನ್ನು ಓದಬೇಕು; ಮಾಯಿಸಾಹೇಬರು ಚಿತ್ತಗೊಟ್ಟು ಅದನ್ನು ಕೇಳಬೇಕು; ನಡುನಡುವೆ ತಮ್ಮ ಮಂದಬುದ್ಧಿಗೆ ತಿಳಿಯದ ವಿಷಯದ ಬಗ್ಗೆ ಪ್ರಶ್ನೆ ಮಾಡಬೇಕು; ಅದನ್ನು ಕೇಳಿ ವಿಮಲೆಯು ಶಿಕ್ಷಕರಂತೆ ಅವರಿಗೆ ಅದನ್ನು ವಿಶದಪಡಿಸಿ ಹೇಳಬೇಕು; ಅನಂತರ ಸುಖದುಃಖದ ಮಾತು-ಕಥೆಗಳಾಗಬೇಕು; ಮೃದುಸ್ವರದಿಂದ ಇಬ್ಬರೂ ಕೂಡಿ ಹಳೇ ಪದ್ಧತಿಯ ಹಾಡುಗಳನ್ನು ಹಾಡಬೇಕು; ಮತ್ತು ವಿಮಲೆಯೊಬ್ಬಳೇ

ಹೊಸ ಮಾದರಿಯ ಕವಿತೆಗಳನ್ನನ್ನಬೇಕು. ಆಗ ಅಲ್ಪ-ಸ್ವಲ್ಪ ಹಾಸ್ಯವಿನೋದವೂ ಆಗಬೇಕು; ಮತ್ತು ಕಡೆಗೆ ಅವರಿಬ್ಬರೂ ಸಹೋದರಿಯರಂತೆ ಒಬ್ಬರ ಬಳಿಯಲ್ಲೊಬ್ಬರು ಪಲ್ಲಂಗಗಳನ್ನಿಳಿದುಕೊಂಡು ಮಲಗಬೇಕು. ಈ ರೀತಿಯಿಂದ ಅವರಿಬ್ಬರೂ ತಾಯಿ-ಮಕ್ಕಳು ಒಬ್ಬರನ್ನೊಬ್ಬರು ಸುಖಸಮಾಧಾನಗೊಳಿಸುತ್ತಿದ್ದರು.

ಅದರಂತೆಯೇ ಇಂದಿನ ಇಡಿ ರಾತ್ರಿಯನ್ನು ಕಳೆಯಬೇಕೆಂದೂ, ನಿದ್ದೆ ಬರಹತ್ತಿದರೆ ಒಮ್ಮೆ ಒಬ್ಬರು ಮತ್ತೊಮ್ಮೆ ಮತ್ತೊಬ್ಬರು ಮಲಗಬೇಕೆಂದೂ ಅವರು ನಿಶ್ಚಯಿಸಿಕೊಂಡರು. ಯಾಕಂದರೆ ಪ್ರಭಾಕರನು ಬಂದರೆ ಗುಪ್ತವಾಗಿಯೂ ಅಪರಾತ್ರಿಯಲ್ಲಿಯೂ ಬರುವನು; ಅಂತೆಯೇ ಆತನ ಸದ್ದು ಹತ್ತಿದ ಕೂಡಲೆ ಸಪ್ಪಳಾಗದಂತೆ ಹಿತ್ತಲ ಇಲ್ಲವೆ ಮುಂಚೆಯ ಬಾಗಿಲುಗಳ ಕೀಲಿ-ಚಿಲಕಗಳನ್ನು ತೆಗೆಯಬೇಕು! ಆ ಎರಡೂ ಬಾಗಿಲುಗಳ ಕೀಲಿಯ ಕೈಗಳು ನಡುಮನೆಯೊಳಗೆ ಮೊಳೆಗೆ ತೂಗಬಿಟ್ಟಿರುತ್ತಿದ್ದವು. ಆ ಸ್ಥಳವನ್ನು ತಾಯಿಯು ಮಗಳಿಗೆ ತೋರಿಸಿದಳು.

ಪ್ರಭಾಕರನು ಬಂದರೆ ಆತನನ್ನು ಮೊದಲು ಹಿತ್ತಲಕಡೆಯ ಹೂವಿನ ತೋಟದಲ್ಲಿಯ ನೆಲಮನೆಯೊಳಗೇ ಇರಿಸಬೇಕಾಗುವದು; ಆದರೆ ಮುಂದೂ ಆತನನ್ನು ಅಲ್ಲಿಯೇ ಇರಿಸಬೇಕೋ ಹೇಗೆಂಬ ಬಗ್ಗೆ ಅವರಿಬ್ಬರೂ ಚರ್ಚಿಸಿದರು. ಆ ನೆಲಮನೆಯಲ್ಲಿ ಎಷ್ಟು ಅನುಕೂಲತೆಯೋ ಅಷ್ಟೇ ಪ್ರತಿಕೂಲತೆಯೂ ಇದ್ದಿತು; ಅದರಿಂದ ಬೇಕಾದರೆ ನಾನು ನನ್ನ ಶಾರದಾ ಮಠದಲ್ಲಿಯೂ ಆತನಿಗಿಳಿದುಕೊಳ್ಳುವ ವ್ಯವಸ್ಥೆ ಮಾಡಬಲ್ಲೆನೆಂದು ವಿಮಲೆಯು ತಾಯಿಗೆ ಹೇಳಿದಳು; ಆದರೆ ಮಾಯಿಸಾಹೇಬರು ಅದನ್ನು ಖಂಡಿಸಿ:—"ಮನೆಯಲ್ಲೇ ಏನಾಗುವದಾಗಲಿ. ನಿನ್ನ ಶಾರದಾ ಮಠಕ್ಕೆ ಸುಮ್ಮನೆ ತೊಂದರೆ ಬೇಡ. ಪರಕೀಯ ಪುರುಷನು ಈ ಮನೆಗೆ ಬಂದರೆ, ಈ ತುಂಬಿದ ಮನೆಯಲ್ಲಿ ಯಾರ ಕಣ್ಣಿಗೂ ಒಡೆದು ಕಾಣಲಾರನು. ಕಂಡರೂ ಅತಿಥಿ-ಅಭ್ಯಾಗತನಿರಬಹುದೆಂದೆನ್ನುವರು; ಆದರೆ ನಿನ್ನ ಸಾಲೆಯಲ್ಲಿ ಯಾರಾದರೂ ಆತನನ್ನು ಕಂಡರೆ, ಜನರ ತರ್ಕ-ವಿತರ್ಕಗಳಿಗೆ ಕೊನೆ-ಮೊದಲುಗಳೇ ಉಳಿಯಲಿಕ್ಕಿಲ್ಲ! ಅಲ್ಲಿ ಅವನು ಸಹಜವಾಗಿ ಯಾರೊಬ್ಬರ ಕಣ್ಣಿಗೆ ಬಿದ್ದಾನು. ಕಾರಣ ಅದೇನೂ ಬೇಡ. ಆತನ ವಸತಿಯ ವ್ಯವಸ್ಥೆಯನ್ನು ನಾವು ನಮ್ಮ ಮನೆಯಲ್ಲೇ ಮಾಡೋಣ" ಎಂದು ಹೇಳಿದರು.

ಬಳಿಕ ವಿಮಲೆಯು ಅದಕ್ಕೊಪ್ಪಿಕೊಂಡಳು. ಪ್ರಭಾಕರನು ಬಂದ ಮೇಲೆ ಯಾವ ರೀತಿಯಿಂದ ಆತನು ಪ್ರಕಟವಾಗುವದು ಉಚಿತವಾಗುವದೋ ಆ ಪ್ರಕಾರ ಆತನು ಪ್ರಕಟನಾದನೆಂದರೆ, ಆ ಮೇಲೆ ಏನಾಗುವದಿದೆಯೋ ಅದಾ

ಗಲಿ. ಅಂದರೆ ಆತನನ್ನು ಒಪ್ಪಿಡುವ ಬಚಾವಣೆಯಾದರೂ ತೀರುವದು; ಆದರೆ ಆತನು ಪ್ರಕಟವಾಗುವ ವರೆಗೆ ಒಂದು ವಿಶೇಷ ಬಗೆಯ ಅಡಚಣೆಯಿದ್ದಿತು. ಅದೇನಂದರೆ, ಭಾವೂಸಾಹೇಬರ ಗುಪ್ತಪೋಲೀಸರ ಸಂದೇಹದ ಹುಚ್ಚು ಇತ್ತೀಚೆಗೆ ವೃದ್ಧಿಂಗತವಾಗುತ್ತಿತ್ತಾದ್ದರಿಂದ, ಅವರು ಪ್ರತಿಯೊಂದು ಸಂದಿ ಮೂಲಿಗಳನ್ನು ಶೋಧಿಸುವವರು. ಅದಕ್ಕೇನು ಮಾಡಬೇಕು?

'ಅದು ಹೇಗೆ? ಅಷ್ಟೇನು ಮಾಡುವಹಾದರೂ ಏನು?' ಎಂದು ವಿಮಲೆಯು ಕೇಳಲು, ಮಾಯಿಸಾಹೇಬರು:—''ಅಗರ ಒಂದೊಂದೇ ಬಗೆಯನ್ನು ಹೇಳುತ್ತೇನೆ ಕೇಳು. ಮೊನ್ನೆ ರಾತ್ರಿ ನಮ್ಮ ಪುರೋಹಿತರು ಉಪಾಕರ್ಮ ಮಾಡುವದೆಂದೆಂಬದನ್ನು ತಿಳಕೊಳ್ಳಲಿಕ್ಕೆ ಬಂದಿದ್ದರು. ಮಳೆ ಬೀಳುತ್ತಿತ್ತೆಂದು ಅವರು ತಮ್ಮ ತಲೆಯ ಮೇಲೆ ಬನಾತಿನ ಟೊಪ್ಪಿಗೆ ಹಾಕಿದ್ದರು. ಅವರು ಆ ತಮ್ಮ ಟೊಪ್ಪಿಗೆಯನ್ನು ತೆಗೆದಿಟ್ಟು ಲಾಂದರದ ತೀರ ಹತ್ತಿರಕ್ಕೆ ತಮ್ಮ ಮುಸುಡೆಯನ್ನು ಒಯ್ಯುವವರೆಗೂ ಇವರು ಅವರೊಡನೆ ಒಂದು ಶಬ್ದವನ್ನು ಕೂಡ ಮಾತನಾಡಲಿಲ್ಲ!

ಅದೊಂದಿರಲಿ. ಮತ್ತೊಮ್ಮೆ ನಮ್ಮ ಮುದಿ ತೊತ್ತಾದ ಸಾವಿಯ ಸಂಶಯವು ಇವರಿಗೇಕೆ ಬಂದಿತೋ ಅದಾಗು ಹೇಳಬೇಕು? ಅವಳು ಹಿತ್ತಲ ಕಡೆಯ ಗೊಡಬಿಯೊಳಗೆ ಬಂದಿಷ್ಟು ಮರೆಗೆ ಮರ್ಯಾದೆಯಿಂದ ಕುಳಿತಿದ್ದಳು. ಕೂಡಲೆ ಇವರು ನೆಟ್ಟಗೆ ಅವಳ ಹತ್ತರ ಹೋಗಿ, ಜೆಗ್ಗಿ, ಅವಳ ಮುಸುಡೆಯ ಬಳಿಗೆ ತಮ್ಮ ಕಣ್ಣುಗಳನ್ನೊಯ್ದು, ಅವಳ ಮುಖವನ್ನು ಹುಳುಹುಳು ಎಂದು ನೊಡತೊಡಗಿದರು! ಅದರಿಂದ ಪಾಪ! ಅವಳು ಅಂಜಿದಳು; ಹಾಗು ನಾನು ಒಳಗೆ ಪಲ್ಲೆ ಹೆಚ್ಚುತ್ತ ಕುಳಿತಲ್ಲಿಗೆ ಓಡಿ ಬಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು! ಕಾರಣವೇನೆಂದು ಕೇಳಲು, ಅದನ್ನು ತಿಳಿಸಲಿಕ್ಕೆ ಅವಳಿಗೆಷ್ಟೋ ಗಡಚೆನಿಸಿತು. ಹೇಳಿದರೂ ಕಠಿಣ, ಬಿಟ್ಟರೂ ಕಠಿಣವಾಯಿತು. ಕಡೆಗೆ ನಾನೇ ಕೆದರಿ ಕೆದರಿ ಕೇಳಿದ್ದರಿಂದ ಅವಳು ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ನಾನು ಅನುಮಾನದಿಂದಲೇ ನಿಜ ಸಂಗತಿಯನ್ನು ತಿಳಿದೆನು; ಹಾಗು ಗುಪ್ತಪೋಲೀಸರ ಅಂಜಿಕೆಯ ಸಂದೇಹದಿಂದ ಇವರು ನಡುನಡುವೆ ಯಾವ ಕುಚೇಷ್ಟೆ ಮಾಡುತ್ತಿರುತ್ತಾರೆಂಬದನ್ನು ತಿಳಿಸಿ ಹೇಳಲು, ಅವಳಿಗೆ ತುಸ ಹಾಯೆನಿಸಿತು. ಮುಂದೆ ತುಸ ಹೊತ್ತಿನಲ್ಲಿಯೇ ಇವರು ಅಲ್ಲಿಂದ ನಡುಮನೆಗೆ ಹೋಗುತ್ತಿರುವಾಗ ತಮ್ಮಷ್ಟಕ್ಕೆ ತಾವೇ, ಆದರೆ ಗಟ್ಟಿಯಾಗಿ ಮುಂದಿಗೆ ಕೇಳಿಸುವಂತೆ:—''ಗುಪ್ತಪೋಲೀಸರೇ ಅವರು! ಯಾವ ಯಾವ ವೇಷದಿಂದಿರುವರೆಂದದನ್ನು ಹೇಳಲಿಕ್ಕಾಗುವದಿಲ್ಲ!'' ಅಂದ ಆ ಶಬ್ದಗಳು ಸಾವಿಯ ಕಿವಿಗೆ ಬೀಳಲು, ಅವಳಿಗೆ ನನ್ನ ಮಾತಿನ ಸಂಪೂರ್ಣ

ಖಾತ್ರಿಯಾಗಿಬಿಟ್ಟಿತು. ಆದರಿಂದ ಈ ಬಗ್ಗೆ ಯೂ ನಾವು ಚೆನ್ನಾಗಿ ಯೋಚಿಸಬೇಕು.

ಮಗನಾದ ಪ್ರಭಾಕರನು ಫರಾರಿಯಾದಂದಿನಿಂದ ಭಾವೂಸಾಹೇಬರು ಮನಸ್ಸಿನಿಂದ ಅಸ್ವಸ್ಥರಾದುದು ನಿಜವೇ. ಅವನ ಮೇಲೆ ರಾಜದ್ರೋಹದ ಖಟ್ಲೆಯಾದಂದಿನಿಂದ ತಮ್ಮ ಮೇಲೆ ಗುಪ್ತ ಪೋಲೀಸರ ದೃಷ್ಟಿಯಿದೆ, ಎಂಬ ಭ್ರಮವು ಅವರ ತಲೆಯಲ್ಲಿ ಹೊಕ್ಕುಬಿಟ್ಟಿತ್ತು. ಕಾರಣಸಗತ್ಯದಿಂದ ಅದು ನಡುನಡುವೆ ಹೆಚ್ಚುತ್ತಲೇ ಇತ್ತು. ಆ ಭ್ರಮದ ಮೂಲಕ ಅವರು ತಮ್ಮ ಮನೆಯ ಸುತ್ತಮುತ್ತಲಿನ ಗೋಡೆಗಳನ್ನೆಲ್ಲ ಕಲ್ಲು ಗಚ್ಚುಗಳಿಂದ ಭದ್ರಗೊಳಿಸಿ, ಹಿತ್ತಲ ಬಾಗಿಲಿಗೆ ಯಾವಾಗಲೂ ಕೀಲಿ ಹಾಕುವ ವ್ಯವಸ್ಥೆಯನ್ನು ಮಾಡಿದ್ದರು; ಮತ್ತು ಮುಂಜೆಯ ಬಾಗಿಲಿನ ದಿಡ್ಡಿ-ಚಿಕ್ಕ-ಕದವು ಮಾತ್ರ ತೆರೆದಿರಬೇಕೆಂದು ನಿಶ್ಚಯಿಸಿದ್ದರು. ಗುಪ್ತ ಪೋಲೀಸರ ವಿಷಯದ ಅವರ ಹಳೇ ಸಂಶಯದಲ್ಲಿ ತಮ್ಮ ಹೆಂಡತಿಯ ಆಚರಣ ವಿಷಯದ ಭ್ರಮವೂ ಕೂಡಿಕೊಂಡಿತು. ಒಂದೇ ಕಾಲಕ್ಕೆ ತಲೆಯೊಳಗೆ ಅನೇಕ ಭ್ರಮಗಳಾದರೆ, ಅವು ತಮ್ಮ-ತಮ್ಮೊಳಗೆ ಸಂಬಂಧ ಬೆಳಸಿಕೊಂಡು ತನ್ಮೂಲಕ ಒಂದು ಸಂಯುಕ್ತ ಭ್ರಮವೇ ನಿರ್ಮಾಣವಾಗುತ್ತದೆ. ಇದರಂತೆ ಭಾವೂಸಾಹೇಬರಿಗೆ ಅನಿಸಹತ್ತಿದ್ದೇನಂದರೆ, ಗುಪ್ತಪೋಲೀಸನೇ ತಮ್ಮ ಹೆಂಡತಿಗೆ ವಶವಾಗಿರಬೇಕು; ಮತ್ತು ಪತ್ರ ಹಂಚುವ ಸೇವವನ್ನು ಡಾಣಾಡಂಗುರವಾಗಿ ಮಾಡಬರುವದೆಂದು ಅವನು ಪೋಷ್ಟಮನ್ನನ ವೇಷ ಧರಿಸಿದರೆ ತೀರಿತು. ಆದರಿಂದ ಭಾವೂಸಾಹೇಬರ ಮನಸ್ಸಿನಲ್ಲಿ ತಮ್ಮ ಹೆಂಡತಿಯ ಪ್ರಿಯಕರನು ತಮ್ಮ ಮೇಲೆ ಪಾಳತಿಯಿರುವ ಗುಪ್ತ ಪೋಲೀಸನೇ ಆಗಿದ್ದು, ಆತನೇ ಈ ಓಣಿಯ ಪತ್ರಗಳನ್ನು ಹಂಚುವ ಪೋಷ್ಟಮನ್ನನಾಗಿ ಬರುತ್ತಿರಬೇಕೆಂಬ ಶೃಂಖಲೆಯು ಸಿದ್ಧವಾಯಿತು! ಖುದ್ದ ಪೋಲೀಸ ಸಾಹೇಬನ ಅಧಿಕಾರಿಗಳು ನೌಕರಿಯ ಕಾಲಕ್ಕೆ ಕೆಲ ದಿನಗಳ ವರೆಗೆ ಅವರ ಕಡೆಗಿದ್ದುದರಿಂದ ಗುಪ್ತ ಪೋಲೀಸರ ಚರಿತ್ರವೂ ಚಮತ್ಕಾರಗಳೂ ಅವರಿಗೆ ಚೆನ್ನಾಗಿ ಅವಗತವಾಗಿದ್ದವು. ಇರಲಿ.

ಕಡೆಗೆ ವಿಮಲೆಯು ನಕ್ಕು ನಿರ್ಧಾರದ ದನಿಯಿಂದ:—"ಮಾಯಿ, ಅಡಚಣಿಗಳಿಗೇನು? ಬೇಕಾದಷ್ಟಿವೆ. ಅವು ಎಂದಿಗೂ ತೀರಲಾರವು; ಮತ್ತು ಮನುಷ್ಯನು ಚಿಂತೆಯನ್ನು ಮಾಡಿಮಾಡಿಯಾದರೂ ಅದೆಷ್ಟು ಮಾಡುವವನು! ನಡೆ, ನಾವಿನ್ನು ದೇವರ ನಾಮವನ್ನುಚ್ಚರಿಸಿ ನಮ್ಮ ಯೋಜನೆಗ ತೊಡಗೋಣ."

ಹೀಗೆಂದು ಅವರಿಬ್ಬರೂ ಒಮ್ಮೆ ಆ ಹೂದೋಟದೊಳಗಿನ ನೆಲಮನೆಗೆ ಹೋಗಿ ಬಂದು, ತಮ್ಮ ತಮ್ಮ ಕೆಲಸಗಳಿಗೆ ತೊಡಗಿದರು.

---

## ೧೧ ಒಂದು ಬಾರಿನೊಳಗಿಂದ ಹೊರಟ ಗುಂಡುಗಳೆಷ್ಟು?

ರಾತ್ರಿಯ ಹನ್ನೆರಡು ಹೊಡೆದವು. ಎಲ್ಲ ಕಡೆಗೂ ನಿಸ್ತಬ್ಧತೆಯಿತ್ತು. ಮಳೆಯು ಸಣ್ಣಾಗಿ ಬೀಳುತ್ತಿತ್ತು. ತಾಯಿ-ಮಗಳು ನಡುಮನೆಯೊಳಗಿನ ತಮ್ಮ ಕೋಣೆಯ ದೀಪವನ್ನು ಸಣ್ಣ ಮಾಡಿ ಆಗಲೆ ಹಾಸಿಗೆಯ ಮೇಲೆ ಉರುಳಿಕೊಂಡಿದ್ದರು; ಆದರೆ ಅಲ್ಪಾವಧಿಯಲ್ಲೇ ಎರಡು-ಮೂರು ಸಂಗತಿಗಳು ಒಮ್ಮೆಲೆ ಬೇಕಂತ ಯಾರಾದರೂ ಮಾಡಿದಂತೆ ಘಟಿಸಿದವು!

ಮೊದಲು ಹಿತ್ತಲ ಬಾಗಿಲ ಮೇಲೆ ಒಂದರ ಹಿಂದೊಮ್ಮೆಯಂತೆ ನಡು ನಡುವೆ ತುಸ ಅಂತರದಿಂದ ಎರಡು ಮೂರು ಸಾರೆ ಬಡಿದಂತಾಯಿತು; ಮತ್ತು ಆ ಪ್ರತಿಯೊಂದು ಕಾಲಕ್ಕೆ "ಸಮರ್ಥಾಚಿಯಾ ಸೇವಕಾ ವಕ್ರಪಾಹೆ | ಅಸಾ ಸರ್ವ ಭೂಮಂಡಳೀ ಕೋಣ ಆಹೆ?" | ಎಂಬೀ ಶ್ರೀಸಮರ್ಥ ರಾಮದಾಸರ ಶ್ಲೋಕವನ್ನು ಸಾಧಾರಣ ಗಟ್ಟಿ ದನಿಯಿಂದ ಯಾರೋ ಅನ್ನುತ್ತಿರುವಂತೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಮಾಯಿಸಾಹೇಬರೂ ವಿಮಲೆಯೂ ಇನ್ನೂ ಎಚ್ಚರವಿದ್ದರು. ಅವರಿಗೆ ಹಗಲೆಲ್ಲ ಮನಸ್ಸಿನಲ್ಲಿದ್ದ ವಿಷಯವು ಒಮ್ಮೆಲೆ ನೆನಪಾಗಿ, ಇಬ್ಬರೂ ಹಾಸಿಗೆಯಿಂದೆದ್ದರು. ವಿಮಲೆಯು ನಡುಮನೆಗೆ ಹೋಗಿ ಹಿತ್ತಲ ಬಾಗಿಲ ಕೀಲೀ ಕೈಯನ್ನು ತಂದಳು; ಆದರೆ ಅದನ್ನು ತಕ್ಕೊಂಡು ಮಾಯಿಸಾಹೇಬರೊಬ್ಬರೇ ಹಿತ್ತಲ ಬಾಗಿಲ ಕೀಲೀ ತೆಗೆಯಲಿಕ್ಕೆ ಹೋದರು. ಹೋಗುವಾಗ ಅವರು ವಿಮಲೆಯನ್ನು ಕುರಿತು:—"ತಂಗೀ, ನೀನು ಇಲ್ಲಿಯೇ ಕೂಡ್ರು. ನಾನೇ ಮುಂದಾಗುವೆನು. ಯಾಕಂದರೆ, ನಿನಗಿಂತ ನನ್ನ ಮುಖಚರ್ಯೆಯು ಪ್ರಭಾಕರನಿಗೆ ಹೆಚ್ಚು ಗುರ್ತಿನದಿದೆ. ಅದರಿಂದ ಆತನು ನನ್ನನ್ನು ಕೂಡಲೆ ಗುರ್ತಿಸಬಹುದು; ಆದರೆ ನಿನ್ನನ್ನು ನೋಡಿ ಗುರ್ತಿಸಲಾರದೆ ಸಂದೇಹಕ್ಕೊಳಗಾದಾನು" ಎಂದು ಅನ್ನಲು, ವಿಮಲೆಯು ಒಳ್ಳೇದೆಂದು ಕೋಣೆಯಲ್ಲಿಯೇ ಕುಳಿತಳು; ಆದರೂ ಅವಳ ಲಕ್ಷ್ಯವು ಹಿತ್ತಲ ಬಾಗಿಲ ಕಡೆಗೇ ಇದ್ದಿತು. ಮಾಯಿಸಾಹೇಬರು ಬಾಗಿಲ ತೆರೆದು ಲಾಂದರವನ್ನು ಮುಂದೆ ಮಾಡಲು, ಜಟಾಧಾರಿಯಾದೊಬ್ಬ ಗಡ್ಡದ ತರುಣನು ಒಳಗೆ ಬಂದನು. ಅವನನ್ನು ಕಂಡ ಕೂಡಲೆ "ಯಾರು, ಪ್ರಭಾಕರನೇನು? ಸುಖವಾಗೊಮ್ಮೆ ಬಂದೆಯಾ?" ಎಂದು ಮಾಯಿಸಾಹೇಬರು ಗುರ್ತುಕೊಟ್ಟ ಕೂಡಲೆ ಆ ಮನುಷ್ಯನಾದರೂ:—"ಮಾಯಿ, ನಿನ್ನ ಆಶೀರ್ವಾದ ಬಲದಿಂದ ಮರಳಿ ಬಂದೆನವ್ವ!" ಹೀಗೆಂದು ನುಡಿದು, ಅವಳ ಪಾದ ಮುಟ್ಟಿ ನಮಸ್ಕಾರ ಮಾಡಿದನು.

ಅದೇ ಕಾಲಕ್ಕೆ ಮನೆಯ ಒತ್ತಟ್ಟಿಗಿನ ಸಂದಿಯೊಳಗಿಂದ ಭಾವೂಸಾಹೇಬರು ಕೈಯಲಿ ಲಾಂದರವನ್ನೂ ಕೋಲನ್ನೂ ಹಿಡಿದುಕೊಂಡು, ಗುಪ್ತ

ಪೋಲೀಸನನ್ನು ಪತ್ತೆ ಹಚ್ಚುವ ಅನಿರೀಕ್ಷ ಲಹರಿಯಿಂದ ಹಿತ್ತಲ ಬಾಗಿಲಿಗೆ ಬಂದರು. ತಮ್ಮ ಹೆಂಡತಿಯು ಅಲ್ಲಿ ನಿಂತಿದ್ದಾಳೆ; ಹಿತ್ತಲ ಬಾಗಿಲು ತೆರೆಯಲ್ಪಟ್ಟಿದೆ; ತೆರೆಯಲ್ಪಟ್ಟ ಬಾಗಿಲದೊಳಗಿಂದ ಒಳಗೆ ಬಂದಿದ್ದ ಯಾವನೊಬ್ಬ ಜಟಾಧಾರಿಯಾದ ಗಡ್ಡದ ತರುಣನು ಅವಳ ಪಾದಗಳನ್ನು ಹಿಡಿಯುತ್ತಿದ್ದಾನೆ; ಅವಳು ತನ್ನ ಕೈಯನ್ನು ಆತನ ತಲೆಯ ಕಡೆಗೆ ಒಯ್ದಿದ್ದಾಳೆ! ಈ ದೃಶ್ಯವನ್ನು ಕಂಡೊಡನೆಯೇ ಅವರ ಕೈಯೊಳಗಿನ ಲಾಂದರವೂ ಕೋಲೂ ಒಮ್ಮೆಲೆ ಕಳಚಿ ನೆಲಕ್ಕೆ ಬಿದ್ದುಬಿಟ್ಟವು. "ಘಾತವೋ-ಘಾತವು! ಗುಪ್ತಪೋಲೀಸನೋ ಗುಪ್ತಪೋಲೀಸನು! ಏನೇ ಚಂಡಾಲಿನಿಲೀ? ಇವನೇ ಏನು ಆ ನಿನ್ನ........ನು? ಪೋಷ್ಟಮನ್ನನು ತಂದುಕೊಡುತ್ತಿದ್ದ ಪತ್ರಗಳು ಈತನವೇ ಅನ್ನು. ಅನ್ನು, ಈತನವೇ ಎಂದು. ಏನಂದಿ? ಇವನಲ್ಲವೆ? ಎಲಎಲಾ! ಏನು ಮಾಡಲಿ! ಓಡಿ ಹೋಗಿ ಈ ಲವಡಿಯ ಗೋಣು ಮುರಿಯಲೋ? ಆ ನೀಚನ ಕುತ್ತಿಗೆ ಹಿಚುಕಲೊ?" ಹೀಗೆಂದು ಗಟ್ಟಿಗಟ್ಟಿಯಾಗಿ ಒದರಹತ್ತಿದರು; ಮತ್ತು ಅದರಂತೆ ನಿಜವಾಗಿಯೂ ಓಡಿಹೋಗುವಷ್ಟರಲ್ಲಿ, ಮಿದುಳಿಗೆ ಭಯಂಕರವಾದ ಆಘಾತವಾದಂತಾಗಿ ಒಮ್ಮೆಲೆ ಬವಳಿ ಬಂದು ಎಚ್ಚರದಪ್ಪಿ ನೆಲಕ್ಕೆ ಬಿದ್ದು ಬಿಟ್ಟರು!

ಆ ಗೊಂದಲವನ್ನು ಕೇಳಿ ವಿಮಲೆಯು ಕೋಣೆಯಿಂದ ಓಡುತ್ತ ಹೊರಗೆ ಬಂದಳು; ಮತ್ತು ತಂದೆಯ ಕೈಯಿಂದ ಬೊಕ್ಕಬೋರಲಾಗಿ ಬಿದ್ದಿದ್ದ ಲಾಂದರವನ್ನು ಎತ್ತಿಟ್ಟು, ಅವರ ಬಳಿಗೆ ಹೋಗಿ ಕುಳಿತು, ಅವರ ಗೋಣಿನ ಕೆಳಗೆ ಕೈಯಿಟ್ಟಳು. ಪ್ರಭಾಕರನು ಎದ್ದು ನಿಂತನು; ಆದರೆ ಆತನು ಭಾವೂಸಾಹೇಬರಿಂದ ಬೇಕಂತಲೇ ತುಸ ದೂರ ಸರಿದು ನಿಂತನು. ಮಾಯಿಊಸಾಹೇಬರಿಗೆ ತೀರ ಬವಳಿ ಬರದಿದ್ದರೂ ಯಾವದೊಂದು ಚಿತ್ರದೊಳಗಿನ ಗೊಂಬೆಯಂತೆ ಅವರು ನಿಂತಲ್ಲಿಯೇ ಅಚಲರಾಗಿ ನಿಂತುಬಿಟ್ಟರು! ಇಷ್ಟರಿಂದಲೇ ಆ ಪ್ರಸಂಗವು ನೀಗಲಿಲ್ಲ; ಮತ್ತು ದೈವಗತಿಯಿಂದಾಗುವದೆಲ್ಲ ಹೀಗೆಯೇ ಆಗುತ್ತದೆ! ಯಾಕಂದರೆ, ಕೇವಲ ಅದೇ ವೇಳೆಗೆ ಸರಿಯಾಗಿ ಹಿಂದಿನ ಓಣಿಯಲ್ಲಿ ನಡೆದಿದ್ದ ತಲೆಗೆ ಮುಂಡಾಸ ಸುತ್ತಿದಂಥ ಒಬ್ಬ ಗಡ್ಡದ ಗೃಹಸ್ಥನು ಈ ಗೊಂದಲವನ್ನು ಕೇಳಿ ಇವರ ಆ ಹಿತ್ತಲು ಬಾಗಿಲಿಗೆ ಬಂದನು. ಆ ಬಾಗಿಲು ತೆರೆದೇ ಇತ್ತು. ತನ್ನ ಒಂದು ಕಾಲು ಬಾಗಿಲ ಒಳಗೆ, ಒಂದು ಕಾಲು ಬಾಗಿಲ ಹೊರಗೆ ಹೀಗೆ ನಿಂತುಕೊಂಡು, ಆತನು ತನ್ನ ಗುಪ್ತ ಲಾಂದರವನ್ನು ಅಂದರೆ ಬ್ಯಾಟರಿಯನ್ನು ಹೊರಹೊರಡಿಸಿ, ಅದರ ಬೆಳಕು ಕೆಡವಿದನು. ಒಳಗಿದ್ದ ನಾಲ್ಕೂ ಜನರ ನಾಲ್ಕು ಬಗೆಯ ಆ ಸ್ಥಿತಿಯನ್ನು ಕಂಡು ಆತನೂ ಸ್ತಬ್ಧನೂ ತಟಸ್ಥನೂ ಆಗಿದ್ದರೆ ಆಶ್ಚರ್ಯವೇನು?

ಇಂಥ ಸ್ಥಿತಿಯಲ್ಲಿ ಕ್ಷಣಕಾಲವೇ ಕಳೆಯಲು, ವಿಮಲೆಯೇ ಎಲ್ಲರ

ಗಿಂತಲೂ ಮೊದಲು ದೇಹಭಾನ ತಾಳಿ ಮುಂದುವರಿದಳು. ಪ್ರಭಾಕರನಾರೆಂ ಬದು ಅವಳಿಗೆ ಅನುಮಾನದಿಂದ ಆಗಲೆ ಗೊತ್ತಾಯಿತು. ಅದರಿಂದ ಬಾಗಿಲಲ್ಲಿ ನಿಂತುಕೊಂಡಿರುವವನೇ ಅಲ್ಲಿ ಎಲ್ಲ ಬಗೆಯಿಂದಲೂ ಪರಕೀಯನಾಗಿದ್ದನು. ಉಳಿದವರು ಯಾವ ಸ್ಥಿತಿಯಲ್ಲಿದ್ದರೂ ಅವರೆಲ್ಲರೂ ಮನೆಯವರೇ ಆಗಿದ್ದರು. ಅಂತೆಯೇ ಪರಕೀಯ ಗೃಹಸ್ಥನನ್ನು ಎಲ್ಲಕ್ಕೂ ಮೊದಲು ಹೊರಗೆ ಹಾಕಿ, ಬಾಗಿಲವಿಕ್ಕಿ ಚಿಲಕ ಹಾಕಿಕೊಂಡರೆ, ಆ ಮೇಲೆ ಒಳಗಿನ ವ್ಯವಸ್ಥೆಯನ್ನು ಬೇಕಾದ ಹಾಗೆ ಸಾವಕಾಶವಾಗಿ ಮಾಡಿಕೊಳ್ಳಬಹುದೆಂಬ ಮುತ್ಸದ್ದಿತನದಿಂದ ಅವಳು ಬಾಗಿಲ ಕಡೆಗೆ ಹೋದಳು; ಹಾಗು ಬಾಗಿಲ್ಲಲ್ಲಿ ನಿಂತಿದ್ದ ಗೃಹಸ್ಥನನ್ನು ಬಹು ಮಟ್ಟಿಗೆ ಬೆದರಿಸಿದಂತೆ ಮಾಡಿ, ಅವಳು:''ನೀವು ಯಾರಿದ್ದೀರಿ? ಸ್ಪಷ್ಟವಾಗಿ ಹೇಳಿರಿ. ಈ ಮನೆಯ ಹಿತ್ತಲ ಬಾಗಿಲದಿಂದ ಇಂಥ ಅವೇಳೆಯಲ್ಲಿ ನಮ್ಮ ಮನೆಯೊಳಗೆ ಬರಲಿಕ್ಕೆ ನಿಮಗೇನು ಅಧಿಕಾರವಿದೆ? ಬೇಗನೆ ಹೊರಗೆ ಹೋಗಿರಿ ನೋಡೋಣ. ನಾನು ಬಾಗಲಿಕ್ಕೆ ಚಿಲಕ ಹಾಕಬೇಕಾಗಿದೆ'' ಎಂದು ನುಡಿದಳು.

ಈ ಶಬ್ದಗಳನ್ನು ಕೇಳಿ ಬಾಗಿಲೊಳಗಿನ ಗೃಹಸ್ಥನು ಚಕಿತನಾಗಿ ಬಿಟ್ಟನು! ಆತನ ದೃಷ್ಟಿಯು ಅವಳ ಮುಖಮಂಡಲದಲ್ಲೊಮ್ಮೆ ನೆಟ್ಟದ್ದು ಹೊರಹೊರಡ ಲೊಲ್ಲದಾಯಿತು; ಆದರೂ ತೊದಲುತ್ತ ತೊದಲುತ್ತ ಆತನು:—''ನಾನು ಪಟ್ಟ ಣದ ಗಸ್ತಿಮಾಡುವ ಒಬ್ಬ ಅಧಿಕಾರಿಯಾಗಿರುತ್ತೇನೆ. ಪಟ್ಟಣದಲ್ಲಿ ಗಸ್ತಿತಿರುಗ ಲಿಕ್ಕೆ ಹೊರಟು ಈ ನಿಮ್ಮ ಮನೆಯ ಹತ್ತರ ಬಂದೆನು. ಇಲ್ಲಿ ಈ ಬಾಗಿಲು ತೆರೆ ದಿದ್ದ ಮೂಲಕ, ಓಣಿಯೊಳಗಿಂದಲೇ ಇಲ್ಲಿ ಏನಾದರೊಂದು ಚಮತ್ಕಾರದ ಪ್ರಕಾರವು ಕಂಡಿತು; ಮತ್ತು ಕೇಳಿಸಿತು. ಅದಕ್ಕಾಗಿಯೇ ನಾನು ಮುಂದೆ ಬಂದೆನು. ಇಲ್ಲಿ ನಿಜವಾಗಿಯೂ ಅದರಂತೆ ಏನೋ ಆಕಸ್ಮಿಕ ಚಮತ್ಕಾರವು ನಡೆದಂತೆ ತೋರುತ್ತದೆ. ಈ ಬಾವಾನವರಾರು? ಮತ್ತು ಈ ಮುದುಕರಿಗೆ ಬವಳಿ ಬಂದಂತೆ ಕಾಣುತ್ತದಲ್ಲ! ಅದರಿಂದ ನಿಮಗೇನಾದರೂ ಸಹಾಯದ ಅವಶ್ಯ ಕತೆಯಿದ್ದರೆ ಅದನ್ನು ನಾನು ಆನಂದದಿಂದ ಮಾಡುವೆನು'' ಎಂದು ನುಡಿದನು.

ಈ ನುಡಿಗಳನ್ನು ಕೇಳಿ ವಿಮಲೆಯು ಮೊದಲಿನ ಸಿಟ್ಟಿನ ಮತ್ತು ಬೆದರಿ ಕೆಯ ದನಿಯನ್ನು ಬದಲಿಸಿದಳು; ಹಾಗು ಕೊಂಚ ದುಃಖಿತ ದನಿಯಿಂದ ಅವಳು: ''ಹಾಗಾದರೇನು ತಾವು ಗಸ್ತಿ ತಿರುಗುವ ಅಧಿಕಾರಿಗಳೇ ಆಗಿರುವಿರಿ. ತಮಗೆ ತಮ್ಮ ಕರ್ತವ್ಯವನ್ನು ಮಾಡಲೇಬೇಕು; ಆದರೆ ನಾನು ತಮಗೆ ಕಟ್ಟು-ನಿಟ್ಟಾಗಿ ತಿಳಿಸುವದೇನಂದರೆ, ಇಲ್ಲಿಯ ಪ್ರಕಾರದಲ್ಲಿ ಸರಕಾರೀ ಗಸ್ತಿಯ ಅಧಿಕಾರಿಯು ಲಕ್ಷ್ಯಗೊಡತಕ್ಕಂಥ ಯಾವ ಸಂಗತಿಯೂ ಇರುವದಿಲ್ಲ. ಈ ಬಾವಾನ ಸಹಿತ ವಾಗಿ ನಾವೆಲ್ಲರೂ ಇದೇ ಮನೆಯ ಜನರಿರುತ್ತೇವೆ. ಇವರಲ್ಲಿ ಪರಕೀಯ

ರಾರೂ ಇರುವದಿಲ್ಲ. ನಮ್ಮ ಅಪ್ಪನಿಗೆ ಏವಳಿ ಬಂದಿರುವದೇನೋ ನಿಜವು; ನಾವೇ ಅವರನ್ನು ಒಳಗೆ ಕರೆದೊಯ್ಯುತ್ತಿರುವೆವು; ಹಾಗು ಎಲ್ಲ ವ್ಯವಸ್ಥೆಯ ನ್ನೂ ಮಾಡುತ್ತಿರುವೆವು. ತಾವು ಹೊರಗೆ ಹೋಗುವದೊಂದೇ ತಡ, ನಾವು ಬಾಗಿಲವನ್ನಿಕ್ಕಿ ಭದ್ರಪಡಿಸಿಕೊಂಡು ಮುಂದಿನ ಕೆಲಸಕ್ಕೆ ತೊಡಗುವೆವು. ತಾವು ಸಹಾಯ ಮಾಡುತ್ತೇವೆನ್ನುವದು ತಮ್ಮ ದೊಡ್ಡಿಸ್ತಿಕೆಯೇ ಆಗಿದೆ. ನಾವಾದ ರೂ ಆ ಬಗ್ಗೆ ತಮಗೆ ತುಂಬಾ ಆಭಾರಿಯಾಗಿರುತ್ತೇವೆ; ಆದರೆ ತಾವು ಆ ತೊಂ ದರೆ ವಹಿಸುವ ಕಾರಣವೇ ಇಲ್ಲ; ಮತ್ತು ನಾನಿದನ್ನೆಲ್ಲ ಸ್ವಸಂತೋಷದಿಂದಲೇ ತಮಗೆ ಹೇಳುತ್ತೇನೆಂದು ತಿಳಿಯಿರಿ.''

ಈ ಎಲ್ಲ ವಿವರಣವನ್ನು ಕೇಳಿ ಬಾಗಿಲೊಳಗಿನ ಗೃಹಸ್ಥನು ಬಾಗಿಲೊಳ ಗಿದ್ದ ತನ್ನ ಕಾಲನ್ನು ತಟ್ಟನೆ ಹೊರಗೆ ತಕ್ಕೊಂಡನು. ಗುಪ್ತ ಲಾಂದರದ ಮುಖ ವನ್ನು ಓಣಿಯ ಕಡೆಗೆ ತಿರುವಿಕೊಂಡನು; ಮತ್ತು ಬಾಗಿಲವನ್ನಿಕ್ಕಲು ಬರು ತ್ತಿದ್ದ ವಿಮಲೆಯ ಮುಖದ ಕಡೆಗೆ ಟಕಮಕವೆಂದು ನೋಡುತ್ತ ಹೊರಬಿದ್ದು, ತಾನೇ ತನ್ನ ಕೈಯಿಂದ ಆ ಕದವನ್ನು ಜಗ್ಗಿಕೊಂಡನು. ಕೂಡಲೆ ವಿಮಲೆಯು ತಟ್ಟನೆ ಚಿಲಕ-ಕೀಲಿಗಳನ್ನು ಹಾಕಿ ಕೀಲೀಕೈಯ ದಾರವನ್ನು ಟೊಂಕಕ್ಕೆ ಸಿಗಿಸಿ ಕೊಂಡಳು. ಆ ಮೇಲೆ ಮತ್ತೆ ಆ ಮೂವರೂ ಭಾವೂಸಾಹೇಬರ ಹತ್ತಿರ ಹೋಗಿ ಕುಳಿತರು. ಭಾವೂಸಾಹೇಬರು ನಿಡಿಚಾಪಾಗಿ ಬಿದ್ದಿದ್ದರೂ ಅವರ ಮೈಗೆ ಎಲ್ಲಿಯೂ ಹತ್ತಿರಲಿಲ್ಲ. ವಿಮಲೆಯು ಅವರ ಮೈ ಮೇಲೆ ಕೈಯಾಡಿಸಿದ ನಂತರ ಅವರ ಕಿವಿಗೆ ಮೋರೆ ಹಚ್ಚಿ:—''ಅಪ್ಪಾ, ಅಪ್ಪಾ, ಎಚ್ಚರಾಗಿರಿ. ಇಲ್ಲಿ ಗುಪ್ತ ಪೋಲೀಸರಿಲ್ಲ; ಮತ್ತು ಪರಕೀಯರೂ ಯಾರೂ ಇಲ್ಲ. ನಾವೆಲ್ಲರೂ ಮನೆಯ ಮುಂದಿಯೇ ಆಗಿದ್ದೇವೆ. ಎದ್ದು ಮನೆಯೊಳಗೆ ತೆರಳುವಿರಷ್ಟೇ?'' ಹೀಗೆಂದು ಒಮ್ಮೆ ಮೆಲ್ಲನೆ, ಮತ್ತೊಮ್ಮೆ ಅದಕ್ಕೂ ತುಸ ಗಟ್ಟಿಯಾಗಿ ಹೇಳಿದಳು; ಆದರೆ ಭಾವೂಸಾಹೇಬರಿಗೆ ನಿಜವಾಗಿಯೂ ಗಾಢವಾದ ಮೂರ್ಛೆ ಬಂದಿದೆಯೆಂಬದನ್ನು ತಿಳಿದು, ಮಾಯಿಸಾಹೇಬರು:--''ನಾವೆಲ್ಲರೂ ಇನ್ನು ಒಳಗೆ ಹೋಗಬೇಕೆಂದು ನನಗನಿಸುವದು'' ಎನ್ನಲು, ಕೂಡಲೆ ಪ್ರಭಾಕರನು ಮುಂದರಿದು ಬಂದು, ಭಾವೂಸಾಹೇಬರನ್ನು ಒಮ್ಮೆಲೆ ಎತ್ತಿ ತನ್ನ ಹೆಗಲ ಮೇಲೆ ಹಾಕಿಕೊಂಡನು. ಮಾಯಿಸಾಹೇಬರು ಬಂದು, ವಿಮಲೆಯು ಮತ್ತೊಂದು ಹೀಗೆ ಅವರು ಆ ಎರಡೂ ಲಾಂದರಗಳನ್ನು ತಕ್ಕೊಂಡು, ಅವುಗಳ ಬತ್ತಿಗಳನ್ನು ತುಸ ಏರಿಸಿದರು. ಬಳಿಕ ಅವರೆಲ್ಲರೂ ನಡುಮನೆಗೆ ಹೊಂದಿದ್ದ ಬೇನೆಯವರ ಕೋಣೆಗೆ ತೆರಳಿದರು. ಆ ಕೋಣೆಯಲ್ಲೊಂದು ಪಲ್ಲಂಗ ನೊಳ್ಳೆಯ ಪರದೆಗಳು ಅಭ್ಯಾಗತ ಸ್ತ್ರೀಯರಿಗೆ ಯಾವಾಗಲೂ ಸಜ್ಜುಗೊಳಿಸಲ್ಪಟ್ಟಿರುತ್ತಿದ್ದವು. ಮಾಯಿಸಾಹೇಬರು ಅವಸರ

ದಿಂದ ಆ ಹಾಸಿಗೆಯುನ್ನು ಕೊಡವಿ, ಗಂಜಿಯ ಹೊಸ ಚಾದರವನ್ನು ಹಾಸಿದರು. ಬಳಿಕ ಪ್ರಭಾಕರನು ಭಾವೂಸಾಹೇಬರನ್ನು ಆ ಹಾಸಿಗೆಯ ಮೇಲೆ ಮಲಗಿಸಿದನು. ವಿಮಲೆಯು ಪನ್ನೀರಿನ ಸೀಸೆ ತಂದು ಅದರಲ್ಲಿ ಅರಿವೆಯನ್ನು ತೊಯ್ಯಿಸಿ, ಅದನ್ನು ಅವರ ತಲೆಯ ಮೇಲಿರಿಸಿದಳು; ಮತ್ತು ತಾನು ಅವರ ಪಕ್ಕದಲ್ಲಿಯೇ ಪಲ್ಲಂಗದ ಮೇಲೆ ಕುಳಿತುಕೊಂಡಳು. ಬೇರೆಯವರಿಬ್ಬರೂ ಸಮೀಪದ ಎರಡು ಖುರ್ಚಿಗಳನ್ನೆಳೆದುಕೊಂಡು ಅವುಗಳ ಮೇಲೆ ಕುಳಿತರು. ಆಗ ಆ ಮೂವರ ಬಾಯಿಂದಲೂ ಒಮ್ಮೆಲೆ "ಎಂಥ ಕಠಿಣ ಪ್ರಸಂಗವಿದು!" ಎಂಬ ಶಬ್ದಗಳು ಹೊರಬಿದ್ದವು.

† † † † †

ಮರುದಿನ ಮನೋಹರ ಪಂತನು ತನ್ನ ರಾಜಮಿತ್ರನ ಭೆಟ್ಟಿಗೆ ಎಂದಿನಂತೆ ಹೋದನು; ಆದರೆ ದಿನದಂತೆ ಮಹಾರಾಜರಿಂದ ಆತನ ಸ್ವಾಗತವು ಆಗಲಿಲ್ಲ. ಮಹಾರಾಜರು ದಿವಾಣಖಾನೆಯ ಕಿಟಕಿಯ ಹತ್ತರ ತಮ್ಮ ಖುರ್ಚಿಯನ್ನೆಳೆದು ಅದರ ಮೇಲೆ ಕುಳಿತುಕೊಂಡು, ಕಿಟಕಿಯೊಳಗಿಂದ ಹೊರಗಿನ ದೂರದ ವರೆಗಿನ ದೃಶ್ಯವನ್ನು ನೋಡುತ್ತಿದ್ದರು.

ಹೊರಗಿನ ದೃಶ್ಯವು ನೋಡತಕ್ಕಂತಹದಿತ್ತೆಂಬದರಲ್ಲಿ ಸಂದೇಹವಿರಲಿಲ್ಲ. ಊರ ಸುತ್ತಲೂ ಎತ್ತರವಾದ ಗುಡ್ಡಗಳ ಬಿಲ್ಲಿನಾಕಾರದ ಸಾಲು ಇದ್ದು, ಮಳೆಯ ಸಮೃದ್ಧಿಯ ಮೂಲಕ ಅವುಗಳ ಮೇಲೆ ಹಚ್ಚನ್ನ ಹುಲ್ಲು ಹುಟ್ಟಿತ್ತು. ಅದರಿಂದ ಮಖಮಲದ ಅರಿವೆಯಿಂದ ಆ ಗುಡ್ಡಗಳನ್ನು ಮುಚ್ಚಿಬಿಟ್ಟಿರುವರೋ ಏನೋ ಎಂಬಂತೆ ತೋರುತ್ತಿತ್ತು. ಅವುಗಳ ಮೇಲಿಂದ ಹರಿಯುವ ನೀರಿನ ಶುಭ್ರ ಪ್ರವಾಹಗಳು ಚಂಚಲವಾಗಿ ಹೊಳೆಯುತ್ತಿದ್ದರೂ, ಅಷ್ಟು ದೂರದಿಂದ ಅವುಗಳೊಳಗಿನ ನೀರಿನ ಚಲನವಲನವು ಹೇಗೆ ಕಾಣಿಸಬೇಕು? ಅದರಿಂದ ಆನೆಯ ಬೆನ್ನ ಮೇಲಿಂದ ಇಳಿಬಿಟ್ಟಿದ್ದ ಬೆಳ್ಳಿಯ ಸರಪಳಿಗಳಂತೆ ಅವು ನಿಶ್ಚಲವಾಗಿ ತೋರುತ್ತಿದ್ದವು. ಆ ಪರ್ವತಶ್ರೇಣಿಗಳೀಚೆಗೆ ನೋಡಿದತ್ತೆಲ್ಲ ಭತ್ತದ ಹಚ್ಚನ್ನ ಗದ್ದೆಗಳೇ ಗದ್ದೆಗಳು! ಅವುಗಳ ಈಚೆಗೊಂದು ಸುಂದರವೂ ಸ್ವಚ್ಛವೂ ಆದ ಚಿಕ್ಕ ನದಿಯು ಅಡ್ಡತಿಡ್ಡಾಗಿ ಊರನ್ನು ಸುತ್ತಿಕೊಂಡು ಹರಿಯುತ್ತಿತ್ತು; ಮತ್ತು ಊರೊಳಗಿನ ಹುಡುಗರು ಸ್ವಚ್ಛಂದದಿಂದ ಅದರಲ್ಲಿ ಈಸುತ್ತಿದ್ದರು. ಅದರೀಚೆಗೆ ಅರಮನೆಯ ಹೂದೋಟದ ಸಂರಕ್ಷಣಕ್ಕೆಂದು ಅದರ ಸುತ್ತಲೂ ಹಚ್ಚಿದ್ದ ಬಿದರ ಮೆಳೆಗಳೂ, ಅದರ ಬದಿಯಲ್ಲಿ ತಮ್ಮಷ್ಟಕ್ಕೆ ತಾವೇ ಹುಟ್ಟಿದ್ದ ಅತ್ತಿ-ಆಲದ ಮರಗಳೂ ಉದ್ದುದ್ದಾಗಿ ಬೆಳೆದು, ಸಮೀಪದ ಗುಡ್ಡಗಳೊಡನೆ ನಿಲುವಿಕೆಯ ಬಗ್ಗೆ ಸ್ಪರ್ಧೆಮಾಡುತ್ತಿರುವಂತೆ ತೋರುತ್ತಿದ್ದವು. ಆ ಗಿಡಗಳೊಳಗಿಂದ ಪಕ್ಷಿಗಳ ಎಡತಾಕುವಿಕೆಯೂ ಕಿಲಿಬಿಲಿಯೂ ಏಕೋಪ್ರಕಾರವಾಗಿ ನಡೆದಿತ್ತು;

ಮತ್ತು ಯಾವುದೊಂದು ಸುಂದರ ಬಣ್ಣದ ಪಕ್ಷಿಯು ಅರಮನೆಯ ಮೇಲೆ ತೀರ ಮಹಾರಾಜರ ಎದುರಿನಲ್ಲಿ ಬಂದು ಕುಳಿತು ತನ್ನ ದಿಟ್ಟತನವನ್ನು ಪ್ರಕಟಗೊಳಿಸುತ್ತಿತ್ತು. ಆ ಕಿಟಕಿಯೊಳಗಿಂದ ಬರುವ ಗಾಳಿಯು ತಂಪಾಗಿದ್ದು, ಕೆಳಗೆ ಹೂದೋಟದಲ್ಲಿ ಥಯಗುಟ್ಟಿ ಹಾರುತ್ತಿರುವ ಕಾರಂಜಿಯೊಳಗಿನ ಒಂದಾನೊಂದು ತುಷಾರವು ಪ್ರವಹಿಸುವ ಆ ಗಾಳಿಯೊಡನೆ ಬಂದು ಮಹಾರಾಜರ ಮೈಮೇಲೆ ಬೀಳುತ್ತಿತ್ತು.

ಆದರೆ ಮಹಾರಾಜರು ಕೇವಲ ಈ ಎಲ್ಲ ಬಹಿರಂಗದ ದೃಶ್ಯವನ್ನೇ ನೋಡುವಲ್ಲಿ ಗಕ್ಕಾಗಿ ಬಿಟ್ಟಿದುದರಿಂದ, ಮನೋಹರಪಂತನು ತೀರ ಹತ್ತಿರದಲ್ಲಿ ಬಂದು "ಮಹಾರಾಜರೇ, ಮತ್ತೇನು?" ಎಂದು ಕೇಳಿದರೂ ಕೂಡ ಅವರ ದೃಷ್ಟಿಯು ಹೊರಳಲಿಲ್ಲ! ಆದರಿಂದ ಇಂದು ಅವರ ಮನಸ್ಸೇ ಸ್ಥಿರವಿರದೆ, ಅದು ವ್ಯಗ್ರವಾಗಿರುವದೆಂದು ಅವರ ಮಿತ್ರನು ತರ್ಕಿಸಿದನು; ಮತ್ತು ಆತನ ಆ ತರ್ಕವೂ ನಿಜವಿತ್ತು. ಆದರಿಂದ ಮನೋಹರನು ಆಗ ಮಿತ್ರತ್ವದ ಅಧಿಕಾರವನ್ನು ಸಂಪೂರ್ಣವಾಗಿ ಉಪಯೋಗಿಸಿ, ಜೋಜಿಗಮಹಾರಾಜನ ಹೆಗಲಮೇಲೆ ತನ್ನ ಕೈಯಿಟ್ಟನು; ಮತ್ತು ಸಣ್ಣ ಹುಡುಗರ ಲಕ್ಷ್ಯವನ್ನು ವೇಧಿಸುವ ಸಲುವಾಗಿ ಅವರ ಕಿವಿಯಲ್ಲಿ 'ಕುಟ್ಟಿಟ್ಟಿ ಕುರ್ರ್ರ' ಎಂದು ಒದರುವಂತೆ ಒದರಿದನು. ಆಗ ಜೋಜಿಗರಾಯನು ದೇಹಭಾನಕ್ಕೆ ಒಂದನು; ಬಳಿಕ ಅವರೀರ್ವರಲ್ಲಿ ಸಂಭಾಷಣಕ್ಕೆ ಪ್ರಾರಂಭವಾಯಿತು:

ಮ:—ಏಕೆ, ಇಂದು ಮಹಾರಾಜರ ಲಕ್ಷ್ಯವೆತ್ತ ಕಡೆಗಿದೆ? ಮನಸ್ಸೆಲ್ಲಿದೆ?

ಜೋ:—ಎಲ್ಲಿರಬೇಕೋ ಅಲ್ಲಿಯೇ ಇದೆ; ಆದರೆ ಮನಸ್ಸಿನ ನಿವಾಸಸ್ಥಳವು ಕೇವಲ ಶಾಸ್ತ್ರಜ್ಞರಿಗೆ ಮಾತ್ರ ಗೊತ್ತು. ಕೆಲವರು ಅದು ಮಿದುಳಿನಲ್ಲಿ ಕೆಲವರು ಹೃದಯದಲ್ಲಿ ಮತ್ತೆ ಕೆಲವರು ಬೆನ್ನೆಲುವಿನಲ್ಲಿರುತ್ತದೆಂದು ಅನ್ನುತ್ತಾರೆ.

ಮ:—ಆದರೆ ಮನಸ್ಸಿನ ನಿವಾಸಸ್ಥಳವೆಲ್ಲಿದ್ದರೂ ಗೂಡು ಬಿಟ್ಟು ಪಕ್ಷಿಯು ಹೊರಗೆ ಹಾರಾಡಲಿಕ್ಕೆ ಹೋದಾಗ ಆ ಗೂಡು ತೆರವೇ ಇರುವದಲ್ಲವೆ? ಅದರಂತೆಯೇ ನಾನೀಗ ಬಂದಾಗ ಮಹಾರಾಜರ ಮನೋರೂಪ ಪಕ್ಷಿಯ ಸ್ಥಿತಿಯಾಗಿತ್ತೆಂಬದು ಖಂಡಿತವು.

ಜೋ:—ನಿಜವೇ ಇದೆ. ಹಕ್ಕಿಗಳ ತತ್ತಿ ಮತ್ತು ಎಳೇ ಮರಿಗಳನ್ನು ಕಡಿಯಲಿಕ್ಕೆ ಬರುವ ಹಾವುಗಳಾಗಲಿ ಲಫಂಗ ಹುಡುಗರಾಗಲಿ ಪಕ್ಷಿಯು ಗೂಡಿನಲ್ಲಿರದ್ದನ್ನು ಕಂಡೇ ಸದ್ದಾಗದಂತೆ ಅಡ್ಡಾಡುತ್ತಿರುತ್ತವೆ.

ಮ:—ನಾನು ಬಂದಾಗ ಗೂಡಿನಲ್ಲಿ ಮರಿಗಳು ಕಾಣುತ್ತಿರಲಿಲ್ಲ; ಅಂತೆಯೇ ಅವುಗಳನ್ನು ನನ್ನಿಂದ ಕಳವು ಮಾಡಲಾಗಲಿಲ್ಲ; ಆದರೆ ಈಗ ಮರಿ

ಗಳ ಚಿಲಿಬಿಲಾಟವು ನಡೆದಿರುವಂತೆ ಕೇಳುತ್ತದೆ; ಮತ್ತು ಪಕ್ಷಿಯೂ ಗೂಡಿನಲ್ಲಿ ಬಂದು ಕುಳಿತಿದೆ. ಅಂದಬಳಿಕ ಆ ಮರಿಗಳು ನನ್ನ ಕೈಗೆ ಹೇಗೆ ಸಿಗಬೇಕು?

ಜೋ:— ಪಕ್ಷಿಯು ಗೂಡಿನಲ್ಲಿ ಬಂದು ಕುಳಿತಿತೆಂದು ಕೈಯಲ್ಲಾಡಿಸುತ್ತ ತಿರುಗಿ ಹೋಗುವಂತಹ ಪರಾಕ್ರಮರಹಿತವಾದ ಕಿಡಿಗೇಡಿ ಹುಡುಗರು ಜಗತ್ತಿನಲ್ಲಿಯೇ ಇರುವದಿಲ್ಲ! ಪಕ್ಷಿಸಹಿತವಾಗಿ ಆ ಮರಿಗಳನ್ನೋಡಿಸಿಕೊಂಡೊಯ್ಯುವ ಈರ್ಷೆಯನ್ನೇ ಅವು ತಾಳುತ್ತವೆ; ಅಲ್ಲದೆ, ಈ ನನ್ನ ದೇಹದೊಳಗಿನ ಪಕ್ಷಿಯಂತೂ ಮರಿಗಳ ಸಹಿತವಾಗಿ ಸ್ವಾಧೀನವಾಗುವ ಇಚ್ಛೆಯಿಂದ ಯಾವನೊಬ್ಬ ಕಿಡಿಗೇಡಿ ಹುಡುಗನು ಯಾವಾಗ ಬಂದಾನೆಂದು ದಾರಿಯನ್ನೇ ನೋಡುತ್ತ ಕುಳಿತಿತ್ತು.

ಮ:—ಎಲಎಲ! ಎಂದೂ ಇಲ್ಲದ ತೊಂದರೆಗಿಂದು ಈ ಪಕ್ಷಿಯು ಈಡಾದಂತೆ ತೋರುತ್ತದೆ! ಹೀಗಿಲ್ಲದಿದ್ದರೆ ಮರಿಗಳ ಹಾಗು ತನ್ನ ಜೀವದ ಮೇಲೆ ಇದು ಇಷ್ಟು ಉದಾಸವಾಗುತ್ತಿರಲಿಲ್ಲ. ಈ ಪಕ್ಷಿಗೆ ಯಾವನೊಬ್ಬ ಬೇಟೆಗಾರನ ಕವಣೆಯೊಳಗಿನ ಕಲ್ಲು ಮರ್ಮಸ್ಥಳಕ್ಕೆ ಬಡಿದಿದೆಯೋ ಏನೋ?

ಜೋ:— ಹಾಗೆಂದರೂ ಸಲ್ಲಬಹುದು; ಆದರೆ ಚೇಷ್ಟೆಯನ್ನು ಸಾಕು ಮಾಡು. ಮನೋಹರ, ನಾನು ನಿನ್ನ ಮಾರ್ಗವನ್ನೇ ನಿರೀಕ್ಷಿಸುತ್ತಿದ್ದೆನು. ಮುಂಜಾನೆಯಿಂದ ನಿನಗೆ ಕೆಲ ಸಂಗತಿ ತಿಳಿಸುವದನ್ನು ಯೋಚಿಸಿದ್ದೇನೆ.

ಮ:—ಅದೇನಪ್ಪಾ?

ಜೋ:—ನಿನ್ನೆ ರಾತ್ರಿಯಲ್ಲಿ ಗಸ್ತಿಗೆ ಹೋದಾಗ ನಾನು ಏನು ನೋಡಿದೆನೋ ಆ ಬಗ್ಗೆ!

ಮ:—ಆದರೆ ಅಲ್ಲಿ ಏನು ನೋಡಿರುವಿರೋ ಅದರಿಂದಲೇ ಇಂದು ನಿಮ್ಮ ಮನಸ್ಸು ಹೀಗೆ ಉದ್ವಿಗ್ನವಾಗಿದ್ದರೆ, ನಿಮ್ಮ ಮೊದಲನೇ ಗಸ್ತಿಯೇ ನಿಮಗೆ ಒಡಕೊಂಡಿತೆನ್ನಬೇಕಾಯಿತು! ಅದಿರಲಿ. ಅದೇನಿರುವದೆಂಬದನ್ನು ಹೇಳಿರಿ ಚೆನ್ನಾಗಿ.

ಜೋ:— ಗಸ್ತಿಯು ಬಡಕೊಂಡಿತೆಂದೇಕೆ ಅನ್ನುವೆ?

ಮ:— ಯಾಕೆಂದರೆ, ಅದು ಎಂದಿಲ್ಲದ ಚಿಂತೆಯಲ್ಲಿ ನಿಮ್ಮನ್ನು ನೂಕಿಬಿಟ್ಟಿತೆಂದು. ಪ್ರಜೆಗಳ ದುಃಖ ತಿಳಿಯುವ ಸಲುವಾಗಿ ನೀವು ಗಸ್ತಿಗೆ ಹೋದಿರಿ; ಮತ್ತು ಮೊದಲನೇ ದಿನದ ಗಸ್ತಿಯಲ್ಲೇ ಕಂಡ ದುಃಖದಿಂದ ಸ್ವತಃ ಚಿಂತಾಸಮುದ್ರದಲ್ಲಿ ಮುಳುಗಿದಿರಿ. ಅದರಿಂದ ಇನ್ನುಳಿದ ಪ್ರಜೆಗಳ ದುಃಖದ ಚೌಕಶಿಯನ್ನು ನೀವು ಅದೆಂತು ಮಾಡುವಿರಿ?

ಜೋ:— ಮನೋಹರ, ಚೇಷ್ಟೆಯನ್ನೇ ಮಾಡುವೆ. ನಾನು ನೋಡಿ

ದ್ದನ್ನು ನೀನೂ ನಿನ್ನ ಕಣ್ಣುಗಳಿಂದ ನೋಡಿದ್ದರೆ, ನಿನಗಾದರೂ ನನ್ನಂತೆಯೇ ಹಳಹಳಿಯೆನಿಸದಿರುತ್ತಿದ್ದಿಲ್ಲವೆಂದು ನನ್ನ ಖಾತ್ರಿಯಿದೆ.

ಮ:—ಆದರೆ ನೀವು ನೋಡಿದ್ದಾದರೂ ಏನು? ಅದನ್ನು ತಿಳಿಸುವಿರೋ ಇಲ್ಲವೊ?

ಜೋ:—ಕೇಳು ಹಾಗಾದರೆ. ನಿನ್ನೆ ರಾತ್ರಿ ಹನ್ನೆರಡು ಹೊಡೆದ ಕೂಡಲೆ ರಾಜಬೀದಿಯೊಳಗಿನ ಮೋತೀಚೌಕನ್ನು ಬಿಟ್ಟು, ಬಲಗಡೆಯ ಚಿಕ್ಕ ಓಣಿಯೊಳಗಿಂದ ನಾನು ಸಾಗಿದೆನು.

ಮ:—ನೀವು ದೊಡ್ಡ ದಾರಿ ಬಿಟ್ಟು ಚಿಕ್ಕ ಓಣಿಗೆ ಹೋದದ್ದೇ ಮೊದಲನೆಯ ತಪ್ಪಾಯಿತು. ರಾಜಮಹಾರಾಜರ ಗಸ್ತಿಯು ದೊಡ್ಡ ರಾಜಮಾರ್ಗದಲ್ಲಿಯೇ ತಿರುಗಬೇಕು. ಅಂದರೆ ಎಲ್ಲ ಕಡೆಗೂ ಸುಖ-ಸಮಾಧಾನ ಕಾಣುತ್ತದೆ. ದುಃಖ ಇಲ್ಲವೆ ಸಂಕಟಗಳು ದೃಷ್ಟಿಗೇ ಬೀಳುವದಿಲ್ಲ.

ಜೋ:—ಮತ್ತೆ ಕೇಳು; ನಿನ್ನ ಟೀಕೆಯು ಆ ಮೇಲಾಗಲಿ. ಆ ಓಣಿಯೊಳಗಿಂದ ಕೆಲ ದೂರ ಹೋದ ಮೇಲೆ ಒಂದು ದೊಡ್ಡ ಮನೆಯ ಹಿತ್ತಲು ಬಾಗಿಲು ಹತ್ತಿತು.

ಮ:—ಚಿಕ್ಕ ಓಣಿಗೆ ಹೊಂದಿ ದೊಡ್ಡ ಮನೆಯೇ? ಎಂಥ ಅಪ್ರಯೋಜಕತನವಿದು!

ಜೋ:—ಆ ದೊಡ್ಡ ಮನೆಗೆ ಹೊಂದಿಯೇ ಒಂದು ಸಂದಿಯು ಓಣಿಯಿದ್ದಿತು; ಮತ್ತು ಆ ಸಂದಿಯು ಮುಖಕ್ಕಿದ್ದ ಆ ದೊಡ್ಡ ಮನೆಯು ಹಿತ್ತಲ ಬಾಗಿಲು ಆ ಕಡೆಗಿದ್ದಿತ್ತು. ಅದರೊಳಗಿಂದ ಮೊದಲು ದೂರಿನಿಂದ ನೋಡಲಾಗಿ ಯಾವದೊಂದು ನಾಟಕದಲ್ಲಿ ಬೇಕಂತ ತೋರಿಸುವಂತಹ ದೃಶ್ಯವು ಕಣ್ಣಿಗೆ ಕಂಡಿತು.

ಮ:—ಒಳ್ಳೇದು. ತಾವು ಹಗಲು ಹೊರಟಾಗ ನಾಟಕದ ದೃಶ್ಯಗಳು ಕಾಣುತ್ತವೆಂದು ರಾತ್ರಿ ಹೊರಟಿರಿ. ಆಗಲೂ ತಮ್ಮೆದುರಿಗೆ ನಾಟಕದ ದೃಶ್ಯಗಳೇ ತಂದಿರಿಸಲ್ಪಟ್ಟಿದ್ದವಲ್ಲವೆ? ಒಟ್ಟಿನಲ್ಲಿ ಆ ನಾಟಕದ ದೃಶ್ಯಗಳು ನಿಮ್ಮ ಬೆನ್ನೇ ಹತ್ತಿರುವವೆನ್ನಿರಿ. ಒಳ್ಳೇದು. ಆ ದೃಶ್ಯದ ಮುಂದಿನ ವರ್ಣನವನ್ನಾದರೂ ಕೇಳೋಣ.

ಜೋ:–ಆ ಮನೆಯ ಹಿತ್ತಲ ಬಾಗಿಲನ್ನು ಒಳಗಿನಿಂದ ಯಾರೋ ತೆರೆದಿದ್ದರು. ಒಬ್ಬ ಮುದುಕ ಮನುಷ್ಯನು ಮನೆಯೊಳಗಿಂದ ಕೈಯಲ್ಲಿ ಲಾಂದರ-ಕೋಲುಗಳನ್ನು ಹಿಡಕೊಂಡು ಒಂದು ಕಡೆಯಿಂದ ಬಂದನು. ಅದೇ ಕಾಲಕ್ಕೆ ಗಡ್ಡ-ಮೀಸೆಗಳನ್ನು ಬೆಳೆಸಿದಂತಹ ಓರ್ವ ತರುಣನು ಬೇರೆ ಕಡೆಯಿಂದ ಒಳ

ಹೊಕ್ಕನು. ಅವನನ್ನು ಕಂಡು ಸಮೀಪದಲ್ಲಿಯೇ ನಿಂತುಕೊಂಡಿದ್ದ ಒಬ್ಬ ನಡು ಹರೆಯದ ಸ್ತ್ರೀಯು ಕೆಲಶಬ್ದಗಳನ್ನು ಉಚ್ಚರಿಸಿದಳು. ಆ ಗಡ್ಡದ ತರುಣನನ್ನು ಕಂಡ ಕೂಡಲೆ ಆ ಮುದುಕನು "ಕಳ್ಳನೋ ಕಳ್ಳನು! ಗುಪ್ತಪೋಲೀಸನೋ ಗುಪ್ತಪೋಲೀಸ! ಇವನೇ ಏನು ಆ ನಿನ್ನ ಪ್ರೋಷ್ಟಮನ್ನನು? ತಡೆ, ನಿನ್ನ ಕುತ್ತಿಗೆಯ ರಕ್ತ ಕುಡಿಯುವೆನು" ಹೀಗೆಂದೊದರಿ ಓಡಿದನು; ಆದರೆ ಪರಕ್ಷಣದಲ್ಲಿಯೇ ಪ್ರಜ್ಞಾರಹಿತನಾಗಿ ನೆಲಕ್ಕೆ ಬಿದ್ದನು. ಇಷ್ಟರಲ್ಲಿ ಮತ್ತೊಬ್ಬ ಸ್ತ್ರೀಯು ಮನೆಯೊಳಗಿಂದ ಹಿತ್ತಲಿಗೆ ಬಂದಳು; ಮತ್ತು ಅವರೆಲ್ಲರೂ ಸೇರಿ ಆ ಮುದುಕನನ್ನು ಎಚ್ಚರಗೊಳಿಸಲುದ್ಯುಕ್ತರಾದರು.

ಮ:—ಒಳ್ಳೇದು. ನೀವೊಳ್ಳೇ ಗಸ್ತಿಗೆ ಹೋದವರು ಆ ಮೇಲೇನು ಮಾಡಿದಿರಿ?

ಜೋ:—ಆ ಅಕಲ್ಪಿತ ಪ್ರಸಂಗವನ್ನು ಕಂಡು ಮೊದಲು ನಾನಂತೂ ಹುಚ್ಚಾಗಿಬಿಟ್ಟೆನು! ಆದರೆ ತೀವ್ರವೇ ಅವರಿಗೆ ಸಹಾಯ ಮಾಡಬೇಕೆಂದು ನಿಶ್ಚಯಿಸಿಕೊಂಡು ಮುಂದಾಗುವಷ್ಟರಲ್ಲಿ ಮನೆಯೊಳಗಿಂದ ಬಂದಿದ್ದ ಆ ಸುಂದರ ತರುಣ ಸ್ತ್ರೀಯು ಮುಂದೆ ಬಂದು ಒಳ್ಳೇ ಧಿಟ್ಟತನದಿಂದ, ಆದರೆ ಮರ್ಯಾದೆಯಿಂದ ನನಗೆ ಪ್ರತಿಬಂಧ ಮಾಡಿದಳು.

ಮ:—ಇತ್ತ ನೋಡಿರಿ, ತರುಣ ಮತ್ತು ಸುಂದರ ಈ ವಿಶೇಷಣಗಳು ಪ್ರಸ್ತುತದ ಸಂಗತಿಗೆ ತೀರ ಅನವಶ್ಯಕವಾಗಿರುತ್ತವೆಂಬದನ್ನು ನಾನೀಗಲೆ ನಿಮಗೆ ತಿಳಿಸಿಟ್ಟಿರುತ್ತೇನೆ. ಆಕೆಯು ಏನು ಅಂದಳೆಂಬದಷ್ಟೇ ಪುರಾವೆಯಲ್ಲಿ ಗ್ರಾಹ್ಯವೆಂದೆಣಿಸಲಾಗುವದು.

ಜೋ:—ನೀವು ಯಾರು? ಎಂದು ಅವಳು ಕೇಳಿದಳು.

ಮ:—ಆ ಮೇಲೆ ನೀವು ಆ ಸುಂದರ-ತರುಣ ದಿಟ್ಟಸ್ತ್ರೀಯಳಿಗೆ ಏನೆಂದು ಹೇಳಿದಿರಿ?

ಜೋ:—ಮೊದಮೊದಲು ನಾನು ಅವಳಿಗೆ ಉತ್ತರ ಕೊಡಲಿಲ್ಲ; ಆದರೆ ಆ ಮೇಲೆ ಮಾತ್ರ ಅವಳಿಗೇನಾದರೂ ಉತ್ತರ ಹೇಳಲೇಬೇಕೆಂದೆನಿಸಿ, "ಗಸ್ತಿತಿರುಗುವ ನಾನೊಬ್ಬ ಸರಕಾರೀ ಅಧಿಕಾರಿಯಿರುತ್ತೇನೆ" ಎಂದು ತಿಳಿಸಿದೆನು.

ಮ:—ಬಳಿಕ ಅವಳೇನೆಂದಳು?

ಜೋ:—ನೀವು ಯಾವ ಅಧಿಕಾರಿಗಳೇ ಏಕಿರಲೊಲ್ಲಿರಿ; ಇದು ನಮ್ಮ ಪ್ರಪಂಚದ ಮಾತಾಗಿದೆ, ಎಂದಳು.

ಮ:-ಅಂದರೆ? ನೀವು ಇದರಲ್ಲಿ ಮನಸ್ಸು ಹಾಕಬೇಡಿರಿ; ಇಲ್ಲಿಂದ ಒಮ್ಮೆಲೆ ಹೊರಟು ಹೋಗಿರಿ, ಇದೇ ಅರ್ಥದಿಂದಲ್ಲವೆ? ಆ ಮೇಲೆ ನೀವೇನು ಮಾಡಿದಿರಿ?

ಜೋ:—ಆ ಸಾದಾ, ಆದರೆ ಗಂಭೀರ ಬೆದರಿಕೆಯ ಮೂಲಕ ನಾನು ಹಿಂದಕ್ಕೆ ಹಿಂದೆಯೇ ತಿರುಗಿದೆನು. ಮನೋಹರಾ, ನಿಜವಾಗಿಯೂ ಅದೇನೋ ಸಂದೇಹದ ಪ್ರಕರಣ ಕಾಣುತ್ತದೆ; ಮತ್ತು ಏನೇ ಇರಲಿ, ಆಗಿನಿಂದಲೂ ನನಗೆ ಸ್ವಲ್ಪವೂ ಸಮಾಧಾನವಿಲ್ಲದಾಗಿದೆ. ಅದರ ಕಾರಣವು ಮಾತ್ರ ತಿಳಿಯಲೊಲ್ಲದು.

ಮ:—ಅದರ ನಿಶ್ಚಿತ ಕಾರಣವನ್ನು ನಾನು ತಿಳಿಸಲೊ?

ಜೋ:—ಹೇಳು ನೋಡೋಣ.

ಮ:—ನಿಮಗೆ ತಿಳಿಯದಾಗಲಿಕ್ಕೆ ಕಾರಣವು ಆ ಸಂದೇಹಯುಕ್ತ ಪ್ರಕರಣವಲ್ಲ; ಆದರೆ ನೀವು ಆ ಸ್ಥಳದಲ್ಲಿ ಕಂಡ ಆ ಸ್ತ್ರೀಯು! ಅಂದರೆ, ನಿಮ್ಮ ಭಾಷೆಯಿಂದಲೇ ಹೇಳಬೇಕಾದರೆ, ಆ ತರುಣ ದಿಟ್ಟ ಮತ್ತು ಸುಂದರಳಾದ ಸ್ತ್ರೀಯು! ಹಾಗಿಲ್ಲದಿದ್ದರೆ ನೀವು ಹೀಗೆ ದೇಹಭಾನವಿರಹಿತವಾಗುತ್ತಿರಲಿಲ್ಲ; ಹಾಗು ಹೀಗೆ ನಿಟ್ಟುಸಿರುಗಳನ್ನು ಬಿಡುತ್ತಿರಲಿಲ್ಲ. ನಿಮ್ಮ ಕಣ್ಣುಗಳ ದರ್ಶನದಿಂದಲೇ ನಾನು ನಿಮಗೆ ಹೇಳುವದೇನಂದರೆ, ಆ ಸಂದೇಹದ ಪ್ರಕರ್ಣಕ್ಕಿಂತ ಆ ಸ್ತ್ರೀಯ ಬಾಧೆಯೇ ನಿಮಗೆ ಹೆಚ್ಚಾಗಿರುವಂತೆ ತೋರುತ್ತದೆ. ಏಕೆ, ಮಹಾರಾಜರೇ, ಹೀಗೆ ಮೋರೆಯನ್ನು ಕೆಳಗೇಕೆ ಹಾಕುತ್ತೀರಿ? ಒಳ್ಳೇದು ಮಹಾರಾಜ! ತಮ್ಮ ಮೊದಲನೇ ಗಸ್ತಿಯು ಕಟ್ಟ ಅಮಾಸಿಯ ದಿವಸವಾದರೂ, ಸುಮುಹೂರ್ತದಲ್ಲಿಯೇ ಹೊರಟಿತೆನ್ನಬೇಕು.

ಜೋ:—ಮನೋಹರಾ, ನೀನು ಏನಾದರೊಂದು ಮಾತನಾಡುತ್ತೀ! ನಿನ್ನೆ ನಾನು ನೋಡಿದ ಆ ಸ್ತ್ರೀಯು ಅವಿವಾಹಿತಳೆಂಬದು ನನಗೆ ಗೊತ್ತಿತ್ತೆಂದು ನನ್ನ ಮನಸ್ಸು ಅವಳ ಮೇಲೆ ಹೋದೀತೇ?

ಮ:—ಏನಾದರೂ ಹೇಗೆ? ದುಷ್ಯಂತನು ಶಕುಂತಲೆಯನ್ನು ಪ್ರೀತಿಸುವ ಮೊದಲು ಆಕೆಯ ವಾಸ್ತವ್ಯವನ್ನೇನಾದರೂ ವಿಚಾರಿಸಿದ್ದನೇನು? ಆದರೆ 'ಸತಾಂ ಹಿ ಸಂದೇಹ-ಪದೇಷು ವಸ್ತುಷು-ಪ್ರಮಾಣಮಂತಃಕರಪ್ರಣವೃತ್ತಯಃ' ಎಂಬೀ ನೀತಿ ಸೂತ್ರವನ್ನು ಆತನು ಸಮರ್ಥಿಸಿದನು; ಮತ್ತು ಅದು ಕಡೆಗೆ ಅವನಿಗೆ ಸಾಧಿಸಿತಲ್ಲವೇ? ಅಪ್ಪಾ, ನಿಮ್ಮ ಪ್ರೇಮಿ ರಾಜ-ಮಹಾರಾಜರ ಆದ್ಯ ಪೂರ್ವಜನು ದುಷ್ಯಂತನೇ. ನಿಮ್ಮ ಮನೆತನದ ನಡತೆಯನ್ನು ತೀಡಿದರೆ, ತಪ್ಪೆಂದು ನಿಮಗಾರು ಅನ್ನುವರು?

ಜೋ:—ಸಾಕು ಮಾಡೋ, ನಿನ್ನೀ ಚರ್ವಣವನ್ನು! ಆದರೆ ಈ ಪ್ರಕರ್ಣದ ನಿಕಾಲೆ ಮಾಡಲಿಕ್ಕೆ ನೀನು ನನಗೇನು ಸಹಾಯ ಮಾಡುತ್ತೀಯೆಂಬದನ್ನು ಮೊದಲು ಹೇಳು.

ಮ:—ಏನಂದಿರದು? ಮೊದಲು ಆ ದೊಡ್ಡ ಮನೆಯ ಪತ್ತೆ ಹಚ್ಚು

ತ್ತೇನೆ. ಒಳಿಕ ನಿಮ್ಮನ್ನು ಬೆದರಿಸಿದ ಆ ಸ್ತ್ರೀಯು, ಅಲ್ಲಲ್ಲ ತಪ್ಪಿದೆನು-ಆ ಸುಂದರ, ತರುಣ ಹಾಗು ದಿಟ್ಟ ಸ್ತ್ರೀಯು ಪತ್ತೆ ಹಚ್ಚುತ್ತೇನೆ.

ಜೋ:—ಮನೋಹರ, ಆದರೆ ಇದರಲ್ಲೊಂದು ವಿಷಯವನ್ನು ಚೆನ್ನಾಗಿ ನೆನಪಿಟ್ಟುಕೊ. ಅವಳು ನನ್ನನ್ನು ಬೆದರಿಸಿದಳೆಂದು ನೀನೂ ಅವಳನ್ನು ಅಧಿಕಾರಮದದಿಂದ ತಿರುಗಿ ಬೆದರಿಸಬೇಡ, ಕಂಡೆಯಾ?

ಮ:—ಛೇ. ಛೇ. ಬೆದರಿಸ ಹೋಗಲಿಕ್ಕೆ ನನ್ನಲ್ಲಿ ಯಾವ ಅಧಿಕಾರಗಳೂ ಇರುವದಿಲ್ಲವಲ್ಲ! ನಾನು ನಿಮ್ಮ ಪ್ರಾಯವ್ಹೇಟ ಸೆಕ್ರೆಟರಿ ಕೂಡ ಆಗಿಲ್ಲ; ನಾನೊಬ್ಬ ನಿಮ್ಮ ಖಾಸಗೀ ಮಿತ್ರನಿರುವೆನು. ರಾಜಮಿತ್ರನಾದ ಮಾತ್ರಕ್ಕೆ ಅವನಿಗೆ ಅಧಿಕಾರಗಳಿರುತ್ತಿರುವದಿಲ್ಲ! ಅಲ್ಲದೆ, ನಾನು ಅವಳನ್ನು ಬೆದರಿಸುತ್ತೇನೆಂದು ನಾನೆಲ್ಲಿ ಅಂದೆನು! ನಿಮ್ಮನ್ನು ಬೆದರಿಸಿದ ಆ ತರುಣ ಸುಂದರಿ-ದಿಟ್ಟ ಸ್ತ್ರೀಯು ಯಾರಿಗೆ ಯಾರಾಗಬೇಕು? ಅವಳು ಇನ್ನೂ ಅವಿವಾಹಿತಳಾಗಿರುವಳೋ ಹೇಗೆ? ಎಂಬದನ್ನಷ್ಟೇ ತಿಳಿಯಲು ಯತ್ನಿಸುತ್ತೇನೆ.

ಜೋ:—ಮನೋಹರ! ನಿನಗೇನು ಮಾಡಬೇಕು? ನೀನು ಏನಾದರೂ ತಿಳಿ ಕೊಳ್ಳುತ್ತೀ. ನಾನು ನೋಡಿದ ಎಲ್ಲ ಜನರ ಶೋಧವೂ ನನಗೆ ಬೇಕಾಗಿದೆ.

ಮ:—ಆಹುದು; ಆದರೆ ಮನುಷ್ಯ-ಮನುಷ್ಯರಲ್ಲೇ ಭೇದವಿರುವದಿಲ್ಲವೇ? ನೀವು ಗಸ್ತಿಗೆ ಹೊರಡುವ ಮೊದಲನೇ ಬೇತು ಮಾಡಿದಾಗ ನಾನು ನಿಮಗೆ ಸಹಜವಾಗಿಯೇ ಖಲೀಫ ಹರೂನ ಅಲ್ ರಶೀದನೆಂದೂ ವಿಕ್ರಮರಾಜನೆಂದೂ ಉಪಮೆ ಕೊಟ್ಟಿದ್ದೆನು. ಈಗ ಎಲ್ಲ ಬಗೆಯಿಂದಲೂ ಅದು ನಿಜವೆಂದು ತೋರ ಹತ್ತಿರುವದಲ್ಲ! ನನಗೆ ಆಗ ಆ ಉಪಮೆ ಕೊಡುವ ಸ್ಫೂರ್ತಿಯಾದದ್ದು ಕೇವಲ ಮಂತ್ರದ್ರಷ್ಟರಾದ ಪ್ರಾಚೀನ ಋಷಿಗಳ ಸ್ಫೂರ್ತಿಯಂತೆ ದಿವ್ಯವೇ ಆಗಿರಬೇಕು. ಹಾಗಾದರೆ ನಮ್ಮ ಕೈಯಿಂದಲೇ ಏನಾಲು ನಮ್ಮ ಗಡ್ಡ-ಮೀಸೆಗಳನ್ನು ಹೆರೆಹೆರೆದು ಮುಖಮಂಡಲವನ್ನು ನುಣುಪಾಗಿ ಮಾಡಿಕೊಳ್ಳುವ ಅಸ್ಮಾದಿಕ ಸುಧಾರಕರ ಶಬ್ದಗಳು ಗಡ್ಡ-ಮೀಸೆಗಳ ಆಡವಿಯನ್ನೇ ಬೆಳೆಯಿಸುತ್ತಿದ್ದ ಪ್ರಾಚೀನ ಋಷಿಗಳ ಬಾಯಿಂದ ಹೊರಟ ವಚನಗಳಂತೆಯೇ ಈ ಕಲಿಯುಗದಲ್ಲಿಯೂ ಸಟಿಯಾಗುತ್ತವೆನ್ನಬೇಕು! ಒಟ್ಟಿನಲ್ಲಿ ಈ ಜೋದ್ಯಪುರದಲ್ಲಿ ಹಳೇ ಅರಬಿಯನ್ ನಾಯಿಟ್ಸಿನ ಹೊಸ ಆವೃತ್ತಿಯು ನಿಜವಾಗಿಯೂ ಹೊರಡುವದು! ಖಲೀಫನು ಗಸ್ತಿಗೆ ಹೊರಟಾಗ ಯಾರೋ ವಜೀರರು ಅಕ್ಕ-ತಂಗೆಯರ ಮನೆಗೆ ಹೋಗಿದ್ದನು. ಅವನು ಅಲ್ಲಿ ಅತ್ಯದ್ಭುತ ದೃಶ್ಯವನ್ನು ನೋಡಿದನು. ಅವರಲ್ಲಿಯ ಒಬ್ಬ ಸಹೋದರಿಯಾದ ಜುಬೇದಿಯು ಖಲೀಫನಿಗೆ ಬಜಾಯಿಸಿ ಹೇಳಿದ ಳೇನಂದರೆ, ಇಲ್ಲಿ ಯಾವ ಚಮತ್ಕೃತಿಯು ಕಣ್ಣಿಗೆ ಕಾಣುವದೋ, ಅದರ ಚಿ

ತ್ರೆಯು ಗೊಂದಲದಲ್ಲಿ ಹೊರಗಿನ ಮನುಷ್ಯನು ತೊಡಗುವದಕ್ಕೆ ಸಕ್ತ ಮನಾಯಿ ಇರುತ್ತದೆ; ಮತ್ತು ನಿಮ್ಮ ಗಸ್ತಿಯು ಕಾಲಕ್ಕಾದರೂ ಆ ದೊಡ್ಡ ಮನೆಯ ಹಿತ್ತಲ ಬಾಗಿಲದೊಳಗಿಂದ ನೀವು ಯಾವ ದೃಶ್ಯವನ್ನು ಕಂಡಿರೋ ಅದರ ಬಗ್ಗೆ ಯಾದರೂ ಆ ನಿಮ್ಮ ತರುಣ ಮತ್ತು ಸುಂದರ ದಿಟ್ಟ ಸ್ತ್ರೀಯು ನಿಮಗೆ "ನಮ್ಮ ಮನೆಯೊಳಗಿನ ಸಂಗತಿಯಿದು. ನೀವು ಯಾರಿದ್ದರೂ ಇದರಲ್ಲಿ ಮನಸ್ಸು ಹಾಕ ಕೂಡದು" ಎಂದು ಬಜಾಯಿಸಿರಲಿಲ್ಲವೆ? ಆದರೆ ಕಡೆಗೆ ಆ ಖಲೀಫನಿಂದ ನಿಮ ಗಿಂದು ಹೇಗೆ ಸುಮ್ಮನಿರಲಾಗುವದಿಲ್ಲವೋ ಹಾಗೆಯೇ ಸುಮ್ಮನಿರಲಿಕ್ಕೆ ಆಗಲಿಲ್ಲ. ಆತನು ಮರುದಿನ ಆ ಸಂಗತಿಯನ್ನು ನೀವು ನನಗೀಗ ಮಾಡಹೇಳುತ್ತಿರುವಂತೆ ವಿಚಾರಣೆ ಮಾಡಿದನು! ಮತ್ತು ಕಡೆಗೆ ಆ ಖಲೀಫನಿಗೂ ಆ ಮೂವರು ಸಹೋ ದರಿಯರೊಳಗಿನ ಜುವೇದಿಗೂ ಲಗ್ನವಾಗಿ ಹೋಯಿತು! ಅದರಂತೆ ಇಲ್ಲಿಯೂ ಘಟಿಸುವದೇನೆಂಬದನ್ನಷ್ಟೇ ಇನ್ನು ನೋಡತಕ್ಕದ್ದಿದೆ! ವಿಕ್ರಮರಾಜನು ತನ್ನ ಗಸ್ತಿಯ ಕಾಲಕ್ಕೆ ಶಶಿಕಲೆಯು ತನ್ನನ್ನು ನಿರವಿಸಿದ್ದನ್ನು ಕೇಳಿಕೊಂಡನು; ಹಾಗು ಮರುದಿನವೇ ಅವಳ ತಂದೆಯು ಬಳಿಗೆ ಅವಳನ್ನು ಲಗ್ನವಾಗುವ ನಿಶ್ಚಯ ಹಾಕಿ ದನು. ಈ ಉದಾಹರಣೆಗಳ ಮೇರೆಗೆ ನಿಮ್ಮನ್ನು ನಿನ್ನೆ ರಾತ್ರಿ ಬೆದರಿಸಿ ಕಳಿಸಿದ ಆ ತರುಣ ಸುಂದರ ದಿಟ್ಟ ಸ್ತ್ರೀಯು ಅವಿವಾಹಿತಳಾಗಿರುವಳೆಂದು ಚೌಕಶಿಯಲ್ಲಿ ಕಂಡು ಬಂದರೆ, ನಿಮ್ಮ ಸಲುವಾಗಿ ಅವಳಿಗೆ ನಿಶ್ಚಯ ಹಾಕುವ ಅಧಿಕಾರವನ್ನು ನೀವು ಈ ಚೌಕಶಿಯ ಕೆಲಸದಲ್ಲಿ ನನಗೆ ಕೊಡುವಿರೋ ಇಲ್ಲವೋ ಎಂಬದನ್ನಷ್ಟು ಹೇಳಿಬಿಡಿರೆಂದರಾಯಿತು.

ಮನೋಹರನ ಈ ವಿನೋದಪ್ರಚುರವಾದ ಮಾತುಗಳನ್ನು ಕೇಳಿ ಜೋಜಿಗ ಮಹಾರಾಜರಿಗೆ ನಗೆಬಂತು. ಅವರ ಚಿಂತಾಗ್ರಸ್ತ ಸ್ಥಿತಿಯು ಮಾಯವಾಯಿತು; ಅದರಿಂದ ಮನೋಹರನಿಗೆ ವಿನೋದದ ಮರುಮುಯ್ಯ ಮಾಡಲಿಕ್ಕೆಂದು ಅವರು: ಮನೋಹರ, ನನ್ನ ಲಗ್ನವು ಯಾವಾಗ ಆದೀತೋ, ಆಗ ನನ್ನ ಕಡೆಯ ಪ್ರಮುಖ ಬೀಗನು ನಿನ್ನ ಹೊರತು ಮತ್ತಾರು ಆಗುವರು? ಅದರಿಂದ ನನ್ನ ಸಲುವಾಗಿ ವಧುವನ್ನು ಗೊತ್ತು ಮಾಡುವ ಪ್ರಸಂಗ ಬಂದಾಗ, ಆ ಮರ್ಯಾದೆಯನ್ನು ನಿನ್ನ ಹೊರತು ಬೇರೆಯವರಿಗೆ ಅದೆಂತು ಕೊಟ್ಟೇನು? ಆದರೆ ಆ ಸ್ತ್ರೀಯಳಿಗೆ ತರುಣ ಸುಂದರ ಮತ್ತು ದಿಟ್ಟ ಎಂಬ ವಿಶೇಷಣಗಳನ್ನು ಹಚ್ಚುವ ಬುದ್ಧಿಯು ನನಗೆಲ್ಲಿಂದ ಪ್ರಾಪ್ತವಾಯಿತೋ ಅದಾರಿಗೆ ಗೊತ್ತು? ಆ ವಿಶೇಷಣಗಳನ್ನು ತೆಯ್ದು ತೆಯ್ದು, ಪಲ್ಲವಿಗಳಂತೆ ಹೇಳಿ ಹೇಳಿ ನನ್ನ ಚೇಷ್ಟೆ ಮಾಡುವ ಈ ಯಾವ ಹುಡುಗಾಟಿಕೆ ಯನ್ನು ನೀನು ಆಗಿನಿಂದ ನಡೆಸಿರುವಿಯೋ, ಅಣ್ಣಾ ದಯವಿಟ್ಟು ಇನ್ನು ಅದನ್ನು ಸಾಕು ಮಾಡು! ನಾನು ನಿನ್ನೆ ಗಸ್ತಿಯ ಕಾಲಕ್ಕೆ ನೋಡಿದ್ದನ್ನು ಹೇಳಿದ್ದರಲ್ಲಿ ನಿನಗೆ

ಅದ್ಭುತವೇನೂ ತೋರುವದಿಲ್ಲವೆ? ಇಷ್ಟು ಅರಸಿಕನು ನೀನು ಎಂದಿನಿಂದಾದೆ? ಇರಲಿ. ನಿನಗೆ ಹೇಳಿದ ಕೆಲಸವನ್ನಂತೂ ಮಾಡಿಕೊಂಡು ಬಾ. ನೀನು ಹಿಂದಿರುಗಿ ಬಂದು ಏನೊಂದು ಸಮಾಧಾನ ಹೇಳಿದ ಹೊರತು ನನ್ನ ಮನಸ್ಸಿಗೆ ಸ್ವಾಸ್ಥ್ಯವುಂಟಾಗಲಿಕ್ಕಿಲ್ಲ.

ಹೀಗೆಂದು ಹೇಳಿ ಜೋಜಿಗಮಹಾರಾಜರು ಚಹ ತರಿಸಿದರು; ಅವರಿಬ್ಬರೂ ಕೂಡಲೆ ಅದನ್ನು ಕುಡಿದ ಬಳಿಕ ತಮ್ಮ ಕೆಲಸ ಮಾಡಿಕೊಂಡು ಬರುವದಕ್ಕೆಂತು ಅವರು ಮನೋಹರನನ್ನು ಪ್ರೇಮ ಭರದಿಂದ ತಮ್ಮ ದಿವಾಣ ಖಾನೆಯಿಂದ ಹೊರದಬ್ಬಿದರು.

---

## ೧೨ ಅಜ್ಞಾತವಾಸದೊಳಗಿನ ಆತ್ಮಚರಿತ್ರವು.

ಅಮಾಸಿಯು ರಾತ್ರಿಯುಲ್ಲಾದ ಆ ಪ್ರಕಾರದಿಂದ ಭಾವೂಸಾಹೇಬರು ಮೊದಲು ಎಷ್ಟೋ ಹೊತ್ತಿನ ವರೆಗೆ ಸ್ಮೃತಿದಪ್ಪಿ ಬಿದ್ದಿದ್ದರು. ಕೆಲಕ್ಷಣಗಳ ನಂತರ ಅವರಿಗೆ ಅರೆ ಎಚ್ಚರವಾಯಿತು. ಆದರೂ ಹಾಸಿಗೆಯು ಮೇಲ ಎದ್ದು ಕೂಡ್ರುವ ಚೈತನ್ಯವು ಅವರಲ್ಲಿರಲಿಲ್ಲ. ಅದರಂತೆ ಕೇವಲ ಸ್ಮೃತಿದಪ್ಪಿದ್ದರೂ ನಡುನಡುವೆ ಭ್ರಮದ ಲಹರಿಗಳೆದ್ದು, ಆ ಲಹರಿಯಲ್ಲಿ ಆ ರಾತ್ರಿಯ ಪ್ರಕರಣವನ್ನುದ್ದೇಶಿಸಿ ಗುಪ್ತಪೋಲೀಸ, ಪೋಷ್ಟಮನ್ನ ಹಾಗು ತಮ್ಮ ಭಾರ್ಯೆಯ ಕಾಲ್ಪನಿಕ ಪ್ರಿಯಕರ ಇವುಗಳ ಬಗ್ಗೆ ಏನಾದರೂ ಬಡಬಡಿಸುತ್ತಿದ್ದರು. ಯಾರಾದರೂ ಬೇರೆಯವರು ಅವರ ಹತ್ತರ ಕುಳಿತು ಮಾತಾಡಹತ್ತಿದರೆ ಮಾತ್ರ ಅವರೊಡನೆ ಅವರು ಕೇಳಿದ್ದರ ಉತ್ತರಗಳನ್ನಷ್ಟೇ ಕೊಡುತ್ತಿದ್ದರು; ಆದರೆ ಒಬ್ಬೊಂಟಿಗರಾಗಿದ್ದಾಗ ಭ್ರಮದೊಳಗಿನ ಅವರ ಬಡಬಡಿಕೆಗೆ ಮತ್ತೆ ಪ್ರಾರಂಭವಾಗುತ್ತಿತು!

ಭಾವೂಸಾಹೇಬರ ಈ ಸ್ಥಿತಿಯು ವಿಮಲೆ ಹಾಗು ಮಾಯಿಸಾಹೇಬರಿಗೆ ಒಂದು ರೀತಿಯಿಂದ ಪಥ್ಯಕರವಾಗಿಯೇ ಪರಿಣಮಿಸಿತು. ಭಾವೂಸಾಹೇಬರ ಮನೆಯೊಳಗಿನ ಹಾಗು ಮನೆಯ ಸುತ್ತಲಿನ ಪರಿಭ್ರಮಣವು ಕಟ್ಟಾದುದರಿಂದ ಹಿತ್ತಲೊಳಗಿನ ಆ ಚಿಕ್ಕ ಮನೆ ಹಾಗು ಅದರ ನೆಲಮನೆಗಳ ಆಶ್ರಯದಲ್ಲಿ ಪ್ರಭಾಕರನು ನಿರಾತಂಕವಾಗಿರಹತ್ತಿದನು; ಮತ್ತು ಪ್ರಭಾಕರನು ಯಾವಾಗ ಹಾಗು ಹೇಗೆ ಪ್ರಕಟವಾಗಬೇಕೆಂಬ ವಿಚಾರವನ್ನು ಸಾವಕಾಶವಾಗಿ ಮಾಡಲಿಕ್ಕೆ ಅವರೆಲ್ಲರಿಗೂ ವೇಳೆ ದೊರೆಯಿತು. ರಾತ್ರಿಯಲ್ಲಿ ಭಾವೂಸಾಹೇಬರಿಗೆ ನಿದ್ದೆ ಹತ್ತಿತೆಂದರೆ, ದೌಶಲತನನ್ನು ಅವರ ಬಳಿಯಲ್ಲಿ ಕೂಡ್ರಿಸಿ, ಆ ಮೂವರೂ ಒತ್ತಟ್ಟಿಗೆ ಕುಳಿತು ಸ್ವಸ್ಥ ಮನಸ್ಸಿನಿಂದ ಚರ್ಚಿಸುತ್ತಿದ್ದರು.

ಇಂದು ಹಗಲಿನಲ್ಲಿ ಹೆಚ್ಚಾಗಿ ನಿದ್ರೆ ಬಾರದ್ದರಿಂದ ಮತ್ತು ಔಷಧದಲ್ಲಿ ನಿದ್ರೆಯ ಔಷಧವನ್ನು ತುಸ ಬೆರಸಿದ್ದರಿಂದ ಭಾವೂಸಾಹೇಬರಿಗೆ ರಾತ್ರಿಯ ಒಂಬತ್ತು ಗಂಟೆಗೇ ಒಳ್ಳೇ ಗಾಢವಾದ ನಿದ್ರೆಯು ಹತ್ತಿಬಿಟ್ಟಿತು. ದೌಲತನು ಆ ಕೋಣೆಯ ಹೊರಮುಗ್ಗಲಿಗೆ ತನ್ನ ಹಾಸಿಗೆಯನ್ನು ಹಾಸಿಕೊಂಡನು. ಅದರಿಂದ ಹಿತ್ತಲದೊಳಗಿನ ಚಿಕ್ಕ ಮನೆಯಲ್ಲಿ ಕುಳಿತು ಪ್ರಭಾಕರನೊಡನೆ ಬೇಕಾದಷ್ಟು ಮಾತನಾಡಲಿಕ್ಕೆ ಆ ತಾಯಿ-ಮಗಳಿಗೆ ಸಂಧಿಯು ಲಭಿಸಿತು. ಎಷ್ಟೋ ವರ್ಷಗಳ ತರುವಾಯದ ಭೆಟ್ಟಿಯು ಆನಂದದಾಯಕವೇ; ಆದರೆ ಗ್ರಸ್ತೋದಯದ ಅಂದರೆ ಗ್ರಹಣ ಹಿಡಕೊಂಡು ಉದಯಿಸಿದ ಚಂದ್ರನಂತೆ, ಆ ಆನಂದಕ್ಕೆ ಪ್ರಾರಂಭದಲ್ಲಿಯೇ ಚಿಂತೆಯು ಗ್ರಸ್ತವಾಗಿತ್ತು. ಆದರಿಂದ ಆ ಮೂವರ ಸಂಭಾಷಣಕ್ಕೊಂದು ಬಗೆಯ ಗಾಂಭೀರ್ಯವು ಉಂಟಾಗಿತ್ತು.

ಮಾಯಿ:—ಪ್ರಭಾಕರಾ, ತಮ್ಮಾ, ಇಲ್ಲಿಂದ ಹಾಗೆ ಒಮ್ಮೆಲೆ ಇಲ್ಲದಂತಾದವನು ಇಷ್ಟು ವರ್ಷಗಳ ವರೆಗೆ ನೀನೆಲ್ಲಿದ್ದೆ? ಹೊರಡುವಾಗ ಒಂದಿಷ್ಟು ಸೂಚನೆಯನ್ನು ಕೂಡ ನನಗೆ ತಿಳಿಸಲಿಲ್ಲವಲ್ಲ! ಅದರಿಂದ ನಾನು ಮೊದಲಿನ ಮೂರು-ನಾಲ್ಕು ರಾತ್ರಿಗಳನ್ನು ಆಲೋಚನೆ-ಜಾಗರಣೆಗಳಲ್ಲೇ ಕಳೆದೆನು.

ಪ್ರ:—ಮಾಯಿ, ಅಷ್ಟು ಸಮಯ ಸಿಕ್ಕಿದ್ದರೆ ನಾನು ನಿನ್ನ ಚರಣಗಳಿಗೆರಗಿ, ನಿನ್ನ ಆಶೀರ್ವಾದ ಪಡೆಯದೆ ಹೋಗುತ್ತಿದ್ದೆನೇ? ಆದರೆ ಮಾಡಲೇನು? ಪೋಲೀಸ ಅಧಿಕಾರಿಗಳು ಹಸ್ತಕರ ಸಮೂಹದೊಡನೆ ಇತ್ತಕಡೆಗೆ ಬರುತ್ತಿರುವುದನ್ನು ಅಟ್ಟದ ಮೇಲಿಂದ ದೃಷ್ಟಿಸಿದೊಡನೆಯೇ ಅವಸರವಸರದಿಂದ ಉಡುಪು ಧರಿಸಿ, ಈ ಹಿತ್ತಲ ಬಾಗಿಲದಿಂದ ಹೊರಬಿದ್ದೆನು. ಅಂದುರಾತ್ರಿಯಲ್ಲಿ ಕಂಕಣವಾಡಿಯೊಳಗಿನ ನನ್ನೊಬ್ಬ ಗೆಳೆಯನಲ್ಲಿ ಅಡಗಿಕೊಂಡು ಕುಳಿತೆನು. ಆತನು ಪೋಲೀಸ ನೌಕರಿಯಲ್ಲೇ ಇದ್ದನು. ಅವನು ಮನೆಗೆ ಬಂದ ಮೇಲೆ ಅಂದಿನ ದರಬಾರದಲ್ಲಿ ನನ್ನ ವಿಷಯವಾಗಿ ಏನೇನು ನಡೆಯಿತೆಂಬದನ್ನು ತಿಳಿಸಿದನು. ಆ ಬಳಿಕ ಆತನ ಸಲಹೆಯ ಮೇರೆಗೆ ಬೆಳಗಿನ ಜಾವದಲ್ಲಿದ್ದು ನಾನು ನೆಟ್ಟಗೆ ಮೊಗಲಾಯಿಯ ದಾರಿ ಹಿಡಿದೆನು! ಅಂದಿನಿಂದ ನಿನ್ನೆ ರಾತ್ರಿಯೇ ನನಗೆ ಈ ಮನೆಯ ದರ್ಶನವಾದದ್ದು!

ಮಾ: ನೀನು ಹಾಗೆ ಒಮ್ಮೆಲೆ ಹೊರಟು ಹೋದೆಯೆಂದೇ ನೀನವರಿಗೆ ಸಿಗಲಿಲ್ಲ. ಪೋಲೀಸ ಸಿಪಾಯಿಗಳು ಗುಂಪುಗಟ್ಟಿಕೊಂಡು ಬಂದರು. ಅವರು ನಾಲ್ಕೂ ಕಡೆಯಿಂದ ಮನೆಯನ್ನು ಸುತ್ತುಗಟ್ಟಿದರು. ಆಗ ನಿಮ್ಮ ಹಿರಿಯರು ಮನೆಯಲ್ಲೇ ಇದ್ದರು. ಇವರು ತಮ್ಮಲ್ಲಿಗೆ ಬಂದಿದ್ದ ಪೋಲೀಸ ಅಧಿಕಾರಿಯನ್ನು ಖುರ್ಚಿಯ ಮೇಲೆ ಕೂರಿಸಿಕೊಂಡು, ನಡೆದ ಸಂಗತಿಯೇನೆಂದು ಕೇಳಿ

ದರು. ಅವನು 'ಸರಕಾರೀ ಹುಕುಮಿನ ಮೇರೆಗೆ ನಾವು ಪ್ರಭಾಕರನನ್ನು ಸೆರೆ ಹಿಡಿಯಲಿಕ್ಕೆ ಬಂದಿರುತ್ತೇವೆ'ಂದು ಹೇಳಲು, ಆಗ ಇವರು ಗಾಬರಿಗೊಂಡ ದ್ದನ್ನು ಹೇಳಲಾಸಲ್ಲ. ನಿನ್ನನ್ನು ಅದೇಕೆ ಸೆರೆ ಹಿಡಿಯಬಂದರು? ನೀನು ಮಾಡಿದ ಅಪರಾಧವೇನು? ಮುಂತಾದವುಗಳನ್ನು ಯಾರೂ ಸ್ಪಷ್ಟವಾಗಿ ವಿವರಿಸಿ ಹೇಳ ಲಿಲ್ಲ; ಮತ್ತು ಆ ಶಿಪಾಯಿಗಳು ಬಂದಾಗ ನೀನು ಮನೆಯಲ್ಲಿ ಸಿಗಲಿಲ್ಲ; ಹಾಗು ಆ ರಾತ್ರಿಯಿಂದ ಮುಂದೆಂದೂ ಹಿಂದಿರುಗಿ ಮನೆಗೆ ಬರಲಿಲ್ಲ. ಅದರಿಂದ ನಿನ್ನ ಅಭಿಪ್ರಾಯವೇನೆಂಬದೂ ತಿಳಿಯಲಿಕ್ಕೆ ಮಾರ್ಗ ಉಳಿಯಲಿಲ್ಲ; ಮತ್ತು ಅಂದಿ ನಿಂದ ನಿನ್ನ ಹೆಸರು ಹೊರಟ ಕೂಡಲೆ ಇವರು ಸಿಟ್ಟಿಗೇಳುತ್ತಾರೆ; ಸಂತಾಪದಿಂದ ಕುದಿಯಹತ್ತುತ್ತಾರೆ; ನನ್ನ ಮೋರೆಗೆ ಮಸಿ ಹಚ್ಚಿದನೆಂದೂ ಎಲ್ಲ ರೀತಿಯಿಂದ ನನ್ನ ಅಮರ್ಯಾದೆ ಮಾಡಿದನೆಂದೂ ಅನ್ನುತ್ತಾರೆ.

ವಿ:—ಅಣ್ಣಾ, ನೀನು ಓಡಿ ಹೋಗದೆ, ಸರಕಾರದ ಸ್ವಾಧೀನವಾಗಿ ನಿನ್ನ ನಿರಪರಾಧಿತನವನ್ನು ಸಿದ್ಧ ಮಾಡಿದ್ದರೆ, ಅದರಿಂದ ನಿನಗೂ ಅಪ್ಪನಿಗೂ ಕೂಡಿಯೇ ವಿಹಿತವಾಗುತ್ತಿದ್ದಿಲ್ಲವೆ?

ಪ್ರ:—ತಂಗೀ, ನಾನಾಗ ಹುಡುಗಬುದ್ಧಿಯವನಿದ್ದೆನು; ಅಲ್ಲದೆ ಮೊದಲು ಗಂಧವಾರ್ತೆಯೂ ಇಲ್ಲದೆ, ಒಮ್ಮೆಲೆ ಸೆರೆಹಿಡಿಯ ಬಂದದ್ದನ್ನು ಕಂಡು ನಾನು ಗಾಬರಿಗೊಂಡಿದ್ದೆನು; ಆದರೆ ನಿಜವಾಗಿ ಹೇಳುವದೇನಂದರೆ, ಅಪ್ಪನ ಖಂಬೀರ ವಾದ ಆಧಾರಪಡೆಯೆಂಬ ನಂಬಿಗೆಯು ನನಗವಿಸುತ್ತಿದ್ದರೆ, ನಾನು ಖಂಡಿತವಾಗಿ ಯೂ ಹಾಗೆ ಫರಾರಿಯಾಗುತ್ತಿರಲಿಲ್ಲ; ಆದರೆ ಈ ಪ್ರಕರ್ಣವುಂಟಾಗುವ ಪೂರ್ವ ದಿಂದಲೇ ಅಪ್ಪನ-ನನ್ನ ಸ್ವಭಾವಗಳು ಕೂಡಿಬಾರದ್ದರಿಂದ ಉಭಯತರಲ್ಲಿ ಜಗಳ ತಂಟೆಗಳಾಗುತ್ತಿದ್ದವು.

ವಿ:—ಅದೇತರ ಬಗ್ಗೆ?

ಪ್ರ:—ಅವರಿಗೆ ದಿವಾಣಸಾಹೇಬರು ವರಿಷ್ಠ ಅಧಿಕಾರಿಗಳೆಂದೂ ಹಾಗು ಅನ್ಯತ್ರದಲ್ಲಿಯೂ ಏನು ಮಾಡುವರೋ ಅದೆಲ್ಲವೂ ಯೋಗ್ಯವೆಂದೂ ತೋರು ತ್ತಿತ್ತು; ಆದರೆ ನನಗೆ ಎಲ್ಲ ಬಗೆಯ ಜನವಾರ್ತೆಯೂ ಕಿವಿಗೆ ಬೀಳುತ್ತಿತ್ತಾದ್ದರಿಂದ ಲೋಕಮತವು ತಿಳಿಯುತ್ತಿತ್ತು. ಅದರಿಂದ ಲೋಕಪಕ್ಷವನ್ನು ವಹಿಸಿ ದಿವಾಣ ರನ್ನು ಅಪ್ಪನ ಎದುರಿಗೂ ಕೂಡ ನಾನು ನನ್ನ ಗೆಳೆಯರ ಮುಂದೆ ಆಡಿಕೊಳ್ಳು ತ್ತಿದ್ದೆನು. ಅದರಿಂದ ಬರಬರುತ್ತ ನನ್ನ ಸ್ನೇಹಿತರಿಗೆ ನಮ್ಮ ಮನೆಯಲ್ಲಿ ಬರಲಿಕ್ಕೆ ಅಪ್ಪನಿಂದ ಆತಂಕವಾಯಿತು; ಮತ್ತು ಅಪ್ಪನು ನನ್ನನ್ನು ಕುರಿತು:—"ನಿನಗೆ ಈ ರಾಜಕಾರಣದ ಹಾಗು ರಾಜದ್ರೋಹದ ಇಲ್ಲದ ಚಟವು ಗಂಟು ಬಿದ್ದಿದೆ. ಇನ್ನು ಮುಂದೆ ನೀನು ನನ್ನ ಮಾತಿನಂತೆ ನಡೆಯದಿದ್ದರೆ ನಾನು ನಿನ್ನನ್ನು ಮನೆಯಿಂದ

ಹೊರಗೆ ಹಾಕಿಬಿಟ್ಟೇನು. ನಿನ್ನ ವರ್ತನದ ಬಗ್ಗೆ ನಾಳೆ ಸರಕಾರವು ಜಾಮೀನು ಕೇಳಿದರೆ, ನಿನಗೆ ಬೇರೆ ಯಾವನೂ ಜಾಮೀನು ಆಗಲಿಕ್ಕಿಲ್ಲ. ನನ್ನಿಂದಲೂ ನಿನ್ನ ಜಾಮೀನು ವಹಿಸಲು ಆಗಲಿಕ್ಕಿಲ್ಲ. ನಿನ್ನ ಸ್ವಭಾವವು ಈ ಬಗೆಯ ಉಗ್ರ ಮತ್ತು ಉಲುಕೋಚಿತನದ್ದು. ನೀನು ನಿನ್ನ ಹುಟ್ಟ ಸ್ವಭಾವದಂತೆ ಯಾವಾಗ ಏನು ಮಾಡುವೆ ಎಂಬ ಬಗ್ಗೆ ನಿಯಮವೇ ಇಲ್ಲ. ಅದರಿಂದ ನಿನ್ನ ಸಲುವಾಗಿ ಸಾವಿರಾರು ರೂಪಾಯಿಗಳ ದಂಡವನ್ನು ನಾನು ತುಂಬಬೇಕಾದೀತು! ಬಹಳವಾದರೆ ನಾನು ಅದನ್ನು ಒಮ್ಮೆ ನಿನ್ನ ಸಲುವಾಗಿ ತೆತ್ತೇನು; ಆದರೆ ಮತ್ತೆ ಮತ್ತೆ ನಾನು ಅದನ್ನು ತೆರುವ ಬಗೆ ಹೇಗೆ? ನಿನಗೆ ಜಾಮೀನು ದೊರೆಯದಿದ್ದರೆ, ನೀನು ಸೆರೆಮನೆಯಲ್ಲಿರಬೇಕಾದೀತು. ಅದರಿಂದ ನಿನ್ನ ಆಲೋಚನೆಯನ್ನು ನೀನೇ ಮಾಡಿಕೋ.'' ಎಂದು ಹೇಳಿಬಿಟ್ಟಿದ್ದನು. ಏನೂ ಇಲ್ಲದಾಗ ಸುಮ್ಮ ಸಮ್ಮನೆ ಹೀಗೆ ಆಗಾಗ್ಗೆ ನಮ್ಮೊರ್ವರಲ್ಲಿ ವಾದವಿವಾದ ನಡೆದಿರಲು, ಪ್ರತ್ಯಕ್ಷ ಪೋಲೀಸರ ದಂಡು ಸಹಿತವಾಗಿ ನನ್ನನ್ನು ಹಿಡಿಯಲಿಕ್ಕೆ ನಮ್ಮ ಮನೆಗೆ ಬಂದ ಮೇಲೆ ಅಪ್ಪನು ನನ್ನ ಸಂಭಾವನೆಯನ್ನು ಹೇಗೆ ಮಾಡುತ್ತಿದ್ದನೆಂಬದರ ಕಲ್ಪನೆಯನ್ನು ನೀವು ಸಹಜವಾಗಿಯೇ ಮಾಡಿಕೊಳ್ಳಬಹುದು. ಖುದ್ದ ಅಪ್ಪನ ಮನಸ್ಸಿನಲ್ಲಿಯೇ ನನ್ನ ವಿಷಯವಾಗಿ ಸಂಶಯವಿರಲು, ನನ್ನ ನಿರ್ದೋಷಿತನದ ಸಾಬೀತು ಎಷ್ಟರಮಟ್ಟಿಗಾದೀತೆಂಬದನ್ನು ಹೇಳಲಿಕ್ಕೇ ಬರಲಾರದು; ಆದರೆ ಇದಕ್ಕಿಂತಲೂ ಮನುಷ್ಯ ಸ್ವಭಾವದ ಮೋಜಿನ ಸಂಗತಿಯೊಂದನ್ನು ಹೇಳುತ್ತೇನೆ. ಒಮ್ಮೆ ತನ್ನ ಕೈಯಿಂದ ಏನಾಯಿತೋ, ಮನುಷ್ಯನು ಅದನ್ನೇ ಮತ್ತೆ ಮತ್ತೆ ಮಾಡುತ್ತ ಹೋಗುವನು. ಆತನ ಹೆಜ್ಜೆಯು ಸಹಸಾ ಹಿಂದಿರುಗುವದಿಲ್ಲ. ಆತನ ಪರಿಣಾಮವೇನಾದೀತೆಂಬದು ದೈವವನ್ನೇ ಅವಲಂಬಿಸಿರುತ್ತದೆ.

ಮಾ:—ತಮ್ಮಾ, ನೀನು ಮಾಡಿದ್ದೇ ವಿಹಿತವಾಯಿತು. ನಾವಾದರೂ ನಿನಗೆ ದೋಷ ಹೇಗೆ ಕೊಡಬೇಕು? ನಿಮ್ಮ ಮನೆಯ ಜನರನ್ನು ಮೂರು-ಮೂರು ಸಾರೆ ಎಣಿಸಿದರೂ ನಾವು ಮೂವರೇ. ಅವರಲ್ಲಿಯು ನಿನ್ನ ಹಿರಿಯರೇ ನಿನ್ನ ಸಂಕಟಕಾಲದಲ್ಲಿ ನಿಜವಾಗಿಯೂ ಉಪಯೋಗ ಬೀಳತಕ್ಕವರು. ಅವರ ಸ್ಥಿತಿಯನ್ನು ನೀನೇ ನಿನ್ನ ಬಾಯಿಂದ ವರ್ಣಿಸಿ ಬಿಟ್ಟಿರುತ್ತೀ! ಮತ್ತು ಅದು ನಿಜವಾಗಿಯೂ ಹಾಗೆಯೇ ಇದ್ದಿತು ಇನ್ನುಳಿದವರಲ್ಲಿ ನಾನು ನಿನ್ನ ವಯಸ್ಸಿನವಳು; ಮತ್ತು ನಿನಗಿಂತಲೂ ಹುಡುಗಬುದ್ಧಿಯವಳು! ಮತ್ತು ವಿಮಲೆಯಂತೂ ಹತ್ತುವರ್ಷದ ಹುಡುಗಿ! ಅವಳಿಗೆ ಅವಾಗಲಿ-ಇವಾಗಲಿ ಏನೂ ತಿಳಿಯುತ್ತಿರಲಿಲ್ಲ.

ವಿ:—ಇದೆಲ್ಲ ಆಗಿನ ಮಾತಾಯಿತು; ಆದರೆ ಅಣ್ಣಾ, ಈಗ ನಿನಗೆ ಮರಳಿ

ಬರಬೇಕೆಂದೇಕೆನಿಸಿತು?

ಪ್ರ:—ತಂಗೀ, ನೀನದನ್ನು ಕೇಳಿದ್ದು ವಿಹಿತವಾಯಿತು. ಹನ್ನೆರಡು ವರ್ಷಕ್ಕೊಮ್ಮೆ ಪ್ರತಿಯೊಂದು ಸಂಗತಿಯ ಸ್ಥಿತಿಯು ಬದಲಾಗುತ್ತದೆಂದು ಅನ್ನುತ್ತಾರೆ. ಆ ಹನ್ನೆರಡು ವರ್ಷಗಳ ಯುಗಾಂತರದ ಮೇಲೆ ನನ್ನ ವಿಶ್ವಾಸ ವಿದೆ. ನೀವು ಬೇಕಾದರೆ ನನ್ನನ್ನು ಭೋಳೇಭಾವಿಕನೆಂದುಕೊಳ್ಳಿರಿ! ಪಾಂಡವ ರಿಗೆ ಹನ್ನೆರಡು ವರ್ಷಗಳ ವನವಾಸದ ಶಿಕ್ಷೆಯಾಗಿತ್ತು. ರಾಮಚಂದ್ರನ ವನ ವಾಸವಾದರೂ ಹನ್ನೆರಡೇ ವರ್ಷದ್ದಾಯಿತು. ಹನ್ನೆರಡುವರ್ಷ ಏರಿದ ನಂತ ರವೇ ಆತನ ಎಲ್ಲ ಕಾರ್ಯಗಳು ಫಲಪ್ರದವಾದವು; ಆದರೆ ದೇವರಂತೆ ಮನು ಷ್ಯರುಗಳಿಗೂ ಈ ಹನ್ನೆರಡು ವರ್ಷದ ಯುಗಾಂತರದ ಅನುಭವ ಬರುತ್ತದೆ. ನನ್ನ ವನವಾಸದ ಹಾಗು ಅಜ್ಞಾತವಾಸದ ಹನ್ನೆರಡು ವರ್ಷಗಳು ಪೂರೈಸುವ ಸಮಯಕ್ಕೆ ನನಗೆ "ನಾನು ಇನ್ನು ತಿರುಗಿ ಹೋಗಬೇಕು, ಏನು ಆಗುವದೋ ಆಗಲಿ!" ಎಂಬ ಬುದ್ಧಿಯು ಪ್ರೇರಣೆಯಾಗಹತ್ತಿತು. ಇದಲ್ಲದೆ ಇನ್ನೊಂದು ಹೇಳಿಕೊಳ್ಳುವಂತಹ ಕಾರಣವು ಘಟಿಸಿತು. ನಮ್ಮ ಜೋಧ್ಯಪುರ ಸಂಸ್ಥಾನದ ಪಟ್ಟಕ್ಕೆ ಹೊಸ ಮಹಾರಾಜರು ಕುಳಿತರು. ಅವರಿಗೆ ಅಪೂರ್ಣ ಅಧಿಕಾರಗಳು ದೊರೆತಾಗ ಅವರು ಮಾಡಿದ ಭಾಷಣವು ವರ್ತಮಾನಪತ್ರಗಳಲ್ಲಿ ಪ್ರಕಟವಾ ದದ್ದು ನನಗೆ ಸಹವಾಗಿ ಓದಲಿಕ್ಕೆ ಸಿಕ್ಕಿತು. ಅದರಲ್ಲಿ ಅವರು "ನಾನು ದಿವಾಣ ಸಾಹೇಬರ ಕಾಲದ ಆಡಳಿತವನ್ನು ನ್ಯಾಯಬುದ್ಧಿಯಿಂದ ಚೌಕಶಿ ಮಾಡುವೆನು; ಹಾಗು ಆ ಮೇಲೆಯೇ ಸಂಪೂರ್ಣ ಅಧಿಕಾರ ವಹಿಸುವೆನು. ಅದುವರೆಗೆ ಈ ದಿವಾ ಣರು ತಮ್ಮ ಕೆಲಸದಲ್ಲಿಯೇ ಇರುವರು" ಎಂದು ಹೇಳಿರುವರು. ಯಾವ ಸಂಸ್ಥಾನಿಕನ ಬಾಯಿಂದಾದರೂ ಇಂಥ ಶಬ್ದಗಳು ಹೊರಡಬಹುದೆಂದು ಆದಾರಿಗಾದರೂ ಅನಿಸಿದ್ದೀತೇನು? ಆದರೆ ಆ ಭಾಷಣವನ್ನು ಓದಿ "ಹನ್ನೆರಡು ವರ್ಷಗಳ ನಂತರವಾದರೂ ನಮ್ಮ ಜೋಧ್ಯಪುರ ಸಂಸ್ಥಾನದೊಳಗಿನ ಆಡಳಿತದ ಚಕ್ರವು ಬದಲಿಸುವದು. ಈ ಸುಸಂಧಿಯು ಲಾಭಪಡೆದು ನನಗೆ ನ್ಯಾಯ ದೊರೆತರೆ ನೋಡಬೇಕು. ಲೆತ್ತದ ಫಾಸಿಯನ್ನು ಮತ್ತೊಮ್ಮೆ ಚೆನ್ನಾಗಿ ಚೆಲ್ಲಿ ನೋಡಬೇಕು, ಆ ಮೇಲೆ ಏನು ಬಿಳುವದೋ ಬೀಳಲಿ" ಎಂಬ ಯೋಚನೆಯು ನನ್ನ ಮನಸ್ಸಿ ನಲ್ಲಿ ಹುಟ್ಟಿದ್ದರಿಂದ ನಾನು ಮರಳಿ ಬರುವದನ್ನು ನಿಶ್ಚಯಿಸಿದೆನು; ಮತ್ತು ಆ ಕೂಡಲೆ ಮಾಯಿಯ ಹೆಸರಿಗೆ ಪತ್ರ ಒರೆದು ಟಪಾಲಿನಲ್ಲಿ ಚೆಲ್ಲಿದೆನು. ಪತ್ರದಲ್ಲಿ ಅದಕ್ಕಿಂತ ಹೆಚ್ಚು ಸ್ಪಷ್ಟವಾಗಿ ಬರೆಯಲು ಧೈರ್ಯವಾಗಲಿಲ್ಲ; ಯಾಕಂದರೆ, ಆ ಪತ್ರವು ಯಾರ ಕೈಗೆ ಸೇರುವದೋ ಆದಾರಿಗೆ ಗೊತ್ತು? ಅಂತೆಯೇ ನಾನು ಆ ಪತ್ರವನ್ನು ಅಷ್ಟು ಸಂದಿಗ್ಧವಾಗಿ ಬರೆದಿದ್ದೆನು. ಅದು ತ್ರಯಸ್ಥನ ಕೈಗೆ ಅಪ್ಪಿ

ತಪ್ಪಿ ಹೋದರೂ, ಯಾವನೊಬ್ಬ ಹುಚ್ಚ ಪೀರನು ಏನನ್ನಾದರೂ ಬರೆದು ಸುಮ್ಮನೆ ಪೋಸ್ಟಿಗೆ ದುಡ್ಡು ವೆಚ್ಚ ಮಾಡಿರುವನೆಂದು ತಿಳಿದು, ಅವನು ಅದನ್ನು ಹರಿದು ಹಾಕಬಹುದು. ಆ ಪತ್ರವು ಅಪ್ಪನ ಕೈಗೆ ಸಿಕ್ಕಿದ್ದರೆ ಆ ಬಗ್ಗೆ ಖಂಡಿತ ವಾಗಿ ಏನಾದೀತೆಂಬದರ ನಿಶ್ಚಯವು ನನ್ನ ಮನಸ್ಸಿನಲ್ಲಿ ಆಗಿರಲಿಲ್ಲ; ಆದರೆ ಮಾಯಿ, ಅದು ನಿನ್ನ ಕಡೆಗೆ ಬಂದು ತಲುಪಿತೆಂದರೆ ಮಾತ್ರ ನೀನು ಅದನ್ನು ಚೆನ್ನಾಗಿ ಗುರ್ತಿಸುವೆಯೆಂದು ನನ್ನ ಖಾತ್ರಿಯಿದ್ದಿತು.

ಮಾ:—ಅಹುದು. ತಮ್ಮಾ, ನಿನ್ನ ಇಷ್ಟಾರ್ಥದಂತೆಯೇ ಆಯಿತು; ಅಂದರೆ ತ್ರಯಸ್ಥರ ಕೈಗಂತೂ ನಿನ್ನ ಪತ್ರವು ಹೋಗಲೇ ಇಲ್ಲ; ಆದರೆ ಇವರ ಕೈಗೆ ಅದು ಪದ್ಧತಿಯಂತೆ ತಪ್ಪದೆ ಹೋಗತಕ್ಕದ್ದೇ. ಹೀಗಿದ್ದೂ, ಎಂದೂ ಆಗದಂತಹ ರೀತಿಯಿಂದ ಅದು ನೆಟ್ಟಗೆ ನನ್ನ ಕೈಯೊಳಗೇ ಬಂದು ಬಿದ್ದಿತು.

ವಿ:—ಆದರೆ ಅಣ್ಣಾ, ಅದು ನೆಟ್ಟಗೆ ಮಾಯಿಯ ಕೈಗೆ ಬಂದು ಬಿದ್ದದ್ದ ರಿಂದ ನಿನ್ನ ಕಾರ್ಯಭಾಗವೇನೋ ಆದಂತಾಯಿತು; ಆದರೆ ಅದು ತನ್ನ ಬೇರೊಂದು ವಿಪರೀತ ಗುಣ ತೋರಿಸದ ಹೊರತು ಮಾತ್ರ ಬಿಡಲಿಲ್ಲ.

ಪ್ರ:—ಅದೇನು?

ವಿ:—ಅದು ಹೀಗೆ. ಮಾಯಿಯ ಕೈಗೆ ಪರಸ್ಪರ ಪತ್ರ ಬಂದ ಬಗ್ಗೆ ಅಪ್ಪನಿಗೆ ಬಹು ಆಶ್ಚರ್ಯವೆನಿಸಿತು. ಅದರಿಂದ ಮಾಯಿಯ ವಿಷಯವಾಗಿ ಅವರ ಮನಸ್ಸಿನಲ್ಲಿ ಬರಬಾರದ ಸಂಶಯಗಳೆಲ್ಲ ಬಂದು ಬಿಟ್ಟವು. ಆ ಸಂಶಯ ದಿಂದ ಅವರಿಗೆ ಅರೆಹುಚ್ಚು ಹಿಡಿದಿದೆಯೆಂದರೂ ಸಲ್ಲಬಹುದು. ನಿನ್ನ ವಿಷಯ ವಾಗಿ ಅವರಿಗೆ ಹಾಗೆ ಸಂಶಯ ಬಂತು; ಮತ್ತು ಮಾಯಿಯ ಬಗ್ಗೆ ಹೀಗೆ ಸಂಶಯ ಬಂತು. ನಮ್ಮ ಸಂಸಾರದಲ್ಲಿ ನಾವು ನಾಲ್ವರೇ ಜನರು! ಮತ್ತು ನಮ್ಮ ಸಂಸಾರ ಸುಖದ ಚಿತ್ರವಿದು! ಧನ್ಯವಿದೆಯಲ್ಲವೆ ನಮ್ಮದು?

ಪ್ರ:—ತಂಗೀ, ಸಂಸಾರವು ಎಲ್ಲಿಯಾದರೂ ಹೀಗೆಯೇ ಇರುತ್ತದೆ. ನಾನು ಹನ್ನೆರಡು ವರ್ಷಗಳವರೆಗೆ ಸಂಸಾರದೊಳಗಿಂದ ಹೊರಟು ಹೋಗಿದ್ದರೂ ಆ ಮೊದಲು ಈ ಸಂಸಾರ ದುಃಖಕ್ಕೆ ಯಾವ ಕಾರಣವಿದ್ದಿತೋ, ಅದಂತೂ ಇನ್ನೂ ಹೊರಟು ಹೋಗಿಲ್ಲ; ಮತ್ತು ನಾನು ಹಿಂದಿರುಗಿ ಬರುವ ಸಮಯಕ್ಕೆ ನನ್ನಿಂದಲೇ ಈ ಸಂಸಾರ ದುಃಖಕ್ಕೆ ಮತ್ತೊಂದು ಕಾರಣವಾಯಿತೆಂಬ ಬಗ್ಗೆ ನನಗೆ ಬಹು ಕೆಡಕೆನಿಸುತ್ತದೆ. ಮೊದಲು ನಾನು ಅಪ್ಪನಿಗೊಬ್ಬನಿಗೇ ತ್ರಾಸದಾ ಯಕನಾಗಿದ್ದರೆ, ಈಗ ಮಾಯಿ, ನಿನಗೂ ನಾನು ತ್ರಾಸದಾಯಕನಾದೆನಲ್ಲವೆ? ಮಾಯಿ, ಈ ಬಗ್ಗೆ ಮಾತ್ರ ನನಗೆ ವಿಶೇಷ ಕೆಡಕೆನಿಸುತ್ತದೆ.

ಮಾ:—ತಮ್ಮಾ, ಪ್ರಭಾಕರಾ, ನೀನು ಹೀಗೆ ಇನ್ನೊಮ್ಮೆ ಅಡಿ ಗೀಡಿದೆ

ಯೆಂದರೆ ಇಲ್ಲವೆ ಮನಸ್ಸಿನಲ್ಲಿ ತಂದರೆ ನಿನಗೆ ನನ್ನ ಕೊರಳಾಣೆಯಿದೆ. ನಿನ್ನ ಪತ್ರದ ಮೂಲಕ ಇವರಿಗೆ ವಿಪರೀತ ಸಂಶಯ ಬಂದದ್ದೇನೋ ನಿಜವು; ಆದರೆ ನಿಜವಾದದ್ದನ್ನೇ ನುಡಿಯಬೇಕಾದರೆ, ನಾನು ಈಗಲೆ ಅಲ್ಲ; ನನ್ನ ಲಗ್ನವಾದಂದಿನಿಂದ ಬಹುತರ ಆಯುಷ್ಯವನ್ನು ಇಂಥ ಸಂಶಯಗಳಲ್ಲಿಯೇ ಕಳೆದಿರುವೆನು. ತಿಳಿಯಿತೇ? ನನ್ನನ್ನು ಮೂರನೇ ಸಂಬಂಧಕ್ಕಾಗಿ ನನ್ನ ತಂದೆ-ತಾಯಿಗಳು ಕೊಟ್ಟದ್ದೇ ನನ್ನ ದುರ್ದೈವವು! ಅದಕ್ಕೆ ಬೇರೆಯವರೇನು ಮಾಡುವರು?

ವಿ:—ಅಣ್ಣಾ, ಮಾಯಿಯನ್ನುವದೇ ನಿಜವು. ನೀನು ನಿನ್ನ ಜೀವಕ್ಕೆ ಎಳ್ಳಷ್ಟಾದರೂ ಹಚ್ಚಿಕೊಳ್ಳಬೇಡ. ನಾವು ಮೂವರೂ ಒಂದೇ ಗುಟ್ಟಿನವರಿರುವದೇನು ಸಾಮಾನ್ಯ ಸುಖವೇ? ಈ ಸೌಖ್ಯದ ಬಲದಿಂದ ನಾವು ಇದಕ್ಕಿಂತಲೂ ಹೆಚ್ಚಿನ ಸಂಕಟಗಳೊಳಗಿಂದ ಪಾರಾದೇವು. ನಾವೇನು ಇಲ್ಲಿ ಸುಖದಲ್ಲಿಯೇ ಇದ್ದೆವು. ನೀನು ಮಾತ್ರ ಹನ್ನೆರಡು ವರ್ಷಗಳ ವರೆಗೆ ವನವಾಸದ ದುಃಖವನ್ನನು ಭೋಗಿಸಿದೆ. ಆ ನಿನ್ನ ದುಃಖದಲ್ಲಿ ನಿನಗೆ ಒಂದಿಷ್ಟೂ ನೆರವಾಗಬಾರದ್ದಕ್ಕಾಗಿ ನಮಗೆ ಬಹು ಕೆಡಕೆನಿಸುತ್ತದೆ.

ಪ್ರ:—ತಂಗೀ, ನೀವು ಹೇಗೆ ದುಃಖದಲ್ಲಿ ಸುಖ ತಿಳಿದುಕೊಳ್ಳುವವರಿರುವಿರೋ, ನಾನಾದರೂ ಹಾಗೆಯೇ ಇರುತ್ತೇನೆ. ಹನ್ನೆರಡು ವರ್ಷಗಳ ಪರ್ಯಂತರ ಒಂದು ಬಗೆಯ ವನವಾಸವಿದ್ದಿತೇನೋ ನಿಜ; ಆದರೆ ಅದರ ದುಃಖವು ನನಗೆ ಅಷ್ಟೊಂದು ಅನಿಸಲಿಲ್ಲ. ಅಜ್ಞಾತವಾಸದ ದುಃಖವು ಮಾತ್ರ ನಿಜವಾಗಿಯೂ ಅನಿಸುತ್ತಿತು; ತಂಗೀ ಮತ್ತು ಮಾಯಿ, ನೀವು ಮಹಾಭಾರತವನ್ನು ಓದಿರುತ್ತೀರಿ. ಅದರಲ್ಲಿ ಪಾಂಡವರಿಗೆ ವನವಾಸಕ್ಕಿಂತಲೂ ವಿರಾಟ್‌ನಗರದಲ್ಲಿಯ ಅಜ್ಞಾತವಾಸದೊಳಗಿನ ದಿನಗಳೇ ಹೆಚ್ಚು ತ್ರಾಸದಾಯಕವಾದವಲ್ಲವೆ?

ಮಾ:—ಅಜ್ಞಾತವಾಸವು ದುಃಖದ್ದಂತೂ ನಿಜವೇ; ಆದರೆ ವನವಾಸದಲ್ಲಿ ನಿನಗೆ ದುಃಖವೇಕಿರಲಿಲ್ಲ? ನೀನು ಆಗ ಏನು ಮಾಡುತ್ತಿದ್ದೆ? ಎಲ್ಲಿರುತ್ತಿದ್ದೆ? ನಿನ್ನ ಊಟಪಾಟಗಳ ವ್ಯವಸ್ಥೆಯೇನಿದ್ದಿತು? ಅದೆಲ್ಲವೂ ಬಹಳ ಜೋಜಿಗದ ಸಂಗತಿಯೇ ಆಗಿರಬೇಕು. ಎಲ್ಲಕ್ಕಿಂತಲೂ ಆಶ್ಚರ್ಯವೆನಿಸುವದೇನಂದರೆ, ನೀನು ಹೋದಂದಿನಿಂದ ಇದುವರೆಗೆ ಒಂದು ಪತ್ರವನ್ನಾದರೂ ಅದೇಕೆ ಬರೆಯಲಿಲ್ಲ?

ಪ್ರ:—ಅದು ಎಲ್ಲ ಬಗೆಯಿಂದಲೂ ನನ್ನ ಅಪರಾಧವೇ ಆಗಿದೆ. ಆ ಬಗ್ಗೆ ತಿಳಿಸುವದಿಷ್ಟೇ, ಇತ್ತೀಚೆಗೆ ಕಂಡುಬರುವ ನನ್ನ ಸರಿಜೋಡಿಯ ಭಾವನಾವಶ ತರುಣರ ಪ್ರಮುಖ ಮಾದರಿಯೇ ನಾನಾಗಿರುವೆನೆಂದು ಅನ್ನಬಹುದು! ನಾನು ಈ ಜೋಧ್ಯಪುರ ಸಂಸ್ಥಾನದ ಸೀಮೆಯನ್ನು ಹನ್ನೆರಡು ವರ್ಷಗಳ ಪೂರ್ವದಲ್ಲಿ ದಾಟುವಾಗ ಈ ದುಷ್ಟ ಪಟ್ಟಣವನ್ನು ಹನ್ನೆರಡು ವರ್ಷಗಳ ವರೆಗೆ ಕಣ್ಣೆತ್ತಿ

ಕೂಡ ನೋಡಲಿಕ್ಕಿಲ್ಲೆಂದು ಆಣೆ ಮಾಡಿದ್ದೆನು. ಸಂಸ್ಥಾನಕ್ಕೆ ಗುಣಪೂರ್ಣನಾದ ಅರಸನಿರದ್ದರಿಂದ ತಂದೆಯಿಲ್ಲ; ಮತ್ತು ನನ್ನ ಮನೆಯಲ್ಲಿದ್ದ ನನ್ನ ತಂದೆಯು ನನ್ನ ವಿಷಯವಾಗಿ ಅನ್ಯಾಯದವನು! ಅಂತೆಯೇ ನಾನು ಈ ಊರು ಹಾಗು ಈ ಮನೆಯನ್ನು ನಿರಂತರವಾಗಿ ತ್ಯಜಿಸಲಿಕ್ಕೆ ಸಿದ್ಧನಾದೆನು; ಮತ್ತು ಆ ನನ್ನ ಹನ್ನೆರಡು ವರ್ಷಗಳು ತುಂಬಲಿಕ್ಕೂ ಮತ್ತು ಈ ಮೊದಲು ಹೇಳಿದ ನನ್ನ ಹೊಸ ಮಹಾರಾಜರ ದರ್ಬಾರದೊಳಗಿನ ಭಾಷಣವು ಓದಲಿಕ್ಕೆ ದೊರೆಯಲಿಕ್ಕೂ ಗಂಟೇ ಬಿದ್ದಿತು. ಅದೇ ಕ್ಷಣದಲ್ಲಿ ನಾನು ಮರಳಿ ಬರುವ ನಿಶ್ಚಯ ಮಾಡಿದೆನು; ಮತ್ತು ಆ ಕೂಡಲೆ ಮಾಯಿಯ ಹೆಸರಿಗೆ ಪತ್ರಬರೆದನು. ಇನ್ನು ನನ್ನ ವನವಾಸದಲ್ಲಿ ನನಗೆ ಹೆಚ್ಚಾಗಿ ಕಷ್ಟವಹಿಸಬೇಕಾಗಲಿಲ್ಲೆಂಬದನ್ನು ಸ್ವಲ್ಪದರಲ್ಲಿಯೇ ತಿಳಿಸುತ್ತೇನೆ; ಕೇಳಿರಿ. ನಾನು ಜೋಧ್ಯಪುರವನ್ನು ಬಿಟ್ಟು ಮೊಗಲಾಯಿಯ ಕಡೆಗೆ ಹೋಗುತ್ತಿರುವಾಗ ಅಡ್ಡದಾರಿಯ ಹಿಡಿದು ಗುಪ್ತರೀತಿಯಿಂದ ಸಂಚರಿಸುತ್ತ ಹದಿನೈದು ಇಪ್ಪತ್ತು ದಿನಗಳ ನಂತರ ಮೊಗಲಾಯಿಯ ಸೀಮೆಯನ್ನು ಸೇರಿದೆನು. ಆ ಮೇಲೆ ತುಸ ನಿರ್ಧಾಸ್ತನಾದೆನು. ಆತ್ಮರಕ್ಷಣದ ಎರಡನೇ ಉಪಾಯವೆಂದು ನಾನು ಮೌನವ್ರತವನ್ನು ಸ್ವೀಕರಿಸಿದ ವೇಷ ತಾಳಿದ್ದೆನು. ತಾರುಣ್ಯದ ಉಮೇದೆಂದು ಮೊದಲೇ ತಲೆಯ ಕೂದಲುಗಳನ್ನು ಬೆಳೆಯಿಸಿದ್ದೆನು. ಎಣ್ಣೆಯ ಸ್ಪರ್ಶವು ವರ್ಜ್ಯವಾದ ಕೂಡಲೆ ಅವು ಜಟೆಯಲ್ಲಿ ರೂಪಾಂತರಗೊಂಡವು! ಮತ್ತು ಗಡ್ಡ-ಮೀಸೆಗಳಾದರೂ ಕ್ರಮೇಣ ಬೆಳೆಯತೊಡಗಿದವು. ಈ ಬಗ್ಗೆಯಿಂದ ನಾನು ಅಲ್ಲಿ ಬಾವಾಜಿಯಾದೆನು! ಮತ್ತು ಆಗ ಆ ಬಾವಾನ ವೇಷವು ನನಗೆ ಒಮ್ಮೆ ಸಾಧಿಸಿತು. ನಾನು ಮನೆಯಲ್ಲಿರುವಾಗ ಕೂಡ ಹೆಚ್ಚಾಗಿ ಹಾಲು ಕುಡಿಯುವದೇ ನನಗೆ ಸೇರುತ್ತಿತ್ತೆಂಬದು ಮಾಯಿಗೆ ಗೊತ್ತೇ ಇದೆ. ಆಗ ಸಂಜೆ-ಮುಂಜಾವುಗಳಲ್ಲಿ ತಾಲೀಮು ಮಾಡಿ ಬಂದೆನೆಂದರೆ, ಧಾರೋಷ್ಣ ಹಾಲನ್ನು ಸ್ವಚ್ಛವಾದ ಅರಿವೆಯಲ್ಲಿ ಸೋಸಿ ನನ್ನ ಸಲುವಾಗಿ ಕಪಾಟಿನಲ್ಲಿ ಜೋಕಂತ ತೆಗೆದಿಟ್ಟಿದ್ದ ಇಡಿ ಪಕ್ಕಾ ಸೇರಿನ ಪಾತ್ರೆಯನ್ನು ನನ್ನ ಮುಂದಿರಿಸುವ ಮೊದಲನೇ ಕೆಲಸವು ಮಾಯಿಯದೇ ಆಗಿತ್ತು. ಸುದೈವದಿಂದ ಮೊಗಲಾಯಿಯಲ್ಲಿ ಹಾಲು-ಹೈನುಗಳಿಗೇನೂ ಕೊರತೆಯಿಲ್ಲ; ಮತ್ತು ಮೊಗಲಾಯಿಯೊಳಗಿನ ಬಹು ಜನ ಸಮಾಜವು ವಿದ್ಯೆ-ಬುದ್ಧಿಗಳಲ್ಲಿ ಹಿಂದುಳಿದವರಾಗಿದ್ದರೂ, ಅತಿಥಿ-ಅಭ್ಯಾಗತರ ಪರಾಮರ್ಷ ತಕ್ಕೊಳ್ಳುವ ಕೆಲಸದಲ್ಲಿ ಒಳ್ಳೇ ಅಗತ್ಯದವರಿರುತ್ತಾರೆ. ಅಂತೆಯೇ ನನಗೆ ಯಾವ ಊರಲ್ಲಾದರೂ ದಿನಾಲು ಎರಡು-ಮೂರು ಸೇರು ಹಾಲಿಗೆ ಕೊರತೆಯಾಗಲಿಲ್ಲ; ಆದರೆ ಆ ಶ್ರೇಯಸ್ಸಿನ ಬಹು ದೊಡ್ಡ ಭಾಗವನ್ನು ನನ್ನಲ್ಲಿಯ ಬುವಾಶಾಹಿಗೇ ಕೊಡಬೇಕಾಗುವದು! ಕೆಲ ದಿನಗಳ ನಂತರ ನಾನು ಬೀದರ

ಸುಭೆಯು ಅರಣ್ಯವನ್ನು ಹೊಕ್ಕು ಸಂಚರಿಸತೊಡಗಿದೆನು. ಅಲ್ಲಿ ಒಮ್ಮೊಮ್ಮೆ ಆಕಳ ಇಲ್ಲವೆ ಎಮ್ಮೆಯು ಅಥವಾ ಆಡಿನ ಹಾಲು ಸಿಗುತ್ತಿತ್ತು; ಆದರೆ ಏನಾದರೂ ಹಾಲಿಗೆ ಮಾತ್ರ ಎಂದೂ ಎಲ್ಲಿಯೂ ಕೊರತೆಯುಂತಾಗಲಿಲ್ಲ. ಈ ರೀತಿಯಾಗಿ ಒಂದು ವರ್ಷ ಸಂಚರಿಸಿದ ಬಳಿಕ 'ಗಂಗನಾಥ' ಎಂಬ ಹೆಸರಿನ ಗುಡ್ಡದ ಓರೆಯೊಳಗಿನ ಊರ ಬಳಿಯು ಒಂದು ಪ್ರಾಚೀನ ಶಿವಾಲಯುವು ನನಗೆ ದೊರಕಿತು; ಮತ್ತು ನಾನು ಅಲ್ಲಿಯೇ ನನ್ನ ವಾಸ್ತವ್ಯವನ್ನು ಸ್ಥಿರಗೊಳಿಸಿದ್ದನ್ನು ಇಲ್ಲಿಗೆ ಹೊರಡುವ ಮೊದಲು ನಾಲ್ಕಾರು ತಿಂಗಳುಗಳ ವರೆಗೂ ಅಲ್ಲಿಂದ ಕಿತ್ತಿಲ್ಲ.

ವಿ:—ಆದರೆ ಅಣ್ಣಾ, ಬಾವಾಜಿಯುವರ ಸಂಪೂರ್ಣ ಜೀವನಯಾತ್ರೆಯು ಹನ್ನೆರಡು ವರ್ಷಗಳು ಒರಿಯು ಹಾಲಿನ ಮೇಲೆಯೇ ನಿರ್ವಹಿಸಿದವೇನು?

ಪ್ರ:—ನೀನು ಹುಚ್ಚು ಹುಡುಗಿ! ತಂಗೀ, ಬುವಾಶಾಹಿಯು ಪ್ರಸ್ಥವೂ ವೈಭವವೂ ಪಟ್ಟಣಗಳಿಗಿಂತ ಹಳ್ಳಿಯೂರಲ್ಲಿ, ಹಳ್ಳಿಯುಗಿಂತ ಅರಣ್ಯದಲ್ಲಿ ಚೆನ್ನಾಗಿ ಬೆಳೆಯುತ್ತದೆ. ಪ್ರತ್ಯಕ್ಷ ಅನುಭವ ಪಡೆಯದ ಹೊರತು ತಿಳಿಯಲಾರದದು. ಆ ಗುಡಿಯು ಊರಿಂದ ತುಸ ದೂರ ಅರಣ್ಯದಲ್ಲಿಯೇ ಇದ್ದಿತು; ಆದರೂ ಸುತ್ತಮುತ್ತಲಿನ ಹತ್ತು-ಹದಿನೈದು ಹರದಾರಿಗಳೊಳಗಿನ ಜನಂಗೆ ಅದೇ ಕ್ಷೇತ್ರವಾಗಿತ್ತು. ಆ ದೇವರ ಭಕ್ತರಲ್ಲಿ ಬಡವರಂತೆ ಶ್ರೀಮಂತರೂ ಇದ್ದರು. ನನ್ನೊಳಗಿನ ಕಿಂಚಿತ್ ವಿದ್ಯೆಯು ಒಲದಿಂದ ನಾನು ಅವರ ಗುರುವಾದೆನು. ನನ್ನ ಶರೀರ ಸಂಪತ್ತಿಯು ಬಲದಿಂದ ನಾನು ಅವರುಗಳ ಮುಖ್ಯ ಜಟ್ಟಿಯೂ, ನಿಷ್ಣಾತ ಶಿಪಾಯಿಯೂ ಆದೆನು. ಉಪಯುಕ್ತತೆಯು ಮೂಲಕ ನಾನು ಅವರ ಆಪ್ತನೂ, ಮಿತ್ರನೂ, ಮುಖಂಡನೂ ಆದೆನು. ಪವಿತ್ರವಾದ ಆಚರಣೆಯು ಮೂಲಕ ನಾನು ಋಷಿಯಾದೆನು; ಮತ್ತು ನಿಃಸ್ವಾರ್ಥತೆಯಿಂದ ನಾನು ಅವರುಗಳಿಗೆ ದೇವರಾದೆನು! ಇತ್ತ ಕಡೆಯು ತಾಲೀಮು ಖಾನೆಯೊಳಗಿನ ಸಾಮು-ಬೈಠಕಿಗಳನ್ನು ಬಿಟ್ಟು, ನಾನು ದಿನಾಲು ಪ್ರಾತಃಕಾಲದಲ್ಲಿ ಸಾವಿರಗಟ್ಟಿ ಸೂರ್ಯನಮುಸ್ಕಾರಗಳನ್ನು ಹಾಕತೊಡಗಿದೆನು. ಮನೆಯಲ್ಲಿರುವಾಗಲೂ ನಾನು ಸ್ನಾನ-ಸಂಧ್ಯಾವಂದನೆಗಳನ್ನು ಮಾಡುತ್ತಿದ್ದೆನು; ಅವುಗಳನ್ನೇ ಅಲ್ಲಿ ತುಸ ಜಿಗಿಸಿದೆನಷ್ಟೆ! ಬೇರೆ ಕೆಲಸವಿರದ್ದರಿಂದ ಜಪಾನುಷ್ಠಾನಗಳಿಗೂ ಪ್ರಾರಂಭಿಸಿದೆನು. ನನ್ನೊಡನೆ ಯಾವ ಪುಸ್ತಕವೂ ಇರಲಿಲ್ಲ; ನನಗೆ ಪುರಾಣ ಹೇಳಬರುತ್ತಿರಲಿಲ್ಲ; ಒಂದು ವೇಳೆ ನಾನು ಪ್ರಯತ್ನಪೂರ್ವಕವಾಗಿ ಪುರಾಣ ಹೇಳ ಹತ್ತಿದ್ದರೂ ಅದನ್ನು ಕೇಳಲಿಕ್ಕೆ ಅಲ್ಲಿ ಎಷ್ಟು ಜನರು ದೊರೆಯುತ್ತಿದ್ದರೆಂಬದೊಂದು ಯೋಚನೆಯು ವಿಷಯುವೇ ಆಗಿದೆ; ಆದರೆ ನನಗೆ ಕಥೆಗಳನ್ನು ಹೇಳಲಿಕ್ಕೆ ಚೆನ್ನಾಗಿ ಬರುತ್ತದೆ. ಆ

ನನ್ನ ಕಥಾನಿರೂಪಣದ ಉಪಯೋಗವು ಅಲ್ಲಿ ನನಗೂ, ಅಲ್ಲಿಯವರಿಗೂ ಬಹು ಚೆನ್ನಾಗಿ ಆಯಿತು. ಆ ಹದಿನೈದು-ಇಪ್ಪತ್ತು ಹರದಾರಿಯ ಪ್ರದೇಶದೊಳಗಿನ ಬಹು ಜನ ಹುಡುಗರನ್ನು ನಾನು ಜಟ್ಟಿಗಳನ್ನಾಗಿ ಮಾಡಿದೆನು. ಮಳೆಗಾಲದಲ್ಲಿ ಹೊಳೆಗಳೊಳಗೆ ಚೆನ್ನಾಗಿ ಈಸುವವರಿಗೆ ನಾನು ಇನಾಮು-ಬಕ್ಷೀಸು ಕೊಡುತ್ತಿದ್ದೆನು. ತರುಣ ಹುಡುಗರನ್ನು ಸಂಗಡ ಕರಕೊಂಡು ದೂರದ ಅರಣ್ಯಕ್ಕೆ ಬೇಟೆಗೆಂದು ಹೋಗುತ್ತಿದ್ದೆನು. ಭಾವಿಕ ಜನರು ನನಗೆ ಹೆಚ್ಚಾಗಿ ಸಿಧಾ-ಸಾಮಗ್ರಿಗಳನ್ನೂ ಮಿಠಾಯಿಗಳನ್ನೂ ತಂದು ಕೊಡುತ್ತಿದ್ದುದರಿಂದ, ಅವುಗಳನ್ನು ಹೆರವರಿಗೆ ಹಂಚಿ ತೀರಿಸಬೇಕಾದರೆ ನನಗೆ ಸಾಕು ಸಾಕಾಗುತ್ತಿತ್ತು! ತಾತ್ಪರ್ಯವೇನಂದರೆ, ನನ್ನ ಸುಖ-ಸಮಾಧಾನಗಳಿಗೆ ಅಲ್ಲಿ ಕೊಂಚವೂ ಕೊರತೆಯೆನಿಸಲಿಲ್ಲ; ಆದರೆ ಮನಸ್ಸಿನೊಳಗಿನ ಕಟಕಟಿಯು ಮಾತ್ರ ಕಡಿಮೆಯಾಗಲಿಲ್ಲ. ಅದನ್ನು ಕಡಿಮೆಮಾಡಿಕೊಳ್ಳುವದಕ್ಕಾಗಿ ನಾನು ಜನಾನುಷ್ಠಾನಗಳ ಏಕಾಂತವಾಸದ ಉಪಯೋಗವನ್ನು ಮಾಡಿಕೊಳ್ಳಬೇಕಾಯಿತು. ನಾನು ಮಾಡಿದ ಶಪಥನ್ನು ಪಾಲಿಸುವ ಬಗ್ಗೆ ನನಗೊಳ್ಳೇ ಅಭಿಮಾನವೆನಿಸುತ್ತಿತ್ತು. ಆ ದೃಷ್ಟಿಯಿಂದಲೂ ಮನಸ್ಸಿಗೆ ಖಂಬೀರತೆಯೆನಿಸಿ ಮನದೊಳಗಿನ ಕಟಕಟಿಯು ಕಡಿಮೆಯಾಗುತ್ತಿತ್ತು.

ವಿ:—ಅಣ್ಣಾ, ನಿಮ್ಮಂತಹ ಶಪಥದ ಜನರೊಡನೆ ನಡೆಯುವದೆಂದರೆ ಬಹು ಕಠಿಣ ಪ್ರಸಂಗವೇ ಸರಿ! ಇನ್ನು ಇತ್ತ ಮರಳಿ ಬರುವಾಗ ಅಂಥದೇ ಯಾವದೊಂದು ಶಪಥ ಮಾಡಿ ಒಂದಿಲ್ಲವಷ್ಟೇ? ಹಾಗಿದ್ದರೆ ನಿನ್ನ ಮುಂದಿನ ಕಾರ್ಯಕ್ರಮದ ವಿಚಾರದಲ್ಲಿ ನಾವು ಮನಸ್ಸನ್ನೇ ಹಾಕದಂತಾದೀತು.

ಪ್ರ:—ಛೇ! ಛೇ! ಅಂತಹ ಅಂಜಿಕೆಯೇನೂ ಇರುವದಿಲ್ಲ. ಇಲ್ಲಿಂದ ಹೋಗುವಾಗ ಮಾಯಿಯ ಆಲೋಚನೆ ಕೂಡ ಕೇಳಿಕೊಳ್ಳಲಿಕ್ಕೆ ಹೇಗೆ ಅಶಕ್ಯವಾಯಿತೆಂಬದನ್ನು ಈ ಮೊದಲೇ ನಾನು ನಿಮಗೆ ತಿಳಿಸಿರುತ್ತೇನೆ; ಮತ್ತು ನೀ-ನಂತೂ ಆಗ ಕೇವಲ ಹತ್ತೇ ವರ್ಷದವಳಿದ್ದೆ. ನಾನು ಹಾಗೆ ಹೊರಟು ಹೋ-ಗುವಾಗ ನಿನಗೆ ಕಾಣಿಸಿಕೊಂಡಿದ್ದರೆ, ನೀನು ನನ್ನ ಕೊರಳಿಗೆ ತೆಕ್ಕೆ ಬಿದ್ದು ಗಟ್ಟಿಯಾಗಿ ಅಳುತ್ತ "ಅಣ್ಣಾ, ನನ್ನನ್ನೂ ನಿನ್ನ ಸಂಗಡ ಕರದೊಯ್ಯೋ"ಂದು ಒದರಿ ಒದರಿ, ಇಡಿ ಓಣಿಯ ಜನರನ್ನೆಲ್ಲ ನೆರಿಸಿಬಿಡುತ್ತಿದ್ದೆ; ಆದರೆ ಈಗ....

ಮಾ:—ತಮ್ಮಾ, ಪ್ರಭಾಕರಾ, ಈಗ ಅಂಥ ಹುಡುಗ ಬುದ್ಧಿಯು ಈ ನಿನ್ನ ತಂಗಿಯಲ್ಲುಳಿದಿಲ್ಲಪ್ಪಾ! ನಿನಗೇನು ಹೇಳಲಿ? ನಮ್ಮ ವಿಮಲೆಯೆಂದರೆ ಈಗೊಂದು ಪ್ರಕರ್ಣವೇ ಆಗಿ ಕುಳಿತಿದೆ! ವಿದ್ಯೆಯಲ್ಲಿ ಇವಳು ನಿನ್ನ ಪರೀಕ್ಷೆಯನ್ನು ಕೂಡ ತಕ್ಕೊಂಡಾಳು. ವಾದದಲ್ಲಿ ಜೋದ್ಯಪುರ ಪಟ್ಟಣದೊಳಗಿನ ಬೇಕಾದಂಥ ಪ್ರೌಢ ಬುದ್ಧಿವಂತನನ್ನು ಗೆದ್ದಾಳು. ಇವರೀಗ ಸ್ಕೂಲ ಮಿಸ್ಟ್ರೆ

ಸ್ಥಾಗಿರುತ್ತಾರಪ್ಪಾ! ಇವರು ಚಿಕ್ಕ-ದೊಡ್ಡ ಕೆಲಸ ಸಾಲೆಯುಟ್ಟಿದ್ದಾರೆ; ಮತ್ತು ದಿವಾಣಸಾಹೇಬರಿಂದ ಊರೊಳಗಿನವರಾರಿಗಾದರೂ ಹೆಚ್ಚು-ಕಡಿಮೆ ಕೇಡುಂಟಾದರೆ, ಅದನ್ನು ಮನಸ್ಸಿಗೆ ಹಚ್ಚುವ ಸ್ವಭಾವ ನಿನ್ನಂತೆಯೇ ನಿನ್ನ ತಂಗಿಯಾಗಿರುತ್ತಾಳೆ. ಇಂಥ ಕೆಲಸಗಳ ಬಗ್ಗೆ ಮನೆಯವರ ಸಿಟ್ಟು ನಿನ್ನ ಮೇಲೆ ಹೇಗಾಯಿತೋ, ಹಾಗೆಯೇ ಇವಳ ಮೇಲೂ ಎಂದಾದರೊಮ್ಮೆ ಆದೀತೆಂದು ನನಗೆ ಯಾವಾಗಲೂ ಅಂಜಿಕೆಯೆನಿಸುತ್ತದಪ್ಪೇ; ಆದರೆ ಈ ವಿಷಯದಲ್ಲಿ ಇವಳ ಅಪರಾಧಗಳೆಲ್ಲ ಅವರಿಂದ ಮಾಫಿಯಾಗಿರಬಹುದಾಗಿವೆ.

ಪ್ರ:—ತಂಗೀ, ಮಾಯಿಯ ಬಾಯಿಂದ ನಿನ್ನ ಈ ವರ್ಣನವನ್ನು ಕೇಳಿ ನನಗೆಷ್ಟು ಆನಂದವಾಗಿದೆಯೆನ್ನಲಿ! ತಂಗೀ, ನಿನಗಿದೆಲ್ಲ ಬುದ್ಧಿವಂತಿಕೆಯನ್ನು ಅದಾರು ಕಲಿಸಿಕೊಟ್ಟರು? ಆದರೆ ನಾನೆಂಥ ದಡ್ಡನು? ಇಂಥ ಸಂಗತಿಗಳನ್ನು ಕಲಿಸುವವರಾದರೂ ಎಷ್ಟೆಂದು ಕಲಿಸುವರು? ಹಾಗೂ ಕಲಿಯುವವರಾದರೂ ಹೇಗೆ ಕಲಿಯುವರು? ಅದೆಲ್ಲ ಹುಟ್ಟುಗುಣವೇ ಆಗಿರಬೇಕಾಗುತ್ತದೆ. ದೇವರ ಕೃಪೆಯೇ ನಮ್ಮ ತಂಗಿಯ ಮೇಲೆ ಆಗಿರಬೇಕು! ಮಾಯಿ, ಅಪ್ಪನು ಇವಳ ಎಲ್ಲ ಅಪರಾಧಗಳನ್ನು ಮಾಫಗೊಳಿಸಿರುತ್ತಾನೆಂದು ನೀನನ್ನುವದಿಲ್ಲವೆ? ಆದರೆ ಅದರಲ್ಲಿ ಅಪ್ಪನಿಗಿಂತ ತಂಗಿಯ ಗುಣಗಳೇ ಹೆಚ್ಚೆಂದು ನನಗನಿಸುತ್ತದೆಂಬುದು ನಿಜವು. ಇವಳಿಂದ ಅಪರಾಧವೇ ಘಟಿಸುತ್ತಿರದಿದ್ದರೆ, ಅಪ್ಪನು ಇವಳನ್ನು ಮಾಫಿ ಮಾಡುವದೇನು?

ಮಾ:—ಪ್ರಭಾಕರಾ, ಆದರೆ ಅವರು ಹಾಗೆ ಬೆಂಕಿ ಕಾರಲಿಕ್ಕೆ ನಿನ್ನ ಕೈಯಿಂದಲಾದರೂ ಅದೇನು ಅಪರಾಧವಾಗಿದ್ದಿತು? ಇನ್ನು ನೀನು ದಿವಾಣಸಾಹೇಬರ ಬಗ್ಗೆ ಬೊಬ್ಬಾಟ ಮಾಡುತ್ತಿದ್ದಂತೆ ಇವಳಾದರೂ ಕಡಿಮೆ ಬೊಬ್ಬಾಟ ಮಾಡುವಳೇನು? ದಿವಾಣಸಾಹೇಬರ ವಿರುದ್ಧವಾಗಿ ಅವರೆದುರಿಗೆ ಇವಳು ತೀರ ಸ್ಪಷ್ಟವಾಗಿ ಮಾತಾಡುತ್ತಿರುತ್ತಾಳೆ.

ಪ್ರ:—ಮಾಯಿ, ನಾನು ನಿಜವಾಗಿಯೂ ಭಾಗ್ಯವಂತನೇ! ಯಾಕಂದರೆ ನಾನು ಆಗ ಮಾಡುತ್ತಿದ್ದ ಕೆಲಸವು ಸತ್ಕೃತ್ಯವೇ ಆಗಿತ್ತೆಂಬುದಕ್ಕೆ ಇದೇ ಅಪ್ರತ್ಯಕ್ಷ ಪುರಾವೆಯಾಗಿದೆ. ನನ್ನ ತಂಗಿಯು ನನಗೆ ಸದ್ಗುಣಗಳ ಪುತ್ಥಳಿಯಂತೆ ತೋರುವಳು. ಇವಳ ದೃಷ್ಟಿಯಲ್ಲಿ ನನಗೆ ಸತ್ಯ, ಔದಾರ್ಯ ಮತ್ತು ಧೈರ್ಯಗಳ ತೇಜವು ತುಂಬಿ ತುಳುಕುತ್ತಿರುವಂತೆ ಕಾಣುತ್ತದೆ. ನಾವು ಹುಡುಗರು ನಮ್ಮ ಜನಕರ ವೈರ ಇಲ್ಲವೆ ಶತ್ರುತ್ವವನ್ನು ಮಾಡಲಿಕ್ಕೆ ಏನೂ ಕಾರಣವಿಲ್ಲ; ಮತ್ತು ಯಾವದು ಅವರಿಗೆ ಸೇರುವದಿಲ್ಲವೋ ನಾವು ಅದನ್ನು ಮಾಡುವದಾದರೂ ಅವರ ಶತ್ರುತ್ವವಲ್ಲ; ಆದರೆ ಲೋಕಗೊಳಗೆ ಸೇಡಿನದೆಂದು ಒಂದು ವಿಶಿಷ್ಟ ದೇವತೆ

ಯಿರುವದೆಂಬದಕ್ಕೆ ಸಂದೇಹವಿಲ್ಲ. ಅಂತೆಯೇ ಅದು ತಂದೆಯು ಕೈಯಿಂದಾಗುವ ಕೆಟ್ಟ ಕೆಲಸಗಳ ನಿಷೇಧವನ್ನು ಪ್ರತ್ಯಕ್ಷ ಅತನ ಮಕ್ಕಳ ಪ್ರವೃತ್ತಿಯಿಂದಲೂ ಕೃತಿಗಳಿಂದಲೂ ಮಾಡಿಸುತ್ತದೆ. ಅಪ್ಪನು ನನ್ನ ಮೇಲೆ ಬೇಕಾದಷ್ಟು ಸಿಟ್ಟಾಗಲಿ; ಆದರೆ ತಂಗಿಯ ಮೇಲೆ ಅವನು ಸಿಟ್ಟಾಗದಿರುವದಕ್ಕೆ ಆ ದೇವತೆಯು ಯೋಜನೆಯೇ ಕಾರಣವಾಗಿರಬೇಕು. ತಂಗಿಯು ಮೇಲಿನ ಅಪ್ಪನ ಪ್ರೇಮವು ಅವನಿಗೆ ಸುಖಪ್ರದವಾಗಿದ್ದರೂ, ಇವಳ ಮತಗಳು ಅವನಿಗೆ ಉಪೇಕ್ಷಣೀಯಗಳಾಗಿ ತೋರುವದೇ ಅಪ್ಪನಿಗೆ ಈಶ್ವರೀ ಶಿಕ್ಷೆಯಾಗಿದೆ!

ಪ:—ಆದರೆ ಅಣ್ಣಾ! ಹೀಗೆ ಇಲ್ಲದ ಹರಟೆ ಕೊಚ್ಚುತ್ತ ಕೂಡ್ರುವ ಕಾಲವೇನಿದು? ಇಂದಿಲ್ಲ ನಾಳೆಗೆ ಅಪ್ಪನು ಸ್ಮೃತಿ ಹೊಂದುವನು. ಆಗ, ಇಲ್ಲವೆ ಅವನು ಹೀಗೆಯೇ ಅತಿಭ್ರಮದಲ್ಲಿದ್ದರೂ ನೀನು ನಿನ್ನ ಮುಂದಿನ ಬೇತನ್ನೇನು ನಿಶ್ಚಯಿಸಿರುತ್ತೀ?

ಪ್ರ:—ನನ್ನಂಥವನ ಜೀತ್ರೆಂದರೇನು, ಕಾಡುಹಂದಿಯು ಮುಸುಡಿಯೇ! ಹನ್ನೆರಡು ವರ್ಷಗಳ ಹಿಂದೆ ಇಲ್ಲಿ ಸಂಸ್ಥಾನದ ಅಧಿಕಾರಿಗಳ ವಿರುದ್ಧವಾಗಿ ಚಳವಳವನ್ನೆಬ್ಬಿಸಿದಾಗ ನಾನು ಎಡಬಲಗಳ ಕಡೆಗೆ ನೋಡಲಿಲ್ಲ; ಹಿಡಿಯಲಿಕ್ಕೆ ಬಂದಾಗಲೇ ಮನೆಯಿಂದ ಹೊರಬಿದ್ದು ಓಡಿಹೋಗುವದನ್ನು ನಿಶ್ಚಯಿಸಿದೆನು; ಮತ್ತು ಅದನ್ನು ಕೂಡ ಅತ್ತಿತ್ತ ಹೊರಳಿ ನೋಡದೆ ಅಮಲಿನಲ್ಲಿ ತಂದೆನು. ಹನ್ನೆರಡು ವರ್ಷಗಳ ವರೆಗೆ ಇತ್ತ ಈ ಊರ ಕಡೆ ಹೊರಳಿ ನೋಡಲಿಕ್ಕಿಲ್ಲೆಂದು ನಾನು ಶಪಥತೊಟ್ಟೆನು; ಮತ್ತು ಅದನ್ನು ಏಕನಿಷ್ಠೆಯಿಂದ ಹೇಗೆ ಪಾಲಿಸಿದೆನೆಂಬನ್ನು ನೀವು ನೋಡಿರುತ್ತೀರಿ. ತಿರುಗಿ ಬರಬೇಕೆಂದು ನಿಶ್ಚಯಿಸಿದೊಡನೆಯೇ ನಾನು ಹೊರಟು ನೆಟ್ಟಗೆ ಇಲ್ಲಿಗೆ ಬಂದು ಬಿಟ್ಟಿರುತ್ತೇನೆ; ಮತ್ತು ಇನ್ನು ನೆಟ್ಟಗೆ ಹೊಸ ಮಹಾರಾಜರ ಎದುರಿಗೆ ಹೋಗಿ ನಿಂತು ನನ್ನ ನ್ಯಾಯವನ್ನು ಯೋಗ್ಯರೀತಿಯಿಂದ ಬಗೆಹರಿಸಿರೆಂದು ಕೇಳಿಕೊಳ್ಳುವದನ್ನು ಗೊತ್ತು ಮಾಡಿಕೊಂಡಿದ್ದೇನೆ. ಮುಂದ ನನ್ನ ದೈವದಲ್ಲಿದ್ದಂತೆ ಆದೀತು. ನಿಮ್ಮಿಬ್ಬರ ಹೊರತು ಈ ಜಗತ್ತಿನಲ್ಲಿ ನನಗೆ ಬೇರೆಯವರ ಯಾವ ಪಾಶವೂ ಇಲ್ಲೆಂಬದನ್ನು ನೀವೇ ನೋಡುತ್ತಿರುವಿರಿ. ತಲೆಯಲ್ಲಿ ಪ್ರತಿಯೊಂದು ಕಾಲಕ್ಕೆ ಯಾವ ಕಲ್ಪನೆಯು ಸಂಚರಿಸುತ್ತಿರುತ್ತದೋ, ಅದನ್ನು ಅನುಭವಕ್ಕೆ ತಂದುಕೊಳ್ಳುವದರ ಹೊರತು ನನಗೆ ಬೇರೊಂದು ಉಮೇದಿಲ್ಲ. ಮಾಯಿ, ನಿನ್ನ ದರ್ಶನವು ಮತ್ತೆ ಆಯಿತು. ಚಿಕ್ಕವಳಿದ್ದ ತಂಗಿಯು ದೊಡ್ಡವಳಾದದ್ದನ್ನು ನೋಡಿದೆನು. ಇನ್ನು ನನ್ನನ್ನು ನಾಳೆಯೇ ಸೆರೆಮನೆಗೆ ಕಳಿಸಿ, ಅಲ್ಲಿಂದ ಅಂದಮಾನಕ್ಕೆ ಕಳಿಸಿದರೂ ನನಗದರ ಬಗ್ಗೆ ಕೆಡಕೆನಿಸಲಿಕ್ಕಿಲ್ಲ. ನನ್ನ ತಂಗಿಯು ಎಷ್ಟು ಗಟ್ಟಿಮನಸ್ಸಿನವಳು, ಎಂಥ ಖಂಬೀರ

ಸ್ವಭಾವದವಳು ಹಾಗು ಎಷ್ಟು ಒಳ್ಳೆ ಮಂದಳು ಇರುವಳೆಂಬುದನ್ನು ನನಗೆ ಅವಳ ಕಣ್ಣುಗಳೇ ಹೇಳುತ್ತವೆ. ಮೂಲಿ, ದುಃಖಕ್ಕೆ ವಿಚಾರಗಳಿಂದ ತಡೆಯನ್ನುಂಟು ಮಾಡಲಾರದಂತಹ ಹುಚ್ಚಿಯು ನೀನೊಬ್ಬಳೇ ಆಗಿರುವೆಯೆಂದು ನನಗೆ ತೋರು ತ್ತದೆ. ನಿನ್ನ ಮನಸ್ಸಿಗೆ ದುಃಖದ ಒಂದು ಸಣ್ಣ ಮುಳ್ಳು ಕೂಡ ನಡದಂತಹ ಸ್ಥಿತಿಯಲ್ಲಿ ನಿನ್ನನ್ನು ದೈವವು ಇರಿಸಬೇಕೆಂಬಂತೆ ನಿನ್ನ ಯೋಗ್ಯತೆಯಿರುವದು; ಆದರೆ ದೈವವು ಇಷ್ಟು ವಿವೇಕಯುಕ್ತ ಹಾಗು ನ್ಯಾಯರತವಾಗಿದ್ದರೆ, ಲೋಕ ದವರು ಅದಕ್ಕೆ ದೈವವೆಂದೆನ್ನದೆ, ಧರ್ಮವೆಂದೆನ್ನುತ್ತಿದ್ದರು. ಇರಲಿ. ತಡ ವಾಗಲಿಲ್ಲವೆ? ನಡೆಯಿರಿನ್ನು. ನೀವು ಅಪ್ಪನ ಕಡೆಗೆ ಹೋಗಿರಿ. ನಾನೂ ನನ್ನ ನೆಲಮನೆಗೆ ಹೋಗಿ ಸ್ವಸ್ಥವಾಗಿ ಮಲಗುತ್ತೇನೆ.

ವಿ:—ಒಳ್ಳೇದು. ಅಣ್ಣಾ, ನೀನು ಯಾವಾಗ ಪ್ರಕಟವಾಗಬೇಕೆಂಬ ಯೋಜನೆಗೆ ನಾಳೆ ನಾನೂ ತೊಡಗುತ್ತೇನೆ. ಯಾಕಂದರೆ, ನೀನು ಪ್ರಕಟನಾದೆ ಯೆಂದರೆ, ಮುಂದಿನ ದಾರಿಯು ಸ್ಪಷ್ಟವಾಗಿ ಕಾಣತೊಡಗುತ್ತದೆ. ಇನ್ನು ನಾವು ಈ ಕಣ್ಣುಮುಚ್ಚಾಣಿಕೆಯ ಆಟವನ್ನು ಮುಗಿಸಲೇ ಬೇಕು.

## ೧೩ ಈ ಜೋಡಿಯನ್ನು ನನ್ನ ತಮ್ಮನನ್ನಾಗಿ ಮಾಡುವಿರಾ?

ಅಪರಾಹ್ಣ ಕಾಲದಲ್ಲಿ ಭಾವೂಸಾಹೇಬರ ವಾಮಕುಕ್ಷಿಯು ತೀರಿದ್ದನ್ನು ಕಂಡು ವಿಮಲೆಯು ಅವರ ಹಾಸಿಗೆಯ ಬಳಿಗೆ ಹೋಗಿ:-"ಅಪ್ಪಾ, ಚಹ ಮಾಡಿ ತರಲೊ? ದಿನದ ಚಹದ ಹೊತ್ತೇ ಆದಂತಾಗಿದೆ" ಎಂದು ಕೇಳಲು, ಭಾವೂಸಾ ಹೇಬರು ಅದಕ್ಕೆ ಸಮ್ಮತಿಯನ್ನಿತ್ತರು. ಮುಂದೆ ಹತ್ತೇ ನಿಮಿಷಗಳಲ್ಲಿ ಚಹ ವನ್ನು ತಂದು ಕೊಟ್ಟು ಕುಡಿಯುವದಾದ ಮೇಲೆ ಅವಳು ತಂದೆಯನ್ನು ಕುರಿತು: ಅಪ್ಪಾ, ನಿಮ್ಮ ಪಲ್ಲಂಗವನ್ನು ಕಿಟಕಿಯ ಬೆಳಕಿಗೆ ತುಸ ಸರಿಸಲೇನು? ಅಂದರೆ ತಲೆಗಿಂಬಿನ ಮೇಲೆ ತಲೆಯಿಟ್ಟು ನಿಮಗೆ ವೃತ್ತಪತ್ರಗಳನ್ನು ಓದಲಿಕ್ಕೆ ಅನುಕೂಲ ವಾದೀತು, ಎಂದಳು.

ಭಾವೂಸಾಹೇಬರಿಗೆ ಆ ಕಲ್ಪನೆಯು ಸಮ್ಮತವಾಯಿತು. ದೌಲತನ ಸಹಾಯದಿಂದ ವಿಮಲೆಯು ಭಾವೂಸಾಹೇಬರ ಪಲ್ಲಂಗವನ್ನು ಕಿಟಕಿಯ ಬಳಿಗೆ ಸರಿಸಿಕೊಂಡಳು. ಬಳಿಕ ವಿಮಲೆಯು ಒಗಲೊಳಗಿಂದ ವೃತ್ತಪತ್ರಗಳ ಒಂದು ಹೊರೆಯನ್ನೂ ಕೈಯಲ್ಲಿ ಅವರ ಉಪನೇತ್ರಗಳ ಪೆಟ್ಟಿಗೆಯನ್ನೂ ತಂದು ಪಲ್ಲಂ ಗದ ಬಳಿಗೆ ಬಂದು ಖುರ್ಚಿಯನ್ನು ಜಗ್ಗಿಕೊಂಡು ಅದರ ಮೇಲೆ ಅವುಗಳನ್ನಿರಿಸಿ ದಳು. ಡೌಲತನು ಪೆಟ್ಟಿಗೆಯೊಳಗಿನದೊಂದು ಚಿರೂಟ ತೆಗೆದು ಯಜಮಾನರ ಕೈಗಿತ್ತು, ಕಡ್ಡಿಕೊರೆದು ಅವರ ಬಾಯಿಯ ಬಳಿಗೆ ಹಿಡಿದನು. ಭಾವೂಸಾಹೇಬರು

ಅದನ್ನು ಹೊತ್ತಿಸಿ ಎರಡು ಜುರುಕಿ ಸೇದಿ:—ತಂಗೀ, ವಿಮಲಾ, ನನ್ನಿಂದ ಬಿದ್ದುಕೊಂಡು ವೃತ್ತಪತ್ರಗಳನ್ನೋದುವದಾಗುವದಿಲ್ಲ. ನನ್ನ ಹತ್ತಿರ ಕುಳಿತು ನೀನೇ ಅವುಗಳನ್ನು ನೋಡಿಕೊಂಡು, ನನಗೆ ಅವುಗಳೊಳಗಿನ ಮುಖ್ಯ ಮುಖ್ಯ ಸಂಗತಿಗಳನ್ನಷ್ಟು ತಿಳಿಸು, ಅಂದರಾಯಿತು.

ವಿ:-ಆದರೆ ಅಪ್ಪಾ, ನಿಮಗೆ ಮೊದಲಿಗಿಂತ ಈಗ ತುಸ ಗುಣವೆನಿಸುತ್ತದಷ್ಟೆ?

ಭಾ:—ತಂಗೀ, ನನಗಿನ್ನು ಗುಣವೇನೆನಿಸುವದೋ ಹೇಳಲಾರೆನು. ನೀನು ನೆಟ್ಟಗಿದ್ದಯೆಂದರೆ ತೀರಿತು.

ವಿ:—ಅಪ್ಪಾ, ನೀವು ಹೀಗೆ ಔದಾಸೀನ್ಯದಿಂದ ನುಡಿಯುವದೇಕೆ? ದೇಹ ಸ್ಥಿತಿಯು ಕೆಟ್ಟಿರುವದು ನನ್ನದಲ್ಲ; ನಿಮ್ಮದು. ಅಂತೆಯೇ ಹಾಗೆ ಕೇಳಿದೆನು; ಆದರೆ ನೀವು ಅದಕ್ಕೆ ಪ್ರತಿಯಾಗಿ ಏನೋ ಕೇಳುತ್ತಿರುವಿರಿ.

ಭಾ:—ತಂಗಿ, ಹಾಗಲ್ಲ. ನನ್ನ ದೇಹಸ್ಥಿತಿಯೇ ಕೆಟ್ಟಿರುವದು. ಈ ವಯಸ್ಸಿಗೆ ಬಂದು ತಲುಪಿದ ಮೇಲೆ ಇನ್ನು ಅದು ಕೆಟ್ಟರೂ ಅಷ್ಟೇ, ಸುಧಾರಿಸಿದರೂ ಅಷ್ಟೇ. ತಂಗೀ, ನಿನಗೆ ನಿಜ ಸಂಗತಿಯನ್ನು ತಿಳಿಸಲೊ? ನಾನಿನ್ನು ಹೆಚ್ಚು ಕಾಲ ಬದುಕುವದಿಲ್ಲ. ಅದರಿಂದ ಒಂದು ಮಾತನ್ನು ನಿನಗೆ ಕೇಳಬೇಕೆಂದೆನಿಸುತ್ತದೆ. ಕೇಳಲೋ?

ವಿ:—ಕೇಳಿರಿ; ಅದಕ್ಕೇಕೆ ಸಂಕೋಚವು?

ಭಾ:—ಆದೇನೆಂದರೆ, ಇನ್ನು ಮುಂದೆ ನಿನ್ನನ್ನು ಸಂರಕ್ಷಿಸುವವರಾರು?

ವಿ:—ನೀವಿರುತ್ತಿರಲು ಆ ಚಿಂತೆಯು ನನಗಂತೂ ಇಲ್ಲವೇ ಇಲ್ಲ; ನಿಮಗಾದರೂ ಅದೇಕೆನಿಸಬೇಕು?

ಭಾ:—ತಂಗೀ, ನಾನು ಜೀವಿಸಿರುವವರೆಗಿನದನ್ನು ನಾನು ಮಾತಾಡುವದಿಲ್ಲ. ಆ ಮೇಲಿನದನ್ನೇ ಕೇಳುವೆನು?

ವಿ:—ಹೀಗಲ್ಲವೆ? ಅದೂ ವಿಹಿತವೇ. ಆ ಮೇಲಿನದು ಆ ಮೇಲೆ ನೋಡಿಕೊಳ್ಳೋಣವಂತೆ.

ಭಾ:—ಆದರೆ ಆ ಮಾತಿಗಿನ್ನು ಹೆಚ್ಚು ಕಾಲ ವಿಲಂಬವಿಲ್ಲ. ನಾನು ದಿನ ದಿನಕ್ಕೆ ಕ್ಷೀಣಿಸುತ್ತ ನಡೆದಿದ್ದೇನೆ. ಅಂತೆಯೇ ನಾನಿರುವಾಗಲೆ ನಿನ್ನ ಲಗ್ನ ಮಾಡಿಕೊಟ್ಟು, ನಿನ್ನ ತಲೆಯ ಮೇಲೆ ನಾಲ್ಕು ಅಕ್ಷತೆಗಳನ್ನು ಚೆಲ್ಲಬೇಕೆಂದು ನನಗನಿಸುತ್ತದೆ.

ಭಾವೂಸಾಹೇಬರು ಇಂದು ಈ ಬೇರೆ ಮಾತು ತೆಗೆದದ್ದನ್ನು ಕಂಡು ವಿಮಲೆಯು ಆಶ್ಚರ್ಯದಿಂದ ಕ್ಷಣಕಾಲ ಸ್ತಬ್ಧಳಾದಳು; ಆದರೆ ಪರಕ್ಷಣದಲ್ಲಿಯೇ ಪ್ರಸಂಗಾವಧಾನವನ್ನು ತಂದುಕೊಂಡು ಅವಳು:—ಅಪ್ಪಾ, ನೀವಿಂದು

ಜೇರೆ ಮಾತೇ ತೆಗೆದಿರಿ. ನೀವು ಈ ಮೊದಲು ಒಂದೆರಡು ಸಾರೆ ಇದೇ ಪ್ರಶ್ನೆಯನ್ನು ಅಸ್ಪಷ್ಟವಾಗಿ ಮಾಡಿದಾಗ ನಾನು ನಿಮಗೆ ಏನು ಹೇಳಿದ್ದೆನೋ, ಈಗಲೂ ಅದೇ ಉತ್ತರವೆಂದು ತಿಳಿಯಿರಿ.

ಭಾ:—ನೀನು ಮೊದಲೇ ಹೇಳಿರುವೆಯಾ? ಏನದು? ನನಗೆ ಚೆನ್ನಾಗಿ ನೆನಪಿಲ್ಲ. ಹೇಳು ಮತ್ತೊಮ್ಮೆ, ಅದೇನೆಂಬದನ್ನು. ತಂಗೀ, ಈ ವೃದ್ಧಾಪ್ಯದಲ್ಲಿಯ ನಮ್ಮಗಳ ನೆನಪೆಂದರೆ, ಉಣ್ಣೆಯ ಉಂಡೆಯೇ ಸರಿ! ಅದರಲ್ಲಿ ಡಬ್ಬಣ ಪೋಣಿಸಿಟ್ಟಿರುವವರೆಗೆ ಡಬ್ಬಣದ ಛಿದ್ರ ಉಳಿಯುವದು. ಡಬ್ಬಣ ಹಿರಕೊಂಡ ಮೇಲೆ ಆ ಛಿದ್ರದ ಗುರುತು ಕೂಡ ಹತ್ತಲಾರದು.

ವಿ:—ಬೇಕಾದರೆ ಮತ್ತೆ ಹೇಳುವೆನು. ನನ್ನ ಅಣ್ಣ ಪ್ರಭಾಕರನು ನನಗಿಂತ ಹನ್ನೆರಡು ವರ್ಷಗಳಿಗೆ ಹಿರಿಯನಿರುವನು. ಆತನ ಲಗ್ನವಾಗದ ಹೊರತು ನನ್ನ ಲಗ್ನದ ಮಾತನ್ನು ಎತ್ತಕೂಡದೆಂದು ನನ್ನ ಇಚ್ಛೆಯಿದೆ.

ಭಾ:—ತಂಗೀ, ಆತನ ಲಗ್ನವನ್ನು ನಾನು ಮಾಡುತ್ತಿರಲಿಲ್ಲವೆ? ಆತನು ಇಲ್ಲಿಂದ ಹೊರಟು ಹೋದಾಗ ಇಪ್ಪತ್ತೆರಡು ವರ್ಷಗಳ ತರುಣನಿದ್ದನು. ಆದರೂ ಯಾವಾಗ ನಾನು ಆತನ ಲಗ್ನದ ಮಾತನ್ನೆತ್ತುತ್ತಿದ್ದೆನೋ, ಆಗ ಆತನು ಈಕೆಯ ಬಳಿಯಲ್ಲಿ ಮೆಲ್ಲನೆ "ನನಗಿನ್ನೂ ಅನೇಕ ಕೆಲಸಗಳಿರುವದರಿಂದ ನನ್ನ ಲಗ್ನದ ಮಾತೆತ್ತ ಬಾರದೆಂದು ಅಪ್ಪನಿಗೆ ತಿಳಿಸು" ಎಂದು ಹೇಳುತ್ತಿದ್ದನು; ಮತ್ತು ಆತನು ಆ ಬಳಿಕ ಯಾವ ಯಾವ ಕೆಲಸ ಮಾಡಿದನೆಂಬದು ನಿಮಗೆಲ್ಲ ಗೊತ್ತೇ ಇದೆ. ನಾನು ಆಗ ಆತನ ಲಗ್ನ ಮಾಡಿದ್ದರೆ, ಹೆಂಡತಿಯ ಪ್ರೇಮದಿಂದ ಅಥವಾ ಆಕೆಯ ಯೋಚನೆಯಿಂದೆಂದರೂ ಸಲ್ಲಬಹುದು; ಅಂಥ ಸಾಹಸದ ಕೆಲಸಕ್ಕೆ ಆತನು ತೊಡಗುತ್ತಿದ್ದಿಲ್ಲ; ಮತ್ತು ನನ್ನ ಮೇಲೆ ಇಂತಹ ದುರ್ಧರ ಪ್ರಸಂಗವೂ ಒರುತ್ತಿರಲಿಲ್ಲ. "ತನ್ನ ತಂದೆಯ ಪ್ರೇಮಕ್ಕಾಗಿ ಇಲ್ಲವೆ ಆತನ ಯೋಚನೆಗಾಗಿ ಇಂಥ ಸಾಹಸಕ್ಕೆ ಬೀಳಲಿಲ್ಲ." ಎಂದು ನನಗೆ ಹೇಳಕೊಳ್ಳಲಿಕ್ಕೆ ಬಂದಿದ್ದರೆ ನನಗೆಷ್ಟು ಸಮಾಧಾನವೆನಿಸುತ್ತಿತ್ತು? ಆದರೆ ಈ ಹೊಸ ಪೀಳಿಗೆಯಲ್ಲಿ ಇಂಥ ಸುಖವು ಅನಾವ ತಂದೆಗೆ ದೊರೆಯಬೇಕು? ಇಂಥ ಈ ಹೊಸ ಪೀಳಿಗೆಯ ಹುಡುಗರಿವರು!

ವಿ:—"ಮತ್ತು ಹುಡುಗೆಯರಾದರೂ!" ಅಪ್ಪಾ, ನೀವು ಹೀಗೇಕನ್ನಲಿಲ್ಲೆಂಬದನ್ನು ನಾನು ತಿಳಿಯಲಾರೆನೇನು?

ಭಾ:—ನಾನು ಅದನ್ನೂ ಅಂದೇನು; ಆದರೆ ಹೆಣ್ಣುಮಗಳ ಪ್ರೇಮದ ಅನುಭವವು ನನಗೆ ಹೇಗೆ ಬಂದಿದೆಯೋ ಅದರಂತೆ ಗಂಡು ಹುಡುಗನ ಪ್ರೇಮದ ಅನುಭವವು ಬಂದಿರುವದಿಲ್ಲ. ಅದರಿಂದ ನಾನು ಅವರಿಬ್ಬರ ಸರಿಜೋಡಿಯನ್ನು ಹೇಗೆ ಮಾಡಲಿ?

ವಿ:—ಅಪ್ಪಾ, ಆಗ ನಾನು ಕೇವಲ ಹತ್ತೇ ವರ್ಷದವಳಿದ್ದೆನು; ಅದರಿಂದ ಆಗ ನೀವು ನನ್ನ ಲಗ್ನದ ಮಾತೇ ಎತ್ತುವಂತಿರಲಿಲ್ಲ; ಆದರೆ ನಾನು ಈಗ ಆಗಿನ ಅಣ್ಣನ ವಯಸ್ಸಿನವಳಾದೆನು; ಮತ್ತು ನನ್ನ ಲಗ್ನದ ಮಾತನ್ನು ಇಂದು ನೀವು ತೆಗೆದಿರುತ್ತೀರಿ. ಆದರಿಂದಲೇ ಈಗಲೆ ಲಗ್ನವಾಗುವದಿಲ್ಲೆಂದು ನಾನು ಹೇಳಲಿಲ್ಲವೆ?

ಭಾ:—ಆದರೆ ನೀನು ನಿನ್ನ ಅಣ್ಣನ ಲಗ್ನದ ನೆವವನ್ನಾದರೂ ಹೇಳಿರುತ್ತೀ; ಆತನಿಗೆ ಇಂಥ ಯಾವ ನೆವವೂ ಇರಲಿಲ್ಲವಲ್ಲ?

ವಿ: ಹಾಗಾದರೆ ಅಪ್ಪಾ, ನನ್ನ ನೆವವಾದರೂ ಸರಿಯಾಗಿದೆಯಷ್ಟೇ?

ಭಾ:—ಭಲೇರೆ ಹುಡುಗಿ! ನನ್ನನ್ನು ಮಾತಿನಲ್ಲಿ ಕೆಡವಬೇಕೆಂದಿರುತ್ತೀ ಏನು? ನಿನಗೆ ಹೇಳಲಿಕ್ಕೆ ನೆವವಾದರೂ ಇತ್ತು, ಎಂದಿಷ್ಟೇ ನಾನಂದೆನು. ಅಂದರೆ ನಿನ್ನ ನೆವವು ಯೋಗ್ಯವಿದೆಯೆಂದು ನಾನೆಲ್ಲಿ ಅನ್ನುತ್ತೇನೆ? ನಿನ್ನ ಅಣ್ಣನು ತನ್ನ ಲಗ್ನ ತಡೆಯಲಿಕ್ಕೆ ಆತನ ಯಾವನೊಬ್ಬ ಲಗ್ನವಾಗದ ಹಿರಿಯಣ್ಣನಿರಲಿಲ್ಲವಲ್ಲ!

ವಿ:—ಅಪ್ಪಾ, ಹಿರಿಯಣ್ಣನೇನು? ಮತ್ತು ಕೈಯಲ್ಲಿ ತಕ್ಕೊಂಡ ಯಾವುದೊಂದು ಪ್ರೀತಿಯ ಕೆಲಸವೇನು? ಉಭಯತರ ಮೇಲಿನ ಪ್ರೇಮವೂ ಸರಿ-ಸಮಾನವಾಗಿರಲಾರದೇನು? ನಿಮಗೆ ಸಂಸ್ಥಾನೀ ಅಧಿಕಾರಿಗಳ ಪ್ರಾಣ-ಮರ್ಯಾದೆಗಳು ಪ್ರಿಯವೆನಿಸುತ್ತಿದ್ದವು ಅದರಂತೆಯೇ ಪ್ರಭಾಕರಣ್ಣನಿಗೆ ಸಂಸ್ಥಾನೀ ಪ್ರಜೆಗಳ ಪ್ರಾಣ ಮತ್ತು ಮರ್ಯಾದೆಗಳು ಪ್ರಿಯಕರವೆನಿಸುತ್ತಿದ್ದವು. ನಿಮ್ಮಿಬ್ಬರಲ್ಲಿ ಇಷ್ಟೇ ಭೇದವು. ಹೊಸ ಪೀಳಿಗೆಯೇನು, ಹಳೇ ಪೀಳಿಗೆಯೇನು? ಪ್ರತಿಯೊಂದಕ್ಕೂ ಪ್ರೇಮದ ಇಂಥ ಏನಾದರೊಂದೊಂದು ವಿಷಯವು ಇದ್ದೇ ಇರುತ್ತದೆ.

ಭಾ:—ಹಾಗೆಯೇ ಏಕಾಗಲೊಲ್ಲದು; ಅಂದರೆ ನಿನ್ನ ಅಣ್ಣನಿಗೆ ನಾನು ದೋಷ ಕೊಡುವದಿಲ್ಲೆಂದೇ ಅನ್ನು; ಆದರೆ ಈಗ ಯಾವದು ಸಾಧ್ಯವಿಲ್ಲವೋ ಅದನ್ನು ಬಿಟ್ಟು ಬಿಟ್ಟು, ಯಾವದು ಸಾಧ್ಯವಿದೆಯೋ ಅಷ್ಟರ ಮಟ್ಟಿಗೇ ಮಾತನಾಡಬೇಕು. ಪ್ರಭಾಕರ ಮತ್ತು ನೀನು ಉಭಯತರ ಲಗ್ನ ಮಾಡುವದೂ ನನ್ನ ಕರ್ತವ್ಯವೇ ಆಗಿದೆ; ಆದರೆ ಅವನು ಮರಳಿ ಬರುವ ಆಶೆಯಿನ್ನೆಲ್ಲಿದೆ? ಅಂತೆಯೇ ನೀನಾದರೂ ಸಮ್ಮತಿಯನ್ನೀಯು; ಅಂದರೆ ನಾನು ನನ್ನ ಯಾರೊಬ್ಬ ಮಿತ್ರರಿಗೆ ಹೇಳಿ, ನಿನ್ನ ಸಲುವಾಗಿ ಮನೆತನವನ್ನು ನೋಡಿಸಿ, ಹೊಡಿಸಿ ಬಿಡುವೆನೊಮ್ಮೆ ನಿನ್ನ ಲಗ್ನವನ್ನು; ಮತ್ತು ನಿನ್ನ ವಿಷಯದ ಯೋಚನೆಯಿಂದ ಮುಕ್ತನಾಗ ಬೇಕೆನ್ನುತ್ತೇನೆ.

ವಿ:—ಅಪ್ಪಾ, ನಿಮ್ಮ ಸಂದೇಶವು ಮುಗಿಯಿತಷ್ಟೆ? ಇನ್ನು ನೀವು ನನ್ನ ಅಂಬೋಣವನ್ನಷ್ಟು ಕೇಳಿಕೊಳ್ಳಿರಿ. ನಿಮ್ಮ ಯಾವನೊಬ್ಬ ಮಿತ್ರನು ನನಗಾಗಿ ವರಾನ್ವೇಷಣ ಮಾಡುವಷ್ಟು ಚಿಕ್ಕ ವಯಸ್ಸಿನವಳು ನಾನಾಗಿರುತ್ತೇನೇನು? ನಾನು ಮುಂದಿಯ ಲಗ್ನಗಳನ್ನು ಕೂಡಿಸಿಕೊಡುವಷ್ಟು ದೊಡ್ಡವಳಾಗಿದ್ದೇನೆ. ಅದರಿಂದ ನೀವಿನ್ನು ನನ್ನ ಚಿಂತೆಯನ್ನೇ ಬಿಟ್ಟುಬಿಡಿರಿ. ನನಗಿಂತ ಚಿಕ್ಕ ವಯಸ್ಸಿನ ಬಾಲಿಕೆಯರು ತಂದೆ-ತಾಯಿಗಳ ಮರಣದಿಂದ ಅನಾಥರಾಗುತ್ತಾರೆ. ಅವರ ಚಿಂತೆಯನ್ನೆಲ್ಲ ದೇವರೇ ವಹಿಸುತ್ತಿರಲಿಕ್ಕೆ, ನನ್ನ ಚಿಂತೆಯನ್ನು ಆ ಪರಮಾತ್ಮನು ವಹಿಸಲಿಕ್ಕಿಲ್ಲವೇ? ನನಗೆ ನಮ್ಮ ಮಾಯಿಯು ಪ್ರತಿ ದೇವತೆಯಂತೆ ಇರುತ್ತಾಳೆ. ನಿಮಗೆ ಅವಳ ಬೆಲೆಗಾಣದಿದ್ದರೂ, ನನಗೆ ಅವಳ ನಿಜವಾದ ಬೆಲೆಯು ತೋರುತ್ತದೆ. ಲೋಕದ ಪರಿಸ್ಥಿತಿಯಂತೆ ನನ್ನ ಮೇಲಿನ ನಿಮ್ಮ ಛತ್ರವು ಕಳಚಿ ಬಿದ್ದರೂ, ನಮ್ಮ ಮಾಯಿಯಿರುವವರೆಗೆ ನನಗೇತರ ಚಿಂತೆಯೂ ಇರುವದಿಲ್ಲ. ನೀವು ನಿಶ್ಚಿಂತೆಯಿಂದಿರ್ರಿ; ಮತ್ತು ನೀವು ಇಲ್ಲದ ಸಲ್ಲದ ಸಂಶಯ ತಾಳಿ ಅವಳಿಗೆ ದುಃಖಕೊಟ್ಟು, ಅವಳ ಜೀವಕ್ಕೆ ಸಾಕು ಸಾಕೆನಿಸುವಂತೆ ಮಾಡುವದನ್ನು ಬಿಟ್ಟುಬಿಟ್ಟರೆ, ಪಾಪ! ಆ ಒಡವೆಯು ನನಗೆ ಮತ್ತೆ ನಾಲ್ಕು ದಿನ ಹೆಚ್ಚು ಲಭಿಸುವಳು! ಇನ್ನುಳಿಯಿತು, ಅಣ್ಣನ ಸಂಗತಿಯು. ಹಿಂದಕ್ಕೊಮ್ಮೆ ಆತನು ಬಂದ ಸ್ವಪ್ನವು ನನಗೆ ಬಿದ್ದದ್ದನ್ನು ಅಪ್ಪಾ, ನಾನು ನಿಮಗೆ ಹೇಳಿರಲಿಲ್ಲವೆ?

ಭಾ:—ತಂಗೀ, ಅಹುದು; ಆದರೆ ಅದನ್ನೇನು ಮಾಡುವದು? ನೀನು ಸ್ವಪ್ನದಲ್ಲಿ ಆತನ ಕೂಡ ಮಾತಾಡಿದೆಯೋನು?

ವಿ:—ಅಹುದು. ಮಾತಾಡಿದೆನು! ಅಣ್ಣಾ, ಸ್ವಪ್ನದಲ್ಲಿ ಕಾಣಿಸಿಕೊಂಡು ಹೀಗೆ ಮಾಯಾಪಾಶದಲ್ಲಿ ಕೆಡಹುವದರ ಬದಲು, ಪ್ರತ್ಯಕ್ಷವಾಗಿಯೇ ಒಮ್ಮೆ ಒಂದು ಭೆಟ್ಟಿಯಾದರೆ ನಮ್ಮೆಲ್ಲರ ಎಲ್ಲ ಚಿಂತೆಯೂ ಒಮ್ಮೆಲೆ ಪರಿಹಾರವಾಗುವದೆಂದು ನಾನು ಆತನಿಗೆ ಹೇಳಿದೆನು.

ಭಾ:—ಅದಕ್ಕೆ ಅವನೇನೆಂದನು?

ವಿ:—ನಾನು ಬಂದೇನು; ಆದರೆ ಅಪ್ಪನ ನಿಷ್ಕಾರಣದ ಸಿಟ್ಟು ಕಡಿಮೆಯಾಯಿತೆಂದರೆ! ನಾನು ಬಂದರೆ ಮತ್ತು ಅಪ್ಪನು ಮೊದಲಿನಂತೆ ನನ್ನ ಮೇಲೆ ಸಿಟ್ಟಾದರೆ ನನಗೂ ಸಿಟ್ಟು ಬಂದೀತು. ಅಂತೆಯೇ ನೀನೇ ಅವರನ್ನು ಕೇಳಿಕೋ ನಾನು ಹಿಂದಿರುಗಿ ಬಂದರೆ ಅವರೇನು ಮಾಡುವರೆಂಬದನ್ನು? ಹೀಗಿಲ್ಲದಿದ್ದರೆ ನಾನಿದ್ದಲ್ಲಿರುವದೇ ವಿಹಿತವಲ್ಲವೆ? ಎಂದು ಅಂದನು.

ಭಾ:—ಆತನು ಈ ಮೃತ್ಯುಲೋಕದವರು ಮಾತಾಡುವಂತೆ ಮಾತಾ

ಡಿದನೋ, ಪರಲೋಕದವರಂತೆ ಮಾತಾಡಿದನೋ?

ವಿ:—ಅದೇಕರೀ? ಮೃತ್ಯುಲೋಕದವರಂತೆಯೇ ಆಡಿದನು. ಹೆಚ್ಚೇಕೆ? ನಾನೂ ನೀವೂ ಈಗ ಒಬ್ಬರ ಬಳಿಯಲ್ಲೊಬ್ಬರು ಕುಳಿತು ಮಾತನಾಡುವಂತೆಯೇ, ಇಷ್ಟು ಸಮೀಪದಿಂದಲೇ ಮಾತಾಡಿದನು. ಅವನು ನನ್ನ ಕೈಗಳನ್ನು ಹಿಡಿದು ನನ್ನ ಕಣ್ಣುಗಳ ಕಡೆಗೆ ನೋಡುತ್ತ ಚಿಕ್ಕ ವಯಸ್ಸಿನಲ್ಲಿ ನನ್ನ ಪಾಪಾ ಹೇಗೆ ತೆಗೆದು ಕೊಳ್ಳುತ್ತಿದ್ದನೋ, ಈಗಲೂ ನನ್ನ ಹತ್ತರ ಬಂದು ನನ್ನ ಹಾಗೆ ಪಾಪಾ ತೆಗೆದು ಕೊಂಡಂತೆ ನನಗೆ ಭಾಸವಾಸವಾಯಿತು. ಅಪ್ಪಾ, ನಮ್ಮ ಅಣ್ಣನು ಹಿಂದಿರುಗಿ ಬಂದಾನೇನು? ನೀವೂ ಪ್ರಯತ್ನಪಟ್ಟರೆ, ಅಪ್ಪಾ, ನಿಮಗೂ ಆತನು ಸ್ವಪ್ನದಲ್ಲಿ ಕಾಣಿಸಿಕೊಂಡಾನೆಂದು ನನಗನಿಸುತ್ತದೆ.

ಆ ಪ್ರೇಮಲ ವರ್ಣನದ ಪರಿಣಾಮವು ಭಾವೂಸಾಹೇಬರ ಕಠಿಣ ಮನ ಸ್ಸಿನ ಮೇಲೆಯೂ ಆಗದಿರಲಿಲ್ಲ. ಅವರಿಗೆ ಮಗನ ನೆನಪಾಗಿ ದುಃಖವೆನಿಸಿದಂತೆ ತೋರಿತು; ಆದರೆ ಆತನು ಇನ್ನು ತಿರುಗಿ ಬರುವದು ಅಶಕ್ಯವಾದ್ದರಿಂದ ಮಗಳ ಲೋಭವು ಕಡಿಮೆಯಾಗಬೇಕೆಂಬ ಉದ್ದೇಶದಿಂದ ಇಲ್ಲವೆ ಬೇರೆ ಮಾತನ್ನೇ ತೆಗೆದು ಅದನ್ನು ಮರೆಸಿ ಬಿಡುವದಕ್ಕೆಂದು ಅವರು:—ತಂಗೀ, ಪ್ರಭಾಕರನು ಮರಳಿ ಬಂದರೆ, ಆತನು ನಿನ್ನಂತೆಯೇ ನನಗೂ ಬೇಕಾಗಿದ್ದಾನೆ; ಆದರೆ ಜೀವಾ ವಧಿ ಕರಿನೀರಿನ ಶಿಕ್ಷೆಯಾದ ಬಂದಿಗಳು ಹಿಂದಿರುಗಿ ಬರುತ್ತಿರುವದಿಲ್ಲ. ಅದರಿಂದ ನಿಪುತ್ರಿಕ ಭಾವನೆಯಿಂದ ಸಾಯುವದಕ್ಕಿಂತ, ದತ್ತಕ ಮಗನನ್ನಾದರೂ ಮಾಡಿ ಕೊಂಡು ಆ ಮೇಲೆಯೇ ಸಾಯಬೇಕೆಂದು ನಾನು ನಿರ್ಧರಿಸಿದ್ದೇನೆ. ಸುಭೇದಾ ರರು ತಮ್ಮ ಮಗನಾದ ಬಾಜೀರಾಯನನ್ನು ನನಗೆ ದತ್ತಕ ಕೊಡಲಿಕ್ಕೆ ಸಿದ್ಧರಾಗಿ ರುತ್ತಾರೆ. ಅದರಿಂದ ನಾನವರಿಗೆ ಒಂದೆರಡು ದಿನಗಳಲ್ಲಿಯೇ ಸಮ್ಮತಿಯ ನ್ನಿತ್ತು ತೀವ್ರವೇ ದತ್ತವಿಧಾನವನ್ನೊಮ್ಮೆ ಮಾಡಿಸಿಬಿಡುವೆನೆಂದರಾಯಿತು. ನಿನ್ನ ಸ್ವಪ್ನವು ಅದೆಂತು ಸಟಿಯಾಗಬೇಕು? ಅಂದಮೇಲೆ ನಿನ್ನ ಸಮ್ಮತಿಯು ಇದಕ್ಕಾದರೂ ಇದೆಯಲ್ಲವೆ?

ತಂದೆ-ಮಗಳಲ್ಲಿಯ ಸಂಭಾಷಣವು ಈ ಮೆಟ್ಟಿಗೆ ಬರಲಿಕ್ಕೂ ಪ್ರತ್ಯಕ್ಷ ಸುಭೇದಾರರೇ ಅಲ್ಲಿಗೆ ಬರಲಿಕ್ಕೂ ಗಂಟೇ ಬಿದ್ದಿತು. ಇಂದು ಅವರು ತಮ್ಮೊ ಡನೆ ತಮ್ಮ ಮಗನಾದ ಬಾಜೀರಾಯನನ್ನೂ ಅಲ್ಲಿಗೆ ಕರೆತಂದಿದ್ದರು. ಅವರಿಬ್ಬ ರೂ ನೆಟ್ಟಗೆ ಭಾವೂಸಾಹೇಬರ ಕೋಣೆಯನ್ನೇ ಹೊಕ್ಕರು. ಅದರಿಂದ ಅವ ರಿಗೆ ಕೂಡ್ರಲಿಕ್ಕೆ ಬೇಕಾಗಿದ್ದ ಖುರ್ಚಿಗಳನ್ನು ದೌಲತನೇ ತಂದಿರಿಸಿದನು. ಅವರು ಕುಳಿತ ಮೇಲೆ ಭಾವೂಸಾಹೇಬರು ಅವರ ಕಡೆಗೆ ತಮ್ಮ ಮೋರೆಯಾಗಬೇಕೆಂಬ ಹೇತುವಿನಿಂದ ಮಗ್ಗಲಾಗಿ:—"ಬಂದಿರಾ? ಸುಭೇದಾರರೇ, ತಕ್ಕ ಸಮಯಕ್ಕೆ

ಬಂದಿರಿ'' ಎಂದರು.

ಸುಭೇದಾರರು ತಮ್ಮ ಅನುಸರಣಪ್ರಿಯವಾದ ಹುಟ್ಟ ಸ್ವಭಾವದಂತೆ ನಕ್ಕು:—''ಭಾವೂಸಾಹೇಬ, ಅದು ಹೇಗೆ? ಇಷ್ಟು ಆಗುವದೇ ಇದ್ದರೆ ಹೀಗೆ ಯೇ ಯೋಗಾಯೋಗವು ಕೂಡಿ ಬರುತ್ತಿರುವದೆನ್ನಿರಿ.''

ಭಾ:—ನಿಮ್ಮ ಮಗನನ್ನು ದತ್ತು ಮಾಡಿಕೊಳ್ಳುವ ಆಲೋಚನೆಯನ್ನು ನಾನು ಮನಸ್ಸಿನಲ್ಲಿ ಮುಂದ ಮುಂದವಾಗಿ ಮಾಡುತ್ತಲೇ ಇದ್ದೇನೆ. ಜ್ಯೋತಿ ಷ್ಕರು ಭವಿಷ್ಯವನ್ನು ಹೇಳಿದ್ದಾರೆ. ಅದು ಸುಳ್ಳೆಂತಾಗುವದು? ಇತ್ತೀಚೆಗೆ ನನ್ನ ದೇಹವೂ ಕ್ಷೀಣವಾಗುತ್ತ ನಡೆದಿದೆ; ಆದರೆ ನಮ್ಮ ವಿಮಲಕ್ಕನಿಗೆ ಪ್ರಭಾಕರನು ತಿರುಗಿ ಬರುವನೆಂಬ ಒಗ್ಗೆ ಸ್ವಪ್ನಬೀಳಹತ್ತಿರುವವಂತೆ. ಅವನು ಬಂದರೆ ವಿಹಿ ತವೇ ಆಯಿತು. ಆ ಮೇಲೆ ದತ್ತುಕವೇತಕ್ಕೆ?

ಕೆನ್ನೆಯ ಮೇಲೆ ಪೆಟ್ಟು ಕೊಡುವಂತಹ ಈ ಸುದ್ದಿಯು ಸುಭೇದಾರರಿಗೆ ಹೊಸದಾಗಿಯೇ ಕೇಳಿಸಿತು. ವಿಮಲೆಯಾದರೂ ಹತ್ತರದಲ್ಲೇ ನಿಂತಿದ್ದಳು. ಅದರಿಂದ ತಂದೆ-ಮಗಳ ಮನಸ್ಸಿನ ಮೇಲೆ ಪರಿಣಾಮುವನ್ನುಂಟು ಮಾಡುವ ಸುಸಂಧಿಯು ಒಮ್ಮೆಲೆ ಸಾಧಿಸಿತೆಂದು ಒಗೆದು, ಅವರು ವಾದಕ್ಕೆ ಪ್ರಾರಂಭಿಸಿ: ತಮ್ಮ ಮಗನು ಹಿಂದಿರುಗಿ ಬಂದರೆ ದೇವರೇ ನಮ್ಮಗಳ ಹರಕೆ ಕೈಗೂಡಿಸಿದ ನೆನ್ನೋಣ! ನಮಗಾದರೂ ಅದೇ ಬೇಕಾಗಿದೆ. ನಾನು ದೇವರಲ್ಲಿ ಯಾವಾಗಲೂ ಅದನ್ನೇ ಪ್ರಾರ್ಥಿಸುತ್ತಿರುತ್ತೇನೆ. ನಾವೂ ನೀವೂ ಒಂದೇ ಮನೆತನದವರಲ್ಲವೆ? ಎರಡೂ ಶಾಖೆಗಳು ಬೇರೆ ಬೇರೆಯಾಗಿ ಬೆಳೆಯುತ್ತ ಹೋದರೆ ಮನೆತನದ ಕಲ್ಯಾ ಣವೇ ಇದೆ; ಆದರೆ ದುರ್ದೈವದಿಂದ ಪ್ರಭಾಕರನ ಪ್ರತ್ಯಾಗಮನಕ್ಕೆ ಸ್ವಪ್ನದ್ದೇ ಆಧಾರವು! ವಿಮಲಕ್ಕನವರು ಇಷ್ಟು ಕಲಿತಂಥವರಿದ್ದು, ಇವರಿಗೆ ಸ್ವಪ್ನಗಳು ಹೇಗೆ ಬಿಳುತ್ತವೆಂಬದೇ ನನಗೆ ಆಶ್ಚರ್ಯವೆನಿಸುತ್ತದೆ.

ಈ ಮಾತನ್ನು ಕೇಳಿ ವಿಮಲೆಗೆ ನಗೆ ಬಂದಿತು. ಆಗ ಅವಳು: ಸುಭೇದಾ ರರೇ, ನೀವು ಇಷ್ಟೇ ಅಂದು ಮುಗಿಸಿದಿರಿ. ಇಲ್ಲವಿದ್ದರೆ ಈ ವಿಮಲೆಯು ಇಷ್ಟು ಕಲಿತವಳಿದ್ದು ಇವಳಿಗೆ ದಿನಾಲು ನಿದ್ದೆ ಏಕೆ ಒರುತ್ತದೆಂದು ಕೇಳಲಿಲ್ಲ. ಹೇಗಿ ದ್ದರೂ ಈ ವಿಮಲೆಗೆ ನಿದ್ದೆಯೂ ಬರುತ್ತದೆ, ಸ್ವಪ್ನಗಳೂ ಬೀಳುತ್ತವೆ; ಮತ್ತು ಆ ಸ್ವಪ್ನಗಳಲ್ಲಿ ಪ್ರಭಾಕರಣ್ಣನು ಒಂದು ಮಾತನಾಡಿದಂತೆ ಭಾಸವಾಗುವದೂ ಖಂಡಿತವು. ನಾನು ಅಪ್ಪನೆದುರಿಗೆ ಸುಳ್ಳೇತಕ್ಕೆ ಹೇಳಲಿ? ನಿಮಗೆ ಸ್ವಪ್ನಗಳು ಬೀಳುತ್ತಿದ್ದರೂ ಅವುಗಳಲ್ಲಿ ನಮ್ಮ ಪ್ರಭಾಕರಣ್ಣನು ನಿಮಗೆ ಹೇಗೆ ಕಂಡಾನು? ನಿಮಗೆ ನಿಮ್ಮ ದಿವಾಣಸಾಹೇಬಗು, ಶಿರಸ್ತೆದಾರಸಾಹೇಬರು, ಏಜಂಟಸಾಹೇಬ ರಂತಹರೇ ಕಾಣಿಸಿಕೊಳ್ಳತಕ್ಕವರು!

ಸು:—ತಂಗೀ, ವಿಮಲಕ್ಕಾ, ನಿಮ್ಮ ತಂದೆಯವರ ಹಿತವು ನಿಮಗೆ ಹೇಗೆ ತೋರುವದೋ ಹಾಗೆ ನನಗೆಂತು ತೋರುವದು? ಇದು ಸ್ಪಷ್ಟವೇ ಇದೆ. ಆದರೆ ದತ್ತಕದ ಕೆಲಸದಲ್ಲಿ ನೋಡುವ ಸ್ತ್ರೀಯರ ದೃಷ್ಟಿ ಬೇರೆ; ಪುರುಷರ ದೃಷ್ಟಿ ಬೇರೆಯಾಗಿರುತ್ತವೆ. ಇದಕ್ಕೇನು ಮಾಡುವದು?

ವಿ:—ಆಹುದು. ಅದರಲ್ಲಿಯೂ ಯಾರಿಗೆ ತಮ್ಮ ಮಗನನ್ನು ಶ್ರೀಮಂತರ ಮನೆಗೆ ದತ್ತಕ ಕೊಡಬೇಕಾಗಿರುತ್ತದೆಯೋ, ಆ ಪುರುಷರ ದೃಷ್ಟಿಯಂತೂ ಅದಕ್ಕೂ ಬೇರೆಯಾಗಿರುತ್ತದೆ!

ಈ ನಿಂದೆಯನ್ನು ಕೇಳಿ ಸ್ವಾಭಿಮಾನಕ್ಕೆ ಪೆಟ್ಟು ತಗಲಿದ ನೋಗು ತರುವದು ಸುಭೇದಾರರಿಗೆ ಪ್ರಾಪ್ತವೇ ಆಯಿತು; ಅದರಿಂದ ಅವರು ತಮ್ಮ ಮಗನ ಕೈ ಹಿಡಿದುಕೊಂಡು ಖಿನ್ನತೆಯಿಂದ ಹೇಳತೊಡಗಿ: "ಹೊಟ್ಟೆಯ ಕರಳನ್ನು ಕಳಕೊಳ್ಳಲಿಕ್ಕೆ ಸಿದ್ಧನಾದರೂ ನನಗೆ ಈ ಸಂಭಾವನೆಯೋ! ಅಂದಮೇಲೆ ಇಲ್ಲೇತಕ್ಕಿರಬೇಕು?"

ಕೇವಲ ತಂದೆಯ ಸಲುವಾಗಿ ಸುಭೇದಾರರನ್ನು ತುಸ ಸಮಾಧಾನಗೊಳಿಸಬೇಕೆಂಬ ಬುದ್ಧಿಯಿಂದ ವಿಮಲೆಯು:—"ಸುಭೇದಾರ ಸಾಹೇಬರೇ, ನಾನು ಅಂದದ್ದು ಕೇವಲ ನಿಮ್ಮನ್ನುದ್ದೇಶಿಸಿಯೇ ಅಲ್ಲ; ಲೋಕದ ರೀತಿಯನ್ನು ಹೇಳಿದೆನಷ್ಟೇ. ಮಗನು ಶ್ರೀಮಂತರ ಮನೆಗೆ ದತ್ತಕಾಗಿ ಹೋಗುತ್ತಿದ್ದರೂ ಕೇವಲ ಸ್ವಾಭಿಮಾನದಿಂದ ದತ್ತಕ ಕೊಡದಿರುವ ತಂದೆಗಳನ್ನೂ, ದತ್ತಕ ಆಗುವದಿಲ್ಲೆಂಬನ್ನುವ ಮಕ್ಕಳನ್ನೂ ನಾನು ನೋಡಿರುತ್ತೇನೆ. ಅದರಂತೆಯೇ ನಿಮ್ಮ ಮಾತಾಗಿದ್ದು, ಕೇವಲ ನಮ್ಮ ಕಲ್ಯಾಣಕ್ಕಂದೇ ನೀವು ನಿಮ್ಮ ಮಗನನ್ನು ದತ್ತಕ ಕೊಡಲಿಕ್ಕೆ ಸಿದ್ಧವಾಗಿರುವದು ನನಗೆ ತಿಳಿಯುವದಿಲ್ಲೇನು? ದೈವವಿಲ್ಲದ್ದರೆ ಈ ದತ್ತವಿಧಾನವು ಆಗುತ್ತಿದ್ದಿತು.

ಇಷ್ಟು ಮಾತನಾಡಿ ವಿಮಲೆಯು ಸುಭೇದಾರರ ನೀರಿಳಿಸಿ ಬಿಟ್ಟಳಲ್ಲದೆ, ಇನ್ನು ಆತನ ಮಗನ ಶೋಧವನ್ನಷ್ಟು ಮಾಡಬೇಕೆಂಬ ಮತ್ತು ಭಾವೂಸಾಹೇಬರಿಗೆ ಅದನ್ನು ತೋರಿಸಬೇಕೆಂಬ ಉದ್ದೇಶದಿಂದ ವಿಮಲೆಯು ತನ್ನ ಸಂಭಾಷಣವನ್ನು ಬೇರಕಂತಲೇ ಬೆಳಸಿ:—ಅಪ್ಪಾ, ಸುಭೇದಾರಸಾಹೇಬರ ಈ ಬಾಜೀರಾಯನನ್ನು ನೀವು ಈ ಮೊದಲು ನೋಡಿದ್ದಿರೇನು? ಇಂದು ಈತನು ಬಂದೇ ಬಿಟ್ಟಿದ್ದಾನೆ. ಇತ್ತ ಹೊರಗೆ ನೋಡಿರಿ; ಆದರೆ ಸುಭೇದಾರರೇ, ನಿಮ್ಮ ಬಾಜೀರಾಯನು ಈ ಮೊದಲೊಮ್ಮೆ ಒಬ್ಬನೇ ನಮ್ಮ ಮನೆಗೆ ಬಂದಿದ್ದಂತೆ ನನಗೆ ತೋರುತ್ತದೆ.

ಸು:—ಅದು ಯಾವಾಗ? ವಿ:—ಸರಾಸರಿ ಆರು ತಿಂಗಳಾಗಿರಬಹುದು.

ಸು:—ಹೀಗೆಯೊ? ಆಗ ಈತನು ನಿಮ್ಮೊಡನೇನಾದರೂ ಮಾತನಾಡಿದ್ದನೇ?

ವಿ:—ಓಹೋ, ಮಾತಾಡಿದನಲ್ಲ! ಇವನೊಳ್ಳೇ ಏಟ್ಟನಾಗಿರುತ್ತಾನರೀ. ಆಗ ನಮ್ಮ ಮನೆಯಲ್ಲಿ ಒಡಿಗ್ಗಷ್ಟನ್ನು ನಡೆದಿತ್ತು. ಒಡಿಗನು ತಂಬಾಕ ಸೇದ ಲಿಕ್ಕೆಂದು ಪುಡಿಚೆಕ್ಕೆಗಳನ್ನು ಹೊತ್ತಿಸಿಟ್ಟಿದ್ದನು. ಆ ಬೆಂಕಿಯು ಹೊಗೆಯು ಎತ್ತರವಾಗಿ ಆಕಾಶದ ಕಡೆಗೆ ಹೋಗುತ್ತಿರುವದನ್ನು ಕಂಡು, ಈ ನಿಮ್ಮ ಬಾಜೀ ರಾಯನು ನನ್ನನ್ನು ಕುರಿತು: –"ಈ ಪುಡಿ ಚೆಕ್ಕೆಯು ಹೊಗೆಯೇ ಇಷ್ಟು ಎತ್ತರ ಹೋದರೆ, ಈ ನಿಮ್ಮ ಇಡೀ ಮನೆಗೆ ಬೆಂಕಿ ಹಚ್ಚಿದರೆ ಆ ಹೊಗೆಯೆಷ್ಟು ಎತ್ತರ ಹೋದೀತು?" ಎಂದು ಕೇಳಿದನು.

ಸುಭೇದಾರನು ನಾಚಿಕೆಯಿಂದಲೂ ಸಿಟ್ಟಿನಿಂದಲೂ ನಾಲಿಗೆ ಕಚ್ಚಿದನು! ಆದರೂ ಕಾಲಹರಣ ಮಾಡುವದಕ್ಕೆಂದು ಆತನು ಅನ್ನುತ್ತಾನೆ:—"ಇದ್ದೀ ತಿದ್ದೀತು. ಈತನು ನಿಮಗೆ ಹಾಗೆ ಕೂಡ ಅಂದಿದ್ದಾನು. ಈತನಿಗೆ ಚಿಕ್ಕಂದಿ ನಿಂದಲೂ ಗಣಿತದ ಚಟವಿದೆ. ಇಷ್ಟು ಚಿಕ್ಕ ವಯಸ್ಸಿನಲ್ಲೇ ಈತನು ತ್ರೈರಾ ಶಿಕ-ಪಂಚರಾಶಿಕಗಳನ್ನು ಬಿಡಿಸುತ್ತಿರುವನು. ದೇವರು ಈತನಿಗೊಳ್ಳೇ ಬುದ್ಧಿ ಯನ್ನು ದಯಪಾಲಿಸಿರುತ್ತಾನೆ.

ವಿಮಲೆಯು ಇನ್ನು ಖುದ್ದ ಬಾಜೀರಾಯನನ್ನೇ ಮಾತಾಡಿಸಲಿಕ್ಕೆಂದು ಬಾಜೀರಾಯನ ಕಡೆಗೆ ಹೊರಳಿ:—ತಮ್ಮಾ, ನಿನ್ನ ಹೆಸರೇನು?

ಬಾಜೀರಾಯನು ಮೋರೆ ಸೊಟ್ಟ ಮಾಡಿ: ಬ್ಯಾ-ಬ್ಯಾ-ಜೇ-ರಾವ.

ವಿ:—ನೀನು ಸಾಲೆಯಲ್ಲೇನು ಕಲಿಯುತ್ತಿರುತ್ತೀ?

ಬಾಜೀರಾಯನು ರೀ ಎಳೆಯುತ್ತ; ನಾನೆಂದೂ ಸಾಲೆಗೆ ಹೋಗುವದಿಲ್ಲ ಹೋಗು.

ಕೂಡಲೆ ಸುಭೇದಾರರು ನಡುವೇ ಬಾಯಿ ಹಾಕಿ:—ಈತನು ಖಂಡಿತ ವಾದಿಯಾಗಿದ್ದಾನೆ. ಈತನು ಪರಂಪರೆಗೆ ಹುಟ್ಟ ವೈರಿಯಾಗಿರುವನು. ಹಗಲು ಹನ್ನೆರಡು ತಾಸು ಹುಡುಗರು ಸಾಲೆಗೆ ಹೋಗುವದೆಂದರೇನು? ಮನೆಯೊಳಗಿಂದ ಮನೆಯೊಳಗೇ ಶಿಕ್ಷಣವು ಹೇಗಾದೀತೆಂಬ ಬಗ್ಗೆ ಯಾರಾದರೂ ಚೌಕಶಿ ಮಾಡಿ ರುತ್ತಾರೇನು? ಅಂತೆಯೇ ನಾನು ಈತನನ್ನು ಸಾಲೆಗೆ ಹಾಕಿರುವದಿಲ್ಲ; ಮತ್ತು ಯಾರಾದರೂ ಈತನಿಗೆ ಸಾಲೆಗೆ ಹೋಗೆಂದು ಅಂದರೆ, ಈತನು: "ಹೋಗುವ ದಿಲ್ಲ ಹೋಗು" ಎಂದು ಅವರಿಗೆ ಸ್ಪಷ್ಟವಾಗಿ ಹೇಳುತ್ತಿರುತ್ತಾನೆ,

ವಿ:—ಏನೋ, ಬಾಜೀರಾಯಾ, ನೀನು ನಮ್ಮ ತಂದೆಯು ಮಗನಾಗಿ ನಮ್ಮ ಮನೆಗೆ ಇರಲಿಕ್ಕೆ ಬರುತ್ತೀಯಾ?

ಬಾಜೀರಾಯನು ಮತ್ತೆ ಮೋರೆ ಸೊಟ್ಟ ಸೊಟ್ಟ ಮಾಡುತ್ತ: "ನನಗೆ ಇಬ್ಬರು ತಂದೆಗಳು ಬೇಡಿರಪ್ಪಾ ಬೇಡ" ಎಂದು ಹೇಳಿದನು.

ಕೂಡಲೆ ಸುಭೇದಾರನು ಮತ್ತೆ ನಡುವೆ ಬಾಯಿಹಾಕಿ ಕಣ್ಣು ಚಿವುಟುತ್ತ: “ಇಷ್ಟು ಚಿಕ್ಕ ಹುಡುಗ! ನೋಡಿರಿ, ಈ ವಯಸ್ಸಿನಲ್ಲಿಯೂ ಸ್ವಾಭಿಮಾನವೆಷ್ಟು ಪ್ರಖರವಾಗಿದೆಯೆಂಬದನ್ನು?”

ವಿ:—ಕೇವಲ ತಂದೆಗಿಂತಲೂ ಹೆಚ್ಚಿಗಿರುತ್ತದೆ; ಬರಿಯ ಗಣಿತದಲ್ಲಲ್ಲ!

ಸುಭೇದಾರನು ಅನುಸರಣ ಮಾಡುವ ಉದ್ದೇಶದಿಂದ:—ತಮ್ಮಾ, ನಾಳೆಯಿಂದ ಈ ಭಾವೂಸಾಹೇಬರು ನಿನ್ನ ತಂದೆಯಾಗುವರಪ್ಪಾ.

ಬುದ್ಧಿವಂತ ಬಾಜೀರಾಯನು:—ಅಪ್ಪಾ, ಹಾಗಾದರೆ ನೀನು ಇಂದೆಯೇ ಸಾಯುತ್ತೀಯೇನು?

ಆದರೆ ಸುಭೇದಾರನ ಪ್ರಸಂಗಾವಧಾನವು ಆ ತೀರ ಕಠಿಣ ಪ್ರಸಂಗದಲ್ಲಿಯೂ ನೆಟೆದು ನಿಂತಿತು. ಅದರಿಂದ ಅವನು:—ನೋಡಿಕೊಳ್ಳಿರೀತನ ತತ್ವಜ್ಞಾನವನ್ನು! ಈ ವಯಸ್ಸಿನವನು ಸಾವಿನ ಮಾತೆತ್ತುವದೆಂದರೆ? ದೊಡ್ಡವರು ಕೂಡ ಅಂಜುತ್ತಾರೆ; ಅನುಮಾನಗೊಳ್ಳುತ್ತಾರೆ; ಆದರೆ ನಮ್ಮ ಬಾಜೀರಾಯನು ಚಿಕ್ಕಂದಿನಿಂದಲೇ ತೀರ ದಿಟ್ಟನಾಗಿರುವನು. ಈತನು ಗಂಡುಹುಡುಗನಾಗಿದ್ದರೂ, ‘ರಂಡೇ-ಮುಂಡೇ’ ಮುಂತಾದ ಬೈಗಳುಗಳು ಹೆಣ್ಣು ಹುಡುಗಿಯರಂತೆ ಈತನಿಗೊಳ್ಳೇ ಪ್ರಿಯಕರವಾಗಿರುತ್ತವೆ. ಯಾಕಂದರೆ ಮರಣವಿಷಯದ ಅಂಜಿಕೆಯು ಎಳ್ಳಷ್ಟೂ ಇಲ್ಲದ ಬಳಿಕ ಗಂಡ ಸತ್ತ ಮೇಲೆ ವಿಶೇಷಣವಾಗುವ ಆ ‘ರ’ ಕಾರ ‘ಮು’ಕಾರಗಳ ಬಗ್ಗೆ ಈತನು ವಿಧಿ-ನಿಷೇಧವನ್ನೇಕೆ ತಾಳಬೇಕು? ಈತನ ಜೋಡಿಯ ಬೇರೆ ಹುಡುಗರನ್ನು ನೋಡಿರಿ. ಮರಣ ವಿಷಯವಂತೂ ಇರಲಿ, ಬರಿಯ ಬಾವಾಜಿಯ ಹೆಸರು ತಕ್ಕೊಂಡರೂ ಅವು ಹೆದರಿ ಹಿಕ್ಕಿ ಹಾಕುತ್ತಿರುತ್ತವೆ!

ವಿ:—ಸುಭೇದಾರ ಸಾಹೇಬರೇ, ಈತನು ಈಗಲೆ ಇಷ್ಟು ದಿಟ್ಟನಿದ್ದಬಳಿಕ ನಾಳೆ ದೊಡ್ಡವನಾದನೆಂದರೆ, ಸಾಕಷ್ಟು ದರವಡೆಗಳನ್ನು ಕೂಡ ಹಾಕುವನು. ಸ್ವಾರ್ಥಕ್ಕಲ್ಲ; ದೇಶಹಿತಕ್ಕೆಂದಂದೆ. ಯಾಕಂದರೆ ಈತನು ಅಂತಹ ದಿಟ್ಟನೇ ಆಗಿರುತ್ತಾನೆ.

ಸು:—ಅದಿಲ್ಲದಿದ್ದರೆ ಸಂಸ್ಥಾನೀ ಪ್ರಜೆಗಳ ಸಲುವಾಗಿ ಸಂಸ್ಥಾನೀ ಅಧಿಕಾರಿಗಳ ಖೂನಿ ಕೂಡ ಮಾಡುವನು; ಪ್ರಭಾಕರನು ಮಾಡಿದಂತೆ ಕೊಲೆ ಕೂಡ ಮಾಡುವನು. ಇಲ್ಲಾ ಅಂದೆ ಪ್ರಭಾಕರನ ಮೇಲೆ ಆರೋಪ ಬಂದಂತೆ—

ಸುಭೇದಾರರು ಸ್ವಾರ್ಥಕ್ಕಾಗಿ ಅನುಸರಣ ಮಾಡುತ್ತಿದ್ದರೂ ಬುದ್ಧಿಶಾಲಿಯಾಗಿದ್ದರು. ವಿಮಲೆಯು ಅವರ ಮಗನ ಕುಚೇಷ್ಟೆ ಪ್ರಾರಂಭಿಸಿರಲು, ಅವರು ಅವಳ ಮುಯ್ಯ ತೀರಿಸುವ ಸುಸಂಧಿಯನ್ನದೇಕೆ ಕಳಕೊಳ್ಳುವರು? ಆ

ಭರದಲ್ಲಿ ಅವರು ದರವಷೆಗಾರನ ಪ್ರತಿಯಾಗಿ ಪ್ರಭಾಕರನನ್ನು ಮುಂದೆ ಜಗ್ಗಿ ಕೊಂಡು ಕೊಲೆಗಾರನನ್ನು ನಿಲ್ಲಿಸಿದರು; ಆದರೆ ಪ್ರಭಾಕರನು ಪ್ರತ್ಯಕ್ಷ ಕೊಲೆ ಮಾಡಿರದೆ, ಅದು ಕೊಲೆಯ ಪ್ರಯತ್ನವಿದ್ದಿತು; ಮತ್ತು ಆದಾದರೂ ಆರೋಪದಲ್ಲಿ ಯೇ ಇತ್ತೆಂಬುದು ಫಕ್ಕನೆ ಹೊಳೆಯಲು, ಅವರು ತಮ್ಮ ಉತ್ತರವನ್ನು ಸಾವ ರಿಸಿಕೊಂಡಿದ್ದರು; ಆದರೆ ಅವರು "ನಿಮ್ಮ ಎಲೆಯೊಳಗೆ ಸತ್ತು ಬಿದ್ದ ಕತ್ತೆಯನ್ನು ಮೊದಲು ತೆಗೆದು, ಆ ಮೇಲೆ ನನ್ನ ಎಲೆಯ ಮೇಲಿನ ನೊಣ ಜಾಡಿಸಲಿಕ್ಕೆ ಬನ್ರಿ"ಎಂದು ಹೇಳಿ ಯಾವ ಆಘಾತವನ್ನುಂಟು ಮಾಡಿದರೋ, ಅದು ವಿಮಲೆಯ ಮರ್ಮಕ್ಕೆ ತಾಕುವಷ್ಟು ಸಾಧಾರವಾಗಿರದಿದ್ದರೂ ಸಮರ್ಪಕವಿದ್ದಿತೆಂಬದಕ್ಕೆ ಸಂದೇಹವಿರಲಿಲ್ಲ; ಆದರೆ ಆ ಆಘಾತವು ತಾಕಲೇ ಇಲ್ಲೆಂಬದನ್ನು ತೋರಿಸುವ ದಕ್ಕೆಂದು ಅವಳು ಮತ್ತೆ:—ಬಾಜೀರಾಯಾ, ನೀನು ಈ ಅಜ್ಜನ ತೊಡೆಯ ಮೇಲೆ ಕೂಡ್ರುತ್ತೀಯಾ? ಎಂದು ಕೇಳಲು,

ಬಾಜೀ:—ನಾನೊಲ್ಲೆ ಹೋಗು. ಅಜ್ಜನೇ ಬೇಕಾದರೆ ನನ್ನ ತೊಡೆಯ ಮೇಲೆ ಬಂದು ಕೂಡ್ರಲಿ!

ಸುಭೇದಾರರು ಮತ್ತೆ:—ಕೇಳಿರಿ-ಕೇಳಿರಿ. ಈತನಿಗೆ ಸಾವಿನ ಅಂಜಿಕೆಯೇ ತೋರುವದಿಲ್ಲೆಂದ ಬಳಿಕ, ಚಿಕ್ಕ-ದೊಡ್ಡವರ ಭೇದವಾದರೂ ಈತನಲ್ಲೆಲ್ಲಿಂದ ಬರಬೇಕು? ಇವೆಲ್ಲ ಕೇವಲ ದಿಟ್ಟತನದ ಸಾಕ್ಷಿಗಳೇ ಆಗಿರುವವು.

ಇತ್ತ ಈ ಸಂಭಾಷಣವು ನಡೆದಿರಲು, ಬಾಜೀರಾಯನು ಕುಳಿತಲ್ಲಿಯೇ ಮಂಗನಂತೆ ಸೊಟ್ಟು ಸೊಟ್ಟಾಗಿ ಮುಸುಡೆಯನ್ನು ಮಾಡುತ್ತಿದ್ದನು. ಆತನು ಆಗ ಬೇರೆಯವರಿಗೆ ಅಣಕಿಸುತ್ತಿದ್ದನೆಂತಲ್ಲ; ಆದರೆ ಬಾಲಗ್ರಹ ಬಂದ ಮಕ್ಕಳು ಮಾಡುವಂತೆ ಸುಮ್ಮಸುಮನೆ ಮೋರೆ ಸೊಟ್ಟ ಮಾಡಿ, ಕಣ್ಣು ತಿರುವಿ, ನಾಲಿಗೆ ಸೊಟ್ಟ ಸೊಟ್ಟ ಮಾಡಿ, ಅತ್ತಿತ್ತ ಅಲ್ಲಾಡಿಸಿ, ಅಲ್ಲಿ ನಾಲಿಗೆಗೆ ಸಿಕ್ಕದ್ದನ್ನೆಲ್ಲ ನೆಕ್ಕು ತ್ತಿದ್ದನು! ಅಪಸ್ಮಾರ ರೋಗಗ್ರಸ್ತನಾದ ಆ ಹುಡುಗನ ಬಾಯಿಯು ಒಂದಿಷ್ಟು ಒರಗಿ ಹೋಗಿತ್ತು; ಮತ್ತು ಚಿಕ್ಕಂದಿನಲ್ಲಿ ಆತನಿಗೆ ವೈಲಿಗಳಿದ್ದು, ಅವುಗಳ ದೊಡ್ಡ ದೊಡ್ಡ ಕಲೆಗಳು ತಾಮ್ರದ ಕೊಡಗಳ ಮೇಲಿನ ಹೊಳಪಿನಂತೆ ಆತನ ಕೆಂಪು ಮುಸುಡಿಯ ಮೇಲೆ ಕಾಣುತ್ತಿದ್ದವಲ್ಲದೆ, ಆ ವೈಲಿಗಳಿಂದ ಆತನ ಎಡ ಗಣ್ಣಲ್ಲಿ ಹೂವೂ ಬಿದ್ದಿತ್ತು.

ವಿಮಲೆಯು ತನ್ನ ವಿರಕೆಯ ದನಿಯಿಂದಲೇ:—ಏನರೀ, ಸುಭೇದಾರ ಸಾಹೇಬರೇ, ಈ ಹುಡುಗನು ಮೋರೆಯನ್ನು ಹೀಗೆ ಸೊಟ್ಟಸೊಟ್ಟೇಕೆ ಮಾಡು ತ್ತಿರುತ್ತಾನೆ?

ಆದಕ್ಕೆ ಸುಭೇದಾರನು:—"ವಿಮಲಕ್ಕಾ, ಇನ್ನೊಮ್ಮೆ ಹೇಳುತ್ತೇನೆ

ಕೇಳಿಕೊಳ್ಳಿರಿ. ಈತನು ಯಾರನ್ನೂ ಅಣಕಿಸಲಿಕ್ಕೆ ಹೆದರುವದಿಲ್ಲ! ವಿಟ್ಟತನ, ನಿಸ್ಪೃಹತೆಗಳ ಬಾಲಗುಟ್ಟಿಯನ್ನೇ ಈತನಿಗೆ ಹಾಕಿದಂತಾಗಿದೆ'' ಎಂದು ತನ್ನ ನಿಶ್ಚಿತವಾದ ಉತ್ತರವನ್ನು ಕೊಟ್ಟನು.

ಬಾಜೀರಾಯನು ತನ್ನ ಅಂಗಿಯ ತೋಳುಗಳಿಂದ ಮೊಲ್ಲು-ಸುಂಬಳಗಳ ನ್ನೊರಿಸುತ್ತಿರುವದನ್ನು ಕಂಡು, ವಿಮಲೆಯು:—ಇದರಿಂದ ಈತನ ಈ ಹೊಸ ಅಂಗಿಯು ಹೊಲಸಾಗುವದು. ಮೋರೆ-ಮೂಗುಗಳನ್ನೊರಿಸಲಿಕ್ಕೆ ಒಂದು ಕರವಸ್ತ್ರವನ್ನು ಈತನ ಚಣ್ಣದ ಕಿಸೆಯಲ್ಲಿಟ್ಟಿರಬಾರದೆ?

ಕೂಡಲೆ ಸುಭೇದಾರನು:—ಕರವಸ್ತ್ರಗಳಿಗೇನು ಕೊರತೆ? ಆದರೆ ನಮ್ಮ ಈ ಬಾಜೀರಾಯನಿಗೆ ಚಿಕ್ಕಂದಿನಿಂದಲೂ ಡೌಲು-ಜಂಬಗಳ ಒಗ್ಗೆ ಹೆಚ್ಚು ತಿರಸ್ಕಾರವಿರುತ್ತದೆಂದು ಕೊಟ್ಟಿಲ್ಲವಷ್ಟೇ.

ಇನ್ನು ಈ ಅಪ್ರತಿಷ್ಠೆಯು ಸಾಕಾಯಿತೆಂದು ತಿಳಿದು ಪ್ರಸಂಗವನ್ನು ನೀಗಿಕೊಳ್ಳುವ ಸಲುವಾಗಿ ಸುಭೇದಾರರು ಮಗನ ಕೈಹಿಡಿದು ಎದ್ದು ನಿಂತು:- "ಭಾವೂಸಾಹೇಬರೇ, ನಾವಿನ್ನು ಹೊರಡುತ್ತೇವೆ. ವಿಪರೀತ ವೇಳೆಯಾಯಿತು. ದತ್ತಕದ ಮುಹೂರ್ತವು ನಾಳೆ-ನಾಡದ್ದರಲ್ಲೇ ಇದೆಯೆಂಬದನ್ನು ತಿಳಿಸಲಿಕ್ಕಾಗಿಯೇ ನಾನು ಸಹಜವಾಗಿ ಬಂದಿದ್ದೆನು. ಇಲ್ಲಿ ಅನಾಯಾಸವಾಗಿ ವಿಮಲಕ್ಕನವರ ಭೇಟಿಯಾದದ್ದು ಹಿತವೇ ಆಯಿತು.'' ಆದರೆ ವಿಮಲೆಯು ಅವರಿಗೆ ಕೈ ತೊಳಕೊಂಡು ಬೆನ್ನು ಹತ್ತುವದನ್ನಿನ್ನೂ ಬಿಟ್ಟಿರಲಿಲ್ಲ. ಇಷ್ಟು ಅವಗುಣಗಳ ಭರತಿಗೆ ಬಾಜೀರಾಯನಲ್ಲಿ ತಿನಸುಬಾಕತನವೂ ಇದ್ದೇ ತೀರಬೇಕೆಂಬ ಖಾತ್ರಿಯಿಂದ ಅವಳು:—ತುಸ ತಡೆಯಬೇಕು. ಮುತ್ತಿನಂತಹ ನಿಮ್ಮ ಈ ಪುತ್ರರತ್ನವು ನಮ್ಮ ಮನೆಯವರೆಗೆ ಬಂದಿದ್ದು, ನಾಳೆ-ನಾಡದ್ದೇ ದತ್ತಕವಾದರೆ ಈತನು ನನ್ನ ತಮ್ಮನೇ ಆಗುವವನಲ್ಲವೆ? ಅದರಿಂದ ತುಸ ತಡೆಯಿರಿ; ಈತನಿಗೇನಾದರೂ ತಿನಿಸು ತಂದು ಕೊಡದ ಹೊರತು ನಾನಿವನನ್ನು ಹೇಗೆ ಹೋಗಗೊಟ್ಟೇನು?

ಹೀಗೆಂದು ಹೇಳಿ ಅವಳು ತಟ್ಟನೆ ನಡುಮನೆಗೆ ಹೋದಳು; ಮತ್ತು ಅಲ್ಲಿಯ ಬಾಗಿಲು ಮಾಡದೊಳಗಿಂದ ಸಕ್ಕರೆಯಿಂದ ಮಾಡಲ್ಪಟ್ಟಂತಹ ಒಂದು ಕತ್ತೆಯನ್ನು ತಂದಳು. ಅದನ್ನು ಅವಳು ಒಮ್ಮೆಲೆ ಬಾಜೀರಾಯನ ಕೈಗೆ ಕೊಡದೆ, ದೂರದಲ್ಲಿ ಹಿಡಿದು ಅವನಿಗೆ ತೋರಿಸಿದಳಷ್ಟೇ. ಕೂಡಲೆ ಆ ಹುಡುಗನು ತಂದೆಯ ಕೈಕೊಸರಿಕೊಂಡು ಓಡಿ ಬಂದು, ವಿಮಲೆಯ ಕೈಯೊಳಗಿಂದ ಅದನ್ನು ಕಸಿದುಕೊಂಡು:—''ಅಪ್ಪಾ, ಕತ್ತೆ! ಅಪ್ಪಾ, ಕತ್ತೆ!!'' ಹೀಗೆಂದು ಆನಂದದಿಂದ ಚೀರಿ, ಆತನು ಆ ಸಕ್ಕರೆಯ ಕತ್ತೆಯ ಉದ್ದನ್ನ ಕಿವಿಯನ್ನು ಹಲ್ಲಿನಿಂದ ಕಡಿಕಡಿದು ತಿಂದುಬಿಟ್ಟನು! ಕೂಡಲೆ ವಿಮಲೆಯು ಗಹ

ಗಹಿಸಿ ನಕ್ಕು:—ಸುಭೇದಾರ ಸಾಹೇಬರೇ, ನೀವು ಆಗಲೆ ಅಂದದ್ದೇ ನಿಜವು. ಈ ಹುಡಗನೊಳ್ಳೇ ದಿಟ್ಟನಾಗಿರುತ್ತಾನೆ. ಏತಕಚ್ಕೂ ಅಂಜತಕ್ಕವನಲ್ಲ!

ಮಗನು ಮಾಡಿದ ಪ್ರದರ್ಶನವನ್ನು ಕಂಡು ಆ ಮನೆಯಿಂದ ಹೊರ ಬೀಳುವಾಗ ಸುಭೇದಾರ ಸಾಹೇಬರು ನಾಚಿಕೆಯಿಂದ ಎಷ್ಟು ಕುಗ್ಗಿರಬಹು ದೆಂಬದರ ವರ್ಣನೆಯನ್ನು ಮಾಡದಿರುವದೇ ವಿಹಿತವು!

ಭಾವೂಸಾಹೇಬರು ಸ್ವಸ್ಥವಾಗಿ ಮಲಗಿ ಅದನ್ನೆಲ್ಲ ನೋಡುತ್ತಿದ್ದರು. ವಿಮಲೆಯು ಅವರನ್ನುದ್ದೇಶಿಸಿ ತುಸ ಸಿಟ್ಟಿನಿಂದಲೇ:—ಅಪ್ಪಾ, ಇಂಥ ಈ ಖೋಡಿ ಹುಡುಗನನ್ನು ನನ್ನ ತಮ್ಮನನ್ನಾಗಿ ಮಾಡುವಿರಾ? ಎಂದು ಕೇಳಿದಳು.

———

## ೧೪ ಪ್ರಭಾಕರನ ನೃಸಿಂಹಾವತಾರ!

ವಿಮಲೆಯು ತೀವ್ರಭಾವನಾಪೂರ್ಣವಾದ ಹಾಗು ಮರ್ಮಭೇದಕವಾದ ಯಾವ ಪ್ರಶ್ನೆಯನ್ನು ಭಾವೂ ಸಾಹೇಬರಿಗೆ ಕೇಳಿದಳೋ, ಅದರ ಪರಿಣಾಮವು ಅವರ ಮೇಲೆ ಆಗದಿರಲಿಲ್ಲ. ಆಗ ಅವರು:—ತಂಗೀ, ನಿನನ್ನುವುದೇ ನಿಜವು. ನನಗಾದರೂ ದತ್ತಕ ತೆಗೆದುಕೊಳ್ಳುವದೇತಕ್ಕೆ ಬೇಕಾಗಿದೆ? ನೀನೇ ನನ್ನ ಮಗನಲ್ಲ ವೇನು? ನಿನ್ನ ಅಭಿಪ್ರಾಯದಂತೆ ನಿಜವಾಗಿಯೂ ನಾನು ಇಂದು ನಾಳೆ ಪ್ರಭಾ ಕರನನ್ನು ಮನಸಿನಲ್ಲಿ ನೆನಿಸುತ್ತೇನೆ; ಮತ್ತು ನಿನ್ನಂತೆಯೇ ನನಗೂ ಆತನ ಸಂ ಬಂಧದ ಸ್ವಪ್ನಬೀಳುತ್ತದೇನೆಂಬದನ್ನು ನೋಡುತ್ತೇನೆ.

ಇದನ್ನು ಕೇಳಿ ತಾನು ತಂದೆಯ ಮನಸ್ಸನ್ನು ಎರಡು ಬಗೆಯಿಂದಲೂ ತಿರುಗಿಸಿದೆನೆಂಬ ಬಗ್ಗೆ ವಿಮಲೆಗೆ ಸಮಾಧಾನವೆನಿಸಿತು; ಆದರೆ ದುರ್ದೈ ವದ ಮೂಲಕ ಆ ಸಮಾಧಾನವು ಹೆಚ್ಚು ಕಾಲ ಸ್ಥಿರವಾಗಿ ಉಳಿಯಲಿಲ್ಲ. ಅಂದೇ ರಾತ್ರಿಯಲ್ಲಿ ಒಬ್ಬ ಸವಾರನು ದಿವಾಣಸಾಹೇಬರ ಒಂದು ಪತ್ರವನ್ನು ಜರೂ ರಿಯದೆಂದು ತಂದು ಭಾವೂಸಾಹೇಬರಿಗೆ ಕೊಟ್ಟನು. ಅದರಿಂದ ಅದನ್ನೋದುವ ಕೆಲಸವು ವಿಮಲೆಯ ಕಡೆಗೇ ಬಂದಿತು. ಅವಳು ಲಕ್ಕೋಟೆಯನ್ನು ಬಿಚ್ಚಿ ಒಳ ಗಿನ ಪತ್ರವನ್ನು ಗಟ್ಟಿಯಾಗಿ ಓದಿದಳು. ಪತ್ರದ ಸಂಗತಿಯನ್ನು ಕೇಳಿ ಭಾವೂ ಸಾಹೇಬರ ಮನಸ್ಸು ಮತ್ತೆ ತಿರುಗಿತು. ಅದರಿಂದ ಅವರು ವಿಮಲೆಯನ್ನು ದ್ದೇಶಿಸಿ:-"ತಂಗೀ, ದಿವಾಣಸಾಹೇಬರ ಸ್ನೇಹ, ಸುಭೇದಾರರ ಸ್ವಾರ್ಥತ್ಯಾಗದ ವೃತ್ತಿ ಮತ್ತು ಜ್ಯೋತಿಷ್ಕರ ಭವಿಷ್ಯ ಇವೆಲ್ಲವುಗಳೂ ದತ್ತಕಕ್ಕನುಕೂಲವಾಗಿಯೇ ಇರುತ್ತವೆ. ಅದರಿಂದ ದತ್ತಕ ತೆಗೆದುಕೊಳ್ಳುವದು ಎಷ್ಟು ಆವಶ್ಯಕವಾಗಿದೆ ಯೆಂಬದು ಗೊತ್ತಾಯಿತೇ? ನಾಳೆ ಬೆಳಿಗ್ಗೆಯೇ ದತ್ತಕದ ಸಿದ್ಧತೆಗೊಳಿಸುವದು ವಿಹಿತವಲ್ಲವೆ?" ಎಂದು ಕೇಳಿದರು.

ತನ್ನ ತಂದೆಯು ದತ್ತಕ ತೆಗೆದುಕೊಳ್ಳುವ ಲಹರಿಯು ಇನ್ನು ಏನು ಮಾಡಿದರೂ ಕಡಿಮೆಯಾಗುವದಿಲ್ಲೆಂಬದು ವಿಚಾರಾಂತ್ಯದಲ್ಲಿ ವಿಮಲೆಗೆ ತಿಳಿಯಿತು; ಮತ್ತು ಅದನ್ನು ರಹಿತಪಡಿಸಲಿಕ್ಕೆ ಪ್ರಭಾಕರನು ಪ್ರಕಟನಾಗುವದೊಂದೇ ಖಾತ್ರಿದಾಯಕ ರಾಮಬಾಣ ಔಷಧವಾಗಿತ್ತು; ಆದರೆ ಆ ಔಷಧವನ್ನೇ ಕೊಡುವುದಾದರೆ, ಹೀಗೆ ಸಾಮೋಪಚಾರದಿಂದ ಕೊಡ ಹೋಗದೆ, ಒಳ್ಳೇ ಗಾಂಭೀರ್ಯದಿಂದಲೇ ಕೊಡುವುದುತ್ತಮವಲ್ಲವೆ? ಎಂಬ ಗುಪ್ತ ವಿಚಾರದಿಂದ ಅವಳು ತಂದೆಯನ್ನು ಕುರಿತು:--"ಅಪ್ಪಾ, ನಾನು ನಿಮ್ಮ ಆಲೋಚನೆಗೆ ವಿರುದ್ಧವಾಗಿರುವದಿಲ್ಲ. ಪ್ರಭಾಕರಣ್ಣನು ಕೇವಲ ಸ್ವಪ್ನದಲ್ಲಿಯೇ ಕಾಣಿಸಿಕೊಳ್ಳುವವನು; ಆದರೆ ಪ್ರತ್ಯಕ್ಷ ಪ್ರಕಟನಾಗುವದಿಲ್ಲ. ಅದರಿಂದ ಮನೆತನದ ಮತ್ತು ತೈನಾತದ ದೃಷ್ಟಿಯಿಂದ ನೀವು ಯೋಚಿಸಿದುದು ವಿಹಿತವೇ ಸರಿ. ಅದರಂತೆ ನಾಳೆಯೇ ದತ್ತಕ ವಿಧಾನದ ಸಿದ್ಧತೆಯಿರುವದೆಂದು ದಿವಾಣಸಾಹೇಬರಿಗೂ ಸುಭೇದಾರರಿಗೂ ಹೇಳಿ ಕಳಿಸಿಬಿಡಿರಿ"

ಇತ್ತ ಅದೇರಾತ್ರಿ ಭಾವೂಸಾಹೇಬರಿಗೆ ನಿದ್ದೆ ಹತ್ತಿದ ನಂತರ ಪ್ರಭಾಕರ, ಮಾಯಿಸಾಹೇಬ ಮತ್ತು ವಿಮಲೆ ಈ ತ್ರಿವರ್ಗದಲ್ಲಿ ಚರ್ಚೆಗೆ ಪ್ರಾರಂಭವಾಯಿತು. ಮಾಯಿಸಾಹೇಬರು ತೀರ ಗಾಬರಿಗೊಂಡರು. ಪಾಪ! ಆ ಬಡವೆಯ ಕಣ್ಣೀರ ಪ್ರವಾಹವು ತಡೆಯಲಿಲ್ಲ; ಹಾಗು ಈಗ ಏನು ಸಲಹೆ ಕೊಡಬೇಕೆಂಬದೂ ಅವಳಿಗೆ ತಿಳಿಯಲಿಲ್ಲ. ಪ್ರಭಾಕರನು ಪ್ರಕಟವಾಗದ ಹೊರತು ದತ್ತಕವು ರಹಿತವಾಗುವದಿಲ್ಲ; ಮತ್ತು ಆತನು ಪ್ರಕಟವಾದನೆಂದರೆ ಸರಕಾರದವರು ಆತನನ್ನು ಬಂಧಿಸಿ ಅಂದಮಾನಕ್ಕೆ ಅಟ್ಟುವವರು. ಈ ಬಗೆಯ ಅಡಚಣೆಗಳು ಮಾಯಿಸಾಹೇಬರಿಗೆ ತೋರುತ್ತಿದ್ದವು. ಇನ್ನು ಪ್ರಕಟವಾಗದಿದ್ದರೆ ಗುಪ್ತ ರೀತಿಯಿಂದಾದರೂ ಅದೆಷ್ಟು ದಿನವಿರಬೇಕು? ಪ್ರಭಾಕರ-ವಿಮಲೆಯರ ಮನಸ್ಸಿನಲ್ಲಿ ಮಾತ್ರ ಯಾವ ಗೊಂದಲವೂ ಉಂಟಾಗಿರಲಿಲ್ಲ. ಪ್ರಕಟವಾಗಿಯೇ ಈ ಪ್ರಕರ್ಣದ ನಿಕಾಲೆ ಮಾಡಿಕೊಳ್ಳುವದೆಂದು ಅವರಿಬ್ಬರೂ ಗೊತ್ತುಪಡಿಸಿದರು. ಅಂತೆಯೇ ದತ್ತಕವಾಗುವ ಮೊದಲು, ಆದರೆ ಆ ವಿಧಾನವು ನಡೆಯುವ ಕಾಲಕ್ಕೆ ಪ್ರಭಾಕರನು ಪ್ರಕಟವಾಗಬೇಕು; ಅಂದರೆ ತುಸ ಮೋಜೂ ಆದೀತೆಂದು ಅವರು ನಿಶ್ಚಯಿಸಿಕೊಂಡರು.

ಆದರೆ ಪ್ರಭಾಕರನು ಬೇರೆಯವರಿಗೆ ದರ್ಶನ ಕೊಡುವ ಮೊದಲು ಶಕ್ಯವಾದರೆ ತಮ್ಮ ತಂದೆಗೊಮ್ಮೆ ಕಾಣಿಸಿಕೊಳ್ಳಬೇಕು. ಆತನು ಒಮ್ಮೆಲೆ ಬೇರೆಯವರಿಗೆ ದರ್ಶನ ಕೊಟ್ಟರೆ ಅವರಿಗೆ ಬರಿಯ ಆಶ್ಚರ್ಯವಾದೀತೇ ಹೊರತು ಮನಸ್ಸಿಗೆ ಆಘಾತವಾಗಲಾರದು; ಆದರೆ ಭಾವೂಸಾಹೇಬರಿಗೆ ಆ ಬಗೆಯ ಆಘಾತ

ವಾಗಬಹುದಾಗಿದೆ. ಆದರಿಂದ ಬೇರೊಂದು ಯುಕ್ತಿಯಿಂದ ಅವರ ಮನಸ್ಸನ್ನು ಪುತ್ರದರ್ಶನೋತ್ಸುಕಗೊಳಿಸಿ, ಬಳಿಕ ದರ್ಶನ ಮಾಡಿಸುವದು ಹಿತವೆಂದು ವಿಮಲೆಯು ಯೋಚಿಸಿದಳು.

ಮರುದಿನ ಅಪರಾಹ್ನ ಕಾಲದಲ್ಲಿ ದೊಡ್ಡ ದಿವಾಣಖಾನೆಯಲ್ಲಿ ದತ್ತಕ ವಿಧಾನದ ಸಿದ್ಧತೆಯು ನಡೆಯಿತು; ಆ ದಿವಾಣಖಾನೆಯಲ್ಲಿ ಹಲಕೆಲ್ಲ ಭಾವೂಸಾಹೇಬರ ಕೋಣೆಯೊಳಗಿನ ಲೆಲ ಸಾಮಾನುಗಳನ್ನೊಯ್ಯುತಕ್ಕದ್ದಿತು. ಅದರಿಂದ ವಿಮಲೆಯು ಅವರ ಪಲ್ಲಂಗವನ್ನು ಬೇರೆ ಕಡೆಗೆ ಬೇಕಂತ ಸರಿಸಿ, ಅವರು ಮಲಗಿದಾಗ ಅವರ ಕಣ್ಣೆದುರಿಗೆ ಎದುರಿಗಿನ ದೊಡ್ಡ ನಿಲುವುಗನ್ನಡಿಯು ಕಾಣಿಸುವಂತೆ ಮಾಡಿದಳು. ಆ ಕನ್ನಡಿಯು ಎದುರಿಗೆ ನಡುಮನೆಯೊಳಗಿನ ಒತ್ತಟ್ಟಿಗಿನ ಬಾಗಿಲವು ನೀಟಾಗಿ ಕಾಣಿಸುತ್ತಿತ್ತು. ಆ ಬಾಗಿಲೊಳಗಿಂದ ಬರುವ ಗಾಳಿಯು ಭಾವೂಸಾಹೇಬರಿಗೆ ಬಡಿಯಬಾರದೆಂದು ಅದಕ್ಕೆ ಪರದೆಯನ್ನಿಳಿಬಿಟ್ಟಿದ್ದರು. ಆ ಬಾಗಿಲಕಡೆಗೆ ತಲೆಮಾಡಿ ಹಾಗು ಕನ್ನಡಿಯ ಕಡೆಗೆ ನೋರೆ ಮಾಡಿ ಭಾವೂಸಾಹೇಬರು ಪಲ್ಲಂಗದ ಮೇಲೆ ಮಲಗಿಕೊಂಡಿದ್ದರು. ನಡುನಡುವೆ ವಿಮಲೆಯು ಬಂದು ಅವರ ಹತ್ತರ ಕೂಡ್ರುವಳು; ಹಾಗು ಉಭಯತರಲ್ಲಿ ಸಂಭಾಷಣವಾಗುವದು. ಭಾವೂಸಾಹೇಬರು ಬಾಯೊಳಗೆ ಚಿರೂಟ ಹಿಡಿದು ಹೊಗೆ ಬಿಡುವಾಗ ಅದು ಸೊಟ್ಟಡೊಂಕಾಗಿ ತಿರುಗುತ್ತ, ಸಪಜಂತಿಯ ಪಟಗಳಿಗೆ ಹೋಗಿ ತಾಕುತ್ತಿತ್ತು. ತಮ್ಮ ಬಾಯೊಳಗಿಂದ ಹೊಗೆ ಹೊರಟದ್ದನ್ನೂ ಮತ್ತು ಅದು ಸೊಟ್ಟಡೊಂಕಾಗಿ ಪಾರಿವಾಳದ ಭ್ರಮಣದಂತೆ ಮೇಲಕ್ಕೇರುತ್ತಿರುವದನ್ನೂ ತಾವು ನೋಡದ ಹೊರತು ತಂಬಾಕ ಸೇದುವವರ ಮನಸ್ಸಿಗೆ ತಾವು ತಂಬಾಕ ಸೇದಿದೆವೆಂದು ಅನಿಸುವದೇ ಇಲ್ಲ. ಆ ಹೊಗೆಯಲ್ಲಿ ಅವರಿಗೇನು ಅಂಥ ವಿಚಿತ್ರ ತೋರುವದೋ ದೇವರಿಗೆ ಗೊತ್ತು! ಕೆಲವರಿಗೆ ಆ ತಮ್ಮ ಬಾಯಿಂದ ಹೊರಟ ಹೊಗೆಯಲ್ಲಿ ಈಶ್ವರನು ಕಾಣುತ್ತಿದ್ದರೂ ಕಾಣಿಸುತ್ತಿರಬಹುದು; ಆದರೆ ಈಶ್ವರನು ಮೋಡ-ಮಂಜುಗಳನ್ನು ನಿರ್ಮಿಸುತ್ತಾನೆ; ತಾವೂ ತಮ್ಮ ತಂಬಾಕದಿಂದ ಮೋಡ-ಮಂಜುಗಳನ್ನುಂಟು ಮಾಡುತ್ತೇವಾದ್ದರಿಂದ, ತಾವು ಈಶ್ವರನ ಪ್ರತಿಕಕ್ಷಿಗಳೆಂದು ತಂಬಾಕ ಸೇದುವವರೇಕೆ ಅಂದುಕೊಳ್ಳಬಾರದು? ಇಂತಹ ಗೂಢ ತತ್ವಜ್ಞಾನದ ವಿಚಾರಗಳನ್ನು ತಂಬಾಕ ಸೇದುವವರು ಪ್ರಾಯಶಃ ಕಣ್ಣು ಮುಚ್ಚಿಕೊಂಡು ಇಲ್ಲವೆ ಕೆಲ ಕಾಲ ಕಣ್ಣು ತೆರೆದು ಮಾಡುತ್ತಿರುತ್ತಾರೆ. ಭಾವೂಸಾಹೇಬರು ಕಣ್ಣುಮುಚ್ಚಿದಾಗ ಅವರ ಅಂತಃಚಕ್ಷುಗಳಿಗೇನು ಕಾಣುತ್ತಿತ್ತೆಂಬದು ಗೊತ್ತಾಗುವದಿಲ್ಲ; ಆದರೆ ಇಂದು, ಕಣ್ಣು ತೆರೆದು ಎದುರಿಗೆ ನೋಡಿದಾಗ ಮಾತ್ರ, ತಮ್ಮ ಜೊತೆಗಾರನೋಬ್ಬನು ತಮ್ಮಂತೆಯೇ ಚಿರೂಟ ಸೇದಿ ಹೊಗೆ

ಬಿಡುತ್ತ ಪಲ್ಲಂಗದ ಮೇಲೆ ಮಲಗಿರುವಂತೆ ಕಾಣಿಸುತ್ತಿತ್ತೆಂಬದು ನಿಜವು. ಕನ್ನಡಿಯಲ್ಲಿ ಕಾಣಿಸುತ್ತಿರುವ ಆ ಪ್ರತಿಬಿಂಬವನ್ನು ಅವರು ನೋಡುತ್ತಿರುವಾಗ ವಿಮಲೆಯು ಅವರ ಬಳಿಯಲ್ಲಿ ಬಂದು ಕುಳಿತುಕೊಂಡಳು. ಅದರಿಂದ ಅವರು ಅವಳನ್ನು ಕುರಿತು:—ತಂಗೀ, ನಿನ್ನ ಸೂಚನೆಯಂತೆ ನಾನು ನಿನ್ನೆ ರಾತ್ರಿ ಪ್ರಭಾಕರನನ್ನು ಮನಸ್ಸಿನಲ್ಲಿ ನೆನಿಸುತ್ತಿದ್ದೆನು; ಆದರೆ ಆತನು ನಿನ್ನಂತೆ ನನಗೆ ಸ್ವಪ್ನದಲ್ಲಿ ಕಾಣಿಸಿಕೊಳ್ಳಲಿಲ್ಲವಲ್ಲ?'' ಎಂದು ಕೇಳಿದರು.

ಅದಕ್ಕೆ ವಿಮಲೆಯು:—''ಸ್ವಪ್ನಗಳು ರಾತ್ರಿಯಲ್ಲೇ ಕಾಣಿಸುತ್ತವೆಂತಲ್ಲ. ಅಪ್ಪಾ, ಅವು ಹಗಲನಲ್ಲಿ ಕೂಡ ಕಾಣಿಸುತ್ತಿರುತ್ತವೆ; ಮತ್ತು ತಂಬಾಕ ಸೇದದವರಿಗಿಂತ ಸೇದುವವರಿಗೇ ಅವು ಹಗಲಿನಲ್ಲಿ ಕಾಣುವ ಸಂಭವವು ಹೆಚ್ಚಿಗಿರುತ್ತದೆ. ಅಪ್ಪಾ, ತಂಬಾಕದ ಹೊಗೆಯು ಚಾಳಿಗೆಯ ಸಹಾಯವು ಕಲ್ಪನಾಶಕ್ತಿಗೆ ಆಗುತ್ತದೆಂದೆನ್ನುವದು ನಿಜವೇ?'' ಹೀಗೆಂದು ಹೇಳಿ ನಕ್ಕಳು; ಆದರೆ ಉತ್ತರದ ನಿರೀಕ್ಷಣೆ ಮಾಡದೆ ಅವಳು ಲಗುಬಗನೆ ಒಳಗೆ ಹೋಗಿಬಂದು ಅಪ್ಪನ ಹತ್ತರ ಕುಳಿತು, ಮತ್ತೆ:—''ಅಪ್ಪಾ, ಇಷ್ಟು ವರ್ಷಗಳ ನಂತರ ಪ್ರಭಾಕರಣ್ಣನ ಮುಖಚರ್ಯೆಯು ನಿಮಗೆ ಚೆನ್ನಾಗಿ ಸ್ಮರಿಸುವದೇ?''

ಭಾ:—ಸ್ಮರಿಸದೇನು? ಎಷ್ಟು ಕಾಲವಾದರೂ ಪ್ರತ್ಯಕ್ಷ ಮಗನ ಗುರ್ತನ್ನು ಅದಾರು ಮರೆಯುವರು?

ವಿ:—ಅಪ್ಪಾ, ಆತನು ಇಲ್ಲಿಂದ ಹೊರಟು ಹೋದಾಗ ಆತನಿಗೆ ಎಳೆ ಮೀಸೆಗಳಿದ್ದಿರಬೇಕು; ಆದರೆ ಈಗ ಆತನು ನಿಮಗೆ ಭೆಟ್ಟಿಕೊಡಬಂದಾಗ ಗಡ್ಡ-ಮೀಸೆ-ಜಟೆಗಳನ್ನು ಬೆಳಸಿಕೊಂಡು ಬಂದರೆ, ನೀವು ಅವನನ್ನು ಗುರ್ತಿಸುವದೆಂತು?

ಭಾ:—ಆದರೇನಾಯಿತು?

ಈ ಭಾವೂಸಾಹೇಬರ ಉತ್ತರದೊಡನೆಯೇ ಅವರ ಎದುರಿಗಿನ ಕನ್ನಡಿಯೊಳಗೆ ಕಾಣುತ್ತಿದ್ದ ನಡುಮನೆಯ ಬಾಗಿಲದ ಪರದೆಯು ಒಮ್ಮೆಲೆ ಓರೆಗಾಯಿತು; ಮತ್ತು ಒಬ್ಬ ಪ್ರಭಾಕರನಷ್ಟು ಎತ್ತರ ಮೈಕಟ್ಟಿನ ಜಟಾಧಾರಿಯಾದ ಗಡ್ಡದ ತರುಣ ಮನುಷ್ಯನು ಆ ನಡುಮನೆಯ ಬಾಗಿಲಲ್ಲಿ ನಿಂತುಕೊಂಡಿರುವಂತೆ ಅವರಿಗೆ ಕಾಣಿಸಿತು. ಭಾವೂಸಾಹೇಬರಿಗೆ ಶ್ರಾವಣ ಮಾಸದ ಅಮಾಸಿಯ ರಾತ್ರಿಯಲ್ಲಿ ಹಿತ್ತಲ ಬಾಗಿಲ ಬಳಿಯಲ್ಲಿ ಯಾವ ಮನುಷ್ಯಾಕೃತಿಯು ಕಾಣಿಸಿಕೊಂಡಿದ್ದಿತೋ, ಅದೇ ಆಕೃತಿಯು ಇಂದು ನಡುಮನೆಯ ಬಾಗಿಲಲ್ಲಿ ನಿಂತುಕೊಂಡಿರುವಂತೆ ಅವರಿಗೆ ಕಾಣಿಸಿತು; ಆದರೆ ದ್ವಿರುಕ್ತಿಯಿಂದ ಆಶ್ಚರ್ಯವು ತುಸ ಕಡಿಮೆಯಾಗುತ್ತದೆಂದೆನ್ನುವಂತೆ ಭಾವೂಸಾಹೇಬರಿಗೂ ಹಾಗೆಯೇ ಅನಿಸಿತು. ಅದರಿಂದ ಅವರು ಆ ರಾತ್ರಿಯಂತೆ ಒಮ್ಮೆಲೆ ಒದರಾಡಲಿಲ್ಲ; ಆದರೆ

"ತಂಗೀ, ವಿಮಲೇ! ನಾನೇನು ನೋಡುತ್ತಿರುವೆನು?" ಎಂದಂದು, ಅವರು ಹಾಸಿಗೆಯಿಂದ ಎದ್ದೇಳಲಿಕ್ಕೆ ಪ್ರಯತ್ನಿಸಿರಲು, ಆ ಮನುಷ್ಯಾಕೃತಿಯು ಬದಿಗಾಯಿತು.

ವಿಮಲೆಯಾದರೂ ತಂದೆಯೊಡನೆ ಆ ಕನ್ನಡಿಯಲ್ಲಿ ನೋಡುತ್ತಿದ್ದಳು. ಅವಳಿಗೆ ಆ ಮನುಷ್ಯಾಕೃತಿಯನ್ನು ಕಂಡು ಆಶ್ಚರ್ಯವಂತೂ ಅನಿಸಲೇ ಇಲ್ಲ; ಆದರೆ ಅವಳು ಅದಕ್ಕೆ ಬದಲಾಗಿ ತುಸ ನಗುತ್ತಲೇ ಇದ್ದಳು. ಆಗ ಅವಳು ತಂದೆಯನ್ನು ಕುರಿತು:—"ಅಪ್ಪಾ, ಹಾಸಿಗೆಯಿಂದ ಹೀಗೆ ಒಮ್ಮೆಲೆ ಎದ್ದೇಳುವದು ತಮ್ಮ ಹೃದಯ ವಿಕಾರಕ್ಕೆ ಯೋಗ್ಯವಾಗದೆಂದು ಡಾಕ್ಟರರು ಹೇಳಿಲ್ಲವೇ? ನೀವು ಹೀಗೆ ಪೆಟ್ಟಿಬಿದ್ದು ಎದ್ದೇಳಲಿಕ್ಕೆ ನಿಮಗೆ ಆ ಕನ್ನಡಿಯಲ್ಲೇನು ಕಂಡಿತು?"

ಭಾ:—ತಂಗೀ, ನನ್ನಂತೆ ನಿನಗೂ ಆ ಎದುರಿಗಿನ ನಿಲುವುಗನ್ನಡಿಯು ಕಾಣುತ್ತಲೇ ಇದೆ; ಮತ್ತು ಅದರಲ್ಲಿ ನನ್ನ ತಲೆಗಿಂಬಿನ ಬದಿಯಿಂದ ಬೀಳುವ ಪ್ರತಿಬಿಂಬವು ನನ್ನಂತೆ ನಿನಗೂ ಕಂಡಿರಲೇ ಬೇಕು. ಅಂದಮೇಲೆ ಏನು ಕಂಡಿತೆಂದು ನನ್ನನ್ನೇನು ಕೇಳುತ್ತೀ?

ವಿ:—ನನಗೆ ಕಂಡದ್ದನ್ನು ನಾನು ಗುರ್ತಿಸಿರುತ್ತೇನೆ; ಅದರಿಂದ ನನಗೆ ಆಶ್ಚರ್ಯವೆನಿಸಲಿಲ್ಲ; ಆದರೆ ನಿಮಗೆ ಕಂಡದ್ದೇನು?

ಆ ಆಕೃತಿಯು ಅದೃಶ್ಯವಾದ ಕೂಡಲೆ ಭಾವೂಸಾಹೇಬರು ಮತ್ತೆ ಹಾಸಿಗೆಯ ಮೇಲೆ ಬಿದ್ದುಕೊಂಡರು; ಆಗ ಮತ್ತೊಮ್ಮೆ ಆ ಪರದೆಯು ಬಾಗಿಲದಿಂದ ಓರೆಗಾಗಿ, ಆ ಆಕೃತಿಯು ಮತ್ತೆ ಅವರಿಗೆ ಕಾಣಿಸಿಕೊಂಡಿತು.

ಈಗ ಅವರು ಆ ಆಕೃತಿಯನ್ನು ಮೂರನೇ ಸಾರೆ ನೋಡುತ್ತಿದ್ದರು. ಅದರಿಂದ "ಇದೇನು ಕನ್ನಡಿಯಲ್ಲಿ ಕಾಣುವದು?" ಎಂಪು ಎರಡನೇ ಸಾರೆಯಂತೆ ಅವರ ಬಾಯಿಂದ ಉದ್ಗಾರಗಳು ಹೊರಬೀಳಲಿಲ್ಲ; ಮತ್ತು ಅವರು ಎದ್ದೇಳುವ ಪ್ರಯತ್ನವನ್ನೂ ಮಾಡಲಿಲ್ಲ; ಆದರೆ ಅವರು:—"ವಿಮಲೇ, ನೋಡು-ನೋಡು, ಚೆನ್ನಾಗಿ ನೋಡು. ನನಗೆ ಕನ್ನಡಿಯಲ್ಲಿ ಯಾವ ಮನುಷ್ಯಾಕೃತಿಯು ಕಾಣಿಸುತ್ತದೊ ಅದು ನಿಜವೋ-ನನ್ನ ಭ್ರಮವೊ? ನನಗೊಬ್ಬನಿಗೇ ಕಾಣಿಸುತ್ತಿದ್ದರೆ ಅದು ನನ್ನ ಭ್ರಮವೇ ಸರಿ; ಆದರೆ ನನಗೂ ನಿನಗೂ ಕೂಡಿಯೇ ಕಾಣಿಸುತ್ತಿದ್ದರೆ ಅದು ಭ್ರಮವಾಗಿರದೆ, ನಡುಮನೆಯ ಬಾಗಿಲಲ್ಲಿ ನಿಜವಾಗಿಯೂ ಯಾರೋ ನಿಂತಿರುತ್ತಾರೆ."

ತಂದೆಯು ನಿರ್ಭಯವಾಗಬೇಕೆಂದು ವಿಮಲೆಯು ಆತನಿಗೆ ಕೇಳಬರುವ ಹಾಗೆ ಗಟ್ಟಿಗಟ್ಟಿಯಾಗಿ ನಕ್ಕು:—"ಅಪ್ಪಾ, ಈಸ ಹೊತ್ತಿನ ಮುಂಚೆ ಹನ್ನೆರಡು ವರ್ಷಗಳ ನಂತರ ಜಟೆ-ಗಡ್ಡಗಳನ್ನು ಬೆಳಿಸಿಕೊಂಡಂಥ ಪ್ರಭಾಕರಣ್ಣನನ್ನು

ಗುರ್ತಿಸುವಿರೇನೆಂದು ನಾನು ಕೇಳಿದ್ದು ನೆನಪಿದೆಯೊ? ನೀವು ಆಗ ಗುರ್ತಿಸುವೆ ವೆಂದು ಅಂದಿದ್ದಿರಿ; ಅಂತೆಯೇ ನಿಮ್ಮ ಪರೀಕ್ಷೆ ಮಾಡಿದೆನು. ನಿಮಗೆ ಕನ್ನಡಿ ಯಲ್ಲಿ ಕಂಡವನಾರೆಂಬದನ್ನು ನೀವು ಗುರ್ತಿಸಲಿಲ್ಲವೆ? ಆತನು ನಮ್ಮ ಪ್ರಭಾ ಕರಣ್ಣನೇ!''

ಭಾ:—ಅಹುದೇ ಹುಡಿಗೀ! ಪ್ರಭಾಕರನಂತೆಯೇ ಆತನ ಮುಖಚರ್ಯೆ-ಕಣ್ಣುಗಳಿರುವದೇನೋ ನಿಜ; ಆದರೆ ಇದೇ ಆಕೃತಿಯು ಆ ಮೊನ್ನಿನ ಅಮಾ ಸಿಯ ರಾತ್ರಿಯಲ್ಲೂ ನನಗೆ ಕಾಣಿಸಿರಲಿಲ್ಲವೆ?

ವಿ:—ಅಹುದು. ಹೀಗಿದ್ದು ನೀವು ಆತನಿಗೆ ಸುಮ್ಮನೆ ಗುಪ್ತಪೋಲೀಸ ನೆಂದಿರಿ; ಮತ್ತು ನಮ್ಮ ಮಾಯಿಯ ನಿಂದೆ ಮಾಡಿ, ನೀವು ಅವರಿಗೆ ಮತ್ತೆ ಏನೇನು ಅಂದಿರೆಂಬದರ ಪುನರುಚ್ಚಾರವೇ ಬೇಡ; ಆದರೆ ಆ ನಿಮ್ಮ ತಿಳುವಳಿ ಕೆಯು ತೀರ ತಪ್ಪಾದದ್ದಿತ್ತು; ಅದನ್ನು ದೂರೀಕರಿಸುವ ಪ್ರಯತ್ನವನ್ನು ನಾವು ಆಗಲೆ ಮಾಡತಕ್ಕವರಿದ್ದೆವು; ಅಷ್ಟರಲ್ಲೇ ನೀವು ಒವಳಿ ಬಂದು ಬಿದ್ದುಬಿಟ್ಟಿರಿ. ಬಳಿಕ ನಾವಾದರೂ ಏನು ಮಾಡಬೇಕು?

ಭಾ:—ಹಾಗಾದರೆ ಈಗಲಾದರೂ ಹೇಳು; ನನಗೆ ಈಗ ಕಾಣಿಸುವವನು ಪ್ರಭಾಕರನೋ? ಅಥವಾ ಆತನ ವೇಷವೋ? ಇಲ್ಲವೆ ವೇಷಾಂತರ ತಾಳಿರುವ ಯಾವನೊಬ್ಬ ಗುಪ್ತಪೋಲೀಸನೋ?

ವಿ:—ನಾನು ನಿಮ್ಮನ್ನು ಭ್ರಮದಲ್ಲೇಕೆ ಇಡಲಿ? ಇನ್ನು ಸ್ವಲ್ಪವೇಳೆಯಲ್ಲೇ ನಿಮಗೆ ಚೆನ್ನಾಗಿ ಗುರುತು ಹತ್ತುವ ಹಾಗೆ ಆತನು ನಿಮ್ಮ ಒಳಿಗೆ ಬಂದು ಕಾಣಿಸಿಕೊಳ್ಳುತ್ತಾನೆ.

ಹೀಗೆ ಮಾತು ನಡೆದಿರಲಿಕ್ಕೆ ಕನ್ನಡಿಯೊಳಗೆ ಕಾಣುತ್ತಿದ್ದ ಆ ಆಕೃತಿಯು ಮಾಯವಾಯಿತು. ಆಗ ವಿಮಲೆಯು:—''ಮನಸ್ಸಿನಲ್ಲಿರುವದೇ ಸ್ವಪ್ನದಲ್ಲಿ ಕಾಣಿಸುವದು'' ಎಂಬದಿಷ್ಟೇ ಅಲ್ಲ, ಎಷ್ಟೋ ವೇಳೆಯಲ್ಲಿ ಅದು ನಿಜವಾಗಿಯೂ ಅನುಭವಕ್ಕೆ ಬರುತ್ತದೆ. ಇನ್ನು ನಾನು ಹೊಸ ಚಿಹ್ನೆ ಹೇಳುತ್ತೇನೆ ಕೇಳಿರಿ. ಕೆಲವು ದಿನಗಳ ಪೂರ್ವದಲ್ಲಿ ಪ್ರಭಾಕರಣ್ಣನೇ ಮಾಯಿಗೆ ಒಂದು ಪತ್ರ ಕಳಿಸಿ ದ್ದನು. ಅದರಲ್ಲಿ ಅವನು ತಾನಿತ್ತ ಬರುವನೆಂದು ಸೂಚನೆ ಕೊಟ್ಟಿದ್ದನು. ಅದು ದಿನದ ಪದ್ಧತಿಯಂತೆ ಮೊದಲು ನಿಮ್ಮ ಕೈಗೇ ಬಂದು ಸೇರತಕ್ಕದ್ದು; ಆದರೆ ವಿಚಿತ್ರ ಯೋಗಾಯೋಗದ ಮೂಲಕ ಅಂದು ನಮ್ಮ ಹಿಂದಿನ ಓಣಿಯಿಂದಲೇ ಮೊದಲು ಪತ್ರ ಹಂಚುವ ಲಹರಿಯು ಆ ಪೋಷ್ಟಮನ್ನನಿಗುಂಟಾಯಿತು. ಆ ಪತ್ರಗಳಲ್ಲಿ ನಮ್ಮ ಮಾಯಿಯ ಹೆಸರಿನ ಒಂದು ಪತ್ರವು ಅವನಿಗೆ ಕಾಣಿಸಿತು. ಅದನ್ನು ಅವನು ಹಿತ್ತಲ ಬಾಗಿಲಿನಿಂದಲೇ ಆಕೆಗೆ ತಲುಪಿಸಿದನು. ಆ ಸಂಗತಿ

ಯು ನಿಮಗೆ ಸಹಜವಾಗಿ ತಿಳಿಯಿತು. ಆ ಬಗ್ಗೆ ನೀವು ನಿಷ್ಕಾರಣವಾಗಿ ಬಹು ಜೊಜ್ಬಾಟ ಮಾಡಿದಿರಿ; ಆದರೆ ಆ ಪತ್ರದಂತೆ ಆ ಅಮಾಸಿಯ ರಾತ್ರಿಯಲ್ಲಿ ಪ್ರಭಾಕರಣ್ಣನು ನಿಜವಾಗಿಯೂ ನಮ್ಮ ಮನೆಯ ಹಿತ್ತಲ ಬಾಗಿಲಿನಿಂದ ಬಂದನು. ಆತನನ್ನು ನಾವೇ ಬಾಗಿಲ ತೆರೆದು ಒಳಗೆ ಬರಮಾಡಿಕೊಂಡೆವು; ಆದರೆ ಮತ್ತೆ ಯೋಗಾಯೋಗದ ಘಟನೆಯ ಮೂಲಕ ನೀವು ಅದೇ ರಾತ್ರಿ ಆಗಲೆ ಆಕಸ್ಮಿಕವಾಗಿ ಕಂದೀಲು-ಕೋಲುಗಳನ್ನು ಹಿಡಿದುಕೊಂಡು ಗುಪ್ತ ಪೋಲೀಸನನ್ನು ಶೋಧಿಸಲಿಕ್ಕೆಂದು ಅಲ್ಲಿಗೇ ಬಂದಿರಿ! ಬಟ್ಟಿನಲ್ಲಿ ಅಣ್ಣನು ನಿಮಗೆ ತಿಳಿಯದ ಹಾಗೆ ಮನೆಗೆ ಬರುವದರ ಪರಿಣಾಮವು ಹೀಗೆ ವಿಪರೀತವಾಯಿತು. ನಿಮ್ಮ ಮನಸ್ಸನ್ನು ಆತನ ವಿಷಯವಾಗಿ ಮೆಲ್ಲಮೆಲ್ಲನೆ ಶುದ್ಧಗೊಳಿಸಬೇಕು; ಹಾಗು ಆ ಮೇಲೆ ಆತನು ನಿಮ್ಮ ದೃಷ್ಟಿಗೆ ಬೀಳಬೇಕು ಎಂದು ನಮ್ಮ ಬೇತಾಗಿತ್ತು. ಅದು ಹೀಗೆ ಈ ಮಜಲಿಗೆ ಬಂದು ಮುಟ್ಟಿರುತ್ತದೆ; ಆದರ ಇನ್ನು ಮುಂದೆ ನಾವು ಮುಚ್ಚುಮರೆಯನ್ನೇನೂ ಮಾಡುವದಿಲ್ಲ. ಇತ್ತ ನೋಡಿರಿ, ಪ್ರಭಾಕರಣ್ಣನು ತಾನಿದ್ದಂತೆಯೇ ನಿಮ್ಮ ಭೆಟ್ಟಿಗೂ ನಿಮ್ಮ ಆಶೀರ್ವಾದ ಪಡೆಯಲಿಕ್ಕೂ ಬರುತ್ತಿರುವನು.

ವಿಮಲೆಯು ಹೀಗೆಂದ ಕೂಡಲೆ ಪ್ರಭಾಕರನು ಆ ಕೋಣೆಯನ್ನು ಪ್ರವೇಶಿಸಿದನು. ಆತನ ಮುಖಚರ್ಯೆಯ ಕಡೆಗೆ ಮತ್ತೆ ಮತ್ತೆ ನೋಡಿದರೂ ಭಾವೂಸಾಹೇಬರಿಗೆ ಖಾತ್ರಿಯಾಗಲೊಲ್ಲದು; ಆದರೆ ಆತನ ರೂಪವನ್ನೂ ದನಿಯನ್ನೂ ಅವರು ಮರೆಯುವದೆಂತು? ಅಲ್ಲದೆ ಅದು ಸ್ವಪ್ನ ದರ್ಶನವಾಗಿರಲಿಲ್ಲ; ಕನ್ನಡಿಯೊಳಗಿನ ದೃಶ್ಯವೂ ಆಗಿರಲಿಲ್ಲ. ತೀರ ಪ್ರತ್ಯಕ್ಷ ಭೆಟ್ಟಿಯಾಗಿತ್ತು. ಕಟ್ಟಕಡೆಗೆ ಪಿತೃವಾತ್ಸಲ್ಯವು ಉತ್ತರಿಸಿತು. ಆದರಿಂದ ಪ್ರಭಾಕರನ ಕೈಯನ್ನು ತಮ್ಮ ಕೈಯಲ್ಲಿ ತಕ್ಕೊಂಡು, ಭಾವೂಸಾಹೇಬರು ಗದ್ಗದಕಂಠದಿಂದ:—"ಪ್ರಭಾಕರಾ, ಇದು ನಿನ್ನ ಮಾಯಿಯ ಪುಣ್ಯದ ಹಾಗು ತಂಗಿಯ ಪ್ರೇಮದ ಪ್ರಭಾವವಾಗಿರುತ್ತದೆ. ನೀನು ಬಂದೆಯಾ! ಬಾ, ಆದರೆ ನಿನ್ನದು ಮುಂದೇನು ಆಗುವದೆಂಬ ಬಗ್ಗೆ ನನಗೆ ಚಿಂತೆಯನಿಸುತ್ತದೆ. ನೀನು ಬಂದದ್ದೇನೋ ನಿಜ; ಆದರೆ ನೀನು ಮನೆಯಲ್ಲಿ ನಿರಂತರವಾಗಿರಲಿಕ್ಕೆ ಬಂದೆಯೋ ಇಲ್ಲವೆ ಕೇವಲ ಚಟ ಹಚ್ಚಿ ಹೋಗಬಂದಿರುವೆಯೋ ತಿಳಿಯದು! ನನ್ನ ಮನಸ್ಸು ಭ್ರಮದಿಂದ ಮತ್ತೆ ಆವರಿಸಿತು; ನನ್ನ ತಲೆಯು ತೀರ ಹಗುರಾಯಿತು; ಇದರಿಂದ ನನಗೆ ಬಂದಿಷ್ಟು ಕ್ಷೋಭದಿಂದಲೇ ಬವಳಿ ಬರುತ್ತದೆ."

ಪ್ರ:—ಅಪ್ಪಾ, ನಿಮ್ಮ ಆಶೀರ್ವಾದವಿದ್ದರೆ ನಾನು ಹೇಗಾದರೂ ಪಾರಾದೇನು. ನೀವು ನಿಷ್ಕಾರಣವಾಗಿ ಮಾಯಿಯ ಸಂಬಂಧವಾಗಿ ತಾಳಿದ್ದ ಸಂಶ

ಯುವು ಈಗಲಾದರೂ ನಿಮ್ಮ ಮನಸ್ಸಿನೊಳಗಿಂದ ಹೋಯಿತೋ-ಇಲ್ಲವೋ ಎಂಬದನ್ನು ಮೊದಲು ನನಗೆ ತಿಳಿಸಿರಿ. ನಾನೇನು ಗಂಡಸು. ಎರಡು ಏಟು ತಿಂದೇನು,-ಕೊಟ್ಟೇನು; ಆದರೆ ನಮ್ಮ ಮಾಯಿಯು ಸಭ್ಯ ಗೋಪಿನಂತಿದ್ದಾಳೆ; ಪ್ರೇಮುಲವಾಗಿದ್ದಾಳೆ; ಪಾಪಭೀರುವಾಗಿದ್ದಾಳೆ. ಅವಳ ವಿಷಯುವಾಗಿ ನಿಮಗೆ ಸಂಶಯು ಬಂದಿದೆಯೆಂಬದು ತಿಳಿದಂದಿನಿಂದ ಅವಳು ಮನಸ್ಸಿನಲ್ಲಿ ತೀರ ನೊಂದುಕೊಂಡಿರುತ್ತಾಳೆ. ಆ ಬಡವೆಗೆ ಅನ್ನ-ನೀರು ಕೂಡ ರುಚಿ ಹತ್ತುವ ದಿಲ್ಲ. ಅವಳಿಗೆ ನನ್ನ ವಿಷಯುದ ಚಿಂತೆಯೊಂದು ಇದ್ದೇ ಇದೆಯಲ್ಲದೆ, ಇದೊಂದು ಹೊಸ ಚಿಂತೆಯು! ಅವಳೇನು ಮಾಡಬೇಕು, ನೀವೇ ಹೇಳಿರಿ ನೋಡೋಣ?

ಈ ನುಡಿಗಳನ್ನು ಕೇಳಿ ಭಾವೂಸಾಹೇಬರ ಮನಸ್ಸಿಗೆ ಬಹು ಕೆಡಕೆನಿಸಿತು. ಪ್ರೇಮವೆಂದು ಏತಕ್ಕೆ ಅನ್ನುವರೋ ಅದು ಆ ಪತಿ-ಪತ್ನಿಯರಲ್ಲಿರದಿದ್ದರೂ, ತಮ್ಮ ಹೆಂಡತಿಯ ಬಗ್ಗೆ ಭಾವೂಸಾಹೇಬರಿಗೆ ವಿಶೇಷ ಆದರವೆನಿಸುತ್ತಿತ್ತು. ಅದರಿಂದ ತಾವು ಅವಳಿಗೆ ಇಷ್ಟು ಸ್ಪಷ್ಟವಾಗಿ ಅನ್ಯಾಯ ಮಾಡಿರುವದರಿಂದ ಈ ಮೊದಲು ತಮ್ಮ ಮಗಳು ಈ ಬಗ್ಗೆ ತಮ್ಮ ಕಿವಿ ಹಿಂಡಿದಂತೆ, ಇಂದು ತಮ್ಮ ಮಗನೂ ಕೇವಲ ನ್ಯಾಯುಬುದ್ಧಿಯಿಂದ ಹಿಂಡುತ್ತಿರುವನೆಂಬ ವಿಚಾರದಿಂದ ಅವರ ಮನಸ್ಸಿಗೆ ಹೆಚ್ಚಾಗಿ ಕೆಡಕೆನಿಸಿತು; ಮತ್ತು ಆ ದುಃಖದಿಂದಲೇ ಅವರಿಗೆ ಮತ್ತೆ ಭ್ರಮದ ಲಹರಿಯು ಒತ್ತರಿಸಿತು!

ಅತ್ತ ಹೊರಗೆ ದತ್ತವಿಧಾನದ ಸಿದ್ಧತೆಯು ಒತ್ತರದಿಂದ ಸಾಗಿತ್ತು. ಆ ಸಿದ್ಧತೆಯು ದಿವಾಣಸಾಹೇಬರ ಹುಕುಮಿನ ಮೇರೆಗೆ ನಡೆದಿತ್ತು. ಅಂದರೆ, ಭಾವೂಸಾಹೇಬರ ಸಮ್ಮತಿಯ ಅನುರೋಧದಿಂದ ಸುಭೇದಾರನು ದತ್ತವಿಧಾನದ ಸಿದ್ಧತೆಯನ್ನು ಒತ್ತರದಿಂದ ನಡೆಸಿದ್ದನು. ಆ ಸಿದ್ಧತೆಗೆ ಒಮ್ಮೆಲೆ ಅಡ್ಡಿಯ ನ್ನುಂಟು ಮಾಡಬೇಕೆಂದು ವಿಮಲೆಗೊಮ್ಮೆ ಅನಿಸಿತು; ಮತ್ತು ಸ್ವತಃ ಪ್ರಭಾ ಕರನು ಪ್ರಕಟನಾಗಿ ಹೊರಗಿನ ಕಟ್ಟೆಯ ಮೇಲೆ ನಿಂತುಕೊಂಡಿದ್ದರೆ, ಅಪ್ಪಣೆಯ ಹೊರತು ಒಳಗೆ ಕಾಲಿಡಲಿಕ್ಕೆ ಆದಾರಿಗೆ ಧೈರ್ಯವಾಗುತ್ತಿತ್ತು? ಆದರೆ ಪ್ರಕಟ ವಾಗುವಾಗ ತುಸ ಮೋಜು ಮಾಡಿ ಸ್ಪಷ್ಟವಾಗಿಯೇ ಪ್ರಕಟವಾಗಬೇಕೆಂದು ಆ ಅಣ್ಣ-ತಂಗಿಯರು ನಿಶ್ಚಯಿಸಿಕೊಂಡಿದ್ದರು. ಅಂತೆಯೇ ಆ ದತ್ತಕದ ಸಿದ್ಧ ತೆಯು ಹಾಗೆ ಮುಂದರಿಯುತ್ತಿರುವ ಬಗ್ಗೆ ಅವರ ಮನಸ್ಸಿಗೊಂದು ಬಗೆಯ ಮೋಜೆನಿಸುತ್ತಿತ್ತು.

ಆ ದತ್ತವಿಧಾನದ ಬಗ್ಗೆ ಭಾವೂಸಾಹೇಬರ ಕಡೆಯಿಂದ ಆದಾರಿಗೂ ನಿಮಂತ್ರಣ ಹೋಗಿರಲಿಲ್ಲ; ಆದರೆ ಅದೆಲ್ಲ ಕೊರತೆಯನ್ನು ಸುಭೇದಾರರು ಪೂರ ಯಿಸಿ ಬಿಟ್ಟಿದ್ದರು. ಅವರು ತಮ್ಮ ಅಂಕಿತದೊಳಗಿನ ಬಹುತರ ಎಲ್ಲ ಪುಂಡ

ರನ್ನೂ ಬರಮಾಡಿಕೊಂಡಿದ್ದರು. ಖುದ್ದ ದಿವಾಣಸಾಹೇಬರಿಗೆ ಅತ್ಯಾಗತ್ಯದ ನಿಮಂತ್ರಣವಿದ್ದಿತು. ಅವರು ರಕ್ತಕ್ಷಯವಿದ್ದದರಿಂದ ಅವರಿಗಾಗಿ ಪ್ರತ್ಯೇಕವಾಗಿ ಲೋಡು-ತಕ್ಕೆಗಳು ಇರಿಸಲ್ಪಟ್ಟಿದ್ದವು. ಆ ಸಮಾರಂಭಕ್ಕೆಂದು ಎಲೆ-ಅಡಿಕೆ, ಹಾರ-ತುರಾಯಿ, ಮಿಠಾಯಿ ಮುಂತಾದವುಗಳೊಂದೂ ಭಾವೂಸಾಹೇಬರ ಮನೆಯಿಂದ ಸಿದ್ಧವಾಗಿರಲಿಲ್ಲ. ಅದೆಲ್ಲ ಸಿದ್ಧತೆಯನ್ನು ಸುಭೇದಾರರೇ ಮಾಡಿದ್ದರು. ಯಾವನು ದತ್ತಕ ಮಾಡಿಕೊಳ್ಳಬೇಕಾಗಿತ್ತೋ ಆತನ ಸಿದ್ಧತೆಯೇನೂ ಇರದೆ, ಯಾವನು ದತ್ತಕ ಕೊಡಬೇಕಾಗಿದ್ದಿತೋ ಆತನೇ ಅದನ್ನೆಲ್ಲ ಮಾಡಿದ್ದನು! ಇದರ ಅರ್ಥವು ಸ್ಪಷ್ಟವಾಗಿದ್ದು, ಅದು ಸುಭೇದಾರರಿಗೆ ನಾಚಿಕೆಯನ್ನುಂಟು ಮಾಡುವಂತಹದೇ ಇದ್ದಿತು; ಆದರೆ ಸುಭೇದಾರರಲ್ಲಿಯ ಭಯಂಕರವಾದ ಸ್ವಾರ್ಥವು ಆ ಲಜ್ಜೆಯನ್ನು ತೊರೆದುಬಿಡಹಚ್ಚಿತ್ತು. ಯಾವುದೊಂದು ಮನೆಯಲ್ಲಿ ಒಬ್ಬ ಮನುಷ್ಯನು ತೀರಿಕೊಂಡಿದ್ದನೆಂದರೆ, ಆಗ ಖುದ್ದ ಮನೆಯ ಜನರೆಲ್ಲರೂ ಸುಮ್ಮನೆ ಕುಳಿತಿದ್ದು, ಹೊರಗಿನ ಜನರೇ ಪ್ರೇತದ ಮುಂದಿನ ಸಿದ್ಧತೆಯ ಬಗ್ಗೆ ಗಡಿಬಿಡಿಯಿಂದ ಅಡ್ಡಾಡುತ್ತಿರುತ್ತಾರೆ. ಇಂದು ಭಾವೂಸಾಹೇಬರ ಮನೆಯಲ್ಲಿ ಸುಭೇದಾರಾದಿಗಳ ಅಡ್ಡಾಡುವಿಕೆಯು ಬೇರೆಯವರಿಗೆ ಒಂದಿಷ್ಟು ಇದೇ ಬಗೆಯದಾಗಿ ತೋರದಿರುತ್ತಿರಲಿಲ್ಲ. ಭಾವೂಸಾಹೇಬರು ಪ್ರಕೃತಿಯಿಂದ ಸ್ವಸ್ಥವಾಗಿದ್ದರೆ ಅವರು ಆ ಗಡಿಬಿಡಿಯಲ್ಲಿ ಕಾಣಬಹುದಾಗಿತ್ತು; ಇಲ್ಲವೆ ದತ್ತವಿಧಾನವನ್ನು ರಹಿತಪಡಿಸಿರುತ್ತೇವೆಂದು ಒಳಗಿಂದಲೇ ಸ್ಪಷ್ಟವಾಗಿ ಹೇಳಿಕಳಿಸಿ, ಮನೆಯೊಳಗೆ ಯಾರಿಗೂ ಹೆಜ್ಜೆಯಿಡಗೊಡುತ್ತಿದ್ದಿಲ್ಲ; ಆದರೆ ಇಂದು ಅವರು ಭೀಷ್ಮಾಚಾರ್ಯರಂತೆ ಕೇವಲ ಶರಪಂಜರದಲ್ಲಿ ಬಿದ್ದುಕೊಂಡಿದ್ದು, ಭ್ರಮವು ಅವರನ್ನು ಆವರಿಸಿ ಬಿಟ್ಟಿತ್ತು. ಅದರಿಂದಲೇ ದತ್ತವಿಧಾನ ಮಾಡಿಕೊಳ್ಳಬೇಕೆಂಬ ಒತ್ತಾಯವು ಬೇರೆ ಜನರಿಂದ ಅವರಿಗಾಗುತ್ತಿದ್ದಿತು. ಮನೆಯ ಜನರೆಲ್ಲರೂ ಮನಸ್ಸಿನಿಂದ ಆ ದತ್ತವಿಧಾನಕ್ಕೆ ವಿರುದ್ಧವಾಗಿದ್ದರು. ಆದರೂ ಆ ಸಮಾರಂಭದ ಸಿದ್ಧತೆಯನ್ನು ಬೇರೊಂದು ಕಾರಣದ ಸಲುವಾಗಿ ಅವರು ನಡೆಯಗೊಟ್ಟಿದ್ದರು.

ನಿಶ್ಚಿತ ಕಾಲಕ್ಕಿಂತ ಮೊದಲೇ ಸುಭೇದಾರರು ತಮ್ಮ ಅನುಯಾಯಿಗಳೊಡನೆ ಅಲ್ಲಿಗೆ ಬಂದರು. ಅವರಲ್ಲಿಯ ಇಬ್ಬರು ಎಲೆ-ಅಡಕೆಯ ತಬಕ, ಹಾರ-ತುರಾಯಿಗಳನ್ನು ತಂದಿರಿಸಿದರು. ಮತ್ತೊಬ್ಬನು ಮಿಠಾಯಿಯ ಪುಡಿಕೆಗಳನ್ನು ತಂದಿರಿಸಿದನು. ಊರೊಳಗಿನ ಫೋಟೋಗ್ರಾಫರನು ತನ್ನ ಎಲ್ಲ ಆಯುಧ ಸಹಿತವಾಗಿ ಬಂದಿದ್ದು, ಅವನು ಅವುಗಳನ್ನು ಸಜ್ಜುಗೊಳಿಸುವ ವ್ಯವಸ್ಥೆ ನಡೆಸಿದ್ದನು. ಇಷ್ಟರಲ್ಲಿ ದಿವಾಣಸಾಹೇಬರ ಸವಾರಿಯೂ ಫಾಟೋನ ಗಾಡಿಯೊಳಗಿಂದ ಅಲ್ಲಿಗೆ

ಬಂತು. ಅವರ ಸತ್ಕಾರವನ್ನು ಸುಭೇದಾರರೇ ಪರಸ್ಪರವಾಗಿ ಮಾಡಿದರು. ಭಾವೂಸಾಹೇಬರು ಬೇನೆಯುವರೆಂದು ಅವರನ್ನು ಆಯುತ ಸಮಯಕ್ಕೆ ಎಬ್ಬಿಸಿ ಕೂಡ್ರಿಸಬೇಕಾಗಿತ್ತು. ಅದರಂತೆ ಸುಭೇದಾರರ ಕಡೆಯುವನೇ ಅವರನ್ನು ಎಬ್ಬಿಸಿ ಕೂಡ್ರಿಸಿದನು; ಆದರೆ ಜೋಲಿ ಹೋಗದಂತೆ ಅವರನ್ನು ಹಿಡಿದು ಸಂಬಾಳಿಸುವ ಕೆಲಸವನ್ನು ದೌಲತನು ಮಾಡುತ್ತಿದ್ದನು. ಓಣಿಯೊಳಗಿನ ಯಾವ ಹೆಣ್ಣುಮಕ್ಕಳಿಗೂ ಆ ದತ್ತವಿಧಾನ ಸಮಾರಂಭಕ್ಕೆ ನಿಮಂತ್ರಣವಿರಲಿಲ್ಲ; ಅಂದಮೇಲೆ ಮನೆಯ ಹೆಣ್ಣುಮಕ್ಕಳಾದರೂ ದಿವಾಣಖಾನೆಯ ಮೇಲೇತಕ್ಕೆ ಬರುವರು? ಒಂದು ಬಾಗಿಲಿಗೆ ಪರದೆಯನ್ನಿಳಿಬಿಟ್ಟು ಅವರು ಒಳಗಿನಿಂದಲೇ ದಿವಾಣಖಾನೆಯೊಳಗಿನ ಸಮಾರಂಭವನ್ನು ನೋಡುತ್ತಿದ್ದರು.

ಮೊಟ್ಟ ಮೊದಲು ಏನಾದರೂ ಪ್ರಸ್ತಾವನೆಯು ಬೇಕೆಂದು ದಿವಾಣ ಸಾಹೇಬರು ಭಾವೂಸಾಹೇಬರ ಪ್ರಕೃತಿಯ ಬಗ್ಗೆ ವಿಚಾರಿಸಿದರು. ಅದಕ್ಕೆ ಭಾವೂಸಾಹೇಬರು ಭ್ರಮಿಷ್ಟರಂತೆ ಒಂದು ಶಬ್ದವನ್ನು ಸ್ಪಷ್ಟವಾಗಿಯೂ ಮ-ತ್ತೊಂದನ್ನು ಅಸ್ಪಷ್ಟವಾಗಿಯೂ ಹೇಳುತ್ತಿದ್ದರು. ಆದರೂ ಕೂಡ ದಿವಾಣ ಸಾಹೇಬರು ತಾವಾಗಿಯೇ ಆ ದತ್ತವಿಧಾನದ ಪ್ರಸ್ತಾವನೆಯನ್ನು ಮಾಡಿದರು: "ನಾನು ನಿಮಗೆ ಪತ್ರದಲ್ಲಿ ಬರೆದದ್ದನ್ನು ಕೇವಲ ಮನಃಪೂರ್ವಕವಾಗಿಯೇ ಬರೆದಿದ್ದೆನು; ಮತ್ತು ನೀವು ಅದನ್ನು ಮನ್ನಿಸಿ ದತ್ತವಿಧಾನದ ನಿಶ್ಚಯ ಮಾಡಿದ್ದು ಬಹು ಯೋಗ್ಯವಾಯಿತು. ಹೊಸ ಆಳಿಕೆಯಲ್ಲಿ ದತ್ತಕ ಸಂಸ್ಥೆಯ ಮೇಲೆ ಕಟಾಕ್ಷವೆಷ್ಟಿದೆಯೆಂಬುದು ನಿಮಗೆ ಗೊತ್ತಿರುವದಿಲ್ಲ; ಆದರೂ ಕೂಡ ಈ ದತ್ತಕ ವಿಧಾನಕ್ಕೆ ನಂಬಿಗೆಯ ಪುರಾವೆಯಿರುವದು ಇಷ್ಟವಿದೆಯೆಂದು ತಿಳಿದು, ನಾನು ಸಂಸ್ಥಾನದೊಡೆಯರ ಇಷ್ಟ-ವಿರಿಷ್ಟಗಳನ್ನು ಲೆಕ್ಕಿಸದೆ ಇಲ್ಲಿಗೆ ಬಂದಿರುತ್ತೇನೆ. ಕಾರಣ ಬೇಗನೆ ಸಮಾರಂಭವು ನೆರವೇರಲಿ."

ಭಾವೂಸಾಹೇಬರ ಮುಖದಿಂದ ಭ್ರಮಿಷ್ಟರಂತೆ ಒಮ್ಮೆ 'ಹೂ' ಎಂಬ ಮತ್ತೊಮ್ಮೆ 'ಊಹೂ' ಎಂಬ ಶಬ್ದಗಳು ಮಾತ್ರ ಹೊರಡುತ್ತಿದ್ದವು; ಆದರೆ ಅದರ ಕಡೆಗೆ ಯಾರ ಲಕ್ಷ್ಯವೂ ಇರಲಿಲ್ಲ. ಆ ಸಮಾರಂಭಕ್ಕೆ ಧಾರ್ಮಿಕ ವಿಧಿಯ ಸ್ವರೂಪವಿರಲಿಲ್ಲ; ಅಂದರೆ ಪುಣ್ಯಾಹವಾಚನ, ಹೋಮ, ಹವನ ಮುಂತಾದವುಗಳೊಂದೂ ಆಗುವಂತಿರಲಿಲ್ಲ. ಕೇವಲ ಸುಭೇದಾರರ ಹುಡುಗನನ್ನು ಭಾವೂಸಾಹೇಬರ ತೊಡೆಯ ಮೇಲೆ ಕೂಡ್ರಿಸುವ ಲೌಕಿಕ ಶರೀರ ದಾನ ಸಮಾರಂಭವು ಮಾತ್ರ ಆಗತಕ್ಕದ್ದಿತ್ತು. ಸುಭೇದಾರರು ಎದ್ದು ನಿಂತರು. ಅವರು ಬಾಜೀರಾಯನನ್ನು ಕೈಯಿಂದ ಹಿಡಿದೆಬ್ಬಿಸಿದರು; ಮತ್ತು ತಮ್ಮ ಹೊದೆಯುವ ದೋತರದ ಸೆರಗನ್ನು ಕಣ್ಣಿಗೆ ಹಚ್ಚಿಕೊಂಡು ಅಳುವವರಂತೆ ನಟಿಸಿ ಹಾಗು ಕಂಠವು ಒತ್ತಿ

ರಿಸಿ ಬಂದಂತೆ ಸೋಗು ಹಾಕಿ:—ಒಟ್ಟಿನಲ್ಲಿ ನನಗೆ ಈ ಜನ್ಮದಲ್ಲಿ ಈ ಡಬೀರ ಮನೆತನದ ಕಲ್ಯಾಣವನ್ನು ನೋಡಬೇಕಾಗುತ್ತದೆಯೇ ಹೊರತು ಬೇರೆ ಕರ್ತವ್ಯವನ್ನು ನಾನು ಲೆಕ್ಕಿಸುವದಿಲ್ಲ. ಭಾವೂಸಾಹೇಬರಿಗೆ ತಮ್ಮ ತೈನಾತ ಮುಂದರಿಸಲಿಕ್ಕೆ ದುರ್ದೈವದಿಂದ ಮಗನಿಲ್ಲ.—"

ಇದನ್ನು ಕೇಳಿದ ಕೂಡಲೆ ಭಾವೂಸಾಹೇಬರು ಕೈ ಸನ್ನೆಯಿಂದಲೂ ಗೋಣು ಹೊರಹೊರಳಿಸಿಯೂ ಸುಭೇದಾರರ ಆ ಶಬ್ದಗಳಿಗೆ ಇನ್‌ಕಾರ ಮಾಡತೊಡಗಿದರು. ಅವರ ಆ ಇನ್‌ಕಾರದ ಅರ್ಥವನ್ನು ತಮಗೆ ಹೇಗೆ ಬೇಕೋ ಹಾಗೆ ಮಾಡಿಕೊಂಡು, ಸುಭೇದಾರರು ಮತ್ತೆ:—"ಅತ್ತ ನೋಡಿರಿ, ಭಾವೂಸಾಹೇಬರಾದರೂ ನನ್ನ ಮಾತಿನಂತೆಯೇ ತೈನಾತ ಮುಂದಿರಿಸಲಿಕ್ಕೆ ಮಗನಿಲ್ಲೆಂದು ಹೇಳುತ್ತಿರುವರು."

ಆಗ ನಡುಮನೆಯೊಳಗಿಂದ ಒಬ್ಬ ಹೆಣ್ಣುಮಗಳು ಗಟ್ಟಿದನಿಯಿಂದ:—"ಭಾವೂಸಾಹೇಬರ ಅಂಬೋಣವು ಹಾಗಿರುವದಿಲ್ಲ. ತಮ್ಮ ತೈನಾತು ನಡೆಯಲಿಕ್ಕೆ ಮಗನಿಲ್ಲೆಂದು ಅನ್ನುವ ಸುಭೇದಾರರ ಮಾತು ನಿಜವಲ್ಲೆಂದೇ ಅವರ ಈಗಿನ ಇನ್‌ಕಾರದ ಅರ್ಥವಾಗಿದೆ. ತಿಳಿಯಿತೇ!" ಎಂದು ಹೇಳಿದಳು.

ಸುಭೇದಾರರು ತುಸ ಮೆಟ್ಟಿಬಿದ್ದರು; ಆದರೆ ಅವರು ಸುಮ್ಮನಾಗದೆ ಹಾಗೆಯೇ ಮತ್ತೆ:—"ಹೇಗೆಯೇ ಇರಲಿ. ಭಾವೂಸಾಹೇಬರು ನನ್ನ ಮಗನಾದ ಬಾಜೀರಾಯನನ್ನು ದತ್ತಕ ಕೊಡಬೇಕೆಂದು ಕೇಳಿಕೊಂಡರು. ಆ ಮೇರೆಗೆ ಈತನನ್ನು ಇವರಿಗೆ ದತ್ತಕ ಕೊಡುವದಕ್ಕೆ ನಾನು ಈ ಮೊದಲೇ ಒಪ್ಪಿಕೊಂಡಿದ್ದೆನು; ಮತ್ತು ಈಗ ಎಲ್ಲರ ಸಮಕ್ಷಮದಲ್ಲಿ ನಾನು ಈತನನ್ನು ಭಾವೂಸಾಹೇಬರಿಗೆ ದತ್ತಕವೆಂದು ಅವರ ತೊಡೆಯ ಮೇಲೆ ಕೂಡ್ರಿಸುತ್ತೇನೆ."

ಹೀಗೆಂದು ಹೇಳಿ, ಸುಭೇದಾರನು ಗಟ್ಟಿಯಾಗಿ ಅಳತೊಡಗಿದನು; ಆದರೆ ಆ ದುಃಖಪೂರ್ಣವಾದ ಆದರೂ ಮಹತ್ಕಾರ್ಯವೆಂದು ಅವನು ಬಾಜೀರಾಯನನ್ನೆತ್ತಿಕೊಂಡು ಭಾವೂಸಾಹೇಬರ ತೀರ ಸಮೀಪಕ್ಕೆ ಹೋದನು; ಮತ್ತು ಆತನನ್ನು ಭಾವೂಸಾಹೇಬರ ತೊಡೆಯ ಮೇಲೆ ಹತ್ತೊತ್ತಿ ಕೂಡ್ರಿಸುವ ಪ್ರಯತ್ನ ಮಾಡತೊಡಗಿದನು. ತಟ್ಟನೆ ಹಾರಿ ಭಾವೂಸಾಹೇಬರ ತೊಡೆಯ ಮೇಲೇರಿ ಕೂಡ್ರುವಂತಹ ಚಪಲ ಹುಡುಗನು ಬಾಜೀರಾಯನಾಗಿರಲಿಲ್ಲ. ದತ್ತಕವಾಗಿ ದೊರೆಯುವ ವೈಭವ-ಶ್ರೀಮಂತಿಕೆಗಳ ಕಲ್ಪನೆಯು ಆತನ ತಂದೆಗಿದ್ದಷ್ಟು ಸ್ವತಃ ಆ ಪೋರನಿಗಿರಲಿಲ್ಲ. ಆತನ ಚಲನವಲನವೆಲ್ಲ ತಂದೆಯ ಕೈಸೂತ್ರದಿಂದಲೇ ನಡೆದಿತ್ತು. ಇನ್ನು ಭಾವೂಸಾಹೇಬರಾದರೂ ಆ ಕಾಲಕ್ಕೆ ತಮ್ಮ ಕೈ ಇಲ್ಲವೆ ತೊಡೆಗಳನ್ನು ಮುಂದೆ ಮಾಡಬೇಕಾಗಿದ್ದಿತು; ಆದರೂ ಅವರು ಹಾಗೆ ಮಾಡ

ದಾದರು. ಅವರ ಬಾಯಿಂದ ಯಾವ ಶಬ್ದಗಳೂ ಹೊರಡುತ್ತಿರದಿದ್ದರೂ ನಕಾರ ದರ್ಶಕವಾದ ಗೋಣು ಮಾತ್ರ ಒಂದೇಸವನೆ ಅಲ್ಲಾಡುತ್ತಿತ್ತು. ಆಗ ನಡುಮನೆ ಯೊಳಗಿಂದ ಒಬ್ಬ ಸ್ತ್ರೀಯು ಮತ್ತೆ ಗಟ್ಟಿಯಾಗಿ:—"ಖಬರದಾರ! ಆ ಹುಡು ಗನನ್ನು ನನ್ನ ತಂದೆಯ ತೊಡೆಯ ಮೇಲೆ ಕೂಡ್ರಿಸಿದರೆ! ನಮ್ಮ ಅಣ್ಣನು ಇನ್ನೂ ಚೆನ್ನಾಗಿ ಜೀವಿಸಿರುತ್ತಾನೆ. ನಮ್ಮ ತ್ರೈನಾತದ ಬಗ್ಗೆ ನಿಮಗಾರಿಗೂ ಸ್ವಲ್ಪವೂ ಯೋಚನೆ ಬೇಡ. ಸುಮ್ಮನೆ ನಿಮ್ಮ ಹುಡುಗನನ್ನು ಹಿಂದಕ್ಕೆ ಕರೆದು ಕೊಳ್ಳಿರಿ. ಭಾವೂಸಾಹೇಬರು ಭ್ರಮಿಷ್ಟರಾಗಿರುವರು; ಅದರಿಂದ ಅವರ ಸಲುವಾಗಿ ಅವರ ಮಗಳಾದ ನಾನು ನಿಮಗೆ ಸ್ಪಷ್ಟವಾಗಿ ತಿಳಿಸುವದೇನಂದರೆ, ನಮ್ಮ ಅಪ್ಪನಿಗೆ ದತ್ತಕ ಮಾಡಿಕೊಳ್ಳುವ ಇಚ್ಛೆಯಿಲ್ಲ!"

ಈಗ ಆ ಪ್ರಕರಣವು ಒಳ್ಳೇ ರಂಗಿಗೆದ್ದಿತು. ಆಗ ಸುಭೇದಾರರು:— "ಈ ಕೆಲಸದಲ್ಲಿ ಮಾತನಾಡಲಿಕ್ಕೆ ಹೆಣ್ಣುಮಕ್ಕಳಿಗಾವ ಅಧಿಕಾರವೂ ಇರುವ ದಿಲ್ಲ. ಅವರು ನಡುಮನೆಯ ಮಟ್ಟಿಗೆ ನೋಡಿಕೊಳ್ಳಬೇಕು. ಭಾವೂಸಾಹೇ ಬರೇ ಬಾಜೀರಾಯನನ್ನು ದತ್ತಕಕೊಡಬೇಕೆಂದು ನನಗ ಕೇಳಿಕೊಂಡಿರುತ್ತಾರೆ; ಹಾಗು ನಾನು ಅವರಿಗೆ ಈತನ ವಾಗ್ದಾನವನ್ನು ಈ ಮೊದಲೇ ಮಾಡಿರುತ್ತೇನೆ. ಅದರಿಂದ ಈಗ ಪ್ರತ್ಯಕ್ಷವಾಗಿ ಈ ಶರೀರದಾನವನ್ನು ಮಾಡುತ್ತಿರುವೆನು; ಮತ್ತು ದಿವಾಣಸಾಹೇಬರು ಸಹಿತವಾಗಿ ಇಲ್ಲಿ ಕುಳಿತಿರುವರೆಲ್ಲರೂ ಇದಕ್ಕೆ ಸಾಕ್ಷಿದಾರ ರಾಗಿರುತ್ತಾರೆ."

ಹೀಗೆಂದು ಸುಭೇದಾರನು ಮತ್ತೆ ಬಾಜೀರಾಯನನ್ನೆತ್ತಿ ಭಾವೂಸಾಹೇ ಬರ ತೊಡೆಯ ಕೂಡ್ರಿಸುವ ಪ್ರಯತ್ನ ಮಾಡಿದನು; ಆದರೆ ಯಾವುದೊಂದು ಕೋಲುಮಿಂಚು ಹೊಳೆದು 'ಖಟ್‌ಪಡಲ್' ಎಂದು ಭಯಂಕರವಾಗಿ ಗರ್ಜಿಸು ವಂತೆ, ಯಾವನೊಬ್ಬ ಪುರುಷನ ಸಿಟ್ಟಿನ ದನಿಯು ಗರ್ಜಿಸಿತು. ಕೂಡಲೆ ಭಾವೂ ಸಾಹೇಬರು ತಮ್ಮ ತೊಡೆಗಳನ್ನು ಹಿಂದಕ್ಕೆ ಎಳೆದುಕೊಂಡರು. ಅದರಿಂದ ಅವುಗಳ ಮೇಲ ಕೂಡ್ರಲಿರುವ ಬಾಜೀರಾಯನು ಮುಂಗಾಣೆ ಲಾಗ ಹೊಡೆ ದಂತೆ ದೊಪ್ಪನೆ ನೆಲಕ್ಕೆ ತಿರುಗಿ ಬಿದ್ದನು; ಮತ್ತು ನಡುಮನೆಯ ಬಾಗಿಲದ ಪರದೆಯನ್ನು ಬದಿಗೆ ಸರಿಸಿ ಪ್ರಭಾಕರನು ಒಮ್ಮೆಲೆ ಹೊರಗೆ ಹಾರಿ ಬಂದು, ಷಡ್ಡು ಹೊಡೆಯುತ್ತ ಕೂಡಿದ ಜನರ ಮಧ್ಯದಲ್ಲಿ ನಿಂತುಕೊಂಡು:— "ಸುಭೇದಾರ ಸಾಹೇಬರೇ, ನೀವು ಇಷ್ಟು ದೊಡ್ಡ ದನಿ ತೆಗೆದು ಅಳುತ್ತಿರುವಿ ರೇಕೆ? ನಿಮ್ಮ ಹುಡುಗನನ್ನು ದತ್ತಕ ಕೊಡಬೇಕಾಗುವದೆಂಬ ದುಃಖದಿಂದ ಲ್ಲವೆ? ಇತ್ತ ನೋಡಿರಿ, ನಿಮ್ಮ ಅಳುವನ್ನು ನಿಲ್ಲಿಸುವದಕ್ಕಂದೇ ನಾನು ಸ್ವತಃ ಆಕಾಶದೊಳಗಿಂದ ಹಾರಿ ಬಂದಿರುತ್ತೇನೆ! ನಾನೇ ಪ್ರಭಾಕರನು! ಭಾವೂಸಾ

ಹೇಬರ ಔರಸಪುತ್ರನು! ಸ್ವೈನಾತದ ಒಡೆಯನು! ಹೊಟ್ಟೆಯ ಮಗನನ್ನು ಮಾರಿ, ಬೇರೆಯವರ ದೌಲತ-ಸ್ವೈನಾತಗಳ ಅಭಿಲಾಷೆ ವಹಿಸಿ, ಸ್ವಂತದ ಹೊಟ್ಟೆ ಹೊರ ಕೊಳ್ಳುವ ಇಚ್ಛೆಯೇ ನಿಮಗಿದ್ದರೆ, ಹೋಗಿರಿ, ಬೇರೊಬ್ಬ ನಿಪುತ್ರಿಕ-ಧನಿಕ ನನ್ನು ಹುಡುಕ ಹೋಗಿರಿ! ನನ್ನ ತಂದೆಯು ನಿಪುತ್ರಿಕನಾಗಿಲ್ಲ; ನಾನು ಅಂದ ಮಾನಕ್ಕೂ ಹೋಗಿಲ್ಲ; ಕಾಲವಶನೂ ಆಗಿಲ್ಲ. ನಿಮ್ಮೆಲ್ಲರ ಎದೆಯ ಮೇಲೆ ಕುಣಿಯುವ ಸಲುವಾಗಿ ಹೀಗೆ ಇಲ್ಲಿಗೆ ಹಿಂದಿರುಗಿ ಬಂದಿರುತ್ತೇನೆ; ಮತ್ತು ದೇವರ ದರ್ಬಾರದಲ್ಲಿ ನ್ಯಾಯುಂಟೆಯೋ ಇಲ್ಲವೋ ಎಂಬದನ್ನು ಹನ್ನೆರಡು ವರ್ಷಗಳ ತಪಶ್ಚರ್ಯದ ನಂತರ ಈಗಲಾದರೂ ನೋಡಬೇಕೆಂದಿರುತ್ತೇನೆ. ಸುಭೇದಾರ ಸಾಹೇಬರಂತೆ ಈ ದುಷ್ಟ, ಹರಾಮಖೋರ ದಿವಾಣಸಾಹೇಬ ರಿಗೂ ನಾನು ಇದನ್ನೇ ಒಡಾಯಿಸಿ ಹೇಳುತ್ತೇನೆ. ಹೊರಡಿರಿ, ನನ್ನ ಮನೆಯೊ ಳಗಿಂದ ಒಮ್ಮೆಲೆ ಹೊರಟು ಹೋಗಿರಿ; ಹೋಗದಿದ್ದರೆ ನಿಮಗೆ ಚೆನ್ನಾಗಿ ಮಂಗ ಳಾರತಿಯಾದೀತು. ಪ್ರತಿಯೊಬ್ಬರ ಕುತ್ತಿಗೆ ಹಿಡಿಹಿಡಿದು ಹೊರಗೆ ದಬ್ಬೇನು.''

ಈ ಗರ್ಜನೆಯನ್ನು ಕೇಳಿ ಆ ಸಭೆಯು ಚದರಿತು. ಎಲ್ಲ ಸಾಮಾನುಗಳು ಇದ್ದಲ್ಲಿಯೇ ಬಿದ್ದುಕೊಂಡವು. ದಿವಾಣಸಾಹೇಬರು ಮೊದಲು ಮಾಡಿಕೊಂಡು ಅಲ್ಲಿಯವರೆಲ್ಲರೂ ತಮ್ಮ ತಮ್ಮ ಕೋಲು, ಕೊಡೆಗಳನ್ನು ಹುಡುಕಿ ತಕ್ಕೊಂಡು ತಂತಮ್ಮ ಮನೆಯ ದಾರೀ ಹಿಡಿದರು. ಆ ದಿವಾಣಖಾನೆಯು ತೆರವಾದ ಬಳಿಕ ಪ್ರಭಾಕರನು ತಂದೆಯ ಚರಣಗಳ ಮೇಲೆ ಮಸ್ತಕವಿಟ್ಟು:—''ಅಪ್ಪಾ, ನಿಮ್ಮ ಮಿದುಳಿಗೆ ಬಹಳ ತ್ರಾಸವಾಯಿತು. ಕ್ಷಮಿಸಿರಿ!'' ಎಂದಂದನು.

---

## ೧೫ ನ್ಯಾಯದೇವತೆಯ ನಿಪ್ರಾಭಂಗ.

ದತ್ತವಿಧಾನಕ್ಕೆಂದು ಬಂದಿದ್ದ ಎಲ್ಲ ಜನರೂ ಈ ಬಗೆಯಿಂದ ಹೊರಟು ಹೋದ ಬಳಿಕ ಪ್ರಭಾಕರ-ವಿಮಲೆಯರು ಮಾಯಿಸಾಹೇಬರೊಡನೆ ಆಲೋಚಿ ಸಿದರು. ಆಗ ಮಾಯಿಸಾಹೇಬರು:—''ತಮ್ಮಾ, ಪ್ರಭಾಕರಾ, ನನ್ನ ಮೇಲಿನ ಈ ದತ್ತಕದ ಸಂಕಟವನ್ನು ನೀನು ನಿಸ್ತರಿಸಿದೆ; ಆದರೆ ಇನ್ನು ಮುಂದೆ ನಿನ್ನ ಗತಿಯೇನಾದೀತು?''

ಪ್ರಭಾಕರನು ನಕ್ಕು:—''ದತ್ತಕದ ಸಂಕಟವು ಅದೆಂತು ನಿಸ್ತರಿಸಿತು? ಬಸಿರು-ಬಾಣಂತಿತನಗಳಿಲ್ಲದೆ ನಿನಗೆ ಸಿಗುತ್ತಿದ್ದ ಆ ಮಾತಾಡಿ-ನಡೆದಾಡುವ ಆಯತ ಮಗನನ್ನು ನಾನು ಸಿಗಗೊಡದಂತೆ ಮಾಡಿದ್ದು ಮಾಯಿ, ನಾನು ನಿನ್ನ ಮಹತ್ತರವಾದ ಅಪರಾಧವನ್ನೇ ಮಾಡಿದಂತಾಗಲಿಲ್ಲವೇ!''

ವಿಮಲೆಯು ಖೊಖ್ಖೊಕ್ಕೆಂದು ನಕ್ಕು:—"ಹೌದೋ-ಹೌದು! ಆ ಹುಡುಗನು ನಡೆಯುತ್ತಲೂ ಇದ್ದನು; ಮಾತಾಡುತ್ತಲೂ ಇದ್ದನು; ಆದರೆ ಆತನು ಹೇಗೆ ನಡೆಯುತ್ತಿದ್ದ ಹೇಗೆ ಮಾತಾಡುತ್ತಿದ್ದನೆಂಬದನ್ನು ಮಾಯಿ, ನೀನು ನೋಡಿದೆಯಲ್ಲವೆ? ಜನ್ಮದವರೆಗೆ ನಿನಗೆ ಆಯುತ ಮಗನೂ ಆಗುತ್ತಿದ್ದನಲ್ಲದೆ, ಮೇಲೆ ನಗಲಿಕ್ಕೆ ಮನರಂಜನವೂ ಆಗುತ್ತಿತ್ತು!"

ಮಾ:—ಅಹುದು; ನಾನು ಅವನಿಗೆ ನಗಲಿಕ್ಕೆ, ಜನರು ನನಗೆ ನಗಲಿಕ್ಕೆ.

ವಿ:—ಜನರಿಗೆ ನಗಲಿಕ್ಕೇನಾಯಿತು? ಆದರೆ ಆ ಹುಡುಗನಂತೂ ಶ್ರಮವಿಲ್ಲದೆ ಹಾಗು ಖರ್ಚಿಲ್ಲದೆ ಆಯುತ ದೊರೆಯುತ್ತಿರಲಿಲ್ಲವೆ? ನಮ್ಮ ಮಾಯಿಗೇನು ಒಬ್ಬನಲ್ಲ ಇಬ್ಬರು ಹುಡುಗರು!

ಮಾ:—ನೀನೂ ಒಬ್ಬ ಮೂರನೆಯವನಲ್ಲವೇನು? ನೀವು ಇನ್ನು ಹೀಗೆ ನನ್ನ ಚೇಷ್ಟೆ ಮಾಡುತ್ತ ಕೂಡ್ರುವವರೋ, ಮುಂದಿನ ಯೋಚನೆಗೆ ತೊಡಗುವವರೋ!

ಪ್ರ:—ಮುಂದಿನ ವಿಚಾರವೇನು, ಸ್ಪಷ್ಟವೇ ಇದೆ. ಸರಕಾರವು ನನ್ನನ್ನು ಹಿಡಿದೊಯ್ಯುವದೆಂಬದು ನನಗೆ ಇತ್ತ ಬರುವ ಮೊದಲೇ ತಿಳಿದಿತ್ತು. ಅವರು ಬೇಕಾದಾಗ ಹಿಡಿದೊಯ್ಯಲಿ; ನನ್ನ ಸಿದ್ಧತೆಯೇ ಇದೆ.

ವಿ:—ಅಣ್ಣಾ, ಹಾಗಲ್ಲ. ಸರಕಾರವು ನಿನ್ನನ್ನು ಹಿಡಿದೊಯ್ಯುವದೆಂಬದು ನಿನಗೆ ಗೊತ್ತಿದ್ದರೂ ನೀನು ಅವರು ಹಿಡಿದೊಯ್ಯುವ ದಾರಿ ನೋಡಬಾರದು. ನೀನಾಗಿ ಅವರ ಕಡೆಗೆ ಹೋಗುವದೇ ಹೆಚ್ಚು ಶ್ರೇಯಸ್ಕರವೆಂದು ನನಗೆ ತೋರುತ್ತದೆ; ಅಂದರೆ ಅದರ ಪರಿಣಾಮವೇ ಬೇರೆಯಾಗುವದು.

ಪ್ರ:—ಹಾಗಾದರೇನು, ದಿವಾಣಸಾಹೇಬರ ಮನೆಗೆ ಹೋಗಲೋ-ಕೊತವಾಲ ಚಾವಡಿಗೆ ಹೋಗಲೊ? ನನಗೆ ಹೋಗಲಿಕ್ಕೇನು ಅಮರ್ಯಾದೆಯೆನಿಸಬೇಕಾಗಿದೆ? ಆದರೆ ಕೊತವಾಲನ ಯೋಗ್ಯತೆಯೇ ನನ್ನ ಮೈಗೆ ಕೈ ಹಚ್ಚುವದು! ಮತ್ತು ದಿವಾಣಸಾಹೇಬರು ನನ್ನ ಕಣ್ಣಿಗೆ ಕಂಡಕೂಡಲೆ ನನ್ನ ಮೈಮೇಲಿನ ಎಚ್ಚರವೇ ತಪ್ಪಿ ಹೋಗಿ, ನಾನು ಅವರ ಮೈಮೇಲೆ ಏರಿ ಹೋಗುವಷ್ಟು ನೀಚರಾಗಿ ಅವರು ನನಗೆ ಕಾಣಿಸುತ್ತಾರೆ.

ವಿ:—ನೀನಾಗಿಯೇ ಹಾಜರಾಗು; ಆದರೆ ದಿವಾಣಸಾಹೇಬರ ಕಡೆಗೂ ಹೋಗಬೇಡ; ಕೊತವಾಲ ಚಾವಡಿಯನ್ನೂ ಹತ್ತಬೇಡ. ಮೊದಲು ಮನಸ್ಸಿನಲ್ಲಿ ಯೋಚಿಸಿರುವಂತೆ ನೆಟ್ಟಗೆ ಜೋಜಿಗಮಹಾರಾಜರೆದುರಿಗೆ ಹೋಗಿ ನಿಲ್ಲು. ಹಾಗು "ಫರಾರಿಯಾಗಿದ್ದ ಈ ಪ್ರಭಾಕರನು ಖುದ್ದಾಗಿ ಬಂದು ಎದುರಿಗೆ ನಿಂತಿರುತ್ತಾನೆ. ನನ್ನ ನ್ಯಾಯದ ತೀರ್ಪು ಕೊಡಿರಿ. ನನ್ನ ತೀರ್ಪು ಹೇಳುವ

ವರೆಗೆ ನಾನು ನೆರೆಮನೆಯಲ್ಲಿರಲಿಕ್ಕೆ ಸಿದ್ಧನಾಗಿದ್ದೇನೆ'' ಎಂದು ಹೇಳು.

ಪ್ರ: ಅಹುದಹುದು. ಈ ಯುಕ್ತಿಯೇ ಯೋಗ್ಯವಾಗಿರುತ್ತದೆ.

ಪ:—ಮತ್ತು ಅಲ್ಲಿಗೆ ಹೋಗಲಿಕ್ಕೆ ಈಗಿಂದೀಗಲೇ ಹೊರಡು. ದಿವಾಣ ಸಾಹೇಬರು ಇಲ್ಲಿಂದ ಸಿಟ್ಟಿನಿಂದ ಉರಿಯುತ್ತಲೇ ಹೋದ್ದರಿಂದ ಅವರು ನೆಟ್ಟಗೆ ಮಹಾರಾಜರ ಬಳಿಗೆ ಹೋಗಿ, ಅವರ ಕಿವಿಗಳನ್ನೂದಿ, ಅವರ ಹುಕುಮು ಪಡೆದು ನಿನ್ನನ್ನು ಸೆರೆಹಿಡಿಯಲಿಕ್ಕೆ ಕಳಿಸುವರು. ಆ ಕೆಲಸಕ್ಕೆ ಅಲ್ಪ-ಸ್ವಲ್ಪಾದರೂ ಅವಕಾಶವು ಬೇಕೇಬೇಕು. ಅದಕ್ಕೆ ಪ್ರತಿಯಾಗಿ ನೀನು ಈಗಲೆ ಹೋಗಿ ಮಹಾರಾಜರೆದುರಿಗೆ ನಿಂತುಕೊಂಡರೆ ಹೆಚ್ಚು ಒಳಿತಲ್ಲವೆ?

ಪ್ರ:-ಸಮ್ಮತವು, ನನಗೆ ಸಂಪೂರ್ಣ ಸಮ್ಮತವಿದೆ. ನಾನಿನ್ನು ಹೊರಡಲೊ?

ಮಾ:—ಆದರೆ ಮೊದಲು ಒಳಗೆ ನಡೆ. ಫಲಾಹಾರ ಮಾಡು. ಏನೆಂದರೂ ನಾನು ಹೀಗೆಯೇ ನಿನ್ನನ್ನು ಹೋಗಗೊಡಲಾರೆನು. ಇಂಥ ಈ ಉಲುಕೋಚಿತನದಿಂದಲೇ ನಿನಗೆ ಸಂಕಟಗಳುಂಟಾಗುತ್ತವೆ.

ಮಾಯೂಸಾಹೇಬರ ಈ ಸೂಚನೆಯು ವಿಮಲೆಗೂ ಸಮ್ಮತವಾಯಿತು. ಅದರಿಂದ ಅವಳು:—''ಅಣ್ಣಾ, ಒಳಗೆ ನಡೆ. ನನಗೂ ಹೊಟ್ಟೆ ಹಸಿದಿದೆ. ನಾನೂ ನೀನೂ ಕುಳಿತು ಹೊಟ್ಟೆ ತುಂಬಾ ಉಪಾಹಾರ ಮಾಡೋಣ. ಸುಭೇದಾರರಿಂದ ದತ್ತವಿಧಾನದ ಬಗ್ಗೆ ಸಿಗಬೇಕಾಗಿದ್ದ ಮಿಠಾಯಿ-ಪೇಢೆಗಳು ನಿನ್ನಿಂದಲೇ ತಪ್ಪಿಹೋದವು! ಅದರಿಂದ ಇನ್ನು ಮನೆಯಲ್ಲಾದರೂ ತಿಂದುಕೊಳ್ಳೋಣ.''

ಇಷ್ಟಾದ ಮೇಲೆ ಅವರೆಲ್ಲರೂ ಒಳಗೆ ಹೋದರು; ಹಾಗು ಕೆಲಹೊತ್ತಿನ ಮೇಲೆ ವಿಮಲಾ-ಪ್ರಭಾಕರರು ಭಾಪೂಸಾಹೇಬರ ಹಾಸಿಗೆಯ ಹತ್ತರ ಹೋದರು. ಆಗ ಅವರಿಗೆ ನಿದ್ದೆ ಹತ್ತಿತ್ತು; ಅದರಿಂದ ಅವರನ್ನು ಎಬ್ಬಿಸಬಾರದೆಂದು ನಿಶ್ಚಯಿಸಿದರು. ಪ್ರಭಾಕರನು ಪುತ್ರಧರ್ಮವನ್ನು ಸ್ಮರಿಸಿ, ತಂದೆಯ ಪಾದಗಳಿಗೆ ಕೈಮುಟ್ಟಿ ನಮಿಸಿ:—''ತಂಗೀ, ನಾನು ನೆಟ್ಟಗೆ ಮಹಾರಾಜರ ಬಳಿಗೆ ಹೋಗಿ ಅವರನ್ನು ಕಾಣುತ್ತೇನೆ; ಮುಂದೇನು ಆಗುವದೋ ಆಗಲಿ. ಮಾಯಿ ಮತ್ತು ಅಪ್ಪನನ್ನು ಸಂಬಾಳಿಸಲಿಕ್ಕೆ ನೀನು ಇದ್ದೇ ಇರುತ್ತೀ'' ಹೀಗೆಂದು ಹೇಳಿ ಆತನು ಮನೆಯಿಂದ ಹೊರಬಿದ್ದನು.

† † † † †

ಜೋಜಿಗಮಹಾರಾಜರು ಸಂಜೆಯ ಮುಂದಿನ ಕುದುರೆ ಸವಾರಿ ಮಾಡಿಕೊಂಡು ಬಂದು ಅರಿವೆಗಳನ್ನು ಬದಲಿಸಿ, ಹೊರಗಿನ ದಿವಾಣಖಾನೆಯಲ್ಲಿ ಸ್ವಸ್ಥವಾಗಿ ಕುಳಿತಿದ್ದರು. ಅಷ್ಟರಲ್ಲಿ ಜವಾದಾರನು ಕೆಳಗಿನಿಂದ ಬಂದು:— ''ಯಾವನೋ ಒಬ್ಬ ಮನುಷ್ಯನು ಮಹಾರಾಜರ ಭೆಟ್ಟಿಗೆಂದು ಬಂದಿರುತ್ತಾನೆ.

ಅಪ್ಪಣೆಯಾದರೆ ಮೇಲೆ ಕರೆತರುವೆನು'' ಎಂದು ತಿಳಿಸಿದನು.

ಅಪ್ಪಣೆ ದೊರೆತ ಕೂಡಲೆ ಮೇಲಕ್ಕೆ ಬಂದ ಪ್ರಭಾಕರನು ಬಾಗಿಲ ಬಳಿಯಲ್ಲೇ ನಿಂತುಕೊಂಡನು. ಆತನು ಮಹಾರಾಜರಿಗೊಮ್ಮೆ ಬಗ್ಗಿ ನಮಸ್ಕರಿಸಿದನು. ಮಹಾರಾಜರಾದರೂ ಅದನ್ನು ಅಷ್ಟೇ ಬಗ್ಗಿ ಸ್ವೀಕರಿಸುತ್ತ:—

''ಅಲ್ಲೇಕೆ ನಿಂತುಕೊಂಡಿರಿ? ಅಗೋ, ಅತ್ತ ಕಾಣುವ ಆ ಖುರ್ಚಿಯ ಮೇಲೆ ಕುಳಿತುಕೊಳ್ಳಿರಿ.''

ಪ್ರ:—ನನಗೆ ಖುರ್ಚಿಯ ಮೇಲೆ ಕೂಡ್ರುವ ಅಪ್ಪಣೆ ಕೊಟ್ಟಿರುವದು ತಮ್ಮ ದೊಡ್ಡಸ್ತಿಕೆಯೇ ಆಗಿದೆ; ಆದರೆ ಈ ಕಾಲಕ್ಕೆ ತಮ್ಮೆದುರಿಗೆ ಖುರ್ಚಿಯ ಮೇಲೆ ಕೂಡ್ರಲಿಕ್ಕೆ ನಾನು ಅಪಾತ್ರನಾಗಿರುವೆನೆಂದು ನನಗನಿಸುತ್ತಿದೆ.

ಜೋ:—ಅದೇಕೆ? ಇದಕ್ಕೆ ವಿರುದ್ಧವಾಗಿ ಯಾವನೊಬ್ಬನು ನನ್ನ ಭೇಟಿಗೆಂದು ಬಂದಿರಲು, ನಾನು ಅವನಿಗೆ ಕೂಡ್ರಲಿಕ್ಕೆ ಖುರ್ಚಿ ಕೊಡದೆ ನಾನೇ ಕುಳಿತುಕೊಂಡರೆ, ನಾನು ಆತನ ಅವಮಾನಗೊಳಿಸುತ್ತಿರುವೆನೆಂದು ನನಗನಿಸುತ್ತದಲ್ಲ! ಅದಕ್ಕೇನು ಮಾಡಬೇಕು? 'ಈ ಕಾಲಕ್ಕೆ' ನಾನು ಖುರ್ಚಿಯ ಮೇಲೆ ಕೂಡ್ರಲಿಕ್ಕೆ ಅಪಾತ್ರನಿರುವೆನೆಂದು ನೀವು ಅನ್ನುವದರ ಅರ್ಥವು ನನಗೆ ತಿಳಿಯಲಿಲ್ಲ.

ಪ್ರ:— ಮಹಾರಾಜರೆದುರಿಗೆ ಬಂದು ನಿಂತಿರುವ ನಾನು ಸರಕಾರವು ಯಾರ ಮೇಲೆ ಆರೋಪ ಹೊರಿಸುವದೋ ಅಂಥ ಒಬ್ಬ ಗುನ್ಹೆಗಾರನು, ಅಲ್ಲಲ್ಲ ಆರೋಪಿಯು ಆಗಿರುತ್ತೇನೆ.

ಜೋ:—ನನಗೆ ಇದರ ಅರ್ಥವು ಚೆನ್ನಾಗಿ ತಿಳಿಯಲಿಲ್ಲ.

ಪ್ರ:—ಸರಕಾರದ ದೃಷ್ಟಿಯಿಂದ ನಾನು ಯಾವುದೊಂದು ಅಪರಾಧ ಮಾಡಿದವನಿರುತ್ತೇನೆ; ಆದರೆ ನನ್ನ ದೃಷ್ಟಿಯಿಂದ ನಾನದನ್ನು ಮಾಡಿರುವದಿಲ್ಲ.

ಜೋ:—ಹಾಗಾದರೆ ಇಂಥ ಮತಭೇದಗಳ ನಿಕಾಲೆ ಮಾಡಲಿಕ್ಕೆಂದು ನ್ಯಾಯಕೋರ್ಟುಗಳು ಇದ್ದೇ ಇವೆ. ಆ ಮತಭೇದದ ಬಗ್ಗೆ ನನಗೆ ಭೆಟ್ಟಿಯಾಗಿ ನೀವೇನು ಮಾಡಬೇಕಾಗಿದೆ?

ಪ್ರ:—ನ್ಯಾಯದಾನವನ್ನು ಕೇಳಿಕೊಳ್ಳುವೆನು.

ಜೋ:—ನ್ಯಾಯವನ್ನೇ ಕೇಳಬಂದಿರುವಿರೆಂದ ಬಳಿಕ ಆ ಖುರ್ಚಿಯ ಮೇಲೆ ಕೂಡ್ರಲಿಕ್ಕೆ ನಿಮಗೆ ಯಾವ ಅಡ್ಡಿಯೂ ಇರುವದಿಲ್ಲ. ಯಾವನು ತನ್ನನ್ನು ನಿರಪರಾಧಿಯೆಂದು ತಿಳಿಯುತ್ತಿರುವನೋ, ಅವನು ಆ ಕ್ಷಣದಲ್ಲಿ ಸ್ವತಂತ್ರನೇ ಆಗಿರುತ್ತಾನೆ; ಮತ್ತು ಯಾವ ಪ್ರಜೆಗಳು ಹೀಗೆ ಸ್ವತಂತ್ರರಾಗಿರುವರೋ, ಅವರು ಮನುಷ್ಯತ್ವದ ಹಕ್ಕಿನ ದೃಷ್ಟಿಯಿಂದ ರಾಜನಿಗೆ ಸಮಸಮಾನಸ್ಕಂದರೆಂದು ನಾನು ಮನ್ನಿಸುತ್ತೇನೆ. ಅಂತೆಯೇ ನಿಮಗೆ ಖುರ್ಚಿಯ ಮೇಲೆ ಕೂಡ್ರೆಂದು ಹೇಳು

ತ್ತೇನೆ; ಅಲ್ಲಿ ಕೂಡ್ರಿರಿ; ಮತ್ತು ಏತರ ಬಗ್ಗೆ ಯಾವ ನ್ಯಾಯದಾನವನ್ನು ಕೇಳು ತ್ತೀರೆಂಬದನ್ನು ಸ್ವಸ್ಥಚಿತ್ತದಿಂದ ತಿಳಿಸಿರಿ.

ಇಷ್ಟು ಸ್ಪಷ್ಟವಾಗಿ ತಿಳಿಸಿದರೂ ಪ್ರಭಾಕರನು ಖುರ್ಚಿಯ ಮೇಲೆ ಕೂಡ್ರಲೊಲ್ಲನು. ಆಗ ಮಹಾರಾಜರು:—ನಿಮ್ಮ ಕರ್ತವ್ಯವು ಖುರ್ಚಿಯ ಮೇಲೆ ಕೂಡ್ರುವದಾಗಿರದಿದ್ದರೆ ನನಗೂ ನನ್ನ ಕರ್ತವ್ಯ ಮಾಡಬೇಕಾಗುವದು. ನಾನೂ ಎದ್ದು ನಿಲ್ಲು ನಿಲ್ಲುತ್ತೇನೆ; ಆ ಮೇಲೆ ಇಬ್ಬರೂ ಎದ್ದು ನಿಂತೇ ಮಾತಾ ಡೋಣವಂತೆ.

ಆ ಮಾತು ಇಷ್ಟು ನಿಕರಕ್ಕೆ ಬಂದುದನ್ನು ನೋಡಿ ಪ್ರಭಾಕರನು ಖುರ್ಚಿಯ ಮೇಲೆ ಕುಳಿತುಕೊಂಡನು. ಆ ಮೇಲೆ ಸಂಭಾಷಣಕ್ಕಾರಂಭಿಸಿ, ಪ್ರಭಾಕರನು:—ನನ್ನ ಸಂಗತಿಯು ಸ್ವಲ್ಪದರಲ್ಲಿ ಹೀಗಿದೆ. ನಾನು ತಮ್ಮ ಈ ರಾಜಧಾನಿಯ ರಹಿವಾಸಿಯೇ ಆಗಿರುವೆನು. ನನ್ನ ಹೆಸರು ಪ್ರಭಾಕರನೆಂದು. ಭಾವೂಸಾಹೇಬ ಡಬೀರರೆಂಬುವರು ಈ ಸಂಸ್ಥಾನದ ಒಬ್ಬ ತೈನಾತದಾರರಿರು ತ್ತಾರೆ. ನಾನು ಅವರ ಮಗನು. ಹನ್ನೆರಡು ವರ್ಷಗಳ ಮುಂಚೆ ಸರಕಾರ ದವರು ನನ್ನ ಮೇಲೊಂದು ಖಟ್ಲೆ ಹಾಕಿದ್ದರು.

ಜೋ:— ಆ ಖಟ್ಲೆಯ ಸ್ವರೂಪವೇನಿದ್ದಿತು?

ಪ್ರ:—ರಾಜದ್ರೋಹ ಹಾಗು ಕೊಲೆಯ ಆರೋಪ. ಈ ಉಭಯ ಆರೋಪಗಳೂ ನನ್ನ ಮೇಲೆ ಹೊರಿಸಲ್ಪಟ್ಟಿದ್ದವೆಂದು ಅನ್ನುತ್ತಾರೆ.

ಜೋ:—ರಾಜದ್ರೋಹದ ಕೃತ್ಯವೇನು?

ಪ್ರ:—ಸಂಸ್ಥಾನೀ ಸರಕಾರ ಮತ್ತು ಬ್ರಿಟಿಶ ಸರಕಾರ ಈ ಉಭಯ ಸರಕಾರಗಳ ಕೀರ್ತಿಗೆ ಕಲಂಕವುಂಟಾಗುವಂತಹ ಜಾಹೀರನಾಮೆಗಳನ್ನು ನಾನು ಬರೆದು ಗೋಡೆಗೆ ಅಂಟಿಸಿದೆನೆಂದು ಸರಕಾರದ ಅಂಬೋಣವು.

ಜೋ:— ಮತ್ತು ಕೊಲೆಯು ಯಾರದು?

ಪ್ರ:—ದಿವಾಣಸಾಹೇಬರದು; ಹಾಗು ಪೋಲೀಟಿಕಲ್ ಏಜಂಟರದು.

ಜೋ:— ಈ ಎರಡೂ ಆರೋಪಗಳು ಖೊಟ್ಟಿ ಇದ್ದವೆಂದು ನಿಮ್ಮ ಅಂಬೋಣವಿದೆಯೇ? ಒಳ್ಳೇದು. ಆ ಆರೋಪಗಳದೇನಾಯಿತು?

ಪ್ರ:—ನನ್ನ ಗೈರಹಾಜರಿಯಲ್ಲಿ ಆ ಆರೋಪಗಳ ಚೌಕಶಿಯಾಯಿತು; ಮತ್ತು ನನಗೆ ಜನ್ಮಾವಧಿ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತು.

ಜೋ:— ಆ ಚೌಕಶಿಯು ನಿಮ್ಮ ಪಶ್ಚಾತದಲ್ಲೇಕಾಯಿತು? ಅಲ್ಲದೆ ನಿಮಗೆ ಜನ್ಮಾವಧಿ ಕರಿನೀರಿನ ಶಿಕ್ಷೆಯಾಗಿದ್ದರೂ ನೀವು ಹೀಗೆ ಮುಕ್ತರೇಕೆ?

ಪ್ರ:—ನಾನು ಆಗ ಇಲ್ಲಿಂದ ಫರಾರಿಯಾಗಿ ಮೊಗಲಾಯಿ ಸೀಮೆಯನ್ನು

ಸೇರಿದ್ದರಿಂದ ನನ್ನ ಪಶ್ಚಾತದಲ್ಲೇ ಚೌಕಶಿಯಾಯಿತು.

ಜೋ:—ನೀವು ಈ ಗುಹ್ನೆಗಳನ್ನು ಮಾಡಿರದಿದ್ದರೆ, ನೀವು ನಿರ್ದೋಷಿಗಳಾಗಿದ್ದರೆ, ಆ ಆರೋಪಗಳು ಖೊಟ್ಟಿ ಇದ್ದವೆಂದು ನಿಮ್ಮ ಅಂಬೋಣವಿದ್ದರೆ ನೀವು ಫರಾರಿಯಾದುದೇಕೆ? ನ್ಯಾಯಾಸನದೆದುರಿಗೆ ಬಂದು ನಿಂತು ನೀವು ನಿಮ್ಮ ಪುರಾವೆಯನ್ನೇಕೆ ಸಾದರಪಡಿಸಲಿಲ್ಲ? ನಿಮ್ಮ ನಿರ್ದೋಷಿತನವನ್ನೇಕೆ ಸಮರ್ಥಿಸಲಿಲ್ಲ? ಫರಾರಿಯಾಗಿ ನೀವು ನಿಮ್ಮ ಮೇಲಿನ ಆರೋಪ-ಗುಹ್ನೆಗಳನ್ನು ಹೆಚ್ಚಿಸಿಕೊಳ್ಳಲಿಲ್ಲವೇ?

ಪ್ರ:—ಅದು ನಿಜವಿದೆ; ಆದರೆ ತಮಗೆ ನಂಬಿಗೆಯಾದರೆ ತಿಳಿಸುತ್ತೇನೆ, ಆ ನ್ಯಾಯಾಸನದಿಂದ ಆ ಕಾಲದಲ್ಲಿ ನನಗೆ ನ್ಯಾಯ ದೊರೆಯುವ ಆಶೆಯೇ ಇರಲಿಲ್ಲ. ಅಂತೆಯೇ ಕಾಲಹರಣ ಮಾಡುವದಕ್ಕೆಂದು ಫರಾರಿಯಾದೆನು.

ಜೋ:—ಅದಿರಲಿ. ಹನ್ನೆರಡು ವರ್ಷಗಳ ಪೂರ್ವದಲ್ಲಿ ಫರಾರಿಯಾದ ನಿಮಗೆ ತಿರುಗಿ ಬರಬೇಕೆಂಬದು ಯಾವಾಗ ಹಾಗು ಏಕೆ ಅನಿಸಿತು?

ಪ್ರ:—ನಾನು ಮೊಗಲಾಯಿಯಲ್ಲಿರುವಾಗ ತಾವು ಅಪೂರ್ಣ ಅಧಿಕಾರ ವಹಿಸಿದಾಗ ಯಾವ ಭಾಷಣವನ್ನು ಮಾಡಿದಿರೋ ಅದು ನನಗೆ ಅಲ್ಲಿ ಓದಲಿಕ್ಕೆ ಸಿಕ್ಕಿತು. ಅದನ್ನು ಓದಿದ ದಿನವೇ ಇಲ್ಲಿಗೆ ಮರಳಿ ಬರಬೇಕೆಂದೆನಿಸಿತು.

ಜೋ:—ನಾನು ಆ ನನ್ನ ಭಾಷಣದಲ್ಲಿ ಏನೆಂದಿದ್ದೆನು?

ಪ್ರ:—ಕಳೆದ ಹನ್ನೆರಡು ವರ್ಷಗಳ ಕಾರಭಾರದ ಚೌಕಶಿ ಮಾಡುವೆನೆಂದು.

ಜೋ:—ನುಡಿದಂತೆಯೇ ಈ ಕೆಲಸದಲ್ಲಿ ನಾನು ನಡೆಯುವನೆಂದು ನೀವು ಹೇಗೆ ತಿಳಿದುಕೊಂಡಿರಿ?

ಪ್ರ:—ಮನುಷ್ಯನು ಮಾತಾಡಿದ್ದರ ಮೇಲೆ ಒಮ್ಮೆಲೆ ವಿಶ್ವಾಸವಿಡುವದರಲ್ಲಿ ಏನೂ ತಪ್ಪಿಲ್ಲೆಂದು ತಾವೂ ಒಪ್ಪಬಹುದು. ಅದರ ಮೇಲೆ ವಿಶ್ವಾಸಘಾತವಾದರೆ, ದೈವದ ಕಡೆಯ ಮಾತು. ತಾವು ಸಂಸ್ಥಾನದ ಅಧಿಪತಿಗಳಿರುತ್ತೀರಿ. ತಮ್ಮ ಇಚ್ಛೆಗೆ ಬಂದಂತೆ ಮಾಡಬಹುದು.

ಜೋ:—ಒಳ್ಳೇದು. ನೀವಾಗಿ ಹಾಜರಾಗಿರುವ ನಿಮ್ಮ ದೊಡ್ಡಿಸ್ತಿಕೆಯನ್ನು ಮನದಂದು, ನಾನು ಪುನರ್ವಿಚಾರಣೆಯ ಗೊಂದಲಕ್ಕೆ ಬೀಳದೆ, ಮತ್ತೆ ಫರಾರಿಯಾಗುವ ಸಂಧಿಯನ್ನು ಒದಗಿಸಿಕೊಟ್ಟರೆ ನೀವದನ್ನು ಸ್ವೀಕರಿಸುವದು ಹೆಚ್ಚು ಒಳಿತಲ್ಲವೆ?

ಪ್ರ:—ನನ್ನನ್ನು ಬಂಧಿಸುವದು-ಬಂಧಿಸದಿರುವದು ಹೇಗೆ ತಮ್ಮ ಅಧಿಕಾರದಲ್ಲಿದೆಯೋ, ಅದರಂತೆಯೇ ಇನ್ನು ಮುಂದೆ ಗುಪ್ತವಾಗಿರದೆ ಪ್ರಕಟ

ರೀತಿಯಿಂದ ವ್ಯವಹರಿಸುವದು ನನ್ನ ಕೈಯೊಳಗಿನದಾಗಿದೆ. ಫರಾರಿಯೇ ಆಗಿರ ಬೇಕಾಗಿದ್ದರೆ, ನಾನು ಮೊಗಲಾಯಿಯೊಳಗಿಂದ ಹಿಂದಿರುಗೇಕೆ ಬರುತ್ತಿದ್ದೆನು? ನನ್ನನ್ನು ಬಂಧಿಸದೆ ಹಾಗೆಯೇ ಇರಗೊಟ್ಟರೂ ನನಗದರಿಂದ ಇನ್ನು ಮುಂದೆ ಸುಖ-ಸಮಾಧಾನವೆನಿಸಲಿಕ್ಕಿಲ್ಲ; ನನ್ನ ವಿಚಾರಣೆಯಾಗಿ, ನಾನು ನಿರಪರಾಧಿ ಯಾಗಿದ್ದೆನೆಂದು ನಿರ್ಣಯವಾದರೇ ನನಗೆ ಸುಖವಾದೀತು.

ಜೋ:—ಆದರೆ ಪುನರ್ವಿಚಾರಣೆ ಮಾಡದೆ, ಕೇವಲ ನಿಮ್ಮ ಮಾತಿನ ಮೇಲೆಯೇ ವಿಶ್ವಾಸವಿಟ್ಟು ನಿಮ್ಮನ್ನು ಮುಕ್ತಗೊಳಿಸುವದು ಮತ್ತು ಚೌಕಶಿ ಯಲ್ಲಿ ನಿರಪರಾಧಿಯೆಂದು ನಿರ್ಣಯಿಸಿ ಮುಕ್ತಗೊಳಿಸುವದು ಇವೆರಡರ ಫಲ ಶ್ರುತಿಯೂ ನಿಮ್ಮ ಸ್ವಾತಂತ್ರ್ಯದ ದೃಷ್ಟಿಯಿಂದ ಒಂದೇ ಆಗಿಲ್ಲವೆ?

ಪ್ರ:—ಹಾಗಲ್ಲ. ಪುನರ್ವಿಚಾರಣೆಯಾಗದೆ ನಾನು ಮುಕ್ತನಾದರೆ, ನಾನು ದಯೆಯ ಯಾಚನೆ ಮಾಡಿ, ಮಾಫಿ ಪಡೆದು ಮುಕ್ತನಾದೆನೆಂದು ಜನರು ತಿಳಕೊಳ್ಳುವರು; ಮತ್ತು ನ್ಯಾಯ ಇದರ ಅರ್ಥವು ನಾನು ಹೇಗೆ ನಿರಪರಾ ಧಿಯೋ, ಹಾಗೆಯೇ ನನ್ನ ಪ್ರತಿಪಕ್ಷಿಗಳಾದ ದಿವಾಣಸಾಹೇಬರು ಅಪರಾಧಿ ಗಳೆಂದು ಸ್ಪಷ್ಟವಾಗಿ ಸಿದ್ಧವಾಗಬೇಕು. ಹನ್ನೆರಡು ವರ್ಷಗಳ ಮೇಲೆ ಬಂದು ನಾನು ನನ್ನ ನಿರ್ಣಯವನ್ನು ಕೇಳಿಕೊಳ್ಳುವದು ದ್ರಾವಿಡೀ ಪ್ರಾಣಾಯಾಮ ವೆನಿಸುವದೇನೋ ನಿಜವು; ಆದರೆ ಯಾರೊಬ್ಬರು ನೆಟ್ಟಗೆ ತುತ್ತು ತೆಗೆದುಕೊಳ್ಳ ಗೊಡದಿದ್ದರೆ, ದ್ರಾವಿಡೀ ಪ್ರಾಣಾಯಾಮ ಪದ್ಧತಿಯಿಂದಲೇ ಅದನ್ನು ತೆಗೆದು ಕೊಳ್ಳಬೇಕಾಗುತ್ತದಾದ್ದರಿಂದ ಅದಕ್ಕೆ ಬೇರೆ ಉಪಾಯವೆಲ್ಲಿದೆ? ದಿವಾಣಸಾಹೇ ಬರ ಬಗ್ಗೆ ನನಗೆಷ್ಟೋ ಮಾಹಿತಿಯಿದೆ; ಮತ್ತು ಅದನ್ನು ಕೇಳಿಕೊಳ್ಳುವ ಇಚ್ಛೆಯು ತಮಗಿದ್ದರೆ ನಾನದನ್ನು ಹೇಳುವೆನು.

ಜೋ:—ಬೇಡ. ಯಾರ ವಿರುದ್ಧವಾಗಿಯೂ ಏಕತರ್ಫಿಯ ಬೊಬ್ಬಾಟ ಕೇಳಿಕೊಳ್ಳುವದು ವಿಹಿತವಲ್ಲ. ಹಾಗೆ ನಾನು ಕೇಳಿಕೊಳ್ಳುತ್ತಿರುವದೂ ಇಲ್ಲ. ಅಲ್ಲದೆ, ಈ ಪ್ರಕರಣದಲ್ಲಿ ನ್ಯಾಯದಾನದ ಸಂಬಂಧವಿದೆ. ಅದರಿಂದಲೂ ನಾನು ಹೆಚ್ಚು ಎಚ್ಚರಪಡಬೇಕಾಗಿದೆ. ಅದಿರಲಿ. ನಾನು ನಾಳೆಯೇ ನಿಮ್ಮ ಈ ಪ್ರಕ ರಣವನ್ನು ವಿಚಾರಿಸುತ್ತೇನೆ. ನಾನು ಕರೆಕಳುಹಿದಾಗ ಮತ್ತೆ ಬರ್ರಿ. ಈ ಪ್ರಕ ರಣದ ಕೊನೆಯ ನಿರ್ಣಯವಾಗುವ ವರೆಗೆ ನೀವು ಈ ರಾಜಧಾನಿಯನ್ನು ಬಿಟ್ಟು ಬೇರೆ ಕಡೆಗೆಲ್ಲಿಯೂ ಹೋಗಲಾರಿರೆಂಬ ಬಗ್ಗೆ ನನ್ನ ಖಾತ್ರಿಯಿದೆ. ಅದರಿಂದ ಹಾಗೆ ಸೂಚಿಸಿ, ನಾನು ನಿಮ್ಮನ್ನು ಅಪಮಾನಗೊಳಿಸಲಿಚ್ಛಿಸುವದಿಲ್ಲ.

ಇಷ್ಟು ಮಾತು-ಕಥೆಗಳಾಗುವಷ್ಟರಲ್ಲಿ ಕತ್ತಲೆಗವಿಯ ಹತ್ತಿದ್ದನ್ನು ನೋಡಿ, ಜಮಾದಾರನು ಉಜ್ವಲ ಪ್ರಕಾಶದ ದೀಪವನ್ನು ಅಲ್ಲಿ ತಂದಿರಿಸಿದನು.

ಆ ಪ್ರಖರವಾದ ಪ್ರಕಾಶದಲ್ಲಿ ಮಹಾರಾಜರೂ ಪ್ರಭಾಕರನೂ ಒಬ್ಬರನ್ನೊಬ್ಬರು ನೋಡಿ ಇಬ್ಬರೂ ಕೆಲ ಮಟ್ಟಿಗೆ ತಮ್ಮ ತಮ್ಮಷ್ಟಕ್ಕೇ ಮೆಟ್ಟಿ ಬಿದ್ದರು. ಪ್ರಭಾಕರನು ಎದ್ದು ಹೊರಟುದದನ್ನು ಕಂಡು ಮಹಾರಾಜರು:—ಇನ್ನೈದು ಮಿನೀಟು ತಡೆಯಿರಿ. ನಾನು ನಿಮಗೆ ಮತ್ತೆ ಕೆಲವು ಕೇಳಬೇಕಾಗಿದೆ.

ಪ್ರ:—ಮಹಾರಾಜರು ಬೇಕಾದದ್ದನ್ನು ಕೇಳಬಹುದು; ನಿಜವಿದ್ದದ್ದನ್ನೇ ನಾನು ತಿಳಿಸುತ್ತೇನೆ.

ಜೋ:—ಈ ಮೊದಲೆಂದಾದರೂ ನಾನು ನಿಮ್ಮನ್ನು ನೋಡಿದಂತಿದೆ. ಇದು ನಿಜವೆ?

ಪ್ರ:—ನಾನಾದರೂ ಅದನ್ನೇ ಹೇಗೆನ್ನಬೇಕು? ಆದರೆ ಮಹಾರಾಜರನ್ನಾದರೂ ನಾನು ಈ ಮೊದಲೆಲ್ಲಿಯೋ ನೋಡಿದಂತೆ ತೋರುತ್ತದೆ. ಹೀಗೆಂದ ಬಗ್ಗೆ ಕ್ಷಮಿಸಬೇಕು.

ಜೋ:—ಆದರೆ ನಿಮ್ಮ ವೇಷದಲ್ಲಿ ತುಸ ಹೆಚ್ಚು-ಕಡಿಮೆಯಾಗಿದೆ.

ಪ್ರ:—ಮತ್ತು ಮಹಾರಾಜರನ್ನು ನಾನು ಯಾವಾಗ ನೋಡಿದಂತಿದೆಯೋ ಆಗ ಮಹಾರಾಜರ ವೇಷವೂ ತುಸ ಬದಲಾಗಿತ್ತು.

ಜೋ:—ನಾನು ನೋಡಿದಾಗ ನಿಮಗೆ ಗಡ್ಡಗಳಿದ್ದವು.

ಪ್ರ:—ಅಹುದು; ಆದರೆ ಅವು ಸ್ವಾಭಾವಿಕವಾಗಿದ್ದವು; ಆದರೆ ಕ್ಷಮಿಸುವದಾದರೆ ನುಡಿಯುವೆನು............

ಜೋ:—ಬೇಕಾದ ಹಾಗೆ ಮಾತಾಡಿರಿ. ಅದರಲ್ಲಿ ಕ್ಷಮೆಯ ಕಾರಣವೇನು? ಬಹಳವಾದರೆ ನಾವು ಒಬ್ಬರೊಬ್ಬರಿಗೆ ಗುರ್ತು ಕೊಡುತ್ತಿದ್ದೇವೆ.

ಪ್ರ:—ಆ ಕಾಲಕ್ಕೆ ಮಹಾರಾಜರು ಕೃತ್ರಿಮ ಗಡ್ಡಗಳನ್ನು ಹಚ್ಚಿಕೊಂಡಂತೆ ತೋರುತ್ತಿತ್ತು; ಅಂದರೆ ಮಹಾರಾಜರನ್ನು ನಾನು ಅಂದಿನ ರಾತ್ರಿ ನಮ್ಮ ಮನೆಯ ಹಿತ್ತಲ ಬಾಗಿಲ ಬಳಿಯಲ್ಲಿ ನೋಡಿದ್ದೇ ನಿಜವಾಗಿದ್ದರೆ!

ಜೋ:—ಅದಾವ ದಿವಸ?

ಪ್ರ:—ಕಳೆದ ಅಮಾಸಿಯ ರಾತ್ರಿಯಲ್ಲಿ.

ಜೋ:—ಅಹುದು. ನೀವು ಹೇಳಿದ ಗುರ್ತು ನಿಜವಿದೆ. ಅದು ಗಸ್ತಿಗೆ ಹೊರಟ ನನ್ನ ಮೊದಲನೇ ಪ್ರಸಂಗವಾಗಿತ್ತು. ಅದರಿಂದ ವೇಷಾಂತರವು ನನಗೆ ಚೆನ್ನಾಗಿ ಸಾಧಿಸಿರಲಿಕ್ಕಿಲ್ಲ. ಅದಿರಲಿ. ಇನ್ನು ಕ್ಷಮಿಸಬೇಕೆಂದು ನಿಮ್ಮನ್ನು ಕೇಳಿಕೊಳ್ಳುವ ಸರತಿಯು ನನಗೆ ಬಂದಿದೆ.

ಪ್ರ:—ಅದೇಕೆ?

ಜೋ:—ಯಾಕಂದರೆ, ಇನ್ನು ನಿಮ್ಮ ಮನೆತನದ ಮಾತು ಮಾತಾಡ

ಬೇಕಾದುದರಿಂದ. ಆ ಕಾಲಕ್ಕೆ ಅಲ್ಲಿ ನಡೆದ ಪ್ರಕಾರವು ಒಂದಿಷ್ಟು ವಿಚಿತ್ರವಾಗಿಯೇ ತೋರಿತು. ಆ ಸ್ಥಳದಲ್ಲಿ ಒಬ್ಬ ಮುದುಕ ಗೃಹಸ್ಥನೂ ಇಬ್ಬರು ಸ್ತ್ರೀಯರೂ ಇದ್ದರು.

ಪ್ರ:—ಅಹುದು. ಆ ಮುದುಕರೇ ನಮ್ಮ ತಂದೆಯು; ಮತ್ತು ಆ ಸ್ತ್ರೀಯರಲ್ಲಿ ಕೇವಲ ತರುಣಿಯಾದವಳೊಬ್ಬಳು ನನ್ನ ತಂಗಿಯು; ತುಸ ಪ್ರೌಢಳಾದವಳು ನನ್ನ ಮಲತಾಯಿಯು. ತಾವು ನೋಡಿದ ಪ್ರಕಾರವೆಂದರೆ, ನನ್ನ ಹಿರಿಯರಿಗೆ ವಯೋಮಾನದಿಂದ ಭ್ರಮೆಯಾಗಿದೆ. ಗುಪ್ತಪೋಲೀಸರು ಅವರನ್ನು ಬೆನ್ನಟ್ಟಿರುವಂತೆ ಅವರಿಗನಿಸುತ್ತಿದೆ; ಮತ್ತು ಅವರನ್ನು ಶೋಧಿಸುವದಕ್ಕೆಂದೇ ನನ್ನ ತಂದೆಯವರು ಅಂದಿನ ರಾತ್ರಿಯಲ್ಲಿ ಲಾಂದರವನ್ನು ತಕ್ಕೊಂಡು ಹಿತ್ತಲಕ್ಕೆ ಹೋಗಿದ್ದರು; ಮತ್ತು ಮೊದಲೇ ತಾಯಿಗೆ ಪತ್ರ ಮೂಲಕ ತಿಳಿಸಿ ಯೋಗಾಯೋಗದ ಮೂಲಕ ಹನ್ನೆರಡು ವರ್ಷಗಳ ನಂತರ ನಾನು ಬಂದದ್ದು ಆವಾಗಲೆ! ತಂದೆಯವರಿಗೆ ನನ್ನ ಪ್ರತ್ಯಾಗಮನದ ಬಗ್ಗೆ ಏನೂ ಗೊತ್ತಿರಲಿಲ್ಲ. ಆಗಿನ ನನ್ನ ಆ ಜವಾನ ವೇಷವು! ಅದರಿಂದ ನನ್ನನ್ನೇ ಅವರು ಗುಪ್ತಪೋಲೀಸನೆಂದು ತಿಳಿದುಕೊಂಡರು. ಕಾರಣ ಅವರ ಮಿದುಳಿಗೆ ಆಘಾತವಾದಂತಾಗಿ, ಅವರು ಬವಳಿ ಬಂದು ಬಿದ್ದರು!

ಜೋ:—ನಿಮ್ಮ ತಂಗಿಯು ಮಾತ್ರ ಆಗ ಒಳ್ಳೇ ಪ್ರಸಂಗಾವಧಾನವನ್ನು ತೋರಿಸಿದಳು. ವಸ್ತಾದಿಯೆನ್ನಬೇಕು ಅವಳಿಗೇ! ಅವಳು ನನಗೆ ಮನೆಯಿಂದ ಹೊರಹೊರಡಲಿಕ್ಕೆ ಹೇಳಿದ್ದು ಯೋಗ್ಯವೇ ಆಗಿತ್ತು; ಆದರೆ ಹಾಗೆಂದು ಹೇಳಲಿಕ್ಕೆ ಅವಳಿಗೆ ಹೇಗೆ ಧೈರ್ಯ ಬಂತು? ಎಂಬ ಬಗ್ಗೆ ನನಗೊಳ್ಳೇ ಆಶ್ಚರ್ಯವೆನಿಸುತ್ತದೆ. ಆಕೆಯ ಆಗಿನ ಆವಿರ್ಭಾವವನ್ನು ಕಂಡು ನಾನು ಬೆರಗಾಗಿ ಬಿಟ್ಟೆನು.

ಪ್ರ:—ಅವಳು ಅಂಥ ದಿಟ್ಟೆಯೇ ಆಗಿರುತ್ತಾಳೆ. ಶಿಕ್ಷಣ, ಸದ್ಗುಣ ಮತ್ತು ಆತ್ಮವಿಶ್ವಾಸ ಇವುಗಳು ಅವಳನ್ನು ಅಷ್ಟು ದಿಟ್ಟೆಯನ್ನಾಗಿ ಮಾಡಿರುತ್ತವೆ; ಅಲ್ಲದೆ ಅವಳು ಪ್ರತಿಯೊಬ್ಬರ ನ್ಯಾಯವನ್ನೂ ಹಕ್ಕನ್ನೂ ಸಂಪಾದಿಸ ತಕ್ಕವಳಾಗಿದ್ದಾಳೆ. ಅವಳ ಹೆಸರೇ ಹೊರಟದ್ದರಿಂದ ಪರಕೀಯರೆದುರಿಗಾದರೂ ನಾನು ಅವಳನ್ನು ವರ್ಣಿಸದೆ ಇರಲಾರೆನು. ನನ್ನ ಭ್ರಾತೃಪ್ರೇಮದ ಮೂಲಕ ಅವಳು ಇದುವರೆಗೂ ಅವಿವಾಹಿತಳಾಗಿರುತ್ತಾಳೆ. ನಾನಿಲ್ಲದಾಗ, ನನ್ನ ಸ್ಥಳದಲ್ಲೇ ಇದ್ದು, ಅಂದರೆ ಮಗನಾಗಿ ನಮ್ಮ ತಂದೆಯವರ ವೃದ್ಧಾಪ್ಯದಲ್ಲಿ ಅವರ ಶುಶ್ರೂಷೆಯನ್ನು ಮಾಡಿರುತ್ತಾಳೆ. ಅವಳು ಪ್ರೇಮಲಳಿರುವಷ್ಟು ಸ್ವಾಭಿಮಾನಿಯೂ ಆಗಿರುತ್ತಾಳೆ. ಆಕೆಯ ಅನುಮತಿಯಿಂದಲೇ ನಾನು ತಮ್ಮನ್ನು

ಸಮಕ್ಷಮ ಭೆಟ್ಟಿಯಾಗ ಬಂದಿರುತ್ತೇನೆ; ಮತ್ತು ನನಗೆ ಖಾತ್ರಿಯಿರುವದೇ ನಂದರೆ, ನನಗೆ ನ್ಯಾಯದಾನ ಸಿಗುವ ಬಗ್ಗೆ ನನ್ನ ತಂದೆಯವರಿಗಿಂತಲೂ ನನ್ನ ತಂಗಿಯೇ ಹೆಚ್ಚು ತತ್ಪರತೆ ವಹಿಸುವಳು.

ಜೋ:—ಅದಿರಲಿ. ನೀವಿನ್ನು ಹೋಗಿರಿ. ಯೋಗ್ಯ ಮಾರ್ಗದಿಂದ ಪುನರ್ವಿಚಾರಣೆಯ ಬಗ್ಗೆ ನೀವೇನು ಅರ್ಜಿಮಾಡಿಕೊಳ್ಳಬೇಕೋ ಅದನ್ನು ಮಾಡಿ ಕೊಳ್ಳಿರಿ; ಇಲ್ಲವೆ ಸರಕಾರೀ ಹುಕುಮು ಆದ ಮೇರೆಗೆ ಬಂದು ಹಾಜರಾಗಿರಿ.

ಹೀಗೆಂದು ಹೇಳಿ ಜೋಜಿಗಮಹಾರಾಜರು ಪ್ರಭಾಕರನಿಗೆ ಅಪ್ಪಣೆ ಕೊಟ್ಟರು. ಕೂಡಲೆ ಆತನು ಬೊಗ್ಗಿ ನಮಸ್ಕಾರ ಮಾಡಿ, ಮೆಟ್ಟಿಲುಗಳನ್ನಿಳಿದು ಹೊರಟು ಹೋದನು.

ಪ್ರಭಾಕರನು ಹೊರಟು ಹೋದ ಕೆಲ ವೇಳೆಯಲ್ಲಿಯೇ ಮನೋಹರನು ಅಲ್ಲಿಗೆ ಬಂದನು; ಇಂದು ಆತನೊಳ್ಳೇ ಖುಷಿಯಲ್ಲಿದ್ದನು. ಒಳಗೆ ಬಂದವನೇ ಯಾವುದೊಂದು ಬೇಟೆಯಾಡಿ ಬಂದವನಂತೆ ಒಳ್ಳೇ ಹುರುಪಿನಿಂದ: ಮಹಾರಾಜರೇ, ತಾವು ಮೊನ್ನೆ ಅಂದಿನ ರಾತ್ರಿಯ ಪ್ರಕರಣದ ಶೋಧ ಹಚ್ಚಲಿಕ್ಕೆ ಹೇಳಿದ್ದಿರಷ್ಟೇ? ಆ ಮೇರೆಗೆ ನಾನು ಆ ಸುಂದರ ದಿಟ್ಟ ತರುಣ ಸ್ತ್ರೀಯ ಬಗ್ಗೆ ಎಲ್ಲ ಸಂಗತಿ ಯನ್ನು ತಿಳಿದು ಬಂದಿರುತ್ತೇನೆ. ಸುಮ್ಮನೆ ಅಲ್ಲ, ಈ ಖಾಸಗೀ ಕಾರಭಾರಿಯು!

ಅದನ್ನು ಕೇಳಿ ಮಹಾರಾಜರಿಗೆ ಒಳ್ಳೇ ನಗೆ ಬಂದಿತು. ಏನಾದರೂ ಅದು ನಿಲ್ಲಲೊಲ್ಲದು. ಕೆಲಹೊತ್ತಿನ ಮೇಲೆ ಅವರು:—"ಹೋಗೋ-ಹೋಗು! ಕಾರಭಾರಿಯು ಕಡೆಗೂ ಕಾರಭಾರಿಯೇ; ರಾಜನು ರಾಜನೇ. ರಾಜನೆಂದರೆ ದೇವತಾಂಶವು; ಮತ್ತು ದೇವರೆಂದರೆ ಸರ್ವಜ್ಞನೇ ಆಗಿರುತ್ತಾನೆ. ನಿನ್ನ ಪರೀಕ್ಷೆ ಮಾಡುವ ಸಲುವಾಗಿ ಮಾಹಿತಿ ತಕ್ಕೊಂಡು ಬರಬೇಕೆಂದು ನಾನು ನಿನಗೆ ಸುಮ್ಮನೆ ಹೇಳಿಕಳಿಸಿದ್ದೆನಷ್ಟೇ. ನಿನ್ನ ಆ ತಂಗಳ ಸುದ್ದಿಯನ್ನು ಕೇಳಿ ಕೊಳ್ಳುವ ಇಚ್ಛೆಯು ನನಗಿರುವದಿಲ್ಲ.

ಅದನ್ನು ಕೇಳಿ ಮನೋಹರನು ಚಕಿತನಾದನು. ಈ ಸಂಗತಿಯು ತಂಗ ಳದ್ದು ಹೇಗೆ? ತನ್ನ ಮಿತ್ರನು ಸುಮ್ಮನೆ ತನ್ನ ಚೇಷ್ಟೆ ಮಾಡುತ್ತಿರುವನೆಂದು ಬಗೆದು ಆತನು ಆ ರಾತ್ರಿಯ ಪ್ರಸಂಗದ, ಭಾವೂಸಾಹೇಬ ಡಬೀರರ ಎಲ್ಲ ಕುಟುಂಬದ, ಪ್ರಭಾಕರ-ವಿಮಲೆಯರ ಸಂಗತಿಗಳನ್ನು ಹೇಳತೊಡಗಿದನು. ಮನೋಹರನು ಹೇಳಹೇಳುತ್ತಿರಲಿಕ್ಕೆ ಜೋಜಿಗಮಹಾರಾಜನು ಅದರ ಮುಂದಿನ ನಿಜಸಂಗತಿಯನ್ನೇ ಹೇಳಬೇಕು. ಹೀಗಾಗ ಹತ್ತಿತು. ಕಡೆಗೆ ಮನೋಹರನು:- "ಪ್ರಭಾಕರನು ಬೇಗನೆ ನಿಮ್ಮ ದೃಷ್ಟಿಗೆ ಬೀಳ...." ಎಂದೆನ್ನಲು ಜೋಜಿಗ ಮಹಾರಾಜನು ಮನೋಹರನ ಬೆನ್ನು ಚಪ್ಪರಿಸಿ ನಕ್ಕು:—"ಅಪ್ಪಾ ಮನೋ

ಹರಾ, ಅರಸರುಗಳ ಸಾಮರ್ಥ್ಯವು ನಿನಗೆಲ್ಲಿ ಗೊತ್ತಿದೆ? ಅವರು ಭವಿಷ್ಯಕಾಲವನ್ನು ಭೂತಕಾಲವನ್ನಾಗಿ ಕೂಡ ಮಾಡಬಲ್ಲರು'' ಮನೋಹರನು ಆಶ್ಚರ್ಯಭರದಿಂದ:—"ಅಂದರೇನು? ನನಗೆ ಗೊತ್ತಾಗಲಿಲ್ಲ" ಎಂದೆನ್ನಲು, ಮಹಾರಾಜರು "ಎಲಾ, ಯಾವನು ಬೇಗನೆ ನನ್ನ ದೃಷ್ಟಿಗೆ ಬೀಳುವನೆಂದು ನೀನು ಹೇಳಿದಿಯೋ, ಆ ಗುಹ್ನೆಗಾರನು ತನ್ನ ಕಾಲಿನಿಂದಲೇ ಬಂದು, ನನಗೆ ಈ ಮೊದಲೇ ಭೆಟ್ಟಿಯಾಗಿ ಹೋಗಿರುತ್ತಾನೆ!''

ಮ:—ಹಾಗಾದರೆ ಈಗ ಆತನೆಲ್ಲಿರುತ್ತಾನೆ! ಎಂದು ಆಶ್ಚರ್ಯಭರದಿಂದ ಕೇಳಲು,

ಜೋ:—ತನ್ನ ಮನೆಗೆ ಹೊರಟು ಹೋದನು.

ಮ: – ನೀವು ಆತನನ್ನು ಹಾಗೆಯೇ ಹೋಗಗೊಟ್ಟಿರಾ? ಆತನು ಶಿಕ್ಷೆಯಾದ ಗುಹ್ನೆಗಾರನೆಂಬದನ್ನು ತಿಳಿದೂ ತಿಳಿದು ಬಿಟ್ಟುಬಿಟ್ಟಿರಾ?

ಜೋ:—ಅದೇಕೆ? ಯಾವನು ಇಷ್ಟು ವರ್ಷಗಳ ನಂತರ ತಾನಾಗಿ ಹಿಂದಿರುಗಿ ಬಂದನೋ, ಅವನೇನು ಮರಳಿ ಫರಾರಿಯಾಗುವನೋ? ಓಡಿ ಹೋಗುವನೋ? ಅವನು ಹೇಳಿದ ಸಂಗತಿಯೆಲ್ಲ ಸುಸಂಗತ ಸಂಭಾವಿತನದ್ದಾಗಿ ತೋರಿತು. ಅಂತೆಯೇ ನಾನಾತನನ್ನು ಹೋಗಗೊಟ್ಟೆನು. ವಿಶ್ವಾಸದಿಂದ, ಸ್ವೇಚ್ಛೆಯಿಂದ ಹಾಗು ತನ್ನ ಕಾಲಿನಿಂದ ನಡೆದು ನನ್ನಲ್ಲಿಗೆ ನ್ಯಾಯ ಬೇಡಲು ಯಾವ ಮನುಷ್ಯನು ಬಂದನೋ, ಆತನ ವಿಶ್ವಾಸಘಾತ ಮಾಡಿ, ನಾನು ಆತನನ್ನು ಬಂಧಿಸಿಡುವದು ಯೋಗ್ಯವಾದೀತೇನು?

ಮ:—ಬಂಧನವೇ ಏಕೆ? ಆದರೆ ಆತನನ್ನು ಸೆರೆ ಹಿಡಿದು, ಕೈಕಾಲುಗಳಲ್ಲಿ ಬೇಡಿ ಹಾಕಿಸಿ, ಟೊಂಕಕ್ಕೆ ಹಗ್ಗ ಬಿಗಿಸಿ ಸೆರೆಮನೆಯ ಕೋಣೆಗೆ ಪರಸ್ಪರವಾಗಿ ಕಳಿಸಿದ್ದರೂ ಯೋಗ್ಯವಾಗುತ್ತಿತ್ತೆನ್ನುವಷ್ಟು ಆತನ ಗುಹ್ನೆಯು ಭಯಂಕರವಾಗಿದೆ; ಆದರೆ ಅದು ನನ್ನ ದೃಷ್ಟಿಯಿಂದಲ್ಲ, ಜನರ ದೃಷ್ಟಿಯಿಂದ.

ಜೋ:-ಬರಿಯ ಗುಹ್ನೆಯ ಸ್ವರೂಪವನ್ನೇ ನೋಡುವದಾದರೆ, ಕೈಕಾಲುಗಳಿಗೆ ಬೇಡಿ ತೊಡಿಸಿದ ಬಳಿಕ ಗುದ್ದುತ್ತ ಒದೆಯುತ್ತ ಚಬಕದಿಂದ ಹೊಡೆಯುತ್ತ ಒಯ್ಯಬೇಕೆಂದೇಕೆ ಅನ್ನಲಿಲ್ಲ? ಜನರೀತಿಯ ಮೇರೆಗೆ ಅಂದರೆ, ಸಾಮಾನ್ಯ ಸರಕಾರೀ ರೀತಿಯಂತೆ ಅದು ಒಪ್ಪಬಹುದಾಗಿತ್ತು; ಆದರೆ ಸಭ್ಯಗೃಹಸ್ಥನೇ, ಆತನಿಗೆ ಓಡಿಯೇ ಹೋಗಬೇಕಾಗಿದ್ದರೆ, ಆತನು ಸ್ವತಃ ನನ್ನ ತನಕ ಬಂದು ತನ್ನ ಸಂಗತಿಯನ್ನಾದರೂ ಏಕೆ ಹೇಳುತ್ತಿದ್ದನು? ಇದರ ವಿಚಾರ ಮಾಡಬೇಡವೇ?

ಮ:—ಅದಿರಲಿ; ಆದರೆ ಇನ್ನು ಮುಂದಾದರೂ ಆತನನ್ನು ಬಂಧಿಸಲಿಕ್ಕೆ ನಿಮ್ಮ ಆತಂಕವಿಲ್ಲವಷ್ಟೇ?

ಜೋ:—ನನ್ನ ಆತಂಕವೇನುಂಟಾಗುವ ಕಾರಣವೇನು? ಬೇಕಾದ ಹಾಗೆ ಬಂಧಿಸಿರಿ; ಆದರೆ ಜಾಮೀನು ಕೊಟ್ಟರೆ ಆತನನ್ನು ಬಿಡಲಿಕ್ಕೆ ಅಡ್ಡಿಯೇನು?

ಮ:—ಇದೆ; ಅದಕ್ಕೂ ಅಡ್ಡಿಯಿದೆ. ನನಗಾವ ಭವಿಷ್ಯದ ದೃಷ್ಟಿಯು ಲಭಿಸಿರುವದೋ ಅದು ನಿಮಗೆ ಲಭಿಸಿರುವದಿಲ್ಲ. ಆದರಿಂದ ಇನ್ನು ಮುಂದೆ ಈ ಸಂಬಂಧದ ಎಲ್ಲ ಸಂಗತಿಗಳು ನನ್ನ ಧೋರಣದಿಂದಲೇ ನಡೆಯಲಿ. ಈ ತರುಣ ಗುಹ್ನೆಗಾರನು ಕೇವಲ ತನ್ನ ತಂದೆಯ ಮಗನಾಗಿದ್ದರೆ, ಈತನನ್ನು ಜಾಮೀನಿನ ಮೇಲೆ ಬಿಡಿರೆಂದು ನಿಮಗೆ ನಾನು ಹೇಳುತ್ತಿದ್ದೆನು; ಆದರೆ ಈತನು ತನ್ನ ತಂ-ಗಿಯ ಅಣ್ಣನಾಗಿರುತ್ತಾನೆ. ಅಂತೆಯೇ ಈತನನ್ನು ಸೆರೆಮನೆಯಲ್ಲಿರಿಸಬೇಕು!

ಜೋ:—ಭಲೆ! ನೀನಂತೂ ಇಂದು ಬರಿಯ ಒಡಪಿನಿಂದಲೇ ಮಾತನಾಡ ಹತ್ತಿರುತ್ತೀ!

ಮ:—ನಾನು ಒಡಪಿನಿಂದ ಮಾತನಾಡುತ್ತೇನೆಂದು ನೀವು ನನ್ನನ್ನು ವರ್ಣಿಸಿದ್ದರಿಂದ ನನ್ನ ಭವಿಷ್ಯದೃಷ್ಟಿಯು ಸಮರ್ಥನವೇ ಆದಂತಾಯಿತು. ಮುಂ-ದಾಗುವ ಸಂಗತಿಗಳ ಬಗ್ಗೆ ಮೊದಲೇ ಬಾಯಿ ಬರುತ್ತದೆಂದು ಅನ್ನುವ ಜನ ರೂಢಿಯು ತೀರ ಸುಳ್ಳಾಗಿರುವದಿಲ್ಲ! ಮಹಾರಾಜರೇ, ಒಡಪು ಹೇಳುವ ಪ್ರಸಂಗ ಗಳು ಕದಾಚಿತ್ ಇದೇ ಪ್ರಕರಣದಿಂದ ಮುಂದೆ ಬಂದಾವು; ಆದರೆ ಇತ್ತೀಚೆ ಗಿನ ಪ್ರೌಢ ವಧುಗಳಿಗೂ ಮುದಿ ವರಗಳಿಗೂ ಒಡಪು ಹಾಕಿ ಹೆಸರು ಹೇಳು ವದು ಅಷ್ಟು ರುಚಿಸದಿರುವದೊಂದು ಪಂಚಾಯತಿಯೇ—ಅಡ್ಡಿಯೇ ಆಗಿದೆ.

ಜೋ:—ಮನೋಹರಾ, ನೀನಿದೇನನ್ನು ಬಡಬಡಿಸುತ್ತಿರುವೆ? ಇದು ನಿನ್ನದು ನಿನಗೇ ಗೊತ್ತು. ಭವಿಷ್ಯವಾದಿಗಳ ಮಾತುಗಳೆಂದರೆ, ಬಡಬಡಿಕೆಯೆಂದೇ ಅನ್ನುತ್ತಲಿರುವರು! ಆದರೆ ಅದನ್ನೆಲ್ಲ ಬಿಟ್ಟು ಈಗ ಪ್ರಾಮುಖ್ಯವಾಗಿ ಆ ಗುಹ್ನೆ ಗಾರ ತರುಣನನ್ನು ಯಾವಾಗ ಹಾಗು ಹೇಗೆ ಬಂಧಿಸಬೇಕೆಂಬದನ್ನು ಹೇಳು.

ಮ:—ಆತನು ಇಲ್ಲಿಗೆ ಬಂದಾಗಲೇ ನೀವು ಆತನನ್ನು ಬಂಧಿಸಿದ್ದರೆ ಒಳ್ಳೆ ತಾಗುತ್ತಿತ್ತು; ಆದರೆ ಇನ್ನು ಮೇಲೆ ಬಹುಶಃ ದಿವಾಣಸಾಹೇಬರೇ ಈ ಪ್ರಕರಣ ದಲ್ಲಿ ಲಕ್ಷ್ಯವಿರಿಸಬಹುದಾಗಿದೆ; ಮತ್ತು ಫಸ್ಟ್ ಕ್ಲಾಸ ಮ್ಯಾಜಿಸ್ಟ್ರೇಟರ ಹುದ್ದೆಯ ಮೂಲಕ ಅವರೇ ಆತನನ್ನು ಬಂಧಿಸುವ ಹುಕುಮು ಮಾಡುವದೇ ವಿಹಿತವು. ದಿವಾಣಸಾಹೇಬರು ನಿಮ್ಮ ಭೆಟ್ಟಿಗೆ ಬಂದರೆ ಒಂದು ಕೆಲಸ ಮಾಡಿರಿ. ಅದೇನಂದರೆ, ಪ್ರಭಾಕರ ಡಬೀರನನ್ನು ಬಂಧನಗೊಳಿಸುವ ಸಂಬಂಧವಾಗಿ ದಿವಾಣಸಾಹೇಬರು ಮಾತು ತೆಗೆದಾಗ, ಆತನು ಈ ಮೊದಲು ಬಂದು ನಿಮಗೆ ಭೆಟ್ಟಿಯಾದ ಸಂಗತಿಯನ್ನು ಅವರಿಗೆ ಕೊಂಚವೂ ಗೊತ್ತುಹಚ್ಚಗೊಡಬೇಡಿರಿ; ಮತ್ತು ಆ ಎಲ್ಲ ಪ್ರಕರಣವನ್ನು ದಿವಾಣಸಾಹೇಬರೇ ಎಬ್ಬಿಸುತ್ತಿದ್ದು ಅದನ್ನೆಲ್ಲ

ಅವರದವರೇ ಬೇಕಾದ ಹಾಗೆನಿಕಾಲೆ ಮಾಡಬೇಕೆಂಬ ಪ್ರೋಕನ್ನು ನಿಮ್ಮ ಮಾತಿನ ಲ್ಲಿಡಿರಿ. ಇನ್ನು ಮೇಲೆ ಈ ಪ್ರಕರಣದಲ್ಲಿ ದಿವಾಣಸಾಹೇಬರ ಗುಪ್ತ ರಿಪೋರ್ಟು ಗಳು ಪೋಲೀಟಿಕಲ್ ಏಜಂಟರ ಕಡೆಗೆ ಹೋಗಲಿಕ್ಕೆ ಪ್ರಾರಂಭವಾಗುತ್ತವೆಂಬ ದನ್ನು ಲಕ್ಷ್ಯದಲ್ಲಿಡಿರಿ. ಅವುಗಳಲ್ಲಿ ನಿಮ್ಮ ಅವಹೇಲನೆಗೂ ಪ್ರಾರಂಭವಾಗತಕ್ಕ ದ್ದಿದೆ. ನೀವು ನಿಮ್ಮ ಭಾಪೀ ವಧುವಿನ ಕಡೆಗೆ ಲಕ್ಷ್ಯಗೊಟ್ಟು ನ್ಯಾಯದಾನದ ಕೆಲಸದಲ್ಲಿ ಇಲ್ಲದ ಗೊಂದಲವನ್ನೆಬ್ಬಿಸುತ್ತೀರೆಂಬ ಸುದ್ದಿ ಹಬ್ಬ ಬಹುದಾಗಿದೆ. ಆದ್ದರಿಂದ ಬಹು ಸಾವಧಾನದಿಂದ ವರ್ತಿಸತಕ್ಕದ್ದು.

ಮ:—ಹಾಗಾದರೆ ಈ ಎಲ್ಲ ಕಾರಸ್ಥಾನ-ತಂತ್ರಗಳನ್ನು ನಿನ್ನವು ನೀನೇ ಸಂಬಾಳಿಸು ನೋಡೋಣ! ದಿವಾಣಸಾಹೇಬರು ಬಂದರೆಂದರೆ ಅವರೊಡನೆ ಏನು ಮಾತಾಡಬೇಕೋ ಅದನ್ನು ನೀನೇ ಮಾತಾಡು. ನಾನು ನಡುನಡುವೆ ಸುಮ್ಮನೆ ಚಿಕ್ಕಂದಿನಲ್ಲಿ ನಮ್ಮ ತಾಯಿಯು ಕಥೆ ಹೇಳುತ್ತಿರುವಾಗ ಹೂಂಕಾರ ಕೊಡುತ್ತಿದ್ದಂತೆ ಹೂಂಕಾರ ಕೊಡುತ್ತಿರುತ್ತೇನೆ. ಅಂದರಾಯಿತಲ್ಲವೆ?

ಜೋ:—ಸಂಸ್ಥಾನಿಕರಿಗೊಪ್ಪಬಹುದಾದ ವರ್ತನವೇ ಆದಾದೀತು.

ಜೋ: –ಮತ್ತು ಕಾಯಿದೆಯ ಜ್ಞಾನವಿಲ್ಲದ ಅಜ್ಞಾನ ಮನುಷ್ಯನಿಗೆಂದ ರೂ ಸಲ್ಲಬಹುದು.

ಮ: ನಿಮ್ಮ ನಿಂದೆಯನ್ನೇ ಮಾಡಲಿಕ್ಕಾದರೆ, ಆ ವರ್ಣನವೂ ಸಾಕಾಗ ಲಿಕ್ಕಿಲ್ಲ; ಯಾಕಂದರೆ ಯಾವ ಸಂಸ್ಥಾನಿಕನಿಗೆ ಇನ್ನೂ ಪೂರ್ಣ ಅಧಿಕಾರಗಳು ದೊರೆಯತಕ್ಕವಿವೆಯೋ, ಅಂಥವನಿಗೆ ಫೌಜದಾರೀ ಕಾಯಿದೆಯ ಸಂಪೂರ್ಣ ಜ್ಞಾನವು ಹೇಗಿರಬೇಕು? ಸದ್ಯಕ್ಕೆ ಅದಿರಲಿ.

---

## ೧೬. ಮೀನ ನುಂಗಿದ ಮಾಣಿಕವು.

ಭಾವೂಸಾಹೇಬರ ಮನೆಯ ದತ್ತವಿಧಾನವು ಹಾಗೆ ಆಕಸ್ಮಿಕವಾಗಿ ಕಟ್ಟಾ ದ್ದರಿಂದ ಕರ್ತುಮಕರ್ತುಮ ಸತ್ತಾಧಾರಿಗಳಾದ ದಿವಾಣಸಾಹೇಬರು ಅಲ್ಲಿ ಆಗ ಹಾಜರಿದ್ದರೂ, ತಮ್ಮ ಅವಮಾನವನ್ನು ಸಹಿಸಿಕೊಂಡು ಸುಮ್ಮನೆ ಅಲ್ಲಿಂದ ಕಾಲ್ದೆ ಗೆಯಬೇಕಾಯಿತು. ಸುಭೇದಾರರು ಅತ್ಯಂತ ಪ್ರಸಂಗಾವಧಾನಿಗಳೂ, ಯುಕ್ತಿ ಕೋವಿದರೂ ಆಗಿದ್ದರೂ, ಪ್ರತ್ಯಕ್ಷ ಪ್ರಭಾಕರನೇ ಪ್ರಕಟನಾದ್ದರಿಂದ ದತ್ತಕದ ವ್ಯೂಹವು ಶಾಶ್ವತವಾಗಿ ಮುರಿದು ಬಿದ್ದು, ನಿರಾಶೆಯಿಂದ ಅವರ ಚುರುಕು ಬುದ್ಧಿಯೆಲ್ಲ ಹೆಪ್ಪುಗೊಂಡಿತು. ಅದರಿಂದ ಮೋರೆಯ ಮೇಲೆ ಹೊಡೆಸಿ ಕೊಂಡವರಂತೆ ಅವರು ಆ ಡಬೀರರ ಮನೆಯಿಂದ ಸುಮ್ಮನೆ ಕಾಲ್ದೆಗೆಯಬೇಕಾ ಯಿತು. ಇನ್ನು ಅಲ್ಲಿಂದಲ್ಲೇ ಅದರ ಸೇಡು ತೀರಿಸಿಕೊಳ್ಳುವದಕ್ಕೆಂದು ಗೊಂದಲ

ವೆಬ್ಬಿಸಬೇಕೆಂದಿದ್ದರೆ, ಅದು ದಿವಾಣಸಾಹೇಬರಿಗೇ ಶಕ್ಯವಿದ್ದಿತು. ಯಾಕಂದರೆ ಅವರು ಫಸ್ಟ್ ಕ್ಲಾಸ ಮ್ಯಾಜಿಸ್ಟ್ರೇಟರಿದ್ದರು. ಅದರಿಂದ ಅವರು ಪ್ರಭಾಕರನನ್ನು ಆಗಿಂದಾಗಲೆ ಪ್ರತಿಬಂಧಿಸಬಹುದಾಗಿತ್ತು; ಆದರೆ ಪ್ರಭಾಕರನು ಮುಂಗೋಪದ ಜೀವದ ಪರಿವೆ ಬಿಟ್ಟ ಪೈಲವಾನನು! ಅವನು ಎಲ್ಲಕ್ಕೂ ಮೊದಲು ದಿವಾಣಸಾಹೇಬರನ್ನೊದ್ದು ಅವರ ಹಲ್ಲುಮುರಿಯತಕ್ಕವನು; ಹಾಗು ಆ ಮೇಲೆ ಬಂದ ಪ್ರಸಂಗಕ್ಕೆ ಎದೆಗೊಟ್ಟು ನಿಲ್ಲತಕ್ಕವನು! ಪಾಪಕರ್ಮಗಳನ್ನು ಮಾಡುವವರ ಮನಸ್ಸು ಮೊದಲೇ ಅರ್ಧಮರ್ಧ ತಾನಾಗಿಯೇ ನಿರ್ಬಲವಾಗಿರುತ್ತದೆ. ಅದರಿಂದ ದಿವಾಣಸಾಹೇಬರ ರಾಜಕೀಯ ಅಧಿಕಾರದ ಅಹಂಕಾರವು ಪ್ರಭಾಕರನೆದುರಿಗೆ ನಿಸ್ತೇಜವಾಯಿತು; ಮತ್ತು ಗುಹ್ನೆಗಾರನೆಂದು ಪ್ರಭಾಕರನನ್ನು ಪ್ರತಿಬಂಧಿಸುವ ಮೊದಲು, ಅವರ ಮನಸ್ಸು ಸ್ವತಃ ಅವರನ್ನೇ ಗುಹ್ನೆಗಾರನೆಂದು ನಿಶ್ಚಯಿಸಿ, ಹೆರವರ ಮನೆಯೊಳಗಿಂದ ಅವರನ್ನು ಜಗ್ಗಿಕೊಂಡೊಯ್ದಿತು! ಎಲೆ-ಅಡಕಿ, ಹಾರ-ತುರಾಯಿಗಳ ತಬಕಗಳನ್ನು ತಂದಿದ್ದ ಇತರೇ ಜನರ ಮನಸ್ಸು ದಿವಾಣಸಾಹೇಬರ ಇಲ್ಲವೆ ಸುಭೇದಾರರ ಮನಸ್ಸಿನಷ್ಟು ವ್ಯಗ್ರವಾಗಿರಲಿಲ್ಲ. ಅವರೇನು, ಹೇಳಿ ಕೇಳಿ ಮೋಜು ನೋಡುವವರೇ! ಅದರಿಂದ ಅವರಲ್ಲಿಯ ಕೆಲವರು ಮನಸ್ಸಿನಲ್ಲಿಯೇ ದಿವಾಣಸಾಹೇಬರ ಫಜೀತಿಯ ಬಗ್ಗೆ ಅವರನ್ನು ಚೇಷ್ಟೆ ಮಾಡುತ್ತಿದ್ದರು. ಬೇರೆ ಕೆಲವರು ಪ್ರಭಾಕರನು ಪ್ರಕಟವಾದ ಬಗ್ಗೆ ಆಶ್ಚರ್ಯಚಕಿತರಾಗಿ ತಂತಮ್ಮ ಮನೆಗಳಿಗೆ ಹೊರಟು ಹೋದರು.

ಆಗ ಸುಭೇದಾರರು ತಮ್ಮ ಮನೆಗೆ ಹೋಗದೆ, ದಿವಾಣಸಾಹೇಬರೊಡನೆ ಅವರ ಮನೆಗೇ ಹೋದರು. ಅವರಿಬ್ಬರೂ ಅಟ್ಟವನ್ನೇರಿ ಹೋಗಿ ಬಾಗಿಲು ಮುಚ್ಚಿಕೊಂಡು ಆರಾಮ ಖುರ್ಚಿಗಳ ಮೇಲೆ ಉಸ್ಸೆಂದು ಕುಳಿತರು. ಅರ್ಧತಾಸಾದರೂ ಒಬ್ಬರ ಬಾಯಿಂದಲೂ ಪಿಟ್ಟೆಂಬ ಶಬ್ದವೂ ಹೊರಡಲಿಲ್ಲ. ಅವರಿಬ್ಬರ ಲಕ್ಷ್ಯವೂ ಪ್ರಭಾಕರನ ಮೇಲೆಯೇ ಹೊರಳಿತ್ತು; ಆದರೆ ಪ್ರತಿಯೊಬ್ಬರದೂ ಭಿನ್ನಭಿನ್ನ ದೃಷ್ಟಿಯಿಂದ. ದಿವಾಣಸಾಹೇಬರಿಗೆ ದತ್ತವಿಧಾನವು ರಹಿತವಾದದ್ದರ ಚಮತ್ಕಾರವೆನಿಸುವ ಕಾರಣವೇ ಇರಲಿಲ್ಲ; ಆದರೆ ಪ್ರಭಾಕರನು ಪ್ರಕಟನಾದ್ದರಿಂದ ಆತನನ್ನು ಮತ್ತೆ ಪ್ರತಿಬಂಧಿಸಿ ಸೆರೆಮನೆಗೆ ಹೇಗೆ ಕಳಿಸಬೇಕೆಂಬ ಬಗ್ಗೆ ಅವರ ಮನಸ್ಸು ವ್ಯಗ್ರವಾಗಿತ್ತು. ಸುಭೇದಾರನು ಪ್ರಭಾಕರನನ್ನು ರಾಜಕೀಯ ಗುಹ್ನೆಗಾರನಿಗಿಂತಲೂ ತನ್ನ ವೈರಿಯೇ ಅಧಿಕವಾಗಿರುವನೆಂದು ಭಾವಿಸುತ್ತಿದ್ದನು; ಅಲ್ಲದೆ ದತ್ತವಿಧಾನವು ಕಟ್ಟಾದರೂ ಆಗಲಿ; ಆದರೆ ಅದಕ್ಕಾಗಿ ತಾನು ಮಾರವಾಡಿಗೆ ಪ್ರೊಮಿಸರಿ ನೋಟು ಬರಕೊಟ್ಟು ಸಾಲವಾಗಿ ತಂದು ದಿವಾಣಸಾಹೇಬರಿಗೆ ಕೊಟ್ಟಿದ್ದ ಐದು ಸಾವಿರ ರೂಪಾಯಿಗಳ ಗತಿಯೇನಾಗುವದೋ

ಎಂಬ ಯೋಚನೆಯು ಆತನ ಮನಸ್ಸಿನಲ್ಲಿ ಗೊಂದಲವನ್ನೆಬ್ಬಿಸಿಬಿಟ್ಟಿತ್ತು.

ಕಡೆಗೆ ದಿವಾಣಸಾಹೇಬರೇ ಅಲ್ಲಿಯ ಮೌನವನ್ನು ಮೊದಲು ಭಂಗ ಗೊಳಿಸಿದರು. ಸ್ವಂತದ ಫಜೀತಿಯದೇನೂ ದೊಡ್ಡ ಮಾತಲ್ಲ; ಇನ್ನು ತುಸ ಸಮಾಧಾನಗೊಳಿಸಬೇಕಾದರೆ ಅದು ಸುಭೇದಾರರಿಗೇ ಅವಶ್ಯವೆಂದು ತೋರಿಸುವ ಡೌಲಿನಿಂದ ದಿವಾಣಸಾಹೇಬರು:—ಸುಭೇದಾರರೇ, ಹೋಗಲಿ ಬಿಡಿರಿ. ಯೋಚನೆ ಯನ್ನೇನು ಮಾಡುತ್ತಿರುವಿರಿ? ಗಾಬರಿಗೊಳ್ಳಬೇಡಿರಿ. ಧೈರ್ಯವಿರಲಿ. ನಾನು ದಿವಾಣನಾಗಿರುವವರೆಗೆ ನಿಮ್ಮ ಈ ದತ್ತವಿಧಾನವು ಇಂದಿಲ್ಲ ನಾಳೆ ಆಗಿಯೇ ಆಗು ವದು. ಇನ್ನು ಆ ಪ್ರಭಾಕರನ ಭೂತವು ಮತ್ತೆ ತಲೆಯೆತ್ತತೊಡಗಿದೆ. ನಾನು ಅವನನ್ನು ಗಟ್ಟಿಮುಟ್ಟಾಗಿ ಹುಗಿದು ಬಿಡುವ ವ್ಯವಸ್ಥೆಗೆ ತೊಡಗುತ್ತೇನೆ. ಆತನಿ ಗಾದ ಶಿಕ್ಷೆಯನ್ನು ಅವನಿಗೆ ಹೇಳಿಬಿಟ್ಟೆತೆಂದರೆ ತೀರಿತು; ಇನ್ನು ಹದಿನೈದು ದಿನ ಗಳಲ್ಲೇ ಆತನು ಅಂದಮಾನ ದ್ವೀಪದ ಕತ್ತಲೆ ಕೋಣೆಗೆ ಹೋಗುವನೋ ಇಲ್ಲ ವೋ ನೋಡಿರಿ. ನಾನು ಈಗ ಮೊದಲು ಯಜಮಾನರ ಬಳಿಗೆ ಹೋಗಿ ಅವ ರಿಗೆ ನಡೆದ ಸಂಗತಿಯನ್ನೆಲ್ಲ ಹೇಳುತ್ತೇನೆ; ಮತ್ತು ಅವರಿಂದ ಅನಾಯಾಸವಾಗಿ ದೊರೆಯುವ ಅಪ್ಪಣೆಯ ಮೇರೆಗೆ ಪ್ರಭಾಕರನನ್ನು ಪ್ರತಿಬಂಧಿಸಿ ಸೆರೆಮನೆಯ ಸೋಬತಿಯನ್ನಾಗಿ ಮಾಡುವೆನೆಂದರೆ ಮುಗಿಯಿತು.

ಆದರೆ ಈ ಮಾತಿಗೆ ಸುಭೇದಾರರಿಂದ ಒಮ್ಮೆಲೆ ಸಮ್ಮತಿ ದೊರೆಯಲಿಲ್ಲ. ದಿವಾಣಸಾಹೇಬರು ಯೋಜಿಸಿರುವಂತೆಯೇ ಆಗಬೇಕೆಂದು ಅವರಿಗೂ ಅನಿಸು ತ್ತಿತ್ತು; ಆದರೆ ಅದಾಗುವ ಮೊದಲು ಇನ್ನೊಂದು ಸಂಗತಿಯನ್ನು ಮಾಡಿಕೊ ಳ್ಳುವದು ಅವರಿಗೆ ಹೆಚ್ಚು ಅಗತ್ಯದ್ದಾಗಿ ತೋರುತ್ತಿತ್ತು. ಅದೇನಂದರೆ, ದಿವಾಣ ಸಾಹೇಬರಿಗೆ ಕೊಟ್ಟಿದ್ದ ರೂ. ಗಳನ್ನು ತಿರುಗಿ ಇಸಕೊಳ್ಳುವದು. ಅದರಿಂದ ಅವರು:—"ಆದೀತು. ಹೀಗೆಯೇ ಆದೀತು; ತಮ್ಮಂತಹ ಸರ್ವ ಸತ್ತಾಧೀಶರೇ ಮಾಡಹತ್ತಿದ ಬಳಿಕ ಆಗುದಿರುವದದೇನಿದೆ? ಆದರೆ ಸದ್ಯಕ್ಕಂತೂ ದತ್ತವಿಧಾ ನವು ರಹಿತವಾದದ್ದು ನಿಜವು. ಅಂತೆಯೇ ಆ ಯೋಗವು ಮತ್ತೆ ಕೂಡಿ ಬರುವ ವರೆಗೆ ಎಲ್ಲ ರೀತಿಯಿಂದಲೂ ಪೂರ್ವಸ್ಥಿತಿಯೇ ಪ್ರಾಪ್ತವಾಯಿತೆಂದು ತಿಳಿಯುವದು ಯೋಗ್ಯವಲ್ಲವೇ?"

ದಿ:—ಸುಭೇದಾರರೇ, ನಿಮ್ಮ ಮಾತಿನ ಅರ್ಥವು ನನಗೆ ಚೆನ್ನಾಗಿ ತಿಳಿಯಲಿಲ್ಲ.

ಸು:—ಅರ್ಥವಿಷ್ಟೇ, ದತ್ತವಿಧಾನಕ್ಕೆಂದು ಹೊರಡುವ ಮೊದಲು ನಾನು ಮಾರವಾಡಿಗೆ ಪ್ರೋ. ನೋಟು ಬರೆಕೊಟ್ಟು ತಂದು ತಮಗೆ ಕೊಟ್ಟಿರುವ ಐದು ಸಹಸ್ರ ರೂಪಾಯಿಗಳನ್ನು ಆ ಮಾರವಾಡಿಗೆ ತಿರುಗಿ ಕೊಟ್ಟು, ಆ ಪ್ರೋ.

ನೋಟನ್ನು ಇಸಕೊಂಡರೆ ಎಲ್ಲವೂ ಮೊದಲಿನಂತಾಗುವದಿಲ್ಲವೆ? ಪ್ರಭಾಕರನು ಹಿಂದಿರುಗಿ ಬರದಂತೆ ಅಂದಮಾನಕ್ಕೆ ಅಟ್ಟಲ್ಪಡಬೇಕು; ಭಾವೂಸಾಹೇಬರ ಮೈ ಮೇಲೆ ಮತ್ತೆ ಮೊದಲಿನಂತೆ ಎಚ್ಚರವಿರಬೇಕು; ಬಳಿಕ ತಾವು ಮತ್ತೆ ಮೊದಲಿನಂತೆ ಅವರಿಗೆ ಪತ್ರ ಬರೆದು ಅವರ ಮನಸ್ಸನ್ನು ಒಲಿಸಬೇಕು; ಹಾಗು ಮತ್ತೆ ಅದರ ಪರಿಣಾಮವೆಂದು ಅವರ ಕರೆಯ ಮೇರೆಗೆ ತಾವು ದತ್ತವಿಧಾನಕ್ಕೆಂದು ತಮ್ಮ ಮನೆಯಿಂದ ಹೊರಬೀಳಬೇಕಾದಾಗ ಹೊಸಸ್ಥಿತಿಯು ಪ್ರಾಪ್ತವಾದೀತು; ಮತ್ತು ಆಗ ನಾನು ಮೊದಲಿನಂತೆ ಮಾರವಾಡಿಯಿಂದ ಐದುಸಾವಿರ ರೂಪಾಯಿ ತಂದು ತಮಗೆ ಕೊಟ್ಟೇನು; ಆದರೆ ಸದ್ಯಕ್ಕೆ ನಡೆದ ಪ್ರಯತ್ನವು ನಿಷ್ಫಲವಾಯಿತೆಂದು ಶರಾ ಬರೆದು ಬಿಡುವದೇ ಯೋಗ್ಯವೆಂದು ನನ್ನ ಅಭಿಪ್ರಾಯವಿರುತ್ತದೆ.

ದಿ:—ಛೀ, ಛೀ. ಸುಭೇದಾರರೇ, ನಿಮ್ಮಂತಹರಿಗೆ ಈ ಬಗೆಯ ನಿರಾಶೆಯು ಒಪ್ಪುವದಿಲ್ಲ. ನಿಮ್ಮಂಥ ಕೇವಲ ಧೈರ್ಯಸ್ಥರು ಹೀಗೆ ಹತಾಶರಾಗುವದೆಂದರೇನು?

ಸು:—ದಿವಾಣಸಾಹೇಬರೇ, ದೊಡ್ಡ ಆಶೆಯಿಂದಲೇ ನಾನು ಈ ಕೆಲಸಕ್ಕೆ ಪ್ರವೃತ್ತನಾಗಿದ್ದೆನು; ಮತ್ತು ಆ ಆಶೆಯಿಂದಲೇ ಪ್ರೊ. ನೋಟು ಬರಕೊಟ್ಟು ಐದು ಸಾವಿರಕ್ಕೆ ಮಾರವಾಡಿಯಲ್ಲಿ ನನ್ನ ಕೈಸಿಗಿಸಿಕೊಳ್ಳುವ ಧೈರ್ಯ ಮಾಡಿದ್ದೆನು; ಮತ್ತು ಮುಂದೆ ಅಂಥದೇ ಪ್ರಸಂಗ ಬಂದರೆ ಹಾಗು ಅಂತಹ ಆಶೆಯೇ ತೋರಿದರೆ, ಹಾಗೆಯೇ ಸಾಹಸ ಮಾಡಲಿಕ್ಕೆ ಹಿಂದೆಗೆಯಲಿಕ್ಕಿಲ್ಲ; ಆದರೆ ಇಂದಿಗೆ ದತ್ತವಿಧಾನವು ಕೇವಲ ಅನುಮಾನದ್ದಾಗಿ, ರೂಪಾಯಿಗಳು ಮಾತ್ರ ಹೋದವೆಂಬಂತಾಗಲಿಲ್ಲವೆ?

ದಿ:—ದತ್ತವಿಧಾನಕ್ಕೆ ಅನುಮಾನವೇಕೆ? ಬೇಕಾದರೆ ಮುಂದರಿಸಲ್ಪಟ್ಟಿತೆಂದೆನ್ನಿರಿ! ಮತ್ತು ರೂಪಾಯಿಗಳು ಹೋದವೆಂದೇಕೆನ್ನುತ್ತೀರಿ? ಅವು ತಮ್ಮ ಕೆಲಸ ಮಾಡಿದವೆಂತಲೇ ಅನ್ನಿರಿ. ಭಾವೂಸಾಹೇಬರಿಗೆ ನಾನೊಳ್ಳೇ ಗಟ್ಟಿಮುಟ್ಟಾದ ಪತ್ರ ಬರೆದೆನೆಂತಲೇ; ಪ್ರಭಾಕರನು ಹಿಂದಿರುಗಿ ಬಂದಿದ್ದರೂ ಅವರು ದತ್ತುಮಾಡಿಕೊಳ್ಳಲಿಕ್ಕೆ ಸಿದ್ಧರಾದರು. ನಿಮ್ಮಿಂದ ಹಣ ಬರುವ ಮೊದಲೇ ನಾನು ಅವರಿಗೆ ಹಾಗೆ ಪತ್ರಬರೆದಿದ್ದೆನಲ್ಲವೆ? ಮೊದಲು ಹಣವೆಣಿಸಿರಿ; ಆ ಮೇಲೆ ಬರೆಯುವೆನೆಂದು ನಾನು ಆಗ ನಿಮ್ಮನ್ನು ಕಾಡಬಹುದಾಗಿತ್ತು; ಆದರೆ ನಾನು ನಿಮ್ಮನ್ನು ಹಾಗೆ ಕಾಡಿದೆನೇನೆಂಬದನ್ನು ನೀವೇ ಹೇಳಿರಿ ನೋಡೋಣ? ನಾನು ಆಗ ಹಾಗೆ ನಿಮ್ಮ ಮೇಲೆ ವಿಶ್ವಾಸವಿಟ್ಟಿದ್ದೆನೋ ಇಲ್ಲವೊ? ಅಂದಮೇಲೆ ಈಗ ನೀವೂ ನನ್ನಲ್ಲಿ ಆ ಬಗೆಯ ವಿಶ್ವಾಸವನ್ನೇಕೆ ಇಡಬಾರದು? ಇನ್ನು ಮತ್ತೆ ಮೊದಲಿನಂತೆ ಪೊಲಿಟಿಕಲ್ ಏಜಂಟರ ಕಡೆಗೇನಾದರೂ ಕಂತ್ರಾಟ ನಡಿಸ

ಬೇಕಾದರೆ, ನಾನು ಮತ್ತೆ ನಿಮ್ಮ ಬಳಿಯಲ್ಲಿ ಐದು ಸಾವಿರ ರೂಪಾಯಿ ಕೇಳ ಲಿಕ್ಕಿಲ್ಲೆಂದು ಬೇಕಾದರೆ ನಿಮಗೆ ಆಶ್ವಾಸನವನ್ನೀಯುತ್ತೇನೆ; ಆದರೆ ಆ ಮೊದಲಿನ ಐದು ಸಹಸ್ರ ರೂಪಾಯಿಗಳ ಕೆಲಸವಾಗಲಿಲ್ಲ; ಅವುಗಳ ಪ್ರತಿಫಲವು ನಿಮಗೆ ದೊರೆಯುಲಿಲ್ಲವೆಂದು ನೀವು ಅದಾವ ಬಾಯಿಂದ ಅನ್ನುತ್ತಿರುವಿರಿ?

ಸು:—ದಿವಾಣಸಾಹೇಬರೇ, ತಿಳಿಯದವರ ಹಾಗೆ ಹೀಗೇಕೆ ಮಾತನಾಡು ತ್ತೀರಿ? ನಾನು ಯಾವಾಗಲೂ ತಮ್ಮ ಉಪಕಾರ ಸ್ಮರಿಸುವವನೇ; ಆದರೆ ಇಂದಿ ನಿಂದ ಹಣ ತಿರುಗಿ ಕೊಡುವ ಬಗ್ಗೆ ಮಾರವಾಡಿಯು ನನ್ನನ್ನು ಪೀಡಿಸತೊಡ ಗುವವನು. ದತ್ತವಿಧಾನವಾದ ಬಳಿಕ ಭಾವೂಸಾಹೇಬರ ಮನೆಯಲ್ಲಿ ನನ್ನ ಪ್ರವೇಶವಾಗಿ, ಇದಕ್ಕಲ್ಲ ಅದಕ್ಕೆಂದು ನೆವಮಾಡಿ, ನಾನು ಅವರಲ್ಲಿಯ ಐದು ಸಾವಿರ ರೂಪಾಯಿ ಎತ್ತಿಹಾಕಿ ಮಾರವಾಡಿಗೆ ಮುಟ್ಟಿಸೇನೆಂಬ ಆಶೆಯೊನಿ ಸಿದ್ದಿತು. ಅದು ಇಂದು ನಿಷ್ಫಲವಾಯಿತಲ್ಲವೇ? ನನ್ನ ಮನೆತನದ ಬಡತನವು ತಮಗೆ ಗೊತ್ತೇ ಇದೆ. ಆ ಐದುಸಾವಿರದ ಋಣ ತೀರಿಸಲಿಕ್ಕೆ ಅಷ್ಟು ಕೂದಲು ಗಳು ಕೂಡ ತಾಂಬ್ರದ ತಂಬಿಗೆಯಂತಹ ನನ್ನ ಬೋಳದಲೆಯ ಮೇಲಿಲ್ಲ. ಪ್ರೊ. ನೋಟಿಗೆ ಮುದ್ದತು ಇರುವದಿಲ್ಲ. ದತ್ತಕದ ಕೆಲಸವು ಮತ್ತೆ ಸಾಧಿಸಿದರೂ ಅದು ಪ್ರತ್ಯಕ್ಷವಾಗಿ ಆಗಲಿಕ್ಕೆ ಎಷ್ಟೋ ದಿವಸಗಳು ಬೇಕಾದಾವು! ಪ್ರಭಾಕರನು ಕೂಡಲೆ ಅಂದಮಾನಕ್ಕೆ ಕಳಿಸಲ್ಪಡುವನೆಂಬದನ್ನು ನಿಜವೆಂದು ತಿಳಿದರೂ, ಪ್ರತ್ಯಕ್ಷ ದತ್ತವಿಧಾನವಾಗಲಿಕ್ಕೆ ಎಷ್ಟು ದಿನಗಳು ಹಿಡಿದಾವೆಂಬದನ್ನು ಅದಾರು ಹೇಳ ಬೇಕು? ಮತ್ತು ಅದಕ್ಕೆ ಮೊದಲೇ ಮಾರವಾಡಿಯು ಹಣದ ತಗಾದಿ ಕೊಟ್ಟರೆ ನನ್ನ ಗತಿಯೇನಾಗಬೇಕು? ಇನ್ನು ಒಂದು ವೇಳೆ ತಾವನ್ನುವಂತೆ ಹದಿನೈದೇ ದಿನಗಳಲ್ಲಿ ಪ್ರಭಾಕರನು ಅಂದಮಾನದ ದಾರಿ ಹಿಡಿದನೆಂದು ಕಲ್ಪಿಸಿದರೂ, ಭಾವೂ ಸಾಹೇಬರ ಜೀವಿತದ ಶಾಶ್ವತೆಯನ್ನು ಅದೆಂತು ಹೇಳಬೇಕು? ಇಷ್ಟು ದಿನಗಳ ತರುವಾಯದಲ್ಲಿ ತಮ್ಮ ಮಗನ ಮುಖವನ್ನು ಕಂಡ ಆ ಮುದುಕರು ಇನ್ನು ಮೇಲೆ ನಾನು ದತ್ತಕವನ್ನೇ ಮಾಡಿಕೊಳ್ಳುವದಿಲ್ಲೆಂದರೆ ಮುಂದೇನು ಗತಿ! ಇಷ್ಟರಲ್ಲೇ ಅವರು ಗತಿಸಿದರಂತೂ ಮಾತೇ ಎತ್ತುವಂತಿಲ್ಲ. ಅವರ ಹೆಂಡತಿ ಯು ಕೇವಲ ಅವರ ಆ ಹೊಯ್ಯಾಲೆಯಾದ ಮಗಳ ಕೈಗೊಂಬೆಯು! ಅವಳೇನು ದತ್ತಕ ಮಾಡಿಗೊಡುವಳು? ರಾಶಿಚಕ್ರವು ಒಮ್ಮೆ ಒಂದು ಮನೆಯನ್ನು ಬಿಟ್ಟಿ ತೆಂದರೆ, ಮನುಷ್ಯನ ಗ್ರಹಗಳ ಎಲ್ಲ ಸ್ಥಾನಗಳೂ ಬದಲಾಗುತ್ತವೆ; ಇಲ್ಲವೆ ಚದುರಂಗದೊಳಗಿನ ಯಾವುದೊಂದು ಮುಖ್ಯ ಚದುರಂಗವು ಅಕಲ್ಪಿತವಾಗಿ ಮುಂದಾಯಿತೆಂದರೆ, ಆ ಆಟದೊಳಗಿನ ಮೊದಲಿನ ಎಲ್ಲ ಬಲಾಬಲಗಳೂ ನಿರುಪ ಯುಕ್ತಗಳಾಗಿ, ಇಡೀ ಆಟದಲ್ಲಿ ಹೊಸ ಘಟನೆಯು ಹೇಗಾಗುವದೋ, ಹಾಗೆಯೇ

ಈ ದತ್ತಕ ಪ್ರಕರಣವಾಗುವದೆಂದು ನನ್ನ ಮನಸ್ಸು ನನಗೆ ಹೇಳುತ್ತದೆ. ಆದ್ದರಿಂದಲೇ ದಯವಿಟ್ಟು ಇನ್ನೂ ತಮ್ಮ ಪೆಟ್ಟಿಗೆಯಲ್ಲೇ ಇರುವ ಆ ನನ್ನ ಐದು ಸಾವಿರ ರೂಪಾಯಿಗಳನ್ನು ನನಗೆ ತಿರುಗಿ ಕೊಟ್ಟು ಬಿಡಬೇಕೆಂಬದಿಷ್ಟೇ ತಮ್ಮ ಅಡಿದಾವರೆಗಳಲ್ಲಿ ನನ್ನ ಬೇಡಿಕೆಯು.

ದಿ:—ಸುಭೇದಾರರೇ, ನಿಮ್ಮಂತಹ ಜನರಿಗೆ ತಮ್ಮ ಸ್ವಾರ್ಥವಷ್ಟೇ ಕಾಣಿಸುತ್ತದೆ. ಬೇರೆಯವರು ನಿಮ್ಮ ಸಲುವಾಗಿ ಅದೇನು ಕಷ್ಟ ವಹಿಸಿದರೆಂಬದು ತೋರುವದಿಲ್ಲ. ನೀವು ನನಗೆ ತಂದು ಕೊಟ್ಟ ರೂಪಾಯಿಗಳು ಅವು ನನ್ನ ಕಡೆಗೆ ಬರುವ ಮೊದಲೇ ಎತ್ತೆತ್ತ ದಾರಿ ಹಿಡಿದಿದ್ದವೆಂಬದು ನಿಮಗೇನು ಗೊತ್ತಿದೆ? ಮೊದಲು ಅಷ್ಟು ರೂಪಾಯಿಗಳನ್ನು ನಾನೇ ನನ್ನ ತಿಜೋರಿಯಿಂದ ತೆಗೆದು ನಿಮ್ಮ ಕೆಲಸಕ್ಕೆಂದು ಪೋಲಿಟಿಕಲ್ ಏಜಂಟ ಸಾಹೇಬರ ವರೆಗೆ ಹೇಗೆ ಹೇಗೆ ಖರ್ಚು ಮಾಡಬೇಕಾಯಿತೆಂಬದು ನಿಮಗೆ ಗೊತ್ತಿದೆಯೋ? ಗುಪ್ತ ದರಬಾರ ಖರ್ಚಿನ ರೀತಿಯು ನಿಮಗೆ ಹೇಗೆ ಗೊತ್ತಿರಬೇಕು? ಇಷ್ಟೇ ಅಲ್ಲ, ಮಾರವಾಡಿಯು ಹಣ ತಂದು ಕೊಟ್ಟಾಗ ಆತನಿಗೆ ಎರಡುವರ್ಷಗಳ ಮುಂಗಡದ ಬಡ್ಡಿ ಹಾಗು ವ್ಯವಹಾರದ ಕಮಿಶನ್ ಇವುಗಳನ್ನು ನಾನೇ ನನ್ನ ಕೈಯಿಂದ ಕೊಟ್ಟಿರುತ್ತೇನೆಂಬದು ನಿಮಗೆಲ್ಲಿ ತಿಳಿದಿದೆ? ಅವುಗಳನ್ನು ನನಗಾರು ತಿರುಗಿ ಕೊಡುವವರು? ಮತ್ತು ನೀವೀಗ ನಿಮ್ಮ ಪೂರಾ ಐದು ಸಾವಿರಗಳನ್ನು ತಿರುಗಿ ಬೇಡುತ್ತಿರುವಾಗ ಸ್ವಲ್ಪಾದರೂ ಯೋಚಿಸಿರುತ್ತೀರೇನು? ಅಲ್ಲದೆ ನನ್ನ ಪದವಿಯ ಹಾಗು ಅಧಿಕಾರಗಳ ಉಪಯೋಗವನ್ನು ನಾನು ನಿಮ್ಮ ಸಲುವಾಗಿ ಮಾಡಿರುತ್ತೇನೆ! ನಿಮ್ಮ ಮಗನು ಭಾವೂಸಾಹೇಬರಿಗೆ ದತ್ತಕಾಗವಿದ್ದರೆ ನನ್ನದೇನು ಕೆಡಬೇಕಾಗಿತ್ತು? ಮಿತ್ರಕಾರ್ಯಕ್ಕಾದರೂ ಮರ್ಯಾದೆಯಿದೆಯೋ ಇಲ್ಲವೋ? ನಾನು ಸಂಸ್ಥಾನದ ಕಚೇರಿಯೊಳಗಿನ ಕಾಗದ-ಪತ್ರಗಳನ್ನು ನಿಮಗನುಕೂಲವಾಗುವ ಹಾಗೆ ಸಿದ್ಧಪಡಿಸಿದೆನು; ಭಾವೂಸಾಹೇಬರಿಗೆ ಸ್ವದಸ್ತೂರದ ಪತ್ರಬರೆದೆನು. ನಾನು ಇವನ್ನೆಲ್ಲ ನಿಮ್ಮ ಚಾಕರನೆಂದು ಮಾಡಿದೆನೇನು? ಮತ್ತು ದತ್ತವಿಧಾನವು ಸಾಂಗವಾಗಿದ್ದರೆ ಹಾಗು ಭಾವೂಸಾಹೇಬರ ಸಂಪತ್ತಿಯಲ್ಲಿ ನಿಮ್ಮ ಬಾಜೀರಾಯನೂ ನೀವೂ ಮೊಳಕೈವರೆಗೆ ಕೈಸೇರಿಸಿಕೊಂಡು ಕುಳಿತಿದ್ದರೆ, ಇನ್ನು ಮುಂದಾದರೂ ಸೇರಿಸಿದರೆ, ನೀವು ಅದರೊಳಗಿನದೇನನ್ನು ನನಗೆ ತೆಗೆದುಕೊಡುವವರು? ತಾತ್ಪರ್ಯವೇನಂದರೆ, ಆ ಹಣವನ್ನು ತಿರುಗಿ ಕೇಳುವ ಉದ್ಯೋಗಕ್ಕೆ ನೀವಿನ್ನು ತೊಡಗದಿರುಗುವದೇ ವಿಹಿತವು. ರಹಿತವಾದ ದತ್ತಕವನ್ನು ಮತ್ತೆ ಕೂಡಿಸಿಕೊಡಲಿಕ್ಕೆ ಇನ್ನು ಮುಂದೆ ನಾವೆಲ್ಲರೂ ಯಾವ ಶ್ರಮವಹಿಸಬೇಕಾಗುವದೋ, ಅವುಗಳನ್ನೆಲ್ಲ ನಾವು ನಿಮಗಾಗಿ ಬಿಟ್ಟಿಯಾಗಿಯೇ ಮಾಡುತ್ತೇವೆ. ಅದಿರಲಿ. ನಾವೂ ನೀವೂ

ಕೂಡಿಯೋ ಇನ್ನು ಪ್ರಭಾಕರನ ಕಡೆಗೆ ಹೊರಳಬೇಕು. ಇಗೋ ನೋಡಿರಿ, ನಾನು ಪ್ರಭಾಕರನನ್ನು ಪ್ರತಿಬಂಧಿಸುವ ಅಪ್ಪಣೆ ಪಡೆಯುವ ಸಲುವಾಗಿ ಯಜಮಾನರ ಕಡೆಗೆ ಹೋಗುತ್ತೇನೆ. ಅಪ್ಪಣೆಯೆಂದರೇನು? ಸುಮ್ಮನೆ ಅವರ ಕಿವಿಯ ಮೇಲೆ ಹಾಕುವದಿಷ್ಟೆ! ಆತನನ್ನು ಪ್ರತಿಬಂಧಿಸುವ ಅಧಿಕಾರವೆಲ್ಲ ನನ್ನ ಕಡೆಗೇ ಇದೆ.

ದಿವಾಣಸಾಹೇಬರು ಈ ಬಗೆಯಾಗಿ ಆ ಐದುಸಾವಿರದ ಬಗ್ಗೆ ಹೈಕೋರ್ಟಿನ ತೀರ್ಪಿನಂತೆ ನಿವೇದಿಸಿಬಿಟ್ಟರು; ಆದರೂ ಮತ್ತೊಮ್ಮೆ ಪ್ರಯತ್ನಿಸಿ ನೋಡಬೇಕೆಂದು ಸುಭೇದಾರರು:—ದಿವಾಣಸಾಹೇಬರೇ, ನೀವು ಹೀಗೇಕೆ ಅನ್ನುತ್ತಿರುವಿರಿ? ದತ್ತಕ ವಿಧಾನವು ಪೂರ್ತಿಗೊಂಡು ಅದರ ದಾಖಲೆಯು ಸಂಸ್ಥಾನೀ ಕಚೇರಿಯಲ್ಲಿ ರೆಜಿಸ್ಟರಾದ ಮೇಲೆಯೇ ಆ ಹಣವನ್ನು ತಮಗೆ ಕೊಡಬೇಕೆಂದು ಮೊಟ್ಟಮೊದಲಿನ ಕರಾರಿತ್ತು; ಆದರೆ ತಾವು ನಡುವೇ ತಡೆದು ನಿಂತಿರಿ; ಕೈಕಾಲು ಅಲ್ಲಾಡಿಸದಾದಿರಿ; ಅಂತೆಯೇ ನಾನು ಅವುಗಳನ್ನು ಮುಂಗಡವಾಗಿ ಕೊಟ್ಟುಬಿಟ್ಟೆನು. ಅದು ನನ್ನ ದೊಡ್ಡ ತಪ್ಪೇ ಆಯಿತೆನ್ನಬೇಕು! ನಾನು ಬಡವನೆಂದು ತಾವು ನನ್ನಲ್ಲಿ ಅವಿಶ್ವಾಸ ತಾಳಬೇಕು; ಮತ್ತು ನಾನು ಇಷ್ಟು ಗಂಟು ಕೊಟ್ಟು ತಮ್ಮಲ್ಲಿ ವಿಶ್ವಾಸ ತಾಳಿದ್ದನ್ನು ತಾವು ಘಾತಪಡಿಸಬೇಕು, ಇದು ಯೋಗ್ಯವೇ?

ಸುಭೇದಾರರು ಕೆದರಿ ಕೆದರಿ ತೆಗೆದ ಈ ಪ್ರಶ್ನೆಯು ದಿವಾಣಸಾಹೇಬರಿಗೆ ಬಹು ಪ್ರತಿಕೂಲವೆನಿಸಿತು. "ಇನ್ನು ಹವಿನೈದೇ ದಿನಗಳಲ್ಲಿ ನಿಮ್ಮ ದತ್ತವಿಧಾನದ ಯೋಗವನ್ನು ಮತ್ತೆ ಕೂಡಿಸಿಕೊಡುವೆನೆ"ಂದು ಅವರು ಬಾಯಿಂದ ಗಟ್ಟಿಗಟ್ಟಿಯಾಗಿ ಹೇಳುತ್ತಿದ್ದರೂ, ಒದಲಾದ ಪರಿಸ್ಥಿತಿಯಲ್ಲಿ ಅದೆಷ್ಟು ಅಶಕ್ಯವಾಗಿದೆಯೆಂಬದು ಮನಸ್ಸಿನಲ್ಲಿ ಅವರದು ಅವರಿಗೆ ಗೊತ್ತೇ ಆಗಿತ್ತು. ಅದರಿಂದ ಮೈಗೆ ಅಡರುವ ಈ ಉಪಾಧಿಯನ್ನು ಹೇಗೆ ಕೊಡವಬೇಕೆಂಬದರ ನಿಶ್ಚಯವನ್ನು ಅವರು ಮಾಡಿದರು; ಮತ್ತು ತೀಕ್ಷ್ಣ ಅಸ್ತ್ರವನ್ನು ಯಾರ ಮೇಲಾದರೂ ಉಪಯೋಗಿಸಬೇಕಾದರೆ ಅದಕ್ಕೆ ಮೊದಲು ಅಷ್ಟು ತೀವ್ರ ಕೋಪದ ಮುದ್ರೆಯನ್ನೇ ತಾಳಬೇಕಾದ್ದರಿಂದ, ದಿವಾಣಸಾಹೇಬರು ಒಮ್ಮೆಲೆ ಸಿಟ್ಟಿನಿಂದ ಉರಿಯಹತ್ತಿ, ಆರಾಮ ಖುರ್ಚಿಯಿಂದೆದ್ದು ಆ ತಮ್ಮ ಅಟ್ಟದ ಮೇಲೆ ಇತ್ತಿಂದತ್ತ-ಅತ್ತಿಂದಿತ್ತ ಒತ್ತರದಿಂದ ಪದಚಾಲನೆ ಮಾಡತೊಡಗಿದರು; ಹಾಗು ಸ್ವಲ್ಪಾವಧಿಯಲ್ಲೇ ಸುಭೇದಾರರ ಮೈಮೇಲೇರಿ ಹೋಗಿ: "ಏನಂದಿರಿ? ನಾನು ನಿಮ್ಮ ವಿಶ್ವಾಸ ಘಾತಮಾಡಿದೆನಲ್ಲವೆ? ನಿಮ್ಮಂತಹರ ರೀತಿ-ರಿವಾಜುಗಳು ನಮಗೆ ಚೆನ್ನಾಗಿ ಗೊತ್ತಿರುತ್ತವೆ. ಅಂತೆಯೇ ನಾವು ಹೀಗೆ ಮುಂಜಾಗ್ರತೆ ವಹಿಸಬೇಕಾಗುತ್ತದೆ. ದತ್ತಕವು ನಿರ್ವಿಘ್ನದಿಂದಾಗಿ, ಭಾವೂಸಾಹೇಬರ ನಂಬಿಗೆ ಪಡೆದು,

ಅವರ ತಿಜೋರಿಯ ಕೀಲೀ ಕೈಗಳನ್ನು ಸಂಪಾದಿಸಿ, ಅವರ ದುಡ್ಡನ್ನು ನೀವು ನುಂಗುತ್ತಿದ್ದರೆ, ನೀವು ಆ ಮೇಲೆ ಒಳ್ಳೇ ಒನಪಿನಿಂದ ಮೋರೆ ತಪ್ಪಿಸಿ ನನ್ನ ಕೈಗೆ ಸಿಗದಾಗುತ್ತಿದ್ದಿಲ್ಲವಲ್ಲವೆ? ನನಗಿದು ಚೆನ್ನಾಗಿ ಗೊತ್ತಿದೆಯೆಂದೇ ನಾನು ಮುಂಗಡವಾಗಿ ನಿಮ್ಮಿಂದ ಹಣ ವಸೂಲ ಮಾಡಿಕೊಂಡೆನು. ಈ ಕೆಲಸವು ಸೂಕ್ಷ್ಮವೂ ಗುಪ್ತವೂ ಆದದ್ದು. ಗೊತ್ತಾದ ಹಣದ ಬಗ್ಗೆ ನಾನಾಗಲಿ, ಏಜಂಟರ ಶಿರಸ್ತೇದಾರರಾಗಲಿ ನಿಮ್ಮ ಮೇಲೆ ಫಿರ್ಯಾದು ಮಾಡಬರುತ್ತಿತ್ತೇ? ವಕೀಲನೂ ವಕೀಲ ಪತ್ರದ ಬಕ್ಷೀಸಿನ ಹಣದ ಫಿರ್ಯಾದು ಮಾಡುವದು ವಿಪರೀತವಾಗಿ ತೋರುತ್ತದೆ. ಅಂದಬಳಿಕ ನಾವಂತೂ ಹೇಳಿ ಕೇಳಿ ವರಿಷ್ಠ ಅಧಿಕಾರಿಗಳು. ಇನ್ನು ನೀವು ಕೊಟ್ಟ ಹಣವಾದರೂ ಮಾರವಾಡಿಯದೇ ಅಲ್ಲವೆ? ನೀವು ನಿಮ್ಮ ಮನೆಯಿಂದ ಬೇರೆ ತಂದು ಕೊಟ್ಟಿಲ್ಲವಲ್ಲ! ಒಂದುವೇಳೆ ಮನೆಯಿಂದ ತಂದೆವೆಂದು ನೀವೆಂದರೆ, ನಿಮ್ಮ ಮನೆಯ ಮೇಲೆ ಐದುಸಾವಿರ ಹಂಚುಗಳಾದರೂ ಇವೆಯೇನು? ಮಾರವಾಡಿಯು ಹಣ ಬೇಡಿದಾಗ ನಿಮ್ಮ ಬಗಲುಗಳು ಎತ್ತಿದವೇ ಇರುತ್ತವೆ! ಅವನು ನಿಮ್ಮದು ತಕ್ಕೊಳ್ಳುವದಾದರೂ ಏನು? ದಿವಾಣೀ ತುರಂಗಕ್ಕೆ ಕಳಿಸಲೆತ್ನಿಸಬೇಕಾದರೆ ನಿಮ್ಮ ಹೊಟ್ಟೆಯ ಖರ್ಚನ್ನು ಕೂಡ ತಾನೇ ವಹಿಸಬೇಕಾಗುವದು. ಇಲ್ಲವಿದ್ದರೆ ನೀವು ನಾದಾರನೆಂದು ಅರ್ಜಿ ಬರೆಕೊಂಡರೆ ತೀರಿತು. ಅದಕ್ಕೂ ನಿಮ್ಮ ಸಿದ್ಧತೆಯೇ ಇದೆ. ಇದುವರೆಗೆ ನಿಮಗಾಗಿ ಗಂಟು ಕಳಕೊಂಡವರು ಸ್ವಲ್ಪ ಜನರಿರುವರೇ? ದತ್ತವಿಧಾನದಿಂದ ದೊರೆಯಬಹುದಾದ ದೊಡ್ಡ ಆಸ್ತಿಯು ನಿಮ್ಮ ಕಣ್ಣಿಗೆ ತೋರುತ್ತಿತ್ತೆಂದು ನೀವು ನನ್ನ ಮನೆಗೆ ಎಡತಾಕುತ್ತಿದ್ದಿರಿ. ಅದಿಲ್ಲವಿದ್ದರೆ ನಿಮ್ಮಂತಹರಿಗೆ ನನ್ನಲ್ಲಿ ಕೆಲಸವೇನು? ನಿಮಗೆ ಹೇಳತಕ್ಕದ್ದನ್ನೆಲ್ಲ ಹೇಳಿ ಬಿಟ್ಟಿದ್ದೇನೆ. ಇನ್ನು ನಿಮ್ಮ ಹಣ ನಿಮಗೆ ತಿರುಗಿ ದೊರೆಯಲಾರದು. ನಿಮಗೆ ಸರಿದೋರಿದಂತೆ ನೀವು ಮಾಡಬಹುದು.

ದಿವಾಣಸಾಹೇಬರು ಮಾಡಿದ ಈ ಮಾನಹಾನಿಯಿಂದ ಸುಭೇದಾರನಿಗೆ ಬಹು ಕೆಡಕೆನಿಸಿತು; ಆದರೆ ಆ ಬಡವನು ಮಾಡುವದೇನು? ಆಗ ಆತನು ದವಡೆ ಕಚ್ಚುತ್ತ:— ದಿವಾಣಸಾಹೇಬರೇ, ತಾವು ಇದನ್ನು ಇಷ್ಟು ದೂರ ಒಯ್ದೀರೆಂದು ನನಗನಿಸಿರಲಿಲ್ಲ. ಆಗಲಿ. ತಮ್ಮ ಇಚ್ಛೆ! ಆದರೆ ಇದರ ಪರಿಣಾಮವು ಮಾತ್ರ ನೆಟ್ಟಗಾಗಲಿಕ್ಕಿಲ್ಲೆಂದು ಹೇಳಿಡುತ್ತೇನೆ.

ಇಂಥ ಧಮಕಿಯೆಂದರೆ, ಯುದ್ಧದ ಆಹ್ವಾನವೇ ಅದು! ಸುಭೇದಾರನನ್ನು ತುಚ್ಛೀಕರಿಸಿ ಹೊರಗಟ್ಟಲಿಕ್ಕೆ ದಿವಾಣಸಾಹೇಬರಿಗೆ ಆ ಸಂಧಿಯು ತಾನಾಗಿಯೇ ದೊರೆತಂತಾಯಿತು. ಅದೇ ನೆವ ಮಾಡಿಕೊಂಡು ದಿವಾಣರು ಗರ್ಜಿಸುತ್ತ:

ಒಳ್ಳೇದು! ನೋಡಿಕೊಳ್ಳೋಣವಂತೆ ಪರಿಣಾಮವೇನಾಗುತ್ತದೆಂಬದನ್ನು! ನನ್ನಂಥವನಿಗೆ ಧಮಕಿ ಕೊಡಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ? ಮೊದಲು ನನ್ನ ಮನೆಯಿಂದ ಹೊರಬಿದ್ದು ಹೋಗಿರಿ! ಸುಮ್ಮನೆ ಹೋಗದಿದ್ದರೆ, ಹೊರ ದಬ್ಬಲಿಕ್ಕೆ ನಾನು ನಮ್ಮ ಪಹರೆಯವನನ್ನು ಕರೆಯಬೇಕಾದೀತು?

ಬಡ ಪಾಯಿ ಸುಭೇದಾರನು ಅಲ್ಲಿಂದೆದ್ದು ಮೆಟ್ಟಿಲುಗಳನ್ನಿಳಿದು ನೆಟ್ಟಗೆ ಮನೆಯ ದಾರೀ ಹಿಡಿದನು!

೦೦೦ ೦೦೦ ೦೦೦ ೦೦೦

ಸುಭೇದಾರನು ಹೊರಟು ಹೋದ ಕೂಡಲೆ ದಿವಾಣನು ಬೇರೆ ಪೋಷಾಕು ಧರಿಸಿ ಜೋಜಿಗಮಹಾರಾಜರ ಭೆಟ್ಟಿಗೆ ನಡೆದನು. ದಿವಾಣಸಾಹೇಬರು ಅಟ್ಟ ವನ್ನೇರಿ ಬಂದ ಕೂಡಲೆ ಜೋಜಿಗಮಹಾರಾಜನೇ ಅವರಿಗೆ ಮೊದಲು ನಮ ಸ್ಕಾರ ಮಾಡಿದನು. ಆಗ ದಿವಾಣರೂ ಬೊಗ್ಗಿ ಬೊಗ್ಗಿ ನಮಿಸಿದರು.

ಯಜಮಾನರು ಪಕ್ಕದ ಕುರ್ಚಿಯ ಕಡೆಗೆ ಬೊಟ್ಟು ತೋರಿಸಿ ಕೂಡ್ರ ಲಿಕ್ಕೆ ಹೇಳಿದ ಮೇಲೆ ಎಲ್ಲರೂ ಕುಳಿತುಕೊಂಡರು. ದಿವಾಣಸಾಹೇಬರು ಮಹಾರಾಜರಿಂದ ನಾಲ್ಕಾರು ಮೊಳ ದೂರದಲ್ಲಿ ಕುಳಿತಿದ್ದರೂ, ದರ್ಬಾರೀ ಪದ್ಧತಿಯ ಮೇರೆಗೆ ಮೋರೆಗೆ ದೋತರದ ಸೆರಗು ಹಚ್ಚಿ ಒಳ್ಳೇ ನಮ್ರವಾಣಿ ಯಿಂದ ಮೆಲ್ಲನೆ:—"ಇಂದು ಪಟ್ಟಣದಲ್ಲೊಂದು ಚಮತ್ಕಾರದ ಸಂಗತಿಯು ಘಟಿಸಿರುತ್ತದೆ. ಅದನ್ನು ಮಹಾರಾಜರಿಗೆ ತಿಳಿಸಿ, ಹುಕುಮು ಪಡೆಯುವ ಸಲು ವಾಗಿ ಈಗ ಮುದ್ದಾಮ ಬಂದು ಮಹಾರಾಜರಿಗೆ ತೊಂದರೆ ಕೊಡಬೇಕಾಯಿತು."

ಜೋ: - ಅಂದಬಳಿಕ ಇದರಲ್ಲೇನು ತೊಂದರೆಯು? ಅಂಥ ಜರೂರಿಯ ಕೆಲಸವಿದ್ದೀತೆಂದೇ ಹೇಳ-ಕೇಳಲಿಕ್ಕೆ ಒಂದಿರುತ್ತೀರಿ. ಮನೋಹರಪಂತರೇ, ದಿವಾಣಸಾಹೇಬರು ಏನು ಹೇಳುತ್ತಾರೆಂಬದನ್ನು ಚೆನ್ನಾಗಿ ಕೇಳಿ ತಿಳಿದುಕೊಳ್ಳಿರಿ. ಹೀಗೆಂದು ನುಡಿದು, ಮಹಾರಾಜರು ದಿವಾಣಸಾಹೇಬ-ಪ್ರಾಯವ್ಹೇಟ ಸೆಕ್ರೆಟರಿ ಸಾಹೇಬ ಇವರ ತಳಕು ಹಾಕಿ, ದಿವಾಣಸಾಹೇಬರು ಮುಂದೇನು ಹೇಳು ವರೋ ಎಂಬದನ್ನು ಕೇಳಿಕೊಳ್ಳುವದಕ್ಕೆಂದು ಏನೂ ಅರಿಯದವರ ಹಾಗೆ ಕುಳಿತರು.

ದಿ:—ಎಷ್ಟೋ ವರ್ಷಗಳ ಮುಂಚೆ ಭಯಂಕರ ಗುನ್ಹೆಗಳನ್ನು ಮಾಡಿ ಫರಾರಿಯಾಗಿದ್ದ ಗುನ್ಹೆಗಾರನೊಬ್ಬನು ಇಂದು ಈ ರಾಜಧಾನಿಯಲ್ಲಿ ಪ್ರಕಟ ವಾಗಿರುತ್ತಾನೆ. ಆತನ ಗೈರಹಾಜರಿಯಲ್ಲಿ ಆತನ ಅಪರಾಧಗಳ ವಿಚಾರಣೆಯಾಗಿ ಆತನಿಗೆ ಶಿಕ್ಷೆ ಕೂಡ ವಿಧಿಸಲ್ಪಟ್ಟಿದೆ; ಆದರೆ ಆತನು ಆಗ ಓಡಿಹೋಗಿದ್ದ ನಾದ್ದರಿಂದ ಅವನನ್ನು ಸೆರೆಮನೆಗೆ ಕಳಿಸುವದಾಗಿರಲಿಲ್ಲ.

ಮನೋಹರ:—ಹಾಗಾದರೆ ಈಗ ಆತನ ಬಗ್ಗೆ ಏನು ಮಾಡುವದನ್ನು ಯೋಜಿಸಿರುತ್ತೀರಿ?

ದಿ:—ಕೂಡಲೆ ಆತನನ್ನು ಪ್ರತಿಬಂಧಿಸಿ ಸೆರೆಮನೆಗೆ ಕಳಿಸಬೇಕು. ಇದಕ್ಕೆ ಮಹಾರಾಜರ ಅಪ್ಪಣೆ....

ಮ:—ಛೇ, ಛೇ. ಇದಕ್ಕೆ ಮಹಾರಾಜರ ಅಪ್ಪಣೆಯು ಅವಶ್ಯಕತೆಯೇಕೆ? ತಾವು ಫರ್ಸ್ಟ ಕ್ಲಾಸ ಮ್ಯಾಜಿಸ್ಟ್ರೇಟರೇ ಆಗಿರುತ್ತೀರಿ. ಗುಹ್ನೆಗಾರನನ್ನು ಹಿಡ ತರಲಿಕ್ಕೆ ಕೊತವಾಲನಿಗೆ ಹುಕುಮು ಕಳಿಸಿಬಿಡಿರಿ; ಆದರೆ ಆ ಗುಹ್ನೆಗಾರನು ತುಸ ಭಯಂಕರ ತೋರುವನಲ್ಲವೆ? ಅಂದಬಳಿಕ ಆತನ ಕೈಕಾಲುಗಳಿಗೆ ಬೇಡಿ ಹಾಕಿಸಿದರೂ ಅಡ್ಡಿಯಿಲ್ಲ. ನೀವು ಆತನನ್ನು ಪ್ರತಿಬಂಧಿಸಿಡುವದೆಲ್ಲಿ?

ದಿ: - ಪೋಲೀಸ ಹೆಡ್‌ಕ್ವಾರ್ಟರಿನೊಳಗಿನ ಕಚ್ಚಾ ಕೈದಿಗಳ ಕೊಠಡಿಗಳಲ್ಲಿ.

ಮ:—ಛೇ, ಛೇ. ಹಾಗೆ ಮಾಡಬೇಡಿರಿ. ಆತನ ಸಹಕಾರಿಗಳಾದ ಕೆಲ ಜನರು ಈ ಊರಲ್ಲೇ ಇರುತ್ತಾರೆಂಬದು ನಿಮಗೆ ಗೊತ್ತೇ ಇದೆ. ಅಂದ ಮೇಲೆ ಅವರು ರಾತ್ರಿಯಲ್ಲಿ ನುಗ್ಗಿ ಅವನನ್ನು ಓಡಿಸಿದರೂ ಓಡಿಸಬಹುದಾಗಿದೆ.

ದಿ:—ಹಾಗಾದರೆ ಆತನನ್ನೆಲ್ಲಿಡಬೇಕು?

ಮ:—ನಾವು ಕುಳಿತಿರುವ ಈ ದಿವಾಣಖಾನೆಯ ಎದುರಿಗಿನ ಕುದುರೆಯ ಲಾಯದಲ್ಲಿ ಕಡೇಪಾಟಿನ ಬಂದೋಬಸ್ತದ ಕೋಣೆಯೊಂದಿದೆ. ಅದರಲ್ಲಿ ಆತನನ್ನಿ ರಿಸಬೇಕು; ಯಾಕಂದರೆ, ಪೋಲೀಸ ಹೆಡ್ ಕ್ವಾರ್ಟರ್ಸಿಗಿಂತಲೂ ಇಲ್ಲಿ ಕಾವಲು ಗಾರರ ಸಂಖ್ಯೆಯು ಹೆಚ್ಚಿರುತ್ತದೆ; ಅಲ್ಲದೆ ಸಮೀಪದಲ್ಲೇ ಅರಮನೆಯ ಕಾವಲು ಗಾರರೂ ಇರುತ್ತಾರೆ. ಪ್ರಸಂಗ ಬಿದ್ದರೆ, ಭರದಿಂದ ಓಡಿಹೋಗಲಿಕ್ಕೆ ದುಡು ಕಿನ ಸವಾರರು ಇದ್ದೇ ಇರುತ್ತಾರೆ; ಮತ್ತು ಅರಮನೆಯ ನಗಾರಖಾನೆಯ ಕೆಳಗೆ ಗುಂಡು-ಮದ್ದುಗಳ ಸಂಗ್ರಹವೂ ಇದೆ.

ಈ ಸ್ಥಳವು ಪ್ರಭಾಕರನನ್ನಿಡಲಿಕ್ಕೆ ದಿವಾಣಸಾಹೇಬರಿಗೆ ಸಮ್ಮತವಾಗ ಲಿಲ್ಲ; ಯಾಕಂದರೆ, ಆತನು ಸೆರೆಮನೆಯಲ್ಲಿರುವಾಗ ಆತನನ್ನು ಪೀಡಿಸಲಿಕ್ಕೆ ಪೋಲೀಸ ಕಚೇರಿಯ ಸ್ಥಳವೇ ತಕ್ಕದ್ದಾಗಿತ್ತು; ಅಲ್ಲಿ ಆತನು ಒದರಾಡ-ಚೀ ರಾಡ ಹತ್ತಿದರೂ ಅದು ಬೇರೆಯವರಿಗೆ ಕೇಳಿಸದು. ರಾತ್ರಿ ಅಪರಾತ್ರಿಗಳಲ್ಲಿ ಕೂಡ ದಿವಾಣಸಾಹೇಬರ ಹಸ್ತಕರಿಗೆ ಸಹಜವಾಗಿ ಪ್ರವೇಶದೊರೆಯುವ ಸ್ಥಳವು ಅದಾಗಿತ್ತು; ಆದರೆ ಮನೋಹರನು ಹೇಳಿದ ಅನುಕೂಲತೆಗಳನ್ನು ದಿವಾಣಸಾಹೇ ಬರು ಸ್ಪಷ್ಟವಾಗಿ ಅಲ್ಲಗಳೆಯುವಂತಿರಲಿಲ್ಲ. ಆದರಿಂದ ಮನಸ್ಸಿನಲ್ಲಿ ತೃಪ್ತಿ ಯಿರದಿದ್ದರೂ ಅರಮನೆಯ ಬಳಿಯ ಸ್ಥಳವನ್ನೇ ಆತನ ಪ್ರತಿಬಂಧಕ್ಕೆಂದು ಅವರು ಸಮ್ಮತಿಸಬೇಕಾಯಿತು. "ಬಂದಿಯನ್ನು ಪೀಡಿಸಲಿಕ್ಕೆ ಹೆಚ್ಚು ಅನುಕೂಲ

ವಾದ ಸ್ಥಳ''ಕ್ಕಿಂತಲೂ ''ಸಂರಕ್ಷಣಕ್ಕಾಗಿ ಸರಕಾರಕ್ಕೆ ಹೆಚ್ಚು ಅನುಕೂಲವಾದ ಸ್ಥಳ''ವೆಂದು ಅದಕ್ಕೆ ಸಹಜವಾಗಿಯೇ ಮಹತ್ವ ಬಂದಿತು.

ಮ:—ಒಳ್ಳೇದು. ದಿವಾಣಸಾಹೇಬರೇ, ಆ ಗುಹ್ನೆಗಾರನನ್ನು ಪ್ರತಿಬಂಧಿಸಿದ ಬಳಿಕ ಮುಂದೇನು ಮಾಡುವದನ್ನು ಯೋಚಿಸಿರುತ್ತೀರಿ?

ದಿ:—ಮುಂದಿನ ಕೆಲಸವು ತೀರ ಸುಲಭವಿದೆ. ನ್ಯಾಯಕೋರ್ಟಿನವರು ಕೊಟ್ಟ ನಿಕಾಲೆಯನ್ನು ಆತನಿಗೆ ಓದಿ ತೋರಿಸಬೇಕು; ಹಾಗು ತುರಂಗವಾರಂಟ ಕೊಟ್ಟು, ಆತನನ್ನು ಒಳ್ಳೇ ಕಾವಲಿನೊಡನೆ ಬ್ರಿಟಿಶ ಮ್ಯಾಜಿಸ್ಟ್ರೇಟರ ಕಡೆಗೆ ಕಳಿಸಿಕೊಡಬೇಕು; ಅಂದರೆ ಹೊರಟನವನು ಅಲ್ಲಿಂದ ಮುಂಬಯಿಗೆ; ಮುಂಬಯಿಯಿಂದ ಅಂದಮಾನಕ್ಕೆ!

ಮ:—ಹಾಗಾದರೆ ದಾರಿಯೇನೋ ಸರಳವಾಗಿ ತೋರುತ್ತದೆ. ಈ ಬಗ್ಗೆ ಆ ಮೇಲೆ ಮಾತಾಡೋಣ. ಕಾಯಿದೆಯಲ್ಲಿದ್ದಂತೆ ಅಗಿಯೇ ಆಗುವದು. ಸದ್ಯಕ್ಕೆ ಆತನನ್ನು ಪ್ರತಿಬಂಧಿಸಿ, ಸೆರೆಮನೆಯೊಳಗಿನ ಕಚ್ಚಾಕೈದಿಯಂತೆ ಇರಿಸಿದರೆ ತೀರಿತು.

''ಆದರೆ ಆ ಭಯಂಕರಗುಹ್ನೆಗಾರನು ಯಾವ ಗುಹ್ನೆ ಮಾಡಿದ್ದನೆಂಬ ಮಾಹಿತಿಯೇನಾದರೂ ತಿಳಿದೀತೇನು?'' ಎಂದು ಮಹಾರಾಜರು ಸಹಜ ಕೇಳುವವರ ಹಾಗೆ ಅಡ್ಡ ಪ್ರಶ್ನೆ ಮಾಡಿದರು.

ಆದರೆ ಅದರಿಂದ ದಿವಾಣಸಾಹೇಬರು ತುಸ ಗಾಬರಿಗೊಂಡಂತೆ ಕಂಡು ಬಂತು. ಆ ಗುಹ್ನೆಗಾರನಿಗೆ ಭಯಂಕರನೆನ್ನಬೇಕಾಗಿದ್ದರೆ ಆತನ ಗುಹ್ನೆಗಳ ವರ್ಣನೆಯು ಸ್ವಲ್ಪಾದರೂ ಭಯುವೆನಿಸುವಹಾಗಿರಬೇಕಾಗುವದು! ಆದರೆ ರಾಜದ್ರೋಹಕ್ಕಿಂತಲೂ ಹೆಚ್ಚು ಭಯಂಕರವದೇನಿರಬೇಕು? ಈ ತಿಳುವಳಿಕೆಯಿಂದ ದಿವಾಣಸಾಹೇಬರು ಒಳ್ಳೇ ತಾರ ದನಿಯಿಂದ ಗಂಭೀರವಾಗಿ:—ಪ್ರತ್ಯಕ್ಷ ರಾಜದ್ರೋಹ ಹಾಗು ಕೊಲೆಯ ಪ್ರಯತ್ನ! ಆತನ ಜಾಹೀರನಾಮೆಯಲ್ಲಿ ಕ್ರಾಂತಿಕಾರಕ ಮತದ ಪುರಸ್ಕಾರವೇ ಇದ್ದಿತು.

ಜೋ:—ಮತ್ತು ಯಾರ ಕೊಲೆ ಮಾಡುವ ಪ್ರಯತ್ನವಿದ್ದಿತು?

ದಿ:—ನನ್ನ ಹಾಗು ನನ್ನ ಮೇಲೆ ಸತ್ತಾಧಾರಿಗಳಾಗಿದ್ದ ಪೋಲೀಟಿಕಲ್ ಏಜಂಟ ಸಾಹೇಬರ.

ಜೊ:—ದಿವಾಣಸಾಹೇಬರೇ, ಆ ಜಾಹೀರನಾಮೆಯಲ್ಲಿ ನಿಮ್ಮಗಳ ಕೊಲೆಯನ್ನೇಕೆ ಮಾಡಬೇಕೆಂಬದರ ಕಾರಣಗಳಿದ್ದವೇನು?

ದಿ:—ಅದರಲ್ಲಿ ನನ್ನ ವಿಷಯದ ಎಷ್ಟೋ ಖೊಟ್ಟಿ ಆರೋಪಗಳಿದ್ದವು.

ಜೋ:—ಆದರೆ ಗುಹ್ನೆಗಾರನು ಅದರಲ್ಲಿ ಆ ಆರೋಪಗಳ ನಿಜತ್ವದ

ಪುರಾವೆಯನ್ನೇನು ಕೊಟ್ಟಿದ್ದನು?

ದಿ:—ಪುರಾವೆಯನ್ನೇನು ಕೊಡುವನು? ಖಟ್ಲೆಯನ್ನು ಹಾಕಿ ಆತನನ್ನು ಹಿಡಿಯಲಿಕ್ಕೆ ವಾರಂಟು ಕಳಿಸಲು, ಪೋಲೀಸನ್ನು ಕಂಡು ಹಿತ್ತಲಬಾಗಿಲದಿಂದಲೇ ಫರಾರಿಯಾದನು!

ಜೋ:—ಒಟ್ಟಿನಲ್ಲೇನು? ಆತನು ನಿಮ್ಮ ಮೇಲೆ ಮಾಡಿದ ಆರೋಪ ಗಳ ವಿಚಾರಣೆಯಾಗಲಿಲ್ಲ; ಮತ್ತು ನೀವು ಆತನ ಮೇಲೆ ಹೊರಿಸಿದ ಆರೋಪ ಗಳ ಚೌಕಶಿಯಾಗಲಿಲ್ಲ; ಇಷ್ಟೇ ಅಲ್ಲವೆ?

ದಿ:—ಆತನ ಮೇಲಿನ ಆರೋಪಗಳ ಚೌಕಶಿಯಾಗಿತ್ತು. ಆತನ ಸಹ ಕಾರಿ ಗುಹ್ನೆಗಾರನ ಕಬೂಲಿ ಜವಾಬಾಗಿ, ಕೋರ್ಟಿನವರು ಕೊಲೆಯ ಕಟ್ಟನ್ನು ನಿಜವೆಂದು ತಿಳಿದು ಅವರಿಬ್ಬರಿಗೂ ಶಿಕ್ಷೆ ವಿಧಿಸಿದ್ದರು.

ಜೋ:—ಹಾಗಾದರೆ ಆ ಸಹಕಾರಿ ಗುಹ್ನೆಗಾರನಿನ್ನೂ ನಮ್ಮ ಅಥವಾ ಬ್ರಿಟಿಶ ಸರಕಾರದ ಸೆರೆಮನೆಯಲ್ಲಿರಬಹುದಲ್ಲವೆ?

ದಿ:—ಇಲ್ಲ. ಕೆಲ ದಿನಗಳ ಬಂದಿವಾಸವನ್ನು ಅನುಭವಿಸಿದ ಬಳಿಕ ಆತನು ಮಾಫಿ ಬೇಡಿದ್ದರಿಂದ ಅವನನ್ನು ಬಿಟ್ಟುಗೊಟ್ಟಿದೆ.

ಜೋ:—ಒಟ್ಟಿನಲ್ಲಿ ನಿಮ್ಮ ಈ ಗುಹ್ನೆಗಾರನ ಫರಾರಿಯೊಂದೇ ನಿಜ ವಾಗಿದೆ; ಮತ್ತು ಆತನ ಯಾವ ಗುಹ್ನೆಗಳ ಪಕ್ಕಾ ಚೌಕಶಿಯೂ ಆಗಿರುವ ದಿಲ್ಲ! ಅದೇನೇ ಇರಲಿ. ದಿವಾಣಸಾಹೇಬರು ಗುಹ್ನೆಗಾರನನ್ನು ಪ್ರತಿಬಂಧಿ ಸಲು ಅಪ್ಪಣೆ ಕೇಳಬರುವ ಕಾರಣವೇ ಇಲ್ಲ; ಯಾಕೆಂದರೆ ಆ ಎಲ್ಲ ಅಧಿಕಾರ ಗಳು ಅವರಿಗೆ ಇದ್ದೇ ಇವೆ; ಆದರೂ ನಾನು ಅವರಿಗೆ ತಿಳಿಸುವದೇನೆಂದರೆ, ಅವರು ಆ ಗುಹ್ನೆಗಾರನನ್ನು ಕೂಡಲೆ ಪ್ರತಿಬಂಧಿಸಬೇಕು; ಹಾಗು ಮನೋ ಹರಪಂತರು ಸೂಚಿಸಿರುವ ಮೇರೆಗೆ ಆತನನ್ನು ತಂದು ಈ ಅರಮನೆಯ ಎದುರಿಗಿನ ಕೋಣೆಯಲ್ಲಿ ಸೆರೆಯಿಡಬೇಕು. ದಿವಾಣಸಾಹೇಬರೇ, ಬೇಗನೆ ಹೋಗಿ ವಾ- ರಂಟು ಬರೆದು ಫೌಜದಾರರೊಡನೆ ಕಳಿಸಿಕೊಡಿರಿ.

ದಿ:—"ಆ ಗುಹ್ನೆಗಾರನು ಇದೇ ಊರಿನವನಿದ್ದು, ತೈನಾತದಾರ ಭಾವೂ ಸಾಹೇಬ ಡಬೀರರ ಮಗನಾಗಿರುತ್ತಾನೆಂಬದು ಮಹಾರಾಜರಿಗೆ ಅರಿಕೆಯಿರಲಿ" ಈ ಸಂಗತಿಯನ್ನು ದಿವಾಣಸಾಹೇಬರು ತಾವಾಗಿ ಮಹಾರಾಜರಿಗೇಕೆ ತಿಳಿಸಿದ ರೋ ಹೇಳಬರುವಂತಿಲ್ಲ; ಆದರೆ ಆ ಮಾತನ್ನೆತ್ತಲು ಮಹಾರಾಜರು ಅವಸರ ದಿಂದ:- "ದಿವಾಣಸಾಹೇಬರೇ, ಅದೆಲ್ಲ ಮಾಹಿತಿಯನ್ನು ಈಗಲೇ ಹೇಳುವ ದೇಕೆ? ಗುಹ್ನೆಗಾರನು ಗುಹ್ನೆಗಾರನೇ! ಆ ಮೇಲೆ ಆತನು ಯಾವನೇ ಆಗಿರಲಿ; ಯಾರ ಸಂಬಂಧಿಕನೇ ಆಗಿರಲಿ. ತಾವಿನ್ನು ಸಮಯ ಕಳೆಯಬಾರದು ಆತನು

ಮತ್ತೆ ಓಡಿಹೋದನೆಂದರೆ? ನ್ಯಾಯದ ಕೆಲಸಕ್ಕೆ ಸುಮ್ಮನೆ ತಡಬೇಡ" ಹೀಗೆಂದು ಹೇಳಿ, ಸ್ವತಃ ಮಹಾರಾಜರೇ ಅಲ್ಲಿಂದೆದ್ದರು. ಅವರೊಡನೆ ಮನೋಹರನೂ ದಿವಾಣರೂ ಎದ್ದುಬಿಟ್ಟರು.

ತುಸ ಹೆಚ್ಚು ಬೆಳಸಿ ಆತನು ಭಯಂಕರ ಗುಹ್ಯಗಾರನೆಂದೂ ಆತನ ಗುಹ್ನೆಗಳ ಭಯಂಕರತ್ವವನ್ನೂ ಚೆನ್ನಾಗಿ ವರ್ಣಿಸಿ ಹೇಳುವ ಇಚ್ಛೆಯು ದಿವಾಣಸಾಹೇಬರಿಗಿತ್ತು; ಮಹಾರಾಜರು ಎದ್ದು ಕೂಡಲೆ ಹೋಗಲಿಕ್ಕೆ ಪರ್ಯಾಯದಿಂದ ತಿಳಿಸಿದ ಮೂಲಕ, ಅವರು ಸುಮ್ಮನೆ ನಮಸ್ಕಾರ ಮಾಡಿ ಹೊರಟು ಹೋದರು; ಮತ್ತು ಹೊರಬಿದ್ದ ಕೂಡಲೆ ಫೌಜದಾರರಿಗೆ ತಮ್ಮ ಮನೆಗೆ ಬಂದು ಭೆಟ್ಟಿಯಾಗಲಿಕ್ಕೆ ಹೇಳಕಳಿಸಿದರು.

---

## ೧೭ ಅಣ್ಣನ ಬಿಡುಗಡೆಯ ಪ್ರಯತ್ನ.

ಅಂದೇ ರಾತ್ರಿ ಒಂಬತ್ತು ಗಂಟೆಗೆ ಪಟ್ಟಣದ ಕೊತವಾಲನು ಐದಾರು ಜನ ಪೋಲೀಸ ಶಿಪಾಯಿಗಳೊಡನೆ ಭಾವೂಸಾಹೇಬರ ಮನೆಗೆ ಬಂದನು; ಹಾಗು ತುಸ ಕರ್ಕಶ ದನಿಯಿಂದಲೇ: 'ಪ್ರಭಾಕರಪಂತ ಡಬೀರರು ಮನೆಯಲ್ಲಿರುವರೇ?' ಎಂದು ಕೇಳಿದನು. ಪ್ರಭಾಕರನು ಜೋಜೆಗಮಹಾರಾಜರಿಗೆ ಭೆಟ್ಟಿಯಾಗಿ ಮನೆಗೆ ಬಂದನು; ಮತ್ತು ಅಲ್ಲಿ ನಡೆದ ಸಂಗತಿಯನ್ನು ತನ್ನ ತಂಗಿಗೆ ತಿಳಿಸಿದನು. ಆದರಿಂದ ಬೇಗನೆ ದಿವಾಣಸಾಹೇಬರಿಂದ ಪ್ರತಿಬಂಧದ ವಾರಂಟು ಬರುವದೆಂದು ಅವರು ಗೊತ್ತು ಮಾಡಿಕೊಂಡಿದ್ದ ಕಾರಣ, ಫೌಜದಾರನ ಪ್ರಶ್ನೆಗೆ ಉತ್ತರ ದೊರೆಯಲಿಕ್ಕೆ ತಡ ಹಿಡಿಯಲಿಲ್ಲ. ಪ್ರಭಾಕರನು ನಡುಮನೆಯಿಂದ ಹೊರಗಿನ ಪಡಸಾಲೆಗೆ ಬರುವಾಗ ತನ್ನ ಅರಿವೆ-ಅಂಚಡಿಗಳ ಗಂಟನ್ನು ಹಿಡಕೊಂಡೇ ಬಂದು: "ನಾನೇ ಪ್ರಭಾಕರ ಡಬೀರನು. ಇಗೋ, ಇಲ್ಲಿಯೇ ಹಾಜರಿರುತ್ತೇನೆ. ನಿಮ್ಮಲ್ಲಿ ಯಾವ ಲೇಖೀ ಹುಕುಮಿರುವದೆಂಬದನ್ನು ತೋರಿಸಿರಿ ನೋಡೋಣ" ಕೂಡಲೆ ಫೌಜದಾರನು ಪ್ರಭಾಕರನಿಗೆ ವಾರಂಟು ತೋರಿಸಿ, ಆತನನ್ನು ಪ್ರತಿಬಂಧಿಸಲಿಕ್ಕೆ ಶಿಪಾಯಿಗಳಿಗೆ ಸಂಜ್ಞಾ ಮಾಡಿದನು. ಆಗ ಶಿಪಾಯಿಗಳು ಮುಂದಾಗಿ ಪ್ರಭಾಕರನ ಕೈಹಿಡಿದು, ಅವನಿಗಾಗಿ ತಂದಿದ್ದ ಬೇಡಿಗಳನ್ನು ಹಾಕಲಿಕ್ಕೆ ಸಿದ್ಧರಾದರು. ಆಗ ಪ್ರಭಾಕರನು ಗಟ್ಟಿ ದನಿಯಿಂದ:—"ಫೌಜದಾರಸಾಹೇಬರೇ, ನಾನೇನು ಕಳ್ಳನೋ ದರವಡೆಗಾರನೋ ಎಂದು ನನಗೆ ಬೇಡಿ ಹಾಕಿಸುತ್ತೀರಿ? ನಾನು ಈ ಮೊದಲು ಫರಾರಿಯಾಗಿದ್ದವನು ಕೈಲಾಸದೊಳಗಿನ ನಿಮ್ಮ ಪಿತರರಿಗೂ ಸಿಕ್ಕಿರಲಿಲ್ಲ; ಹಾಗು ಮುಂದಾದರೂ ಸಿಗುತ್ತಿರಲಿಲ್ಲ; ಆದರೆ ನ್ಯಾಯ ದೊರಕಿಸುವದಕ್ಕೆಂದು ನಾನಾಗಿಯೇ ಹಾಜರಾದವನು ಮತ್ತೆ ಫರಾರಿ

ಯಾಗಲಿಕ್ಕೇ?" ಎಂದೆನ್ನಲು, ಫೌಜದಾರರು ತುಸ ಒಗರಿನಿಂದಲೇ:— "ಖಬರದಾರ! ಹೆಚ್ಚು ಮಾತನಾಡುವ ಅವಶ್ಯಕತೆಯಿಲ್ಲ. ಹುಕುಮಿನಂತೆ ನಾವು ನಡೆಯಲೇ ಬೇಕು. ನಿಮಗೇನಾದರೂ ತಕರಾರು ಮಾಡುವದಿದ್ದರೆ ಮೇಲೆ ದಿವಾಣಸಾಹೇಬರ ಬಳಿಯಲ್ಲಿ ಬೇಕಾದ ಹಾಗೆ ಮಾಡಿರಿ. ಸದ್ಯಕ್ಕೆ ನಾವು ಹೇಳಿದಂತೆ ನೀವು ಕೇಳಲೇಬೇಕು."

"ಆದರೆ ಬೇಡಿ ಹಾಕಬೇಕೆಂದು ಈ ವಾರಂಟಿನಲ್ಲಿ ಬರೆದಿರುವದೆಲ್ಲಿ?"

"ದಿವಾಣಸಾಹೇಬರು ನಮಗೆ ಹಾಗೆ ಬಾಯಿಮಾತಿನಿಂದ ಹೇಳಿರುತ್ತಾರೆ. ನಾವು ಅದನ್ನು ಬಜಾಯಿಸತಕ್ಕವರೇ."

ಇಷ್ಟರೊಳಗೆ ವಿಮಲೆಯು ಹೊರಗೆ ಬಂದಿದ್ದಳು. ಆಕೆಯು ಮುಂದರಿದು ಬಂದು:—"ಅಣ್ಣಾ, ಸುಮ್ಮನೆ ಇವರ ಬಾಯಿಗೇಕೆ ಹತ್ತುತ್ತೀ? ಇವರು ಶಸ್ತ್ರಧಾರಿಗಳಾದ ಐದಾರು ಜನರಾಗಿರುವರು; ನೀನೊಬ್ಬ ನಿಃಶಸ್ತ್ರನು. ಹೀಗಿದ್ದರೂ ನೀನೊಬ್ಬನೇ ಇವರೆಲ್ಲರಿಗೆ ಸಾಕಾಗಿ ಉಳಿವೀಯೆಂದೆನಿಸಿ, ಇವರು ಅಷ್ಟು ಮುಂಜಾಗ್ರತೆಯನ್ನು ತಾಳುತ್ತಿರಬಹುದು! ಇವರಿಗೆ ಇವರ ಹುಕುಮು ತಿಳಿಯುವಂತೆ ನನಗೂ ಅಲ್ಪ ಸ್ವಲ್ಪ ಕಾಯಿದೆಯ ಜ್ಞಾನವಿದೆ. ಬೇಗನೆ ಅದರ ನಿಕಾಲೆಯಾಗುವದು. ನೀನು ಮರುಮಾತನಾಡದೆ ಇವರ ವಶವಾಗೊಮ್ಮ. ಸುಮ್ಮನೆ ಅಪ್ಪನ ಕಿವಿಗೆ ಈ ವಾದವಿವಾದವು ಕೇಳಿಸಿದರೆ ಅವರಿಗೆ ಮತ್ತೆ ಭ್ರಮೆಯ ವೇಗ ಬಂದೀತು.

ವಿಮಲೆಯಾಡಿದ ಮಾತಿನ ಪರಿಣಾಮವಾಗಿ ಮುಂದೆ ಪೋಲೀಸರೂ ಮಾತಾಡದಾದರು; ಮತ್ತು ಪ್ರಭಾಕರನಾದರೂ ಶಾಂತನಾಗಿ ತನ್ನಷ್ಟಕ್ಕೆ ತಾನು ನಗುತ್ತ ಮತ್ತು ಪೋಲೀಸರನ್ನು ತುಚ್ಛತೆಯ ದೃಷ್ಟಿಯಿಂದ ನಿರೀಕ್ಷಿಸುತ್ತ ಕೈ ಮುಂದೆ ಮಾಡಿದನು. ವಿಮಲೆಯು [illegible] ಆ ಜೋದ್ಯಪುರದಲ್ಲಿದ್ದ ಯೆಂಬದು ಆ ಫೌಜದಾರನಿಗೆ ಚೆನ್ನಾಗಿ ಗೊತ್ತಿದ್ದ ಮೂಲಕ ಆಕೆಯ ಮಾತಿಗೆ ಆತನೇನೂ ಉತ್ತರ ಕೊಡಲಿಲ್ಲ. ಪ್ರಭಾಕರನಿಗೆ ಬೇಡಿ ತೊಡಿಸಿ ಸಿದ್ಧಗೊಳಿಸುವಷ್ಟರಲ್ಲಿ ಮಾಯೂಸಾಹೇಬರೂ ಒಳಗಿನಿಂದ ಪಡಸಾಲೆಗೆ ಬಂದರು. ಅವರನ್ನು ನೋಡಿ ಪ್ರಭಾಕರನು ಬೇಡಿಗಳ ಕೈಯಿಂದಲೇ ನಮಸ್ಕರಿಸಿ."ಮಾಯೂ, ಯೋಚಿಸಬೇಡ. ಅಲ್ಪಾವಧಿಯಲ್ಲೇ ನಾನು ಬಂಧಮುಕ್ತನಾಗಿ ನಿಮ್ಮೆಡೆಗೆ ಬರುವೆನು. ನಾನು ನೋಕ್ಷ-ಮೋಕ್ಷಗಳನ್ನು ತಿಳಿಯುವ ಸಲುವಾಗಿ ಇಲ್ಲಿಗೆ ಬಂದಿರುತ್ತೇನೆಂಬದು ನಿನಗೆ ಗೊತ್ತೇ ಇದೆ. ಅದು ಬೇಗನೆ ತಿಳಿದೀತು. ಏಕೆಂದರೆ, ನನ್ನ ಸಾಡೇಸಾತಿಯು ತೀರಿತು; ಮತ್ತು ಇನ್ನು ಅದು ದಿವಾಣಸಾಹೇಬರ ಬೆನ್ನು ಹತ್ತುತ್ತೆಂದು ತಿಳಿ" ಹೀಗೆಂದು ಹೇಳಿ, ಆತನು ತಾನಾಗಿಯೇ ಹೆಬ್ಬಾಗಿಲ ಕಡೆಗೆ ನಡೆದನು. ಆದರಿಂದ ಪೋಲಿಸರೂ ಫೌಜದಾರನೂ ಆತನನ್ನನುಸರಿಸಿ ನಡೆದರು.

ಪ್ರಭಾಕರನು ಮಾಯಿಗೆ ಬೇಕಾದಷ್ಟು ಧೈರ್ಯದಿಂದಲೂ ಆಶ್ವಾಸನದಿಂದಲೂ ಹೇಳಿದರೂ, ಬೇಡಿಗಳ ಕೈಯಿಂದ ಮಗನು ನಮಸ್ಕರಿಸಿದ್ದನ್ನು ಕಂಡು ಅವಳ ದುಃಖವು ತಡೆಯದಾಯಿತು. ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು; ಆದರೆ ವಿಮಲೆಯು ಅವಳ ಕೈಹಿಡಿದು ಮನೆಯೊಳಗೆ ಕರೆದೊಯ್ದು:- "ಮಾಯಿ, ನೀನು ಸ್ವಲ್ಪವೂ ಯೋಚಿಸಬೇಡ. ಅಣ್ಣನು ಬೇಗನೆ ಬಿಡುಗಡೆ ಹೊಂದಿ ತಿರುಗಿ ಬರುವನು; ಆತನು ಬರುವ ವರೆಗೆ ಹೇಗಾದರೂ ಮಾಡಿ ನಾವು ಅಪ್ಪನ ಪ್ರಕೃತಿಯನ್ನು ಸಂಭಾಳಿಸಬೇಕು. ಆ ಕೆಲಸವನ್ನು ಇನ್ನು ಮೇಲೆ ಸ್ವತಃ ನೀನೇ ನಿಂತು ಮಾಡಬೇಕಾಗುವದು; ಯಾಕಂದರೆ ಇನ್ನು ಮುಂದೆ ಅಣ್ಣನ ಬಿಡುಗಡೆಯ ವ್ಯವಸ್ಥೆಗಾಗಿ ನಾನೂ ಹೋಗಬೇಕಾದೀತು.

ooo ooo ooo ooo

ಅದೇ ರಾತ್ರಿ ಸರಾಸರಿ ಹತ್ತು ಗಂಟೆಗೆ ಅರಮನೆಯೊಳಗಿನ ಒಬ್ಬ ಶಿಪಾಯಿಯು ಮುದ್ರೆ ಮಾಡಿದ ಒಂದು ಪತ್ರವನ್ನು ಭಾವೂಸಾಹೇಬರ ಮನೆಗೆ ತಂದು, ಅದನ್ನು ವಿಮಲೆಯ ಕೈಗಿತ್ತನು. ಆ ಪತ್ರದಲ್ಲಿ ಈ ಕೆಳಗಿನ ಸಂಗತಿಯಿತ್ತು:

"ಶ್ರೀ. ವಿಮಲಾಬಾಯಿ ಡಬೀರ ಇವರಿಗೆ—ಪ್ರೇಮಪೂರ್ವಕ ವಂದನೆಗಳು. ತರುವಾಯ ನಿಮ್ಮ ಅಣ್ಣನನ್ನು ದಿವಾಣಸಾಹೇಬರ ವಾರಂಟಿನ ಮೂಲಕ ಈ ಮೊದಲು ಪ್ರತಿಬಂಧಿಸಲ್ಪಟ್ಟಿದೆ. ಅವರ ನ್ಯಾಯದ ನಿಕಾಲೆಯು ಏನಾಗಬೇಕೋ ಅದು ಸರಕಾರೀ ನಿಯಮದಂತೆ ಮುಂದೆ ಆಗಿಯೇ ಆಗುವದು; ಆದರೆ ಸದ್ಯಕ್ಕೆ ನಿಮ್ಮ ಅಣ್ಣನ ಬಗ್ಗೆ ಬೇರೆ ಯಾವ ರೀತಿಯಿಂದಲೂ ನಿಮಗೆ ಯೋಚನೆಯುಂಟಾಗಬಾರದೆಂದು ನಾನು ನಿಮಗೆ ಖಾಸಗೀ ರೀತಿಯಿಂದ ತಿಳಿಸುವದೇನಂದರೆ, ಅವರನ್ನು ಅರಮನೆಯ ಎದುರಿಗಿನ ಕುದುರೆಯ ಲಾಯದ ಬಳಿಯ ಒಂದು ಚಿಕ್ಕೋಣೆಯಲ್ಲಿರಿಸಲ್ಪಟ್ಟಿದೆ. ಅವರನ್ನು ಕಾಣಬೇಕಾಗಿದ್ದರೆ ನನ್ನ ಅಪ್ಪಣೆ ಪಡೆದು ನಾಳೆ ಬೆಳಗಿನ ಎಂಟು ಗಂಟೆಗೆ ಕಾಣಬಹುದು. ಸದ್ಯಕ್ಕೆ ನಿಮ್ಮ ಅಣ್ಣನಿಗಾಗಿ ಏನಾದರೂ ಅರಿವೆ-ಅಂಚಡಿ ಕೊಡುವದಿದ್ದಲ್ಲಿ ಈ ಪತ್ರ ತಂದಿರುವ ಶಿಪಾಯಿಯ ಕಡೆಗೆ ಕೊಡಬೇಕು; ಅಂದರೆ ಅವು ಅವರಿಗೆ ತಲುಪಿಸಲಾಗುವವು. ಅವರಿಗಾಗಿ ಹಾಸಿಗೆ-ಮಂಚಗಳ ವ್ಯವಸ್ಥೆಯು ಇಲ್ಲಿಂದಲೇ ಮಾಡಲಾಗಿದೆ. ಆದ್ದರಿಂದ ನೀವು ಅವುಗಳನ್ನು ಕಳಿಸುವ ಅವಶ್ಯಕತೆಯಿಲ್ಲ. ಅವರಿಗೆ ಮತ್ತೆ ಏನು ಬೇಕೋ ಅದನ್ನು ನಾಳೆ ಬೆಳಗಿನ ಭೆಟ್ಟಿಯಲ್ಲಿ ಸಮಕ್ಷ ಕೇಳಿಕೊಳ್ಳಬಹುದು. ತಿಳಿಯುವದು. ಮಲ್ಹೋಪರಪಂತ,

(ಸಿಸಬತ್ ಶ್ರೀಮಂತ ಜೋಜಿಗಮಹಾರಾಜ, ಸಂಸ್ಥಾನಾಧಿಪತಿ,

ಜೋದ್ಯಪುರ ಸಂಸ್ಥಾನ.)

ವಿ. ಸೂ:—ಈ ಪತ್ರವನ್ನು ನಾನು ಖಾಸಗಿ ರೀತಿಯಿಂದಲೇ ಬರೆದಿರುತ್ತೇನೆಂದು ತಿಳಿದು ಯಾರಿಗೂ ತಿಳಿಸಬಾರದು. ನನ್ನ ಸಹಿಯ ಕೆಳಗೆ ನಾನು ಯಾವ ಹುದ್ದೆಯನ್ನು ಬರೆದಿರುವೆನೋ ಅದನ್ನು ಕೇವಲ ನಾನಾರೆಂಬದನ್ನು ತಿಳಿಯುವ ಸಲುವಾಗಿ ಬರೆದಿದ್ದೇನೆ. ನಿಮಗೆ ಮತ್ತೆ ಏನಾದರೂ ಮಾಹಿತಿ ಬೇಕಾಗಿದ್ದರೆ, ನನ್ನನ್ನು ಕೇಳಬೇಕು. ತಿಳಿಸುವಂತಹದನ್ನು ತಿಳಿಸುವೆನು. ಮ.

ಆ ಪತ್ರದಿಂದ ವಿಮಲೆಗೆ ಬಹು ಸಮಾಧಾನವೆನಿಸಿತು; ಯಾಕಂದರೆ, ಆಗ ರಾತ್ರಿಯ ಸಮಯವಾಗಿತ್ತು. ಫೌಜದಾರನು ಪ್ರಭಾಕರನನ್ನೆಲ್ಲೊಯ್ದು ಇಡುವನೆಂಬದರ ಮಾಹಿತಿಯಿರಲಿಲ್ಲ; ಮತ್ತು ಇಂಥ ವೇಳೆಯಲ್ಲಿ ಪ್ರಸಿದ್ಧರೀತಿಯಿಂದ ಅದಾರಿಗೂ ಕೇಳುವಂತಿರಲಿಲ್ಲ; ಆದರೆ ಆ ಪತ್ರವು ಅದೆಲ್ಲ ಚಿಂತೆಯನ್ನು ಪರಸ್ಪರ ಪರಿಹರಿಸಿ ಬಿಟ್ಟಿತು. ಇಷ್ಟೇ ಅಲ್ಲದೆ, ಮುಂದಿನ ವ್ಯವಸ್ಥೆಯೂ ಸಹಜವಾಗಿ ಗೊತ್ತಾಯಿತು. ಕೂಡಲೆ ವಿಮಲೆಯು ಆ ಪತ್ರವನ್ನು ಒಳಗೆ ಒಯ್ದು ಮಾಯಿಸಾಹೇಬರಿಗೆ ಓದಿ ತೋರಿಸಿದಳು. ಒಂದು ಹೊದೆಯುವ ಶಾಲನ್ನೂ ಫಿಲ್ಟರದಿಂದ ಸೋಸಿ ತುಂಬಿದ ನೀರಿನ ತಂಬಿಗೆಯನ್ನೂ ಅವಳು ಆ ಶಿಪಾಯಿಯ ಕೈಗಿತ್ತು, ಮನೋಹರಪಂತರು ಮರುದಿನ ಬೆಳಗ್ಗೆ ಎಲ್ಲಿ ಹಾಗು ಯಾವಾಗ ಭೆಟ್ಟಿಯಾಗುವರೆಂಬ ಮಾಹಿತಿಯನ್ನು ಕೇಳಿಕೊಂಡು, ಆ ಶಿಪಾಯಿಯನ್ನು ಕಳಿಸಿಕೊಟ್ಟಳು.

ಬೆಳಗ್ಗೆ ಎಂಟು ಗಂಟೆಗೆ ವಿಮಲೆಯು ತಮ್ಮ ಸ್ವಂತದ ಸಾರೋಟಗಾಡಿಯಲ್ಲಿ ಕುಳಿತು ಮನೋಹರಪಂತರೆಡೆಗೆ ಹೋದಳು. ಅವಳ ಕೈಯಲ್ಲೊಂದು ತೊಗಲಿನ ಹ್ಯಾಂಡಬ್ಯಾಗ್ ಇದ್ದು, ಅದರಲ್ಲಿ ಕೆಲ ಕಾಗದ-ಪತ್ರಗಳ ಪುಡಿಕೆಗಳಿದ್ದವು. ಬಳಿಕ ಅವರೀರ್ವರಲ್ಲಿ ಹೀಗೆ ಸಂಭಾಷಣವು ನಡೆಯಿತು:

ವಿಮಲೆ:—ನಿನ್ನೆ ರಾತ್ರಿ ನೀವಾಗಿಯೇ ಪತ್ರ ಕಳಿಸಿ, ನಮ್ಮ ಅಣ್ಣನ ಸಂಬಂಧದ ಮಾಹಿತಿ ಕೊಟ್ಟದ್ದರಿಂದ ನಮ್ಮ ಚಿಂತೆಯೆಲ್ಲ ಪರಿಹಾರವಾಗಿ, ನಮಗೆಷ್ಟು ಸಮಾಧಾನವಾಯಿತೆಂಬದರ ಕಲ್ಪನೆಯು ನಿಮಗಿರಲಿಕ್ಕಿಲ್ಲ. ಅಂತೆಯೇ ನಾನು ಮೊಟ್ಟಮೊದಲು ಆ ಬಗ್ಗೆ ನಿಮ್ಮ ಆಭಾರ ಮನ್ನಿಸುತ್ತೇನೆ.

ಮ: ಕಲ್ಪನೆಯಿರಲಿಕ್ಕಿಲ್ಲೆಂದೇಕನ್ನುತ್ತೀರಿ? ಆ ಕಲ್ಪನೆಯನ್ನು ಕಲ್ಪಿಸಲಿಕ್ಕೆ ನನಗೆ ಬರದಿದ್ದರೆ, ಮನುಷ್ಯ ಸ್ವಭಾವದ ಸಾಮಾನ್ಯ ಜ್ಞಾನ ಕೂಡ ನನಗಿಲ್ಲೆಂದು ಗೊತ್ತಾಗಲಿಕ್ಕಿಲ್ಲವೆ? ನಾನು ಚಿಟಿ ಕಳಿಸಿದ ಬಗ್ಗೆ ಆಭಾರ ಮನ್ನಿಸುವ ಅವಶ್ಯಕತೆಯೇ ಇರುವದಿಲ್ಲ. ಸದ್ಯಕ್ಕೆ ನಾನು ನನ್ನ ಕರ್ತವ್ಯ ಮಾಡಿದಂತಾಗಿದೆ. ನ್ಯಾಯದ ಕೆಲಸವೇನಿದೆಯೋ ಅದು ರಿವಾಜಿನಂತೆ ಆದೇ ಆದೀತು. ಅದರಲ್ಲಿ ನನ್ನ ಸಂಬಂಧವೇನೂ ಬರುವಂತಿಲ್ಲ. ಆದರೆ ಮಾಹಿತಿಯು ಇಲ್ಲವೆ

ಅಭಿಮಾನವು ನನಗಿಂತ ನಿಮಗೇ ಹೆಚ್ಚಿರಬೇಕು. ನೀವು ಹಾಯ್‌ಕೋರ್ಟ್ ಪ್ಲೀಡರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವಿರೆಂದು ನಾನು ಕೇಳಿರುವದು ನಿಜವೇ?

ವಿ:—ಅಹುದು. ಅದು ನಿಜವಿದೆ; ಆದರೆ ನಾನು ಸನದು ಪಡೆದಿಲ್ಲ; ಮತ್ತು ಇದುವರೆಗೆ ಕೋರ್ಟಿನ ಒಂದೂ ಕೇಸವನ್ನು ಕೈಕೊಂಡಿರುವದಿಲ್ಲ. ಇನ್ನು ನಮ್ಮ ಅಣ್ಣನ ಖಟ್ಲೆಯಲ್ಲೇ ನನ್ನ ಮೊದಲನೇ ವಕೀಲ ಪತ್ರವು ದಾಖಲಾಗುವ ಈಶ್ವರೀ ಸಂಕೇತವಿದ್ದರೆ ಹಾಗೆಯೇ ಆದೀತು.

ಮ:—ನೀವು ಇನ್ನೂ ಸನದು ಪಡೆದಿರದಿದ್ದರೆ ಅದು ಒಂದೆರಡೇ ದಿನಗಳಲ್ಲಿ ನಿಮಗೆ ದೊರಕುವ ಬಗೆ ಹೇಗೆ? ಅಲ್ಲದೆ ಬೇರೆ ಯಾವ ವಕೀಲರಾದರೂ ನಿಮಗೆ ದೊರೆತೇ ದೊರೆಯಬಹುದು. ಇಷ್ಟಕ್ಕಾಗಿ ಸನದು ಪಡೆಯುವ ಅವಶ್ಯಕತೆ ಯಾದರೂ ಏನಿದೆ?

ವಿ:—ಕಾರಣವಿಷ್ಟೇ, ಈ ಜೋಧ್ಯಪುರ ಸಂಸ್ಥಾನದೊಳಗಿನ ಯಾವ ವಕೀಲನೂ ನಮ್ಮ ಅಣ್ಣನ ವಕೀಲಿ ಪತ್ರವನ್ನು ಸ್ವೀಕರಿಸುವನೆಂದು ನನಗನಿಸುವದಿಲ್ಲ. ಈ ಖಟ್ಲೆಗೆ ರಾಜದ್ರೋಹದ ಸ್ವರೂಪವಿದ್ದು, ಪ್ರತಿಪಕ್ಷಿಗಳೆಂದು ಪ್ರತ್ಯಕ್ಷ ದಿವಾಣಸಾಹೇಬರ ಸಂಬಂಧವಿದೆ. ಈ ಸಂಸ್ಥಾನದ ವಕೀಲರೆಂದರೆ, ದಿವಾಣಸಾಹೇಬರು ಸಾಕಿದ ಬೆಕ್ಕುಗಳೇ! ಎಲೆಯು ಹೊರಗೆ ಬಿದ್ದದ್ದನ್ನು ನೆಕ್ಕಿ, ಅತ್ಯಾಶೆಯಿಂದ ಮತ್ತೇನಾದರೂ ಸಿಗುವದೇನೆಂದು ಉಣ್ಣುತ್ತಿರುವವರ ಮೋರೆಯ ಕಡೆಗೆ ನೋಡುವವರು. ಇನ್ನು ನಾನು ಸನದು ಪಡೆಯಬೇಕೆಂದರೆ, ಅದು ನನಗೆ ಇಂದಿನದಿಂದೆಯೇ ಸಿಗಬೇಕು; ಯಾಕಂದರೆ ಪ್ಲ್ಯಾಟ್‌ಫಾರ್ಮ್ ತಿಕೀಟುಗಳ ಯಂತ್ರದ ಬಾಯಲ್ಲಿ ಒಂದಾಣೆಯ ನಾಣ್ಯವನ್ನು ಚೆಲ್ಲಿದೊಡನೆಯೇ ತಿಕೀಟು ಹೇಗೆ ಸಿದ್ಧವಿರುವದೋ, ಹಾಗೆಯೇ ನಾನು ಐದುನೂರು ರೂಪಾಯಿ ತುಂಬಿದೊಡನೆ, ಕುಳಿತ ಬೈಠಕಿನಲ್ಲಿಯೇ ದಿವಾಣಸಾಹೇಬರು ಕೆಂಪು ಚಂದ್ರನಂತಹ ಕಾಗದ ಹಚ್ಚಿದ, ಸಹಿ ಮುದ್ರೆ ಮಾಡಿದ ಸನದಿನ ಕಾಗದವನ್ನು ನನಗೆ ಕೊಟ್ಟುಬಿಡಬೇಕು; ಆದರೆ ಆ ಬಗ್ಗೆ ಪ್ರತ್ಯಕ್ಷವೇನಾಗುವದೋ ಅದನ್ನು ನೋಡಲೇ ಬೇಕಾಗಿದೆ. ಈ ಕೆಲಸದಲ್ಲಿ ದಿವಾಣಸಾಹೇಬರ ಸರಳ ಸ್ವಭಾವದ ಪರೀಕ್ಷೆಯೇ ಆಗತಕ್ಕದ್ದಿದೆ.

ಇದನ್ನು ಕೇಳಿದ ಮನೋಹರಪಂತನ ಮನಸ್ಸಿನಲ್ಲಿ ಎಂಥದೋ ಒಂದು ಯೋಚನೆಯು ಹುಟ್ಟಲು, ಆತನು ಸಹಜವಾಗಿ ತನ್ನ ಎರಡೂ ತುಟಿಗಳನ್ನು ಗಟ್ಟಿಯಾಗಿ ಒತ್ತಿ ಕೇಳಿದನು:—"ಆದರೆ ದಿವಾಣಸಾಹೇಬರು ಕಾಯಿದೆಗೆ ವಿರುದ್ಧವಾಗಿ ನಡೆದರೆ, ಅವರ ಮೇಲೆ ಅಪೀಲು ಮಾಡಲಿಕ್ಕೆ ಖುದ್ದ ಯಜಮಾನಸಾಹೇಬರೇ ಇರುವರಲ್ಲ?"

ವಿಮಲೆಯು ನಸುನಕ್ಕು:—ಅಹುದು; ಆದರೆ ಬ್ರಿಟಿಶ ಸರಕಾರವು ಸಂಪೂರ್ಣ ಅಧಿಕಾರ ವಹಿಸಲಿಕ್ಕೆ ತತ್ಪರವಾಗಿರಲು, ಇವರು ಅಪೂರ್ಣ ಅಧಿಕಾರಗಳಷ್ಟೇ ಸಾಕೆಂದರು; ಅದರಿಂದ ಇವರ ಅಧಿಕಾರಗಳ ಮರ್ಯಾದೆಯಾದರೂ ಎಷ್ಟಿದೆಯೆಂಬದು ಜನರಿಗೆ ಹೇಗೆ ಗೊತ್ತಾಗಬೇಕು?

ಅವಳು ಇದಕ್ಕೂ ಹೆಚ್ಚು ಟೀಕೆ ಮಾಡಬಹುದಾಗಿತ್ತು; ಆದರೆ ಇದು ಪ್ರಸಂಗವಲ್ಲೆಂದು ತಿಳಿದು ಅವಳು ಬೇಕಂತಲೇ ನಾಲಿಗೆಯನ್ನು ಬಿಗಿ ಹಿಡಿದಳು; ಮತ್ತು ಆ ಸಂಭಾಷಣವನ್ನು ಮುಗಿಸಲಿಕ್ಕೆಂದು ಮತ್ತೊಮ್ಮೆ ಆಭಾರ ಮನ್ನಿಸಿ, ಎದ್ದು ನಿಂತು, ನಮಸ್ಕಾರ ಮಾಡಿ ಹೊರಡಲನುವಾದಳು. ಆಗ ಮನೋಹರನು:—ತಾವು ನನ್ನ ಆಭಾರಮನ್ನಿಸಲಿಕ್ಕೇನೂ ಕಾರಣವಿಲ್ಲ. ನಾನು ಕೇವಲ ನನ್ನ ಕರ್ತವ್ಯವನ್ನು ಮಾಡಿರುತ್ತೇನೆ; ಮುಂದಾದರೂ ಮಾಡುತ್ತೇನೆ. ನಾನು ಡಾಕ್ಟರನಿರುವದರಿಂದ ಸಂಸ್ಥಾನದೊಳಗಿನ ಎಲ್ಲ ಕಚ್ಚಾ ಹಾಗು ಪಕ್ಕಾ ಕೈದಿಗಳ ಜೇಲುಗಳ ವೈದ್ಯಕೀಯ ಅಧಿಕಾರಗಳನ್ನು ಜುಜಮಾನಸಾಹೇಬರು ನನಗೆ ಕೊಟ್ಟಿರುತ್ತಾರೆ; ಆದರೆ ನಿನ್ನಿನ ಪತ್ರದಲ್ಲಿ ನಾನು ನಿಮಗದನ್ನು ತಿಳಿಸಿರಲಿಲ್ಲ; ಯಾಕಂದರೆ ಆ ಅಧಿಕಾರದ ಸಂಬಂಧವನ್ನು ಮನಸ್ಸಿನಲ್ಲಿಟ್ಟಿದ್ದರೆ, ನಿಮಗೆ ನಾನಾಗಿ ಆ ಬಗೆಯ ಪತ್ರ ಬರೆಯಲಿಕ್ಕೆ ಬರುತ್ತಿರಲಿಲ್ಲ; ಆದರೆ ಅರಸನ ಮಿತ್ರನೆಂದರೆ, ಆತನ ಎಲ್ಲ ಸರಕಾರೀ ಕೆಲಸಗಳನ್ನು ಮಾಡಿಯೂ ಮತ್ತೆ ಖಾಸಗೀ ಮಿತ್ರನೆಂದೆನಿಸಿಕೊಳ್ಳಲಿಕ್ಕೆ ಬರುತ್ತದೆ.

ಆಗ ವಿಮಲೆಯು ಗಟ್ಟಿಯಾಗಿ ನಕ್ಕು: ಆದರೂ ಏನಾಯಿತು? ನೀವು ನನ್ನ ಕೃತಜ್ಞತೆಯನ್ನಾದರೂ ಖಾಸಗಿಯೆಂದೇ ತಿಳಿಯಿರೆಂದರಾಯಿತು; ಅಲ್ಲದೆ ನಿಮ್ಮನ್ನು ಕುರಿತು ಮತ್ತೆ ಬಿನ್ನಯಿಸುವೆನೇನೆಂದರೆ, ಈ ಪ್ರಕರಣದ ನಿಕಾಲೆಯಾಗುವವರೆಗೆ ನೀವು ನನ್ನೊಡನೆ ಜೇಲಿನ ಡಾಕ್ಟರರೆಂದೂ ವರ್ತಿಸಬೇಕು; ಅಂದರೆ ನಾನು ನಾಗರಿಕ ಸ್ತ್ರೀ ಇಲ್ಲವೆ ವಕೀಲ ಇವೆರಡರಲ್ಲಿ ಬೇಕಾದ ಸಂಬಂಧದ ನನ್ನ ಅಣ್ಣನ ಬಗ್ಗೆ ಹಕ್ಕಿನಿಂದಲೂ ಸ್ಪಷ್ಟವಾಗಿಯೂ ನಿಮ್ಮ ಸಲಹೆ ಕೇಳಿಕೊಳ್ಳಲಿಕ್ಕೆ ಬಂದೀತು; ಆದರೂ ಕೇವಲ ನ್ಯಾಯವಾದ ರೀತಿಯಿಂದಲೇ ನೀವು ಯಾವ ಸಹಾಯವನ್ನೊದಗಿಸಬಲ್ಲಿರೋ ಅದಷ್ಟನ್ನೇ ಒದಗಿಸಬೇಕು.

ಒಳ್ಳೇದೆಂದು ಹೇಳಿ, ವಿಮಲೆಯೊಡನೆ ಆತನೂ ಹೊರಗಿನ ವರೆಗೆ ಬಂದು ಅವಳನ್ನು ಕಳಿಸಿಕೊಟ್ಟನು; ಆದರೆ ಆತನು ಹಿಂದಿರುಗಿ ಒಳಗೆ ಹೋಗುವಾಗ ತನ್ನ ಜೇಬಿನೊಳಗಿನದೊಂದು ಪಾಕೀಟನ್ನು ತೆಗೆದು ಅವಳ ಕೈಗಿತ್ತನು. ಅದರಲ್ಲಿ ಪ್ರಭಾಕರನ ಭೆಟ್ಟಿಯಾಗಲಿಕ್ಕೆ ಬೇಕಾಗುವ ಪರವಾನಿಗೆಯ ಪಾಸೂ, ಪ್ರಭಾಕರನ ಕಾವಲಿನ ಮುಖ್ಯಸ್ಥನಿಗೆ ಇವರಿಗೆ ಪ್ರಭಾಕರನ ಭೆಟ್ಟಿ ಮಾಡಿಸಬಹುದೆಂಬ

ಅನುಜ್ಞಾಪತ್ರವೂ ಇದ್ದವು.

"ಹೌದಲ್ಲ; ನಾನು ಮರೆತೇ ಬಿಟ್ಟಿದ್ದೆನು!" ಎಂದು ನಾಚಿಕೊಂಡವ ರಂತಹ ಮುಖಚರ್ಯೆಯಿಂದ ವಿಮಲೆಯು ನುಡಿದಳು:- "ನಿಮ್ಮೊಡನೆ ಮಾತ ನಾಡುವಾಗ ನಾನು ಮುಖ್ಯ ಕೆಲಸವನ್ನೇ ಮರೆತುಬಿಟ್ಟಿದ್ದೆನು! ನೀವು ನಮ್ಮ ಬಗ್ಗೆ ಪಡುತ್ತಿರುವ ಮುಂಜಾಗ್ರತೆಯ ಸಲುವಾಗಿ ನಾನು ನಿಮ್ಮ ಕೃತಜ್ಞತೆ ಯನ್ನು ವಹಿಸುವದು ಯೋಗ್ಯವಾಗಿದೆಯಲ್ಲವೆ?" ಹೀಗೆಂದು ಹೇಳಿ, ಅವಳು ಸಾರೋಟ ಗಾಡಿಯನ್ನೇರಿ ಕುಳಿತು: "ಸರಕಾರೀ ಕಂದುರೆಯ ಲಾಯದ ಕಡೆಗೆ ಬಿಡು" ಎಂದು ಗಾಡಿಯವನಿಗೆ ತಿಳಿಸಿದಳು.

ವಿಮಲೆಯು ಆ ಲಾಯಕ್ಕೆ ಹೋಗಿ ಅಲ್ಲಿಯ ಕಾವಲುಗಾರರ ಮುಖ್ಯಸ್ಥ ನಿಗೆ ಮನೋಹರಪಂತನ ಪತ್ರವನ್ನು ಕೊಟ್ಟ ಕೂಡಲೆ ಆತನು ಅವಳನ್ನು ಪ್ರಭಾ ಕರನ ಬಳಿಗೊಯ್ದುಬಿಟ್ಟನು. ಆಗ ಒಂಬತ್ತು ಹೊಡೆದು ಹೋಗಿತ್ತು. ಪ್ರಭಾ ಕರನು ಮೋರೆ ತೊಳಕೊಂಡು, ಸ್ವಸ್ಥವಾಗಿ ಕುಳಿತುಕೊಂಡಿದ್ದನು. ಆತನಿಗೇ ನೇನು ಬೇಕೆಂಬುದನ್ನು ಕೇಳಿಕೊಂಡ ಬಳಿಕ ಅವಳು:—"ಅಣ್ಣಾ, ನಾನಿನ್ನು ನಿನ್ನ ಬಿಡುಗಡೆಯ ಪ್ರಯತ್ನಕ್ಕೆ ತೊಡಗತಕ್ಕವಳು; ಅದರಿಂದ ನಿನಗೇನಾದರೂ ಸೂಚಿಸತಕ್ಕದ್ದಿದ್ದರೆ ಸೂಚಿಸು." ಎಂದು ಹೇಳಿದಳು.

ಆದರೆ ಪ್ರಭಾಕರನು ಏನು ಸೂಚಿಸಬೇಕು? ಸ್ಪಷ್ಟವಾಗಿ ಹೇಳುವದೆಂದರೆ, ಕಾಯಿದೆಯ ಹಾಗು ದರಬಾರದ ಕೆಲಸಗಳಲ್ಲಿ ಆತನು ಕೇವಲ ಶುಂಭನಾಗಿದ್ದ ನು! ಆತನ ಮನಸ್ಸಾದರೂ ವಿಮಲೆಯಂತೆಯೇ ದೊಡ್ಡದೂ ಪರಿಶುದ್ಧವೂ ಆಗಿ ತ್ತು; ಆದರೆ ಆತನಲ್ಲಿಯ ಅರ್ಧಕ್ಕಿಂತ ಹೆಚ್ಚು ಬುದ್ಧಿಯನ್ನು ಕಿತ್ತುಕೊಂಡು ಅದ ನ್ನು ಆತನ ಬೆನ್ನಿಲೆ ಹುಟ್ಟಿದ ತಂಗಿಯ ಬುದ್ಧಿಯಲ್ಲಿ ಕೂಡಿಸಿದಂತಾಗಿತ್ತು. ಅಂತೆಯೇ ಆತನು ಅವಳನ್ನು ಕುರಿತು:—"ತಂಗೀ, ಸರಕಾರೀ ಕೆಲಸವೆಂದ ರೇನೆಂಬದು ನನಗೆ ತಿಳಿಯುವದಿಲ್ಲ. ನೀನು ಬ್ಯಾರಿಸ್ಟರಳಿರುವೆಯಂತೆ. ಅಂದ ಮೇಲೆ ನನ್ನನ್ನೇನು ಕೇಳುತ್ತಿರುವೆ? ವಕೀಲಪತ್ರವನ್ನು ಬರಕೊಂಡು ಬಾ. ಅಂದರೆ ಅದಕ್ಕೆ ಒಂದಲ್ಲ ನಾಲ್ಕು ಸಹಿಗಳನ್ನಿಕ್ಕುತ್ತೇನೆ. ದಿವಾಣಸಾಹೇಬರು ನನ್ನೆದುರಿಗೆ ಬಂದು ನಿಂತರೆ ಒಮ್ಮೆಯಲ್ಲ ನಾಲ್ನಾಲ್ಕು ಸಾರೆ ಅವರ ಕೆನ್ನೆಯ ಮೇಲಿಕ್ಕುತ್ತೇನೆ; ಹಾಗು ಬಾಯಿಗೆ ಬಂದ ಹಾಗೆ ಅವರಿಗೆ ಬೈಯುತ್ತೇನೆ. ಇನ್ನು ನನ್ನನ್ನು ಜವಾಬಿಗೆ ನಿಲ್ಲಿಸಿದೆಯೆಂದರೆ ನಾನು ಯಾರ ಅಪ್ಪನಿಗೂ ಅಂಜದೆ ನಿಜವಾದ ಸಂಗತಿಯನ್ನು ಒಮ್ಮೆಯಲ್ಲ ಹತ್ತುಸಾರೆ ಬೇಕಾದರೂ ಹೇಳುತ್ತೇನೆ; ಮತ್ತು ಇದರ ಮೇಲೆಯೂ ನಾನು ಅನ್ಯಾಯದಿಂದ ಶಿಕ್ಷೆ ಭೋಗಿಸಬೇಕೆಂಬ ಈಶ್ವರೀ ಸಂಕೇತವಿದ್ದರೆ, ಒಮ್ಮೆಯೇ ಅಲ್ಲ, ನಾಲ್ಕು ಸಾರೆ ಗಲ್ಲಿಗೇರುತ್ತೇನೆ!"

ಇಂಥ ಅಪಮುಟ್ಟನೆದುರಿಗೆ ವಿಮಲೆಯೇನು ಮಾತಾಡುವಳು? ಹೂ, ಹೂ, ಅನ್ನುವಾಗ ಅವನಿಗೆ ಸಾಕುಸಾಕೆನಿಸಿತು. ಆತನು ಬಿಡುಗಡೆಯ ಯುಕ್ತಿಯನ್ನೇನಾದರೂ ಹೇಳುವನೆಂಬ ಆಶೆಯು ವ್ಯರ್ಥವಾಯಿತು. ಹತ್ತಿರ ಯಾರೂ ಇಲ್ಲದ್ದನ್ನು ಕಂಡು ವಿಮಲೆಯು ಆತನ ಸಂಬಂಧದ ಸಮಗ್ರ ಸಂಗತಿಯನ್ನು ಮತ್ತೊಮ್ಮೆ ಅವನಿಂದ ಕೇಳಿಕೊಂಡಳು. ಬಳಿಕ ಅವಳು:—"ಧೈರ್ಯದಿಂದಿರೆಂದು ನಿನಗೆ ಇನ್ನೊಬ್ಬರು ಹೇಳಿಕೊಡುವ ಕಾರಣವೇ ಇಲ್ಲ; ಆದರೆ ಸರಕಾರ ತರ್ಫೇಯವರಾರಾದರೂ ಜವಾಬು ತಕ್ಕೊಳ್ಳಲಿಕ್ಕೆ ಬಂದರೆ, ಇಲ್ಲವೆ ಬೇರೆ ಯಾರಾದರೂ ಬೇರೆ ವಿಧದಿಂದ ಏನಾದರೂ ಮಾಹಿತಿ ಕೇಳ ಬಂದರೆ, ನೀನು ಯಾರ ಸಂಗಡಲೂ ಏನನ್ನೂ ಮಾತಾಡಬೇಡ. ಏನು ಹೇಳಬೇಕಾಗಿದೆಯೋ ಅದನ್ನೆಲ್ಲ ನಾನು ಕೋರ್ಟಿನಲ್ಲೇ ಹೇಳುತ್ತೇನೆಂದು ಅನ್ನು. ಇಷ್ಟು ಎಚ್ಚರಿಕೆಯನ್ನು ಮಾತ್ರ ಅತ್ಯವಶ್ಯವಾಗಿ ವಹಿಸು" ಎಂದು ಹೇಳಿ ಹಾಗು ಅದನ್ನೇ ಆತನಿಗೆ ಮತ್ತೆ ಮತ್ತೆ ಬಜಾಯಿಸಿ, ವಿಮಲೆಯು ತನ್ನ ಅಣ್ಣನ ಅಪ್ಪಣೆ ಪಡೆದು ಅಲ್ಲಿಂದ ಹೊರಬಿದ್ದು ಹೋದಳು.

ಮಧ್ಯಾಹ್ನದಲ್ಲಿ ದಿವಾಣಸಾಹೇಬರು ಕಚೇರಿಗೆ ಬಂದ ಬಳಿಕ ಅವಳೂ ಕಚೇರಿಗೆ ಹೋದಳು. ಅವಳು ತನ್ನ ಹೆಸರಿನ ವ್ಹಿಜಿಟಿಂಗ ಕಾರ್ಡನ್ನು ಒಳಗೆ ಕಳಿಸಿದಳು. ಒಳಗಿನಿಂದ ಎಷ್ಟೋ ಹೊತ್ತಿನವರೆಗೆ ಉತ್ತರವೇ ಬರಲಿಲ್ಲ. ಅದರಿಂದ ಅವಳು ನೆನಪಿಗೆಂದು ಮತ್ತೆ ಎರಡನೇ ಕಾರ್ಡು ಕಳಿಸಿದಳು. ಆಗ ಅವಳನ್ನು ಒಳಗೆ ಬರಮಾಡಿಕೊಂಡರು. ಆಕೆಯು ನೆಟ್ಟಗೆ ಹೋದವಳೇ ಖುರ್ಚಿಯ ಮೇಲೆ ಕುಳಿತುಕೊಂಡಳು. ಆದರೂ ದಿವಾಣಸಾಹೇಬರು ಮೋರೆಯನ್ನು ಮೇಲೆ ಮಾಡಿ ನೋಡಲಿಲ್ಲ. ಆದರೆ ಕೈಯೊಳಗಿನ ಕಾಗದ-ಪತ್ರಗಳನ್ನು ನೋಡುತ್ತಲೇ ಇದ್ದು ನೋಡುವವರ ಹಾಗೆ ನಡುನಡುವೆ ಅವಳ ಮುಖದ ಕಡೆಗೆ ನೋಡುತ್ತಿದ್ದರು. ಆ ಬಗ್ಗೆ ಕೋಪಗೊಂಡು ಅವಳು:—"ಸರಕಾರೀ ಕೆಲಸಕ್ಕೆಂದು ನಾನು ನಿಮ್ಮನ್ನೇ ಕಾಣಬಂದಿದ್ದೇನೆ" ಎನ್ನಲು,

ದಿ:—ಏನು? ಸರಕಾರೀ ಕೆಲಸವೇ? ನನ್ನ ಕಡೆಗೇ? ನಿಮ್ಮ ಕೆಲಸವೇ?

ವಿ:—ಹೌದು. ನಾನು ವಕೀಲೀ ಸನದಿನ ಬಗ್ಗೆ ಅರ್ಜಿ ಕೊಡಬೇಕಾಗಿದೆ; ಹೈಕೋರ್ಟಿನ ಸನದಿನ ಬಗ್ಗೆ ಬೇಕಾಗುವ ಫೀಯು ಐನೂರು ರೂಪಾಯಿಗಳನ್ನು ನಾನು ನನ್ನ ಸಂಗಡ ತಂದಿರುತ್ತೇನೆ. ಆದ್ದರಿಂದ ರೂಪಾಯಿಗಳನ್ನು ಜಮಾ ಮಾಡಿಕೊಂಡು, ನನಗೆ ಸನದು ದೊರೆಯುವ ಹುಕುಮು ಆಗಬೇಕು.

ಆದರೆ ವಿಮಲೆಯು ಹೇಳುವ ಸಂಗತಿಯು ತಮಗೆ ತಿಳಿಯಲೇ ಇಲ್ಲೆಂಬ ರೀತಿಯಿಂದ ದಿವಾಣಸಾಹೇಬರು:—"ಏನಂದಿರಿ, ವಕೀಲಿಯ ಸನದೇ? ಮತ್ತು

ಅದು ಸ್ತ್ರೀಯರಿಗೇ?

ವಿ:--ಹೌದು. ನಾನು ವಕೀಲೀ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿರುತ್ತೇನೆ.

ದಿ: — ಈ ಸಂಸ್ಥಾನದ ವಕೀಲೀ ಪರೀಕ್ಷೆಯಲ್ಲೇನು?

ವಿ:—ಈ ಸಂಸ್ಥಾನದಲ್ಲಿ ವಕೀಲೀ ಪರೀಕ್ಷೆಯಿಲ್ಲೆಂಬುದು ನಿಮಗೆ ಗೊತ್ತೇ ಇದೆ. ನಾನು ಬ್ರಿಟಿಶ ಹಾಯಕೋರ್ಟಪ್ಲೀಡರ ಪರೀಕ್ಷೆಯಲ್ಲ ಪಾಸಾಗಿರುತ್ತೇನೆ.

ದಿ:—ಹಾಗಾದರೆ ಬ್ರಿಟಿಶ ಮುಲುಖಿನಲ್ಲಿಯೇ ಸನದು ಪಡಕೊಳ್ಳಿರಿ.

ವಿ:—ಆದರೆ ಅದೇ ಪರೀಕ್ಷೆಯಿಂದ ಸಂಸ್ಥಾನದ ಸನದೂ ದೊರೆಯುತ್ತದೆ.

ದಿ:—ಅಹುದು; ಕೊಟ್ಟರೆ ಸಿಕ್ಕೀತಲ್ಲ!

ವಿ:—ಹಾಗಾದರೆ ನನಗದನ್ನು ಕೊಡಲಿಕ್ಕೆ ಅಡ್ಡಿಯೇನು?

ದಿ:—ನೀವು ಸ್ತ್ರೀಯರಿರುತ್ತೀರಿ; ಹಾಗು ಇದು ಸಂಸ್ಥಾನವಿರುತ್ತದೆ! ಇದೇ ಅಡ್ಡಿಯು.

ವಿ:—ಹಾಗಾದರೇನು ಸಂಸ್ಥಾನದೊಳಗಿನ ಸ್ತ್ರೀಯರೂ ಬ್ರಿಟಿಶ ಮುಲುಖಿನೊಳಗಿನ ಸ್ತ್ರೀಯರೂ ಭಿನ್ನ ಭಿನ್ನ ಸ್ತ್ರೀವರ್ಗದವರೇನು?

ದಿ: –ಸ್ತ್ರೀಯರೆಲ್ಲ ಇಲ್ಲಿಂದ ಅಲ್ಲಿಯ ವರೆಗೂ ಒಂದೇ............

ವಿ:—ಅಂದರೆ 'ಹರಾಮಖೋರ' ಎಂಬ ಶಬ್ದವನ್ನಷ್ಟೇ ನೀವು ಉಚ್ಚರಿಸಲಿಲ್ಲ; ಆದರೆ ನಿಮ್ಮ ಮಾತಿನ ಬಲವು............

ದಿ:—ಛೀ. ಛೀ. ಸ್ತ್ರೀಯರೆದುರಿಗೆ ಹಾಗೇಕೆನ್ನಬೇಕು?

ವಿ:—ಹಾಗಾದರೆ ಸ್ತ್ರೀಯರ ಅಪರೋಕ್ಷದಲ್ಲನ್ನಲಿಕ್ಕೆ ಅಡ್ಡಿಯಿಲ್ಲವೆಂತಲ್ಲವೆ? ಆದರೆ ಸ್ತ್ರೀಜಾತಿಯ ವಿಷಯಕ್ಕೆ ನಿಮಗೆ ಏನೇ ಅನಿಸಲಿ, ನನ್ನ ಸನದಿನದೇನು?

ದಿ: —ನಾನು ಅದನ್ನೇ ಹೇಳಿ ಮುಗಿಸುವವನಿದ್ದೆನು; ಅಷ್ಟರಲ್ಲೇ ನೀವು ಮಾತನಾಡಿದಿರಿ! ಸ್ತ್ರೀಯರು ಎಲ್ಲಿಲ್ಲಿಯೂ ಒಂದೇ! ಆದರೆ ಸಂಸ್ಥಾನದಲ್ಲಿ ಸ್ತ್ರೀಯರಿಗೆ ಸನದು ದೊರೆಯಲಿಕ್ಕೆ ಇನ್ನೂ ನಾಲ್ಕಾರು ಪೀಳಿಗೆಗಳು ಗತಿಸಬೇಕು.

ವಿ:-ಅದನ್ನು ಕೊಡಕೂಡದೆಂಬ ನಿಯಮ ಬೇರೆ ಈ ಪೀಳಿಗೆಯಲ್ಲಿಲ್ಲವಷ್ಟೆ?

ದಿ: - ನಿಯಮವೇ?.........ಹೂ. ನಿ-ಯ-ಮ! ಸಂಸ್ಥಾನದಲ್ಲಿ ನಿಯಮ-ಗಿಯಮಗಳಿರುತ್ತಿರುವದಿಲ್ಲ. ಕೇವಲ ಅಧಿಕಾರಿಗಳಿರುತ್ತಾರೆ.

ವಿ:—ಅಂತೆಯೇ ನಾನು ಇಂತೊಬ್ಬ ಅಧಿಕಾರಿಯ ಬಳಿಗೆ ಸನದು ಕೇಳಲಿಕ್ಕೆ ಬಂದಿದ್ದೇನೆ.

ದಿ: — ಆದರೆ ಆತನಿಗೆ ಕೊಡಬೇಕೆಂದೆನಿಸಿದರೆ ಕೊಟ್ಟಾನು! ನ್ಯಾಯದಾನದ ಕೆಲಸಗಳಲ್ಲಿ ಸ್ತ್ರೀಯರಿಗೆ ತಲೆಹಾಕಲಿಕ್ಕೆ ಆಸ್ಪದ ಕೊಟ್ಟು, ಸಂಸ್ಥಾನೀ ಪ್ರಜೆಗಳ ಎಡೆಯಲ್ಲಿ ಮಣ್ಣು ಕಲೆಸಬೇಕೋ ಏನು?

ವಿ:-ಆ ಮಣ್ಣು ಬೆರಿಸುವ ಕಂತ್ರಾಟವನ್ನು ಕೇವಲ ಪುರುಷರಿಗೇ ಕಾದಿಡ ಬೇಕೆಂದು ನಿಮ್ಮ ಅಭಿಪ್ರಾಯವಿದ್ದಂತೆ ಕಾಣುತ್ತದೆ! ಚಿಕ್ಕಮಕ್ಕಳಿಗೆ ಮಣ್ಣಾಟವು ರುಚಿಸುತ್ತದೆ; ಆದರೆ ಅವುಗಳಿಗಾದರೂ ಅದೆಷ್ಟು ಆಡಗೊಡಬೇಕೆಂಬದರ ಬಗ್ಗೆ ಮಿತಿಯು ಇದ್ದೇ ಇರುವದು! ನೀವು ನನಗೆ ಸನದು ಕೊಡದಿದ್ದರೆ ಬಿಡಿರಿ; ಆದರೆ ನನ್ನ ಅರ್ಜಿಯ ಮೇಲೆ ಹಾಗೆ ಶರಾ ಬರೆದಾದರೂ ಕೊಡಬೇಕಲ್ಲವೆ?

ದಿ:—ಯಾವದೊಂದು ಸಂಗತಿಗೆ ನಕಾರದ ಉತ್ತರ ಹೇಳುವ ಅಧಿಕಾರದಲ್ಲಿ ಹಾಗೆ ಉತ್ತರಕೊಡದಿರುವ ಅಧಿಕಾರವೂ ಸಮಾವೇಶವಾಗುತ್ತದೆ.

"ವಿದಿತವಾಯಿತು. ಒಳ್ಳೇದು" ಹೀಗೆಂದವಳೇ ವಿಮಲೆಯು ಅಲ್ಲಿಂದ ಸಿಟ್ಟಿನಿಂದಲೇ ಎದ್ದಳು; ಹಾಗು ಮನೆಗೆ ಬಂದು ಮನೋಹರಪಂತನ ಹೆಸರಿಗೆ ಅವಳು ಹೀಗೆಂದು ಪತ್ರ ಬರೆದಳು:

"ಸ. ನಮಸ್ಕಾರಗಳು. ನಿಮ್ಮ ಭೆಟ್ಟಿಯಲ್ಲಿ ಅನುಮಾನ ಮಾಡಿದಂತೆ ದಿವಾಣಸಾಹೇಬರ ಸರಳ ಸ್ವಭಾವದ ಪರೀಕ್ಷೆ ಮಾಡಿದೆನು. ಸನದಿನ ಫೀಯು ಐದು ನೂರು ರೂಪಾಯಿಗಳನ್ನು ಒಯ್ಸಿದ್ದರೂ, ನಾನು ಸ್ತ್ರೀಯಿರುವದರಿಂದ ನನಗೆ ಸನದು ಕೊಡಲಾಗದೆಂದು ಅವರು ಹೇಳಿದರು. ಅದರಿಂದ ವರಿಷ್ಠ ಅಧಿಕಾರಿಗಳೆಂದು ನಾನಿನ್ನು ಮಹಾರಾಜರಿಗೇ ಭೇಟಿಯಾಗಬೇಕಾಗಿದೆ. ಆದ್ದರಿಂದ ಅವರನ್ನು ಕಾಣುವ ಅಪ್ಪಣೆ ದೊರಕಿಸಿ, ಭೆಟ್ಟಿಯ ವೇಳೆಯನ್ನು ಗೊತ್ತುಪಡಿಸಿ ನನಗೆ ತಿಳಿಸುವ ಕೃಪೆಯಾಗಬೇಕು. ಬೆಳಗಿನ ಭೆಟ್ಟಿಯಲ್ಲಿ ನೀವು ಹೇಳಿದಂತೆಯೇ ಖಾಸಗೀ ನಾತೆಯಿಂದ ನಾನೀ ಪತ್ರವನ್ನು ನಿಮಗೆ ಬರೆದಿರುತ್ತೇನೆ."

ಆ ಪತ್ರಕ್ಕೆ ಮುಂದೆ ಒಂದೂವರೆ ತಾಸಿನಲ್ಲಿಯೇ ಉತ್ತರ ಬಂತು: "ನಾಳೆ ಬೆಳಿಗ್ಗೆ ಒಂಬತ್ತು ಗಂಟೆಗೆ ಶ್ರೀಮಂತ ಯಜಮಾನ ಸಾಹೇಬರು ಅರಮನೆಯೊಳಗೆ ನಿಮ್ಮನ್ನು ಕಂಡಾರು"

ಅದರಂತೆ ಮರುದಿನ ಮುಂಜಾನೆ ವಿಮಲೆಯು ತನ್ನ ದೈನಿಕ ಶಿಸ್ತಿನಂತೆ ಸಾದಾಉಡುಪಿನಿಂದ ಅರಮನೆಗೆ ಹೊರಟಳು.

* * * * * * * * * * * *

ವಿಮಲೆಯು ಆ ಜೋಧ್ಯಪುರ ಸಂಸ್ಥಾನದ ಖುದ್ದ ರಾಜಧಾನಿಯಲ್ಲೇ ಇಷ್ಟು ವರ್ಷ ವಾಸಿಸಿದವಳು; ಆದರೂ ತನಗೆ ತಿಳಿಯಹತ್ತಿದಾಗಿನಿಂದ ಇಂದೇ ಅವಳು ಅರಮನೆಯಲ್ಲಿ ಪ್ರಥಮ ಪ್ರವೇಶ ಮಾಡುತ್ತಿದ್ದಳು. ಚಿಕ್ಕಂದಿನಲ್ಲಿ ಅವಳು ತನ್ನ ತಂದೆಯೊಡನೆ ಪೋಲೀಟಿಕಲ್ ಏಜಂಟಸಾಹೇಬರ ಗಾರ್ಡನ ಪಾಟಿಗಾಗಲಿ ಇಲ್ಲವೆ ಬೇರೆ ಹುಡುಗರೊಡನೆ ಬಕ್ಷೀಸ ಸಮಾರಂಭಕ್ಕಾಗಲಿ ಹೋಗಿರಬಹುದು; ಆದರೆ ಗತಿಸಿದ ಮಹಾರಾಜರು ಜೀವದಿಂದಿರುವವರೆಗೆ ಸ್ತ್ರೀಯರು

ಜೋಜಿಗಮಹಾಜರನ್ನೇ ಭೆಟ್ಟಿಯಾಗಬೇಕಾಯಿತು; ಮತ್ತು ಮಹಾರಾಜರ ಭೆಟ್ಟಿಯು ಅಪ್ಪಣೆ ಪಡೆದು ವೇಳೆ ತಿಳಿಸಬೇಕೆಂದು ವಿಮಲೆಯಿಂದ ಆತನಿಗೆ ಚೀಟಿ ಬಂದುದರಿಂದ, ಮನೋಹರನ ಆನಂದಕ್ಕೆ ಸಹಜವಾಗಿಯೇ ಭರತಿಯುಂಟಾಯಿತು.

"ದೇವಾ, ನೀನು ನಿನ್ನ ಸ್ಥಳದಲ್ಲೇ ಕುಳಿತು ಲೋಕದೊಳಗಿನ ತರುಣ ಸ್ತ್ರೀ-ಪುರುಷರ(ಮತ್ತು ವಿಧವಾ ವಿವಾಹವು ಬಳಿಕೆಗೆ ಬಂದಂದಿನಿಂದ ಪ್ರೌಢಸ್ತ್ರೀ-ಪುರುಷರು) ಹೆಸರುಗಳ ಹುಲ್ಲಿನ ಸಿವುಡುಗಳನ್ನು ಕಟ್ಟಿ ಕಟ್ಟಿ ಚೆಲ್ಲುತ್ತೀ; ಹಾಗು ಅವರ ಲಗ್ನ ಪತ್ರಗಳನ್ನು ಬರೆಯುತ್ತೀ. ಅದರಂಥದೇ ಒಂದು ಜೋಜಿಗರಾಯ-ವಿಮಲೆಯರ ಹೆಸರಿನ ಸಿವುಡನ್ನು ಕಟ್ಟಿ ಒಗೆದರೆ ಮತ್ತು ಇವರುಗಳ ಲಗ್ನಪತ್ರವನ್ನು ನೀನು ನಿನ್ನ 'ವಿಶ್ವಕರ್ಮಾ' ಎಂಬ ಹೆಸರಿನ ಮುದ್ರಣಾಲಯದಲ್ಲಿ ಮುದ್ರಿಸಿದರೆ ನಾನು ನಿನಗೆ...." ಎಂದು ಆತನು ಮನಸ್ಸಿನಲ್ಲಿ ಬ್ರಹ್ಮದೇವರಿಗೆ ಹರಕೆ ಕೂಡ ಕಟ್ಟಿರಬಹುದು; ಆದರೆ ಬ್ರಹ್ಮದೇವರಿಗೆ ಪ್ರೀತಿಯ ಪದಾರ್ಥವಾವುದೆಂಬದರ ಮಾಹಿತಿಯು ನಮಗಿರದ್ದರಿಂದ, ಆತನು ಬ್ರಹ್ಮದೇವರ ಹರಕೆಯನ್ನು ಹೇಗೆ ತೀರಿಸಿದನೆಂಬದನ್ನು ನಾವು ಹೇಳಲಾರೆವು; ಆದರೂ ಮಿತ್ರಪ್ರೇಮಕ್ಕಾಗಿ ಆತನು ಸ್ವಂತದ ದೇಹದೊಳಗಿನ ನಾಲ್ಕು ತೊಲೆ ಮಾಂಸವನ್ನು ಕೂಡ ತೆಗೆದು ಕೊಡುತ್ತಿದ್ದನೆಂಬದಕ್ಕೆ ಸಂದೇಹವಿಲ್ಲ. ಇರಲಿ.

ನಾಳೆ ಬೆಳಿಗ್ಗೆ ತಮ್ಮ ಮಿತ್ರ ಜೋಜಿಗರಾಯ ಮತ್ತು ತಾನು ತನ್ನ ಮನಸ್ಸಿನಲ್ಲಿ ಆತನಿಗಾಗಿ ನಿಯೋಜಿಸಲ್ಪಟ್ಟ ವಧುವಾದ ವಿಮಲೆ ಇವರ ಭೆಟ್ಟಿಯಾಗುವದು; ಹಾಗು ಆ ಪ್ರಸಂಗದಲ್ಲಿ ಹಾಜರಿರಲಿಕ್ಕೆ ತನಗೆ ಲಭಿಸುವದು ಎಂಬೀ ಆನಂದದಿಂದ ಮನೋಹರನಿಗೆ ಆ ರಾತ್ರಿಯಲ್ಲಿ ನಿದ್ದೆಯೇ ಬರಲಿಲ್ಲ. ಮರುದಿನ ಎಂಟಕ್ಕೆ ಜೋಜಿಗರಾಯನು ಕುದುರೆಯ ಸವಾರಿ ಮಾಡಿ ಹಿಂದಿರುಗುವಷ್ಟರಲ್ಲಿ ಮನೋಹರನ ಸವಾರಿಯು ಅರಮನೆಯೊಳಗೆ ಹೋಗಿ ಕುಳಿತಿತು; ಮತ್ತು ಇಂದು ಆತನು ಜೋಜಿಗರಾಯನ ಸ್ವಾಗತವನ್ನು ದಿನಕ್ಕಿಂತಲೂ ಹೆಚ್ಚು ಉತ್ಸಾಹಪೂರ್ಣ ಶಬ್ದಗಳಿಂದ ಮಾಡಿದನು. ಇದರಂತೆಯೇ ಅಂದು ರಾತ್ರಿ ದರ್ಶನ ಕೊಟ್ಟ ಸ್ತ್ರೀಯು ಇಂದೊಂದು ಅಕಲ್ಪಿತ ರೀತಿಯಿಂದ ತನ್ನ ಅರಮನೆಗೇ ಬಂದು ತನಗೆ ಭೆಟ್ಟಿಯಾಗುವಳೆಂಬ ಮಾಹಿತಿಯು ಮನೋಹರನಿಂದ ಮುನ್ನಾದಿನವೇ ತಿಳಿದದ್ದರಿಂದ ಜೋ-ಜಿಗರಾಯನ ಮನಸ್ಸಿನಲ್ಲಿಯೂ ಮೊದಲನೇ ದಿನದ ರಾತ್ರಿಯಲ್ಲಿ ನಿದ್ದೆ ಹತ್ತುವ ಮೊದಲು ಯಾವ ಯಾವ ವಿಚಾರಗಳು ಬಂದಿರಬಹುದೆಂಬದರ ಕಲ್ಪನೆಯನ್ನು ವಾಚಕವೃಂದವು ಸಹಜವಾಗಿ ಕಲ್ಪಿಸಿಕೊಳ್ಳಬಹುದಾಗಿದೆ. ಸಂಧಿಪ್ರಕಾಶದಲ್ಲಿ ಫೋಟೋ ತೆಗೆದಂತೆ, ಲಾಂದರದ ಮುಸಮುಸಕಾದ ಬೆಳಕಿನಲ್ಲಿ ವಿಮಲೆಯ ಆ ಛಾಯಾ ಚಿತ್ರವು ಹೆಚ್ಚು ಸ್ಪಷ್ಟ ಹಾಗು ಒಡೆದು ಕಾಣಲಿಕ್ಕೆಂದು ಆತನು ತನ್ನ

ಸ್ಮೃತಿಯಲ್ಲಿ ಭಾವನೆಯನ್ನು ಬೆರಿಸಿ, ಅವುಗಳ ರಸಾಯನವನ್ನು ಮನಸ್ಸಿನ 'ಫೋಟೋಗ್ರಾಫಿಕ್ ಪ್ಲೇಟಿ'ಗೆ ಮೇಲಿಂದ ಮೇಲೆ ಸವರುತ್ತಿದ್ದನು; ಮತ್ತು ಬೆಳಿಗ್ಗೆದ್ದು ಕುದುರೆಯ ಸವಾರೀ ಮಾಡುತ್ತಿರುವಾಗ ಅದರೊಡನೆಯೇ ಆತನ ಆ ಅಮೂರ್ತ ಮನೋರಥವೂ ಓಡುತ್ತಿತ್ತೆಂಬದಕ್ಕೆ ಸಂಶಯವಿಲ್ಲ.

ಕುದುರೇ ಸವಾರಿಯಿಂದ ಹಿಂದಿರುಗಿ ಬಂದ ಬಳಿಕ ಅರಿವೆಗಳನ್ನು ಬದಲಿಸಿ, ಕ್ಷಣಕಾಲ ವಿಶ್ರಾಂತಿ ಪಡೆದ ನಂತರ ಹೊರಗೆ ದಿವಾಣಖಾನೆಗೆ ಬಂದು ಕೂಡ್ರುವ ವರೆಗಿನ ಅಲ್ಪಾವಧಿಯಲ್ಲೇ ಜೋಜಿಗರಾಯನ ಅಂತರಂಗದಲ್ಲಿ ಆತನವೇ ಎರಡು ಮನಸ್ಸುಗಳು ತಮ್ಮ ತಮ್ಮೊಳಗೆ ಈ ಬಗೆಯಾಗಿ ಸಂಭಾಷಿಸಿದವು:

೧ನೇ ಮನಸ್ಸು:—ಪ್ರತಿಯೊಬ್ಬರೂ ತಂತಮ್ಮ ಮನೆಯ ಸಿಂಹ ಇಲ್ಲವೆ ರಾಜರಾಗಿರುತ್ತಾರೆ. ಅಂದು ಅವಳು ಆ ರಾತ್ರಿಯಲ್ಲಿ ನನ್ನನ್ನು ಬೆದರಿಸಿ, ಸಿರ್ಭಿಡೆಯಿಂದ ಹಿಂದಿರುಗ ಹಚ್ಚಿದ್ದರ ಸೇಡನ್ನು ನಾನಿಂದು ತೀರಿಸಿಕೊಂಡರೆ? ಇಂದು ಅವಳು ಬಂದಾಗ ಕಾಣಲಿಕ್ಕೆ ಸಮಯವಿಲ್ಲೆಂದು ಹೇಳಿ ತಿರುಗಿ ಕಳಿಸಿದರೆ?

೨ನೇ ಮನಸ್ಸು:-ನಿನ್ನ ಯೋಗ್ಯತೆಯೇ ಅದು? ಅವಳು ತನ್ನ ಮನೆಯಲ್ಲೇ ಏಕೆ, ನಿನ್ನ ಮನೆಯಲ್ಲೂ ಸಿಂಹಿಣಿಯೇ ಆದಾಳು. ಅವಳಾಗಿ ಹಿಂದಿರುಗಿ ಹೋಗ ಹತ್ತಿದರೆ, ಯುಕ್ತಿ-ಪ್ರಯುಕ್ತಿಗಳಿಂದ ನೀನೇ ಅವಳನ್ನು ತಡೆದಿರಿಸಿಕೊಳ್ಳುತ್ತೀ.

೧ನೇ ಮ:—ಒಳ್ಳೇದು; ಬಂದರೆ ಭೆಟ್ಟಿಯಾಗುವೆನು; ಆದರೆ ಅವಳಿಗೆ ಸನದು ಕೊಡದೆ ಅವಳ ನೀರಿಳಿಸಿದರೆ?

೨ ಮ:—ಅದು ಅಮಾನ್ಯವಾದೀತು. ಅವಳು ಸನದನ್ನು ಬಿಟ್ಟಿಯಾಗಿ ಕೇಳುವದಿಲ್ಲ. ರಕ್ತದ ನೀರು ಮಾಡಿ, ಬುದ್ಧಿಬಲದಿಂದ ವಕೀಲೀ ಪರೀಕ್ಷೆಯಲ್ಲಿ ಪಾಸಾಗಿರುತ್ತಾಳೆ. ರೋಖ ಐದು ನೂರು ರೂಪಾಯಿಗಳನ್ನೆಣಿಸಿ, ಸಂಕಟಗ್ರಸ್ತನಾದ ಅಣ್ಣನ ಬಿಡುಗಡೆಯ ಪ್ರಯತ್ನಕ್ಕೆಂದು ಸನದು ಕೇಳುವವಳಿಗೆ ನೀನು ಅದಾವ ಮೋರೆಯಿಂದ ಸನದು ಕೊಡುವದಿಲ್ಲೆನ್ನುತ್ತೀ?

೧ ಮ:—ಅವಳು ಬಂದು ಕುಳಿತರೂ ನಾನು ಅವಳ ಕಡೆಗೆ ಕಣ್ಣೆತ್ತಿ ನೋಡದಿದ್ದರೆ?

೨ ಮ:—ವಧು-ಪರೀಕ್ಷೆಯ ಭೆಟ್ಟಿಯಲ್ಲಿ ಕೆಳಮೋರೆ ಮಾಡಿ ಕುಳಿತು ಕಣ್ಣೆತ್ತಿ ನೋಡದವಳೇ ವಧುವು! ಇದೇ ಏನು ನಿನ್ನ ಪುರುಷಧರ್ಮವು? ದೇವರು ತಾನಾಗಿ ಭೆಟ್ಟಿಗೆ ಬಂದರೆ, ಅಭಾಗ್ಯನೇ, ಕಣ್ತುಂಬ ದರ್ಶನಮಾಡಿಕೊಳ್ಳುವದನ್ನು ಬಿಟ್ಟು, ನೀನದೇನನ್ನು ದೊರಕಿಸುವೆ? ವಿನಯಕ್ಕಾದರೂ ಕೆಲ ಮೋರೆಯಿರಬೇಕಲ್ಲವೆ?

೧ ಮ:—ಅದಿರಲಿ. ಹಾಗಾದರೆ ಅವಳೊಡನೆ ಮಾತು-ಕಥೆಯಾಡುವ

ದೇ ಸಂಭಾವಿತತನದೂ ದಾಕ್ಷಿಣ್ಯದೂ ಆಗಿದ್ದರೆ, ಅವಳನ್ನು ಸಾಕಷ್ಟು ಮಾತಾಡಿಸಿಕೊಂಡೇ ಬಿಡುತ್ತೇನೆ.

೨ ಮ:—ತಂಬೂರಿಯ ಜೋಡತಂತಿಗಳು ಹೀಗೆಯೇ ನುಡಿನುಡಿಯುತ್ತ ಏಕರೂಪವಾಗುತ್ತವೆ! ಕೂಡಿ ಹೋಗುತ್ತವೆ! ಅಪ್ಪಾ, ಇದು ದೇವರ ಘಟನೆಯಿದೆ; ಮತ್ತು ಹುಚ್ಚಾ, ಅದರಲ್ಲಿ ನಿನ್ನ ಜನ್ಮದ ಕಲ್ಯಾಣವಿರುತ್ತದೆ.....

ಆದರೆ ಒಳಗಂಟಿನ ಜನರು, ಕೆಲಕೆಲವು ತರುಣರೂ ಕೂಡ ತಮ್ಮ ಮನಸ್ಸಿನೊಳಗಿನ ಇಂಗಿತವನ್ನು ಬೇರೆಯವರಿಗೆ ತಿಳಿಯಗೊಡುತ್ತಿರುವದಿಲ್ಲ. ಅಂತೆಯೇ ಮನೋಹರನು ಮಾಡಿದ ಉತ್ಸಾಹಪೂರ್ಣ ಸ್ವಾಗತವು ಸಹೇತುಕವಾಗಿದೆಯೆಂಬದನ್ನು ಗುರ್ತಿಸಿ, ಜೋಜಿಗರಾಯನಾದರೂ ದಿನಕ್ಕಿಂತ ಹೆಚ್ಚು ಸಾದಾ ರೀತಿಯಿಂದ ಹಾಗು ಉಪೇಕ್ಷಿತ ದನಿಯಿಂದ ಅವನಿಗೆ ಉತ್ತರವಿತ್ತನು. ಬಳಿಕ ಚಹ ಕುಡಿಯುತ್ತಿರುವಾಗ ಮಾತಿನ ಸಂದರ್ಭವನ್ನುಂಟು ಮಾಡಿ ಅದನ್ನು ತಮಗೆ ಬೇಕಾಗಿರುವಂತೆ ಹೇಗೆ ತಂದುಕೊಳ್ಳಬೇಕೆಂಬದನ್ನು ಅವರು ಮನಸ್ಸಿನಲ್ಲಿ ಆಲೋಚಿಸುತ್ತಿರಲು, ಮನೋಹರನು: ಮಹಾರಾಜರೇ, ಕೇವಲ ಅಡಿಗೆಯವರು ಮಾಡುವ ಈ ಚಹವನ್ನೇ ಕುಡಿಯುವ ನಮ್ಮ ಮೇಲಿನ ಈ ಸಂಕಟವು ಯಾವಾಗ ಪರಿಹಾರವಾದೀತೆಂಬದನ್ನು ಹೇಳುವಿರೇನು? ಎಂದು ಕೇಳಲು,

ಜೋ:—ಏನು? ಮನೋಹರಾ, ಅಡಿಗೆಯವನು ಮಾಡಿದ ಚಹ ಕುಡಿಯುವದಕ್ಕೆ ಸಂಕಟವೆನ್ನುತ್ತೀಯಾ?

ಮ:—ಜೋಜಿಗಮಹಾರಾಜರೇ, ಅದಲ್ಲದೇನು? ಚಹದಲ್ಲಿ ಹಾಲು ಸಕ್ಕರೆಗಳೊಡನೆ ಮತ್ತೇನು ಬೆರಿಸಬೇಕಾಗುತ್ತದೆಯೋ, ಅದು ಅಡಿಗೆಯವನು ಮಾಡುವ ಚಹದಲ್ಲಿ ಬೆರಿಸಿರುವದಿಲ್ಲವಲ್ಲ!

ಜೋಜಿಗರಾಯನು ಹುಚ್ಚು ಮೈಮೇಲೆ ಹಾಕಿಕೊಂಡು:—ಅಂದರೆ? ಒಲೆಯ ಮೇಲಿನ ಇಲ್ಲಾಣಗಳೇನು? ಮಕ್ಕಳು-ಮರಿಗಳುಳ್ಳ ಲಗ್ನದ ಹೆಂಡತಿಯು ಮನೆಗೆ ಬಂದ ಹೊರತು, ಆ ಇಲ್ಲಾಣಗಳು ಚಹದಲ್ಲಿ ಹೇಗೆ ಬೀಳಬೇಕು? ಅವಳು ಚಹವನ್ನು ಒಲೆಯ ಮೇಲಿರಿಸಬೇಕು; ಅಷ್ಟರಲ್ಲಿ ಒಂದು ಕೂಸು ಅಳಹತ್ತಲು ಚಹದ ಮೇಲೆ ಮುಚ್ಚಲಿಕ್ಕೆ ಮರೆಯಬೇಕು! ಎರಡನೇ ಹುಡುಗನ ಅಳುವನ್ನು ನಿಲ್ಲಿಸುವ ಗೊಂದಲದಲ್ಲಿ ಅವಳು ಚಹ ಸೋಸುವದನ್ನೇ ಮರೆತು ಬಿಡಬೇಕು! ಹೀಗಾಯಿತೆಂದರೆ, ಮನೋಹರಾ, ಹಾಲು-ಸಕ್ಕರೆಗಳ ಹೊರತು ಆ ಚಹದಲ್ಲಿ ಮತ್ತೇನು ಬೀಳಬೇಕೋ ಅದು ತನ್ನಷ್ಟಕ್ಕೆ ತಾನೇ ಬೀಳುತ್ತದಲ್ಲ! ಪಾಪ! ಅಡಿಗೆಯವನು ಚಹ ಮಾಡುವದೆಂದರೆ ಕೇವಲ ಚಹವನ್ನೇ ಮಾಡುವನು. ಅದರ ಹೊರತು ಆತನಿಗೆ ಬೇರೆ ಯಾವ ವ್ಯವಧಾನವೂ ಇರದ್ದರಿಂದ, ಆತನು ಮಾಡಿದ

ಚಹದಲ್ಲಿ ಒಲೆಯ ಮೇಲಿನ ಇಲ್ಬಾಣಗಳಿಲ್ಲ ಸಿಗಬೇಕು? ಒಂದು ವೇಳೆ ಅಪ್ಪಿ ತಪ್ಪಿ ಅವು ಬಿದ್ದದ್ದು ಕಂಡುಬಂದರೆ, ಅವನದು ಅವನಿಗೇ ಮರಣಪ್ರಾಯವಾದ ದುಃಖವಾಗಿ, ಆತನು ಆಗಿಂದಾಗಲೇ ಬೇರೆ ಚಹ ಮಾಡಿ ಕೊಡುತ್ತಾನೆ. ಒಟ್ಟಿನಲ್ಲಿ ಅಡಿಗೆಯವನ ಚಹದಲ್ಲಿ ಇಲ್ಬಾಣಾದಿಗಳು ಸಿಗುವದು ನಿರಾಶೆಯೆಂದೇ ಅನ್ನು! ಆದರೆ ಮನೋಹರಾ, ನಿನಗೆ ಅವುಗಳ ಹೊರತು ಸಾಗದಂತಿದ್ದರೆ, ಅಂದರೆ ನಿನ್ನ ಡಾಕ್ಟರೀ ಚಹದ ಪ್ರಿಸ್ಕ್ರಿಪ್ಶನ್ನಿನಲ್ಲಿ ಒಲೆಯ ಮೇಲಿನ ಇಲ್ಬಾಣಗಳ ಅವಶ್ಯಕತೆಯಿದ್ದರೆ, ನೀನು ಬೇಗನೆ ಲಗ್ನವಾಗಿ ಮಕ್ಕಳು-ಮರಿಗಳ ತಂದೆಯಾಗು ನೋಡೋಣ!

ಆಗ ಮನೋಹರನು ಹೆಚ್ಚು ಸ್ಪಷ್ಟವಾಗಿ:—ಮಹಾರಾಜರೇ, ನಿಮ್ಮಂತೆ ನನಗೂ ಚಹದಲ್ಲಿ ಇಲ್ಬಾಣ ಬಿದ್ದಿರುವದು ಸೇರುವದಿಲ್ಲ; ಆದರೆ ಗಂಡಸರೇ ಮಾಡಿದ ಚಹವನ್ನು ನೀವು ಇನ್ನು ಅದೆಷ್ಟು ದಿನ ಕುಡಿಯುವವರು?

ಚೋ:—ಭಲೆ! ಭಲೆ! ಅರಮನೆಯೊಳಗಿನ ಪುರುಷ ನೌಕರರನ್ನು ಕಡಿಮೆ ಮಾಡಿ ಅಡಿಗೆಯವಳನ್ನು ನಿಯಮಿಸಿ, ಅವಳಿಂದಲೇ ಚಹ ಮಾಡಿಸಿ ತರಿಸಬೇಕೆನ್ನುತ್ತಿರುವೆಯೇನು? ಒಳ್ಳೇದು. ನಾನು ಹಾಗೆ ಮಾಡಿದರೆ, ಆ ಅಡಿಗೆಯವರು ತಮ್ಮ ಮನಸ್ಸಿನಲ್ಲಿ ನನಗೇನೆಂದಾರು? ನೀನೇನೆಂದೀ? ಈ ಬಗ್ಗೆ ಸ್ವಲ್ಪಾದರೂ ಯೋಚಿಸಬೇಡವೇ?

ಮನೋಹರನು ಇನ್ನು ಮೈಮೇಲೇರಿ ಹೋಗಿಯೇ:-ಮಹಾರಾಜರೇ, ಅಡಿಗೆಯವಳ ಚಹದ ಬಗ್ಗೆ ನಾನನ್ನಲಿಲ್ಲ. ನಮಗೆ ನಮ್ಮ ಖಾಸ ಅತ್ತಿಗೆಯವರು ಮಾಡಿದ ಚಹವನ್ನೇ ಕುಡಿಯಬೇಕೆಂಬ ಇಚ್ಛೆಯು ಉಂಟಾಗತೊಡಗಿದೆ.

ಚೋ:—ಹೀಗೆಯೊ! ಹೀಗೆ ಸ್ಪಷ್ಟವಾಗಿ ಒಡನುಡಿ! ಅಪ್ಪಾ, ನಿನ್ನ ಅತ್ತಿಗೆಯೆಂದರೆ, ಈ ಸಂಸ್ಥಾನದ ರಾಣಿಯು! ಅವಳು ಇಷ್ಟು ಬೇಗನೆ ಎದ್ದು ಚಹಮಾಡಿ ಕೊಡುವಳೇ? ಮತ್ತು ಅವಳು ಮಾಡಿ ತಂದರೂ ನನಗೊಬ್ಬನಿಗಾಗಿ ತಂದಾಳು. ರಾಜನ ರಾಣಿಯು ಘೋಷಾದೊಳಗಿನ ಸನಾತನೀ ಸ್ತ್ರೀಯಿರಬೇಕಾಗುತ್ತದೆ! ಅವಳು ಜನರಿಗೆ ತನ್ನ ದರ್ಶನವನ್ನು-ನಿನ್ನಂತಹ ನನ್ನ ಜೀವದ ಗೆಳೆಯನಿಗೂ ಕೂಡ-ಘೋಷಾದ ಹೊರಗೆಕೊಟ್ಟು, ಮರ್ಯಾದೆಗೇಡಾಗಬೇಕೇನು? ಇನ್ನು ಅವಳು ಘೋಷೆಯಲ್ಲದೇನನ್ನೇ ಮಾಡಲಿ! ನಮ್ಮಂತಹ ರಾಜಮಿತ್ರರ ಲಗ್ನಗಳನ್ನು ಮಾಡಿ 'ಅತ್ತಿಗೆ'ಯ ಕೈಯ ಚಹ ಕುಡಿಯಬೇಕೆಂಬ ನಿಮ್ಮ ಆಕಾಂಕ್ಷೆಯು ವ್ಯರ್ಥವೇ ಆಗುವದು! ನೀವು ಬಡಬಗ್ಗ ಜನರು. ನಿಮ್ಮಂತಹ ಬ್ರಹ್ಮಚಾರಿಗಳು ಲಗ್ನ ಮಾಡಿಕೊಂಡರೆ, ಒಮ್ಮೊಮ್ಮೆ ಅತ್ತಿಗೆಯವರ ಕೈಯ ಚಹ ಕುಡಿಯುವ ನಮ್ಮಂತಹ ಸಂಸ್ಥಾನಿಕರ ಇಚ್ಛೆಯು ಈಡೇರೀತು; ಆದರೆ ಆ ವಿಷ

ಯದ ಆಲೋಚನೆಯೇನಾದರೂ ಈ ಸಾರೆಯು ಲಗ್ನದ ಹಂಗಾಮಿನಲ್ಲಿದೆಯೇನು? ಅಲ್ಲದೆ, ಸಿರಿವಂತ-ಬಡವ, ಸಂಸ್ಥಾನಿಕ-ನಾಗರಿಕ ಈ ನನ್ನ-ನಿನ್ನೊಳಗಿನ ಸಂಬಂಧವನ್ನು ಬಿಟ್ಟುಬಿಟ್ಟರೂ, ನೀನು ನನ್ನ ಅಣ್ಣನು; ನಾನು ನಿನ್ನ ತಮ್ಮನು. ನಮ್ಮ ತಾಯಿಯು ಜೀವಿಸಿದ್ದರೆ ಅವಳು ಮೊದಲು ಯಾರ ಲಗ್ನವನ್ನು ಹಮ್ಮುತ್ತಿದ್ದಳೆಂಬದನ್ನು ನೀನೇ ಹೇಳು ನೋಡೋಣ?

ಮ: ತಾಯಿಯ ಮಾತನ್ನೇ ಎತ್ತಿದ್ದರಿಂದ ಹೇಳುತ್ತೇನೆ ಕೇಳು. ನಾನು ಹಿರಿಯನಾಗಿದ್ದರೂ ಅವಳು ನಿನ್ನ ಲಗ್ನವನ್ನೇ ಮೊದಲು ಹೂಡುವ ಒತ್ತಾಯ ಮಾಡುತ್ತಿದ್ದಳು! ಯಾಕಂದರೆ, ನಿನಗೆ ರಾಜ್ಯಪದವು ಲಭಿಸಿದ್ದರಿಂದ ನಿನ್ನ-ನನ್ನೊಳಗಿನ ಹಿರಿಯತನವು ವ್ಯಸ್ತವಾಗಿದೆ. ಈಗ ನೀನೇ ಅಣ್ಣನು, ನಾನೇ ತಮ್ಮನು! ಅದೇನೂ ಇಲ್ಲ. ಯಜಮಾನಸಾಹೇಬರೇ, ಇನ್ನು ನಿಮ್ಮ ಮೊದಲನೇ ಕೆಲಸವೆಂದರೆ, ನೀವು ನಿಮ್ಮ ಲಗ್ನಮಾಡಿಕೊಂಡು ಬಿಡಬೇಕು; ಅಂದರೆ ಅದರಿಂದ ಎಲ್ಲರಿಗೂ ಸಮಾಧಾನವೆನಿಸುವದೆಂದು ನನ್ನ ಅಭಿಪ್ರಾಯವಿದೆ.

ಜೊ:—ಎಲ್ಲರಿಗೆಂದರೆ ಯಾರು ಯಾರಿಗೆಂಬದನ್ನು ಸ್ಪಷ್ಟವಾಗಿ ಹೇಳಿಬಿಡು! ನನ್ನ ವಿವಾಹವಾಗುವದು ಕೇವಲ ನನ್ನ ಸುಖ-ಸಮಾಧಾನದ ಸಂಗತಿಯೆಂದು ನಾನು ತಿಳಿಯುತ್ತಿರುವೆನು. ಅದರಲ್ಲಿ ಬೇರೆ ಜನರ ಸಂಬಂಧವೇನು?

ಮ:—ಅದೇಕೆ ಸಂಬಂಧವಿಲ್ಲ? ಕ್ರಮವಾಗಿ ಕೇಳಿಕೊಳ್ಳಿರಿ. ಯಾವ ಗೃಹಸ್ಥನ ಮಗಳು ನಿಮ್ಮ ಹೆಂಡತಿಯಾಗುವಳೋ, ಆ ತಂದೆಯೊಬ್ಬನಾದರೂ ಆನಂದಸಾಗರದಲ್ಲಿ....

ಜೋ:-ಅಥವಾ ದುಃಖಸಾಗರದಲ್ಲಿ ಮುಳುಗುವವನೋ, ಗುಟುಕು ನೀರು ಕುಡಿಯುವವನೋ, ಈಸುವವನೋ ಇಲ್ಲವೆ ದಡದಲ್ಲಿ ಸ್ನಾನಮಾಡುವವನೋ, ಇದನ್ನೇಕೆ ಹೇಳಲಿಲ್ಲ? ಅದನ್ನು ಹೇಳಲೇಬೇಕು! ಯಾಕಂದರೆ, ಮಗಳು ಸಂಸ್ಥಾನದ ರಾಣಿಯಾದಳೆಂದರೆ, ಅವಳ ತಂದೆಗೆ ಇವೆಲ್ಲ ಪ್ರಸಂಗಗಳು ಉಂಟಾಗುತ್ತಿರಬಹುದು! ಇನ್ನು ನ್ಯಾಯಶಾಸ್ತ್ರದಂತೆಯೇ ಮಾತನಾಡಬೇಕಾದರೆ, ಈ ಪ್ರಕರಣವನ್ನು ಮುಗಿಸುವ ಸಲುವಾಗಿ ಇನ್ನೊಂದು ಐದನೆಯ ಪ್ರಕಾರವುಳಿದಿದೆ. ಅದನ್ನು ಹೇಳಲೇನು? ಮ:—ಅದಾವುದು?

ಜೋ:—ರಾಜಜಾಮಾತೃಪದ ಸಂಬಂಧವು ಸಮುದ್ರದ ನೀರಿನಂತೆ ಕಹಿ-ಉಪ್ಪು. ಕಾರಣ ಸಾಗರದಲ್ಲಿ ಸ್ನಾನ ಮಾಡದೆ, ಕೇವಲ ದೂರದಿಂದಲೇ ನಮಸ್ಕರಿಸುವರು! ಯಾವ ತಂದೆಗಳು ತಮ್ಮ ಹೊಟ್ಟೆಯ ಹೆಣ್ಣುಮಕ್ಕಳನ್ನು ಸಂಸ್ಥಾನಿಕರಿಗೆ ಕೊಟ್ಟಿರುವರೋ, ಅವರಿಗೆಲ್ಲ ಇದೇ ಅನುಭವ ಬಂದಿದೆ. ಯಾವನೊಬ್ಬನಿಗೆ ಜನ್ಮದ ದಾರಿದ್ರ್ಯವು ಹಿಂಗಿದ ಆನಂದವಾಗಿದ್ದರೆ, ಬೇರೊಬ್ಬನಿಗೆ ಆಜೀವ ಅಮು

ಯಾದೆಯುಂಟಾಯಿತೆಂಬ ದುಃಖದಿಂದ ದೇಶತ್ಯಾಗ ಮಾಡಬೇಕಾಯಿತು.

ಮ:—ಆದರೆ ನಿಮ್ಮೊಡನೆ ಮಾವನ ಸಂಬಂಧವುಂಟಾಗುವ ಸುದೈವದ ಗೃಹಸ್ಥನಿಗೆ ಸಂತೋಷ-ಸಮಾಧಾನಗಳು ಜನ್ಮ ತುಂಬ ಲಭಿಸುವವೆಂದು ನನ್ನ ನಂಬಿಗೆಯಿದೆಯೆಂದೇ ನಾನನ್ನುತ್ತೇನೆ.

ಜೋ:—ನನ್ನ ಗೆಳೆಯನು ನನಗೆ ದೊಡ್ಡಸ್ತಿಕೆಯ ಸರ್ಟಿಫಿಕೇಟನ್ನು ಕೊಡದಿದ್ದರೆ ಅನ್ಯರಾರು ಕೊಡಬೇಕು? ಆದರೆ ನನ್ನ ಹೆಂಡತಿಯು ಹೇಗೆ ಇದ್ದಾಳೆಂಬದರ ಖಾತ್ರಿಯನ್ನು ನನ್ನ ಮಿತ್ರನಾದರೂ ಅದೆಂತು ಹೇಳುವವನು? ಅವಳು ಸದ್ಗುಣಿಯಾದರೆ ವಿಹಿತವೆ! ಇಲ್ಲದಿದ್ದರೆ? ನಾನು ಮೂಲ ಸ್ವಭಾವದಿಂದ ಬೇಕಾದಷ್ಟು ಚೆನ್ನಾಗಿದ್ದರೂ ಆ ಮೇಲೆ ಕೆಡಕಾಗಲಿಕ್ಕಿಲ್ಲೆಂದು ಯಾಗು ಹೇಳಬೇಕು? ಮಾವನು ಬಂದರೇನು, ಎರಡು ದಿನದ ಅಭ್ಯಾಗತನು! ಮತ್ತು ಆತನು ಎಂದೂ ಬರದಿದ್ದರೂ ನಡೆಯುವಂತಿದೆ; ಆದರೆ ನನ್ನ ಹೆಂಡತಿಯೇ ಕೆಟ್ಟ ನಡತೆಯ ಇಲ್ಲವೆ ದುರ್ಗುಣಿಯವಳಿದ್ದರೆ? ಆ ಮೇಲೆ ಸಂಸ್ಥಾನೀ ಗಂಡ-ಹೆಂಡಿರಲ್ಲಿ ಯಾವ ಯಾವ ಪ್ರಕಾರಗಳುಂಟಾಗುತ್ತವೆಂಬದು ನಿನಗೆ ಗೊತ್ತೇ ಇದೆ.

ಮ:—ಅವೇನೆಂಬದನ್ನು ನೀವೇ ಹೇಳಿರಿ ನೋಡೋಣ?

ಜೋ:—ಬಹಿರಂಗದಲ್ಲಿ ಅರಸು-ಅರಸಿಯರ ಪಾರಿವಾಳದ ಜೊತೆಯು! ಆದರೆ ಅಂತಸ್ಥ ಪ್ರಕಾರವು ಹುಟ್ಟ ವೈರಿಗಳಲ್ಲಿಯ ಪಾದರಕ್ಷೆಯ ಪ್ರಯೋಗವೆ! ಸಾರ್ವಜನಿಕ ಸಮಾರಂಭಗಳಲ್ಲಿ ಇಬ್ಬರಿಗೂ ನಿಮಂತ್ರಣವಿದ್ದಿತೆಂದರೆ, ನಿರುಪಾಯವು! ಅಂತೆಯೇ ಅರಮನೆಯ ಮಹಾದ್ವಾರಕ್ಕೆ ಮೋಟರು ಬಂದಿತೆಂದರೆ, ಒಂದು ಕಡೆಯ ದಿವಾಣಖಾನೆಯೊಳಗಿಂದ ಮಹಾರಾಜರೂ ಮತ್ತೊಂದು ಕಡೆಯ ಅಂತಃಪುರದೊಳಗಿಂದ ಮಹಾರಾಣಿಯವರೂ ರಂಗಸ್ಥಲಕ್ಕೆ ಬರುವ ನಟ-ನಟಿಯರಂತೆ ಶೃಂಗಾರಗೊಂಡು ಬಂದು ಅದರಲ್ಲಿ ಒಬ್ಬರ ಬಳಿಯಲ್ಲೊಬ್ಬರು ಕೂಡ್ರುವರು. ಸಮಾರಂಭದೊಳಗಿನ ಭಾಷಣದಲ್ಲಿ "ನಾವೂ ನಮ್ಮ ರಾಣೀಸಾಹೇಬರೂ" ಎಂಬ ಉದ್ಗಾರಗಳು ಮಹಾರಾಜರ ಮುಖದಿಂದ ನಾಲ್ನಾಲ್ಕು ಸಾರೆ ಹೊರಡತಕ್ಕವೇ! ಆದರೆ ಆ ಮೋಟರು ಅಲ್ಲಿಂದ ಹಿಂದಿರುಗಿ ಬಂದು ಅರಮನೆಯ ಮಹಾದ್ವಾರದಲ್ಲಿ ನಿಂತುಕೊಂಡು ಬೇರೆ ಬೇರೆ ಕಡೆಯ ಪರದೆಗಳಲ್ಲಿ ಉಭಯತರ ನಿಷ್ಕ್ರಮಣವಾಯಿತೆಂದರೆ, ಮತ್ತೆ ಅಂಥ ಎರಡನೇ ಯೋಗವುಂಟಾಗುವ ವರೆಗೆ ಅವರೀರ್ವರಲ್ಲಿ ಅದೇತಕ್ಕೆ ಗಂಟು ಬೀಳುವದು?

ಮ:—ಇದೊಂದು ಒಗೆಯಾಯಿತು; ಇದರಲ್ಲಿ ಬಹಿರಂಗದಲ್ಲಾದರೂ ಉಭಯ ಪಕ್ಷದವರ ಜಾಹೀರ ರೀತಿಯಿಂದ ಮರ್ಯಾದೆ ಕಾಯುವ ಪ್ರಯತ್ನವಿದೆ.

ಜೋ:—ಆದರೆ ವ್ಯಕ್ತಿಮಾತ್ರರ ಸುಖವು? ರಾಣೀಸಾಹೇಬರು ಎಂದಾ

ದರೂ ಪ್ರೀತಿಯ ಪದಾರ್ಥಗಳನ್ನು ಮಾಡಿ ಮಹಾರಾಜರಿಗೆ ಪ್ರೇಮದಿಂದ ಉಣ ಬಡಿಸುವರೋ ಇಲ್ಲವೆ ಒಂದೇ ಪಂಕ್ತಿಯಲ್ಲಿ ಇಬ್ಬರೂ ಕುಳಿತು ಹಾಸ್ಯ ವಿನೋದ ಮಾಡುತ್ತ ಉಣ್ಣುವರೋ ಅಥವಾ ಒಟ್ಟಾಗಿ ಕುಳಿತು ಸುಖ-ದುಃಖದ ಮಾತು-ಕಥೆಗಳನ್ನಾಡುವರೋ ಅಥವಾ ರಾಜ್ಯಪ್ರಪಂಚದೊಳಗೆ ಲಕ್ಷ್ಯವಿರಿಸುವರೋ? ಅವುಗಳ ಹೆಸರನ್ನೇ ಎತ್ತುವಂತಿಲ್ಲ! ಮೊದಲು ಒಬ್ಬರು ಮತ್ತೊಬ್ಬರ ಕಡೆಗೆ ಹೋಗುವದೇ ಕಡಿಮೆ! ಅಪ್ಪಿತಪ್ಪಿ ಗಂಟೇಬಿದ್ದರೆ, ಪರಸ್ಪರರು ಪರಸ್ಪರರ ಮೇಲೆ ಕಣ್ಣು ಕಿತ್ತಬೇಕು; ಹುಚ್ಚು ಹುಳುಕುಗಳನ್ನು ತೆಗೆಯಬೇಕು; ಸ್ವತಃ ಅಳಬೇಕು; ಇಲ್ಲವೆ ಬೇರೆಯವರನ್ನು ಅಳಹಚ್ಚಬೇಕು; ಮತ್ತು ಅದನ್ನೆಲ್ಲ ಕಂಡು ದಾಸ-ದಾಸಿಯರು ಮರೆಯಲ್ಲಿ ಖೊಳ್ಳನೆ ನಗಬೇಕು! ತಮ್ಮ ಅಂತಃಪುರವನ್ನೇ ತಮ್ಮ ಕೋಟೆಯನ್ನಾಗಮಾಡಿಕೊಂಡು ಅದರಲ್ಲಿ ಮಹಾರಾಣಿಯವರು ತಮ್ಮ ಪ್ರೇಮದ ಭಟ-ಭಿಕ್ಷುಕರು ಇಲ್ಲವೆ ಪ್ರೀತಿಯ ಶಿಪಾಯಿ-ಪ್ಯಾದೆಗಳು ಅಥವಾ ಪ್ರೇಮದ ಡಾಕ್ಟರರು ಇವರಿಲ್ಲದಿದ್ದರೆ, ಹಾಡು-ಬಾರಿಸುವವರ ಮೇಳಗಳನ್ನಿರಿಸಿ ಕೊಂಡು ಕೂಡ್ರಬೇಕು! ಮತ್ತು ಮಹಾರಾಜರಾದರೂ ತಮ್ಮ ದಿವಾಣಖಾನೆ ಯಲ್ಲಿ ಪ್ರೇಮದ ಸ್ತ್ರೀ-ಪುರುಷರ ಜೊತೆಗಳೊಡನೆ ಮೋಜಿನಿಂದ ಕಾಲಕಳೆಯ ಬೇಕು! ರಾಜರಾಣಿಯರ ಮಧ್ಯದಲ್ಲಿ ಕೇವಲ ನಾಲಿಗೆಗಳದೇ ಅಲ್ಲ, ಒಮ್ಮೊಮ್ಮೆ ಕುದುರೆಯ ಹಂಟರಗಳ ಕಲಕಲಾಟವೂ ಆಗಬೇಕು! ಮತ್ತು ಕೆಂಪು ಮದ್ಯದ ಗ್ಲಾಸುಗಳಂತೆ ನೆತ್ತರ ಸುರಿಯುವ ಗಾಯಗಳೂ ಆಗುತ್ತಿರಬೇಕು! ಪ್ರೇಮಲ ಸದ್ಗುಣಿ ಅರಸು-ಅರಸಿಯರ ಗಂಟು ಬೀಳುವದೆಂದರೆ, ಅದೊಂದು ಅಪೂರ್ವ ಯೋಗವೇ ಆಗಿರುತ್ತದೆ. ಆದ್ದರಿಂದ ನನ್ನ ಸ್ತುತಿಯನ್ನು ನೀನು ನನ್ನ ಮಿತ್ರ ನೆಂದು ಅದೆಷ್ಟು ಮಾಡಿದರೂ, ಅಂಥದೇ ಸ್ತುತಿಗೆಯ್ಯಲಿಕ್ಕೆ ಪಾತ್ರಳಾದಂತಹ ನನ್ನ ವಧುವು ನಿನಗೆ ಆದೆಲ್ಲಿ ಖಾತ್ರಿಯಿಂದ ದೊರಕುವಳು? ಅಂತೆಯೇ ಲಗ್ನ ವಾಗದಿರುವದು ಒಳಿತಲ್ಲವೆ?

ಮ: — "ಎಂಥ ವಿಕ್ಷಿಪ್ತ ಮಾತಿದು?" ಮನೆಯನ್ನೇಕೆ ಕಟ್ಟುವದಿಲ್ಲೆಂದು ಯಾವುದೊಂದು ಮಂಗ-ಮುಸುವನಿಗೆ ಕೇಳಿದರೆ, ಅದರಲ್ಲಿ ಮುಂದೆ ಇಲಿ-ಹೆಗ್ಗಣಗಳು ಮನೆಮಾಡುವವೆಂದು ಅದು ಹೇಳುವಂತೆಯೇ ನಿಮ್ಮ ಉತ್ತರವಿದು!

ಜೋ: — ಅಹುದು. ಆ ಪ್ರಶ್ನೆಯ ಉತ್ತರವನ್ನು ನಾನು ಹೀಗೆಯೇ ಹೇಳ ತಕ್ಕವನು. ನಾಲ್ಕು ಕಾಲಿನ ತೀಕ್ಷ್ಣ ಉಗುರುಗಳ ಇಲಿ-ಹೆಗ್ಗಣಗಳು ಮನೆಯೊ ಳಗೆ ಅಲ್ಲಲ್ಲಿ ಕೆದರಿ ಡೊಗರು ಕೆಡವಿ ಮಣ್ಣು ಮಾಡುತ್ತಿದ್ದರೂ, ದುರಾಚರಣೀ ಸ್ತ್ರೀಯ ಪೀಡನವು ಇಡಿ ಸಂಸಾರವನ್ನೇ ಮಣ್ಣುಗೂಡಿಸಿ ಬಿಡುವದಲ್ಲ! ಆ ಮೇಲೆ ನಾನು ರಾಜ್ಯವನ್ನು ಕಾಪಾಡಲೋ, ಹೆಂಡತಿಯನ್ನು ಸಂಬಾಳಿಸಲೊ?

ಎಂಬ ಪ್ರಸಂಗವುಂಟಾಯಿತೆಂದರೆ, ಕಡೆಗೆ ಅವುಗಳಲ್ಲೊಂದೂ ಉಳಿಯುವದಿಲ್ಲ. ಆದ್ದರಿಂದ ಅವೆರಡನ್ನೂ ತ್ಯಜಿಸಿ, ತಪಶ್ಚರ್ಯೆಗಾಗಿ ಯಾವುದೊಂದು ಕ್ಷೇತ್ರದ ದಾರೀ ಹಿಡಿಯಬೇಕಾಗುತ್ತದೆ. ಅದಕ್ಕಿಂತ ಸ್ವಂತದ ವ್ಯಕ್ತಿಯ ಸುಖವನ್ನು ತ್ಯಜಿಸಿ, ರಾಜ್ಯವನ್ನು ಕಾಪಾಡಿ, ಸಾಧ್ಯವಾದಷ್ಟು ಸುಖವನ್ನು ನಮ್ಮ ಪ್ರಜೆಗಳಿಗೊದಗಿಸಿ ಕೊಡುವದೇ ಮೇಲಲ್ಲವೆ?

ಮ:—ಲಗ್ನದ ವಿಷಯದಲ್ಲಿ ಯಶ ದೊರೆಯುವದು ಹೇಗೆ ದೈವಾಧೀನವೋ, ಅದರಂತೆಯೇ ಸಂಸ್ಥಾನೀ ರಾಜ್ಯಕಾರಭಾರದಲ್ಲಿ ಯಶ ದೊರೆಯುವದಾದರೂ ದೈವಾಧೀನವೇ ಅಲ್ಲವೇನು? ಗಂಡನು ದುರ್ಗುಣಿ ಇಲ್ಲವೆ ಷಂಡನೆಂದೇ ರಾಜರ ರಾಣಿಯರು ಕೆಡುತ್ತಿರುವರೇನು? ನಾನು ಸದ್ಗುಣಿ ಹಾಗು ಪುರುಷಾರ್ಥಸಂಪನ್ನರಾದ ಕೆಲ ರಾಜರನ್ನು ನೋಡಿರುತ್ತೇನೆ; ಆದರೆ ಅಂಥ ಪುರುಷರಿಗೆ ಸಂಸ್ಥಾನದ ಸಿರಿವಂತಿಕೆಯೂ ಪುರುಷಾರ್ಥವೂ ಲಭಿಸಿಯೂ ಅವರ ಲಗ್ನಗಳು ಕುಲಕ್ಷಣದ ಕುಲಟೆಯರ ಕೂಡ ಆಗಿ ಹೋಗಿವೆ! ಅದರ ಮೇಲಿಂದ ದೇವರ ದರ್ಬಾರದಲ್ಲಿಯೇ ನ್ಯಾಯವಿಲ್ಲೆಂದೆನ್ನಬೇಕಾಗುತ್ತದೆ! ರಾಜನು ಎಷ್ಟೋ ನ್ಯಾಯಬುದ್ಧಿಯಿಂದಲೂ ನಿಸ್ವಾರ್ಥತೆಯಿಂದಲೂ ನಡೆದರೂ ಆತನ ಆಡಳಿತಕ್ಕೆ ಹೆಸರಿಡುವ ಜನರು ಸದಾ ತತ್ಪರರಾಗಿರುತ್ತಾರೆ. ಸಂಸ್ಥಾನಿಕನು ಮನಸ್ಸಿನಿಂದ ನೆಟ್ಟಗಿದ್ದನೆಂದರೆ ಆತನ ರಾಜ್ಯದಾಡಳಿತವೂ ನೆಟ್ಟಗೆಂದೆನಿಸಿ, ಕೀರ್ತಿ ಲಭಿಸುವದೆಂದು ನಿಮಗೆ ಭ್ರಮೆಯಿರಬಹುದು! "ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ" ಎಂಬ ನ್ಯಾಯವೇ ಇದೆ. ತಾತ್ಪರ್ಯವಿಷ್ಟೇ, ಪ್ರವೃತ್ತಿಪರವಾಗಿರುವದೇ ಪುರುಷಾರ್ಥವು. ಸದ್ಭಾರ್ಯೆ ಹಾಗು ಸತ್ಕೀರ್ತಿ ಇವೆರಡನ್ನೂ ದೊರಕಿಸುವ ಉತ್ಸಾಹ ಮತ್ತು ಆಶೆಗಳನ್ನು ನೀವು ತಾಳದಿದ್ದರೆ, ನಿಮ್ಮ ಜನ್ಮವೇ ವ್ಯರ್ಥವೆಂದು ನಾನಂದೇನು. ಸ್ತ್ರೀಜಾತಿಯ ಅನ್ಯಾಯವನ್ನೂ ಅದರೊಡನೆ ಸ್ವಂತದ ಅನ್ಯಾಯವನ್ನೂ ಹೀಗೆ ಉಭಯ ಅನ್ಯಾಯಗಳನ್ನೂ ನೀವು ಮಾಡುತ್ತೀರೆಂದು ನಾನಂತೂ ಅನ್ನುತ್ತೇನೆ.

ಜೋ:—ಆಗಲೆಪ್ಪಾ, ನೀನಂದದ್ದೇ ನಿಜವು; ಆದರೆ ಅಪೂರ್ಣ ಅಧಿಕಾರದ ಸಂಸ್ಥಾನಿಕನಾದ ನಾನೆಂದರೆ, ಅನಾಥ ಹುಡುಗನು! ನನ್ನ ವಧುವನ್ನು ಗೊತ್ತು ಮಾಡುವ ಅಧಿಕಾರವು ನನಗಿಲ್ಲವೆಂದು ಪೋಲೀಟಿಕಲ್ ಏಜಂಟನಿಂದ ಬರೆದು ಬರತಕ್ಕದ್ದು. ನಾವು ಅರಸರುಗಳು ಸಂಸ್ಥಾನಿಕರು. ನಮ್ಮ ವಿವಾಹಾದಿಗಳಿಗೆ ಏನಿಲ್ಲೆಂದರೂ ರಾಜಕೀಯ ಸ್ವರೂಪವು ಪ್ರಾಪ್ತವಾಗತಕ್ಕದ್ದೇ. ನಾಳೆ ಒಬ್ಬ ಒಡವನ, ಸಂಸ್ಥಾನದ ಶತ್ರುವಿನ, ಬ್ರಿಟಿಶ ಮುಲುಖಿನಲ್ಲಿ ತೀವ್ರವಾದ ರಾಜಕೀಯ ಚಟುವಟಿಕೆಯನ್ನೆಬ್ಬಿಸುವ ದೇಶಭಕ್ತನ ಮಗಳು, ಆಕೆಯ ಗುಣಗಳಿ

ಗಾಗಿ ಆವಳು ನನಗೆ ಅನುರೂಪಳೆಂದು ತೋರಿದರೆ ಉಪಯೋಗವೇನು? ಪೋ. ಏ. ನು ಅದಕ್ಕೆ ಅಡ್ಡಿ ಮಾಡುವವನೇ! ನಾಳೆ ನಾನು ಲಗ್ನಕ್ಕೆ ಸಿದ್ಧನಾದರೆ, ನಾಂದಿ ಯಿಡುವ ಅಪ್ಪಣೆಯನ್ನು ಪೋ. ಏ. ನೇ ಕೊಡಬೇಕು! ಮತ್ತು ಅಪೂರ್ಣ ಅಧಿ ಕಾರದಲ್ಲಿ ಲಗ್ನದ ಖರ್ಚನ್ನು ಕೂಡ ಆತನೇ ಗೊತ್ತುಪಡಿಸಬೇಕು! ಹೀಗೆ ನಮ್ಮ ಸಂಸ್ಥಾನಿಕರ ಪರತಂತ್ರದ ಬಾಳಿದು! ಅಂತೆಯೋ ಈ ಲಗ್ನದ ಗೊಂದಲದಲ್ಲಿ ಬೀಳದಿರುವದೇ ವಿಹಿತವೆಂದು ನನಗನಿಸುತ್ತದೆ.

ಮ:—ನೀನು ಏನಾದರೂ ನುಡಿಯುತ್ತೀ? ಯಾವ ಸಂಸ್ಥಾನಿಕನ ಲಗ್ನವು ಆತನು ಅಲ್ಪ ವಯದವನು ಅಂದರೆ, ಹದಿನೆಂಟು ವರ್ಷಕ್ಕಿಂತ ಚಿಕ್ಕವನಿರು ವನೋ, ಸಂಸ್ಥಾನದ ಅಧಿಕಾರಗಳು ದೊರೆಯುವ ಪೂರ್ವದಲ್ಲಿ ಆಗುವದೋ, ಆತನ ಲಗ್ನಕ್ಕೆ ಇವೆಲ್ಲ ಅಡಚಣೆಗಳಿರುತ್ತಿರುವದು ನಿಜವು; ಆದರೆ ನಿಮ್ಮ ಲಗ್ನಕ್ಕೆ ಯಾವ ಅಡಚಣೆಗಳೂ ಬರಲಾರವು. ಸುಮ್ಮನೆ ನನ್ನನ್ನು ಇಲ್ಲದ ಗೊಂದಲಕ್ಕೇಕೆ ಕೆಡವುತ್ತೀರಿ?

ಜೋ:—ಅದಿರಲಿ; ಆದರೆ ಇನ್ನೂ ಕನ್ಯೆಯೆಲ್ಲಿ ಗೊತ್ತಾಗಿದೆ? ನಾನಾಗಲಿ ನೀನಾಗಲಿ ನನ್ನ ಸಲುವಾಗಿ ಇದುವರೆಗೂ ಯಾವಳೊಬ್ಬ ಕನ್ನೆಯನ್ನೂ ನೋಡಿ ರುವದಿಲ್ಲವಲ್ಲ! ಆದ್ದರಿಂದ ಈಗ ಸುಮ್ಮನೆ ಈ ವಾದ-ವಿವಾದವೇಕೆ?

ಮ:—ಹಾಗಿರದಿದ್ದರೆ, ಸುಮ್ಮನೆ ಲಗ್ನದ ಮಾತೆತ್ತಿ ನಿಮ್ಮೊಡನೆ ವಾದ ಹೂಡಿ ವೇಳೆಗಳೆಯಲಿಕ್ಕೆ ನಾನೇನು ಹುಚ್ಚನೋ? ನಿಮ್ಮ ಭಾವೀ ವಧುವನ್ನು ನಾನಂತೂ ನೋಡಿಯೋ ಇದ್ದೇನೆ; ಆದರೆ ನನಗಿಂತಲೂ ಮೊದಲು ಅವಳನ್ನು ನೀವೂ ನೋಡಿರುತ್ತೀರೆಂಬದು ಲಕ್ಷ್ಯದಲ್ಲಿರಲಿ!

ಜೋ:—ಎಂದು ಹಾಗು ಯಾರವಳು?

ಇಷ್ಟರಲ್ಲಿ ಕಾವಲುಗಾರನು ಕೆಳಗಿನಿಂದೊಂದು ಛಾಪಿಸಿದ ವ್ಹಿಜಿಟಿಂಗ ಕಾರ್ಡನ್ನು ಬೆಳ್ಳಿಯ ಚಿಕ್ಕ ತಬಕದಲ್ಲಿರಿಸಿ ಅಟ್ಟದ ಮೇಲೆ ತಂದು ಮಹಾರಾಜರ ಮುಂದೆ ಇಟ್ಟವನೇ ಬಂದ ದಾರಿಯಿಂದ ಹಿಂದಿರುಗಿದನು. ಮಹಾರಾಜರು ಆ ಕಾರ್ಡನ್ನು ತಮ್ಮ ಕೈಯಲ್ಲಿ ತಕ್ಕೊಂಡಾಗಲೇ ಎದುರಿಗಿನ ಗಡಿಯಾರದಲ್ಲಿ ಠಣ್ ಠಣ್ ಎಂದು ಒಂಬತ್ತು ಹೊಡೆಯಿತು. ಆ ಸಂಧಿಯನ್ನು ಸಾಧಿಸಿ ಮನೋಹರನು ಕುಳಿತ ಸ್ಥಳದಿಂದೆದ್ದು ಪುಟನೆಗೆದು "ಸತ್ಯ ಸತ್ಯ, ಮೂರು ಮೂರು ಸಾರೆ ಸತ್ಯ! ಮಹಾರಾಜ, ತಮ್ಮ ಪ್ರಶ್ನೆಯ ಉತ್ತರವು ಈ ವ್ಹಿಜಿಟಿಂಗ ಕಾರ್ಡಿನಲ್ಲಿಯೇ ಇದೆ!"

"ಎಂಥವನೋ ನೀನು?" ಜೋಜಿಗ ಮಹಾರಾಜರು ಮನೋಹರನ ಬೆನ್ನ ಮೇಲೆ ಚಪ್ಪರಿಸಿ ನುಡಿದರು.

ಮ:—ಮೂರ್ಖ ಇಲ್ಲವೆ ಬುದ್ಧಿವಂತನೆನ್ನುವದನ್ನಷ್ಟೇ ಬಾಕಿಯುಳಿಸಿದುದು

ವಿಹಿತವಾಯಿತು; ಯಾಕಂದರೆ, ಅದು ಬೇಗನೆ ತಾನಾಗಿಯೇ ತಿಳಿಯುವದು.

ಮನೋಹರನು ಈ ಪ್ರಕರಣದಲ್ಲಿ ಯಾವನೊಬ್ಬ ಹಿಪ್ನೋಟಾಯಝರನಂತೆ ಆತ್ಮವಿಶ್ವಾಸ ತೋರಿಸಿದನು. ವಿಮಲೆಯು ತನ್ನ ರಾಜಮಿತ್ರನಿಗೆ ಎಲ್ಲ ಬಗೆಯಿಂದಲೂ ಯೋಗ್ಯ ವಧುವಾಗಿರುತ್ತಾಳೆಂಬ ಕಲ್ಪನೆಯು ಆತನ ಮನಸ್ಸಿನಲ್ಲಿ ನೆಲಸಿದ್ದುದು ಏನಾದರೂ ಅಲುಗಲೊಲ್ಲದು; ಬರಬರುತ್ತ ಅದು ದೃಢವೇ ಆಗಹತ್ತಿತ್ತು. ಸಲಿಗೆಯ ಗೆಳೆಯರಲ್ಲಿ ಲಗ್ನವಿಷಯದ ಇಂಥ ಮಾತು-ಕಥೆಗಳು ಹಗಲೆಲ್ಲ ಆಗುತ್ತಿರುವದೇನೂ ವಿಶೇಷವಲ್ಲ; ಆದರೆ ಮನೋಹರನು ಮಾತಾಡುತ್ತಿದ್ದುದು ವಿನೋದವನ್ನು ಗಾಳಿಯಲ್ಲಿ ಹಾರಬಿಡಲಿಕ್ಕೆಂದು ಮಾತಾಡುತ್ತಿರಲಿಲ್ಲ. ಮನಸ್ಸಿನೊಳಗಿನ ನಿಜವಾದ ಇಚ್ಛೆ ಮತ್ತು ಸಂಭವನೀಯತೆಯ ಜೊತೆಗೆ ದೃಢವಿಶ್ವಾಸ ಇವುಗಳ ಇಮ್ಮಡಿ ಬಲದಿಂದಲೇ ಆತನು ತನ್ನ ಮಿತ್ರನಿಗೆ ಆ ಕಲ್ಪನೆಯನ್ನು ಸೂಚಿಸಿದ್ದನು. ಹಿಪ್ನೋಟಾಯಝರನು ತನ್ನ ಎದುರಿಗಿನ ವಶವಾದ ಮನುಷ್ಯನಿಗೆ ಮೊದಲು ಕುಗ್ಗುತ್ತ ಮುಗ್ಗುತ್ತ, ಆದರೆ ಹಿಂದಿನಿಂದ ಒತ್ತೊತ್ತಿ ಆಜ್ಞೆ ಮಾಡುವಂತೆ, ಅಂದರೆ "ನೀನು ಇಂಥವನಿರುತ್ತೀ" ಮತ್ತು "ನೀನು ಇಂಥಾದ್ದನ್ನು ಮಾಡಬಹುದು ಇಲ್ಲವೆ ಮಾಡು" ಹೀಗೆ ಹೇಳುವಂತೆ, ಮನೋಹರನು ಮೆಲ್ಲ ಮೆಲ್ಲನೆ ಮಾತನಾಡತೊಡಗಿದ್ದನು; ಮತ್ತು ಅದೇ ಕ್ರಮದಿಂದ ಜೋಜಿಗಮಹಾರಾಜರ ಮನಸ್ಸಿನ ಬಿಗುವೂ ಸಡಿಲಾಗುತ್ತ ನಡೆದಿತ್ತು; ಆದರೆ ಆ ಪ್ರಯೋಗದ ಮುಗಿತಾಯವು ಇನ್ನೂ ಆಗತಕ್ಕದ್ದಿತ್ತು.

---

## ೧೯ "ಕಥೆ ಕಥೆ ಕಬ್ಬಿಣ, ಕಾಕಾ ದೇವಿ...."

ಜೋಜಿಗಮಹಾರಾಜ ಮತ್ತು ವಿಮಲೆಯರ ಈ ಭೆಟ್ಟಿಯು ಕೆಲ ಸಹಜ ರೀತಿಯಿಂದಲೂ ಮನೋಹರನ ಕೆಲ ಪ್ರಯತ್ನದಿಂದಲೂ ಆಗಿತ್ತು. ಆ ಭೆಟ್ಟಿಯ ಕಾಲಕ್ಕೆ ಆ ಮೂವರ ದೃಷ್ಟಿಯೂ ಪರಸ್ಪರರ ವಿಷಯವಾಗಿ ಹೇಗಿತ್ತೆಂಬದು ಬಿಚ್ಚಿ ಹೇಳದಿದ್ದರೂ ವಾಚಕರಿಗೆ ತಿಳಿಯುವಂತಿದೆ. ವಿಮಲೆಯ ಸ್ವಂತ ಮನಸ್ಸಿನಲ್ಲಿ ಮಹಾರಾಜರು ತನ್ನ ಸನದಿನ ಅರ್ಜಿಯನ್ನು ಮಂಜೂರ ಮಾಡುವ ವರಿಷ್ಠ ಅಧಿಕಾರಿಗಳೆಂಬ ಭಾವನೆಯಿದ್ದಿತೇ ಹೊರತು, ಬೇರೊಂದಿರಲಿಲ್ಲ. ಶ್ರಾವಣಮಾಸದ ಅಮಾಸಿಯ ರಾತ್ರಿಯಲ್ಲಿ ತಮ್ಮ ಹಿತ್ತಲ ಬಾಗಿಲದಲ್ಲಿ ವೇಷಾಂತರದಿಂದ ಬಂದ ಹಾಗು ತಾನು ಬೆದರಿಸಿ ಹಿಂದಕ್ಕಟ್ಟಿದ್ದ ವ್ಯಕ್ತಿಯು ಇದೇ ಎಂಬ ಗುರುತು ಜೋಜಿಗರಾಯನನ್ನು ದೃಷ್ಟಿಸಿದರೂ ಅವಳಿಗೆ ಬಹುಶಃ ಹತ್ತಿರಲಿಕ್ಕಿಲ್ಲ. ಪ್ರಭಾಕರನಿಗೆ ಗುರುತಾದದ್ದಾದರೂ ಜೋಜಿಗರಾಯನೇ ಆ ದಿನದ ನೆನಪು ಮಾಡಿಕೊಟ್ಟು, ಗುರುತು ಹೇಳಿದ್ದರಿಂದಲೇ ಆಗಿತ್ತಲ್ಲವೆ? ಈಗ ಜೋ-

ಜಿಗರಾಯನೊಡನೆ ವಿಮಲೆಯು ಸಂಭಾಷಣವು ತೀರ ಸ್ವಲ್ಪಾಗಿತ್ತು; ಅದರಂತೆಯೇ ಸ್ತ್ರೀಯರ ಸಹಜ ಧರ್ಮಕ್ಕನುಗುಣವಾಗಿ ವಿಮಲೆಯು ಚೋಜಿಗರಾಯನ ಮುಖಮಂಡಲದ ಕಡೆಗೆ ಪ್ರಭಾಕರನಷ್ಟಾದರೂ ದಿಟ್ಟಿಸಿ ನೋಡುವದಶಕ್ಯವು.

ಚೋಜಿಗರಾಯನ ಮನಃಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿತ್ತು. ವಿಮಲೆಯು ವೇಷಾಂತರ ತಾಳಿರದ್ದರಿಂದ ಆಕೆಯ ಮುಖಚರ್ಯದ ಗುರುತು ಆತನಿಗೆ ಚನ್ನಾಗಿ ಇತ್ತು. ಮೊಟ್ಟಮೊದಲು ನೋಡಿದಾಗಿನಿಂದ ಆ ಮುಖಚರ್ಯೆಯು ಆತನ ಮನಃಚಕ್ಷುಗಳ ಮುಂದೆ ಎಷ್ಟೋ ಸಾರೆ ಬಂದು ಹೋಗಿತ್ತು; ಮತ್ತು ಆತನ ಮನಸ್ಸಿನಲ್ಲಿ ಅವಳ ಬಗ್ಗೆ ಯಾವ ಯಾವ ಭಾವನೆಗಳು ಪ್ರಕಟವಾಗಿದ್ದವೆಂಬದರ ದಿಗ್ದರ್ಶನವನ್ನು ನಾವು ಈ ಮೊದಲೇ ಮಾಡಿದ್ದೇವೆ; ಆದರೆ ಹುಟ್ಟಾ ಮುಂಜಾಗ್ರತೆಯು ಹಾಗು ಪ್ರಸಂಗವರಿತು ನಡೆಯತಕ್ಕವನವನಾದ್ದರಿಂದ, ತನ್ನ ಭೆಟ್ಟಿಗೆಂದು ಬಂದ ವಿಮಲೆಯ ಕಡೆಗೆ ತಾನು ಒಬ್ಬ ಅರ್ಜಿದಾರನ ಕಡೆಗೆ, ಹೆಚ್ಚೆಂದರೆ ಸ್ತ್ರೀ ಅರ್ಜದಾರರ ಕಡೆಗೆ, ಆದರೆ ಸಭ್ಯ ಅಧಿಕಾರಿಯ ದೃಷ್ಟಿಯಿಂದ ನೋಡುತ್ತಿರುವನೆಂಬದಕ್ಕಿಂತ ಚೋಜಿಗರಾಯನು ಆಗ ವಿಶೇಷವೇನೂ ತೋರಗೊಡಲಿಲ್ಲ.

ಮನೋಹರನ ಮನಸ್ಸಿನಲ್ಲಿ ಮಾತ್ರ ತನ್ನ ಸೂಕ್ಷ್ಮವಾದ ಮಿತ್ರ ಸಂಬಂಧದ ಕಾರಸ್ಥಾನವು ನಡದೇ ಇತ್ತು. ವಿಮಲೆಯು ವಕೀಲೀ ಸನದಿನ ಅರ್ಜಿ ತಂದಿದ್ದಳೆಂಬದು ಗೊತ್ತಿದ್ದರೂ ಆತನು ಅದನ್ನು ಮರತೇ ಬಿಟ್ಟಿದ್ದನು; ಮತ್ತು ತನ್ನ ಮಿತ್ರಪ್ರೇಮದ ಮನೋರಥವು ಸಫಲವಾದೀತೇನೆಂಬ ಆಶೆಯಿಂದ ಆತನು ಆ ಉಭಯತರ ಚಲನ-ವಲನಗಳ ಕಡೆಗೂ ಮುಖಚರ್ಯೆಗಳ ಕಡೆಗೂ ಕೌತುಕದಿಂದ ನೋಡುತ್ತಿದ್ದನು! ಆದರೆ ಅವರಿಬ್ಬರಲ್ಲಿ ಒಬ್ಬರ ಮನಸ್ಸು ಶುದ್ಧವೂ ಇನ್ನೊಬ್ಬರದು ಸಾವಧವೂ ಆಗಿದ್ದರಿಂದ, ಅವರಿಬ್ಬರಿಂದಲೂ ತನ್ನ ಮನೋರಥಕ್ಕೆ ಹೆಚ್ಚು ವೇಗ ದೊರೆಯುವ ಸಹಾಯವು ಆ ಪ್ರಸಂಗದಲ್ಲಿ ಆತನಿಗಾಗಲಿಲ್ಲ. ಆದರೂ ಚಿತ್ರಕಾರನು ತಾನು ಚಿತ್ರಿಸಿದ ಬೇರೆ ಬೇರೆ ಆಕೃತಿಗಳ ಕಡೆಗೆ ಸಾಪೇಕ್ಷ ದೃಷ್ಟಿಯಿಂದ ನೋಡುತ್ತಿರುತ್ತಾನೆ; ಇಲ್ಲವೆ ಶಿಲ್ಪಿಗನು ತಾನು ಮಾಡಿದ ಸುಂದರವಾದ ಇಮಾರತಿಯ ಕಟ್ಟಗೆಯ ನಮೂನೆಗಳ ತುಂಡುಗಳನ್ನು ಒಂದಕ್ಕೊಂದು ಹೊಂದಿಸಿ ನೋಡಿ ಸಮಾಧಾನ ಹೊಂದುತ್ತಿರುತ್ತಾನೆ. ಅದರಂತೆಯೇ ಶರೀರಗಳಿಂದ ದೂರ ದೂರವಿದ್ದ ಆ ತರುಣ ಸ್ತ್ರೀ-ಪುರುಷರನ್ನು ಮನೋಹರನು ತನ್ನ ಮನಸ್ಸೆಂಬ ಸಿಂಹಾಸನದ ಮೇಲೆ ಕೂಡ್ರಿಸಿಕೊಂಡು "ಅವರ ವಿವಾಹ ಸಮಾರಂಭವನ್ನು ನೋಡುತ್ತಿರುವನೋ ಏನೊ?" ಎಂಬಂತೆ ಮನಸ್ಸಿನಲ್ಲಿ ಗಕ್ಕಾಗಿ ಹೋಗಿದ್ದನು. ಹಳೇ ಬಾಲವಿವಾಹಗಳ ಕಾಲಕ್ಕೆ ಲಗ್ನವೆಂದರೆ ಏನೆಂಬದರ

ಜ್ಞಾನವಿಲ್ಲದಂತಹ ಬಾಲ ವಧು-ವರಗಳನ್ನು ಒಟ್ಟಿಗೆ ತಂದು, ಖುದ್ದ ಅವರದಾಗಿ ಅವರಿಗೆ ತಿಳಿಯದಂತಹ ಕೌತುಕದಲ್ಲಿ ಸ್ವಂತದ ಒಂದು ಬಗೆಯ ಆತ್ಮೋಪಮ್ಯ ಬುದ್ಧಿಯನ್ನು ಬೆರಿಸಿ ಅದನ್ನು ಪ್ರೌಢ ಜನರು ಅನುಭವಿಸುತ್ತಿದ್ದರು. ಮನೋಹರನ ಆಗಿನ ಅವಸ್ಥೆಯು ಬಹು ಮಟ್ಟಿಗೆ ಅದೇ ತರದ್ದಾಗಿತ್ತು. ಅದರಿಂದ ವಕೀಲೀ ಸನದಿನ ವಿಷಯವು ಸಂಭಾಷಣವನ್ನು ಬೆಳಿಸಲಿಕ್ಕೆ ಅಪೂರ್ಣವೆಂದು ಕಂಡರೆ, ಬೇರೆ ಅವಾಂತರ ವಿಷಯಗಳನ್ನು ತೆಗೆದು ಅದನ್ನು ಬೆಳಿಸಬೇಕೆಂದು ಆತನಿಗೆ ಒಂದು ದೃಷ್ಟಿಯಿಂದ ಅನಿಸಿತು; ಆದರೆ ಪರಿಸ್ಥಿತಿಗನುರೂಪವಾದ ಶಿಷ್ಟಾಚಾರವನ್ನು ಪ್ರತಿಯೊಬ್ಬರೂ ಪಾಲಿಸಲೇ ಬೇಕಾಗುತ್ತದೆ. ಆ ಕಾರಣದಿಂದ ಈ ಮೇಲೆ ವಿವರಿಸಿದ ಬ್ರಹ್ಮದೇವರ ಹರಕೆಯ ಇಲ್ಲವೆ ಉತ್ಸಾಹಿಗಳಾದ ಸನಾತನೀ ಪ್ರೌಢ ಜನರ ಭೂಮಿಕೆಯನ್ನು ಬಿಟ್ಟು, ಧೂರ್ತ ಮತ್ತು ಸಮಯಜ್ಞನಾದ ಖಾಸಗೀ ಕಾರಭಾರಿಯ ಇಲ್ಲವೆ ಪ್ರಾಯವ್ಹೇಟ್ ಸೆಕ್ರೆಟರಿಯ ಭೂಮಿಕೆಯನ್ನೇ ಈ ಕಾಲಕ್ಕೆ ಮನೋಹರನು ಚೆನ್ನಾಗಿ ಸಂಬಾಳಿಸಿಕೊಳ್ಳಬೇಕಾಯಿತು. ಆ ಭೂಮಿಕೆಯೆಂದರೆ: "ಯಜಮಾನರನ್ನು ಕಾಣಲಿಕ್ಕೆ ಯಾರೇ ಬಂದರೂ ಆ ಭೆಟ್ಟಿಯನ್ನು ತೀವ್ರ ಮುಗಿಸುವ ಸೂಚನೆಯನ್ನು ಒತ್ತರದಿಂದ ಕೊಡಬೇಕು! ಯಜಮಾನರಿಗೆ ಬೇರೆ ಯಾವ ಕೆಲಸವಿರದಿದ್ದರೂ ಭೆಟ್ಟಿಗೆ ಬಂದ ಮನುಷ್ಯರೊಡನೆ ಇದು ವರೆಗೆ ಮಾತನಾಡಿದ್ದೇ ಬಹು ದೊಡ್ಡ ಉಪಕಾರವಾಯಿತು! ಈ ಸಂಭಾಷಣದ ಕಾಲದಲ್ಲಿ ಅವರ ಬೇರೆ ಯಾವ ಮಹತ್ವದ ಕೆಲಸಗಳು ಕೆಡುವದರಿಂದ ಯಾವ ಘಾತ-ಪಾತಗಳಾದವೋ ಅವನ್ನೆಲ್ಲ ಸಹಿಸಿದಂತಾಯಿತು! ಆದರೆ ಇನ್ನು ಮುಂದಾದರೂ ಅವನ್ನೆಲ್ಲ ನಿಲ್ಲಿಸಲೇ ಬೇಕು! ತಮ್ಮ ಯಜಮಾನರು ಉದಾರ ಮನಸ್ಸಿನವರಾಗಿದ್ದರೂ, ಕಾಲದ ಅಪವ್ಯಯ ಮಾಡುವ ಔದಾರ್ಯಕ್ಕಾದರೂ ಕೆಲ ಮೇರೆಯು ಬೇಕಾಗುವದಲ್ಲವೆ? ಮತ್ತು ದಾಕ್ಷಿಣ್ಯವನ್ನು ತ್ಯಜಿಸುವ ಪಾಪವು ಆತನಿಂದ ಮಾಡಲಿಕ್ಕಾಗದಿದ್ದರೆ, ಅದನ್ನು ಮುಂಡುವ ಕೆಲಸವು ತಮ್ಮ ದೈವದಲ್ಲಿ ತಾವು ಪ್ರಾಯವ್ಹೇಟ ಸೆಕ್ರೆಟರಿಯಾದಾಗಲೇ ಬಂದಿದೆ!" ಈ ಬಗೆಯ ತಿಳುವಳಿಕೆಯಿದ್ದ ಸೋಗಿನಿಂದ ಯಜಮಾನರಿಗೆ ಆಗಾಗ್ಗೆ ಅತಿಕ್ರಮಣವಾದ ಬಗ್ಗೆ ಎಚ್ಚರಿಕೆ ಕೊಡಬೇಕೆಂಬದು ನೌಕರನದೊಂದು ನಿಶ್ಚಿತ ಕೆಲಸವಾಗಿರುತ್ತದೆ. ಅಂತರಂಗದಿಂದ ತನ್ನ ಸಂಬಂಧವು ಜೋಜಿಗರಾಯನೊಡನೆ ಮಿತ್ರನ ಇಲ್ಲವೆ ಅಣ್ಣನದಿದ್ದರೂ, ಬಹಿರಂಗದಲ್ಲಿ ತಾನು ನೌಕರ ಸಂಬಂಧದಿಂದ ವರ್ತಿಸುವದೇ ಯೋಗ್ಯವೆಂಬದನ್ನು ಆತನು ಹೇಗೆ ಮನದಟ್ಟಾಗ ಮಾಡಿಕೊಂಡಿದ್ದನೆಂಬದನ್ನು ನಾವು ಈ ಮೊದಲೊಂದು ಪ್ರಕರಣದಲ್ಲಿ ಹೇಳಿದ್ದೇವೆ. ಅದರಿಂದ ಅದೇ ಭಾವನೆಯಿಂದ ಮಿತ್ರಪ್ರೇಮಕ್ಕಿಂತ ದರಬಾರೀ ರೀತಿಯನ್ನೇ ಅವನು ಆ ಕಾಲಕ್ಕೆ ಪ್ರಭಾವಶೀಲ

ವಾಗಿ ಮಾಡಗೊಟ್ಟನು; ಮತ್ತು ಸನದಿನ ಹಾಗು ಅತ್ತಿತ್ತಣದ ತುಸ ಸಂಭಾಷಣವಾಗಲು, ಇನ್ನು ಇದು ಸಾಕೆಂಬದನ್ನು ಸೂಚಿಸುವದಕ್ಕಾಗಿ ಸರಾಸರಿ ಹತ್ತೇ ನಿಮಿಷಗಳಲ್ಲಿ ಆತನು ಸ್ವಂತದ ಖುರ್ಚಿಯಿಂದ ಎದ್ದು ನಿಂತನು.

ಆ ಹತ್ತು ನಿಮಿಷಗಳಲ್ಲಿ ಏನೇನು ಸಂಭಾಷಣವಾಯಿತೆಂಬದನ್ನು ನಾವು ವಿಸ್ತರಿಸುತ್ತ ಕೂಡ್ರುವದಿಲ್ಲ. ವಿಮಲೆಯು ಒಳಗೆ ಪ್ರವೇಶಿಸಿದೊಡನೆಯೇ ಮನೋಹರನು ಹೊರಗೆದ್ದು ಹೋಗತೊಡಗಿದನು. ಆಗ ಅವಳೇ ಆತನಿಗೆ ಕೂಡ್ರಲಿಕ್ಕೂ, ತನ್ನ ಕೆಲಸದಲ್ಲಿ ಸಹಾಯ ಮಾಡಲಿಕ್ಕೂ ಸೂಚಿಸಿದಳು. ಆಗ ಮನೋಹರನು "ವಕೀಲರಿಗೆ ಒಳವಕೀಲನೇತಕ್ಕೆ ಬೇಕು!" ಎನ್ನಲು, "ಮೊದಲು ವಕೀಲಳಂತು ಆಗಲಿ; ಬಳಿಕ ಒಳವಕೀಲ ಶಬ್ದದ ವ್ಯಾಖ್ಯೆ ಮಾಡಬಂದೀತು" ಎಂದು ವಿಮಲೆಯು ಹೇಳಿದಳು. ಬಳಿಕ ವಕೀಲೀಪರೀಕ್ಷೆ, ಸನದಿನ ವಹಿವಾಟು ಮುಂತಾದವುಗಳ ಬಗ್ಗೆ ತುಸ ಚರ್ಚೆಯಾಯಿತು. ಆ ಚರ್ಚೆಯಲ್ಲಿ ಸಂಸ್ಥಾನೀ ಕಾರಭಾರವು ಖಾಲಸಾದ ಕಾರಭಾರಕ್ಕಿಂತ ಹೆಚ್ಚು ಸಡಿಲು ಹಾಗು ಆಗ್ರಹದ್ದೆಂಬದನ್ನು ಪ್ರದರ್ಶಿಸುವದು ವಿಮಲೆಗೆ ಕ್ರಮಪ್ರಾಪ್ತವೇ ಆಯಿತು. ಆ ಮೇಲೆ ಇದುವರೆಗೆ ಸನದನ್ನೇಕೆ ಪಡೆಯಲಿಲ್ಲೆಂಬ ಪ್ರಶ್ನೆ ಹೊರಟಿತು. ತಾನು ತಾಯಿ-ತಂದೆಗಳ ಸೇವೆಯ ಸಲುವಾಗಿ ಊರಲ್ಲಿಯೇ ಇರಬೇಕಾಗಿದ್ದು, ಬೇರೆ ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗುವ ಅವಶ್ಯಕತೆಯಿರುವದಿಲ್ಲ. ಜ್ಞಾನಕ್ಕಾಗಿಯೂ ಉಮೇದಿಗಾಗಿಯೂ ಪರೀಕ್ಷೆ ಪಾಸಾಗಿರುವೆನೇ ಹೊರತು, ದ್ರವ್ಯಲೋಭದಿಂದಲ್ಲ; ಮತ್ತು ಈ ವಿವಾದದಿಂದ ಅಣ್ಣನ ಮೇಲೆ ಪ್ರಸಂಗ ಬಂದದ್ದರಿಂದಲೇ ಸನದು ಪಡೆಯಬೇಕಾಗಿದೆ, ಮುಂತಾದ ಸಂಗತಿಗಳನ್ನು ವಿಮಲೆಯು ಹೇಳಬೇಕಾಯಿತು. ಅವುಗಳ ಪರಿಣಾಮವು ಆಕೆಯ ಚಾರಿತ್ರ್ಯದ ದೃಷ್ಟಿಯಿಂದ ಜೋಜಿಗರಾಯನ ಮನಸ್ಸಿನ ಮೇಲೆ ಎಂತಾಗಿರಬಹುದೆಂಬದನ್ನು ವಾಚಕರೇ ತರ್ಕಿಸಿಕೊಳ್ಳತಕ್ಕದ್ದು. ಇರಲಿ. ದರ್ಬಾರೀ ಪದ್ಧತಿಯ ಮೇರೆಗೆ ಅರ್ಜದಾರರ ಅರ್ಜಿಯನ್ನು ಮಂಜೂರ ಮಾಡುತ್ತಿದ್ದರೂ, ಸಮಕ್ಷ ಭೆಟ್ಟಿಯಲ್ಲಿ ಹಾಗೆಂದು ಹೇಳುತ್ತಿರುವದಿಲ್ಲ. ಯಾಕೆಂದರೆ, ಅದರಿಂದ ಅರ್ಜದಾರನಿಗೆ ಹರ್ಷವಾಯುವಾಗಿ ಅಲ್ಲಿಂದಲ್ಲಿಯೇ ಬಿದ್ದು ಸತ್ತಗಿತ್ತರೆ? ಅಂತೆಯೇ 'ಹಿಂದಿನಿಂದ ತಿಳಿಸಲಾಗುವುದು' ಎಂದು ಹೇಳುತ್ತಾರೆ. ಅದೇ ಉತ್ತರವನ್ನು ಜೋಜಿಗರಾಯನು ವಿಮಲೆಗೆ ಕೊಟ್ಟನು; ಮತ್ತು ಅದಕ್ಕೆ ಮನೋಹರನು ಬರಿಯ ಹೂಂಕಾರವಿತ್ತನು. ಆ ಮೇಲೆ ಅವಾಂತರದ ಯಾವುದೊಂದು ವಿಷಯದ ಬಗ್ಗೆ ಮಾತನಾಡದಿರುವುದು ಸ್ತ್ರೀದಾಕ್ಷಿಣ್ಯಕ್ಕೆ ಒಪ್ಪುವದಿಲ್ಲೆಂದು ಜೋಜಿಗರಾಯನು ಸಹಜವಾಗಿ:-

"ನಿಮ್ಮ ವಕೀಲೀ ಪರೀಕ್ಷೆಯ ಅಭ್ಯಾಸವು ಎಷ್ಟು ದಿನದಲ್ಲಾಯಿತು?" ಎನ್ನಲು,

"ಒಂದೇ ವರ್ಷದಲ್ಲಿ" ಎಂದು ವಿಮಲೆಯೆಂದ ಕೂಡಲೆ, ತಾನು ತನಗಿಂತಲೂ ಬುದ್ಧಿಶಾಲಿಯಾದ ಹೆಂಗಳೆಯೊಡನೆ ಮಾತನಾಡುತ್ತಿರುವೆನೆಂಬ ಖಾತ್ರಿಯುಂಟಾಗಿ, ಆತನು ಮನಸ್ಸಿನಲ್ಲಿ ಬೆದರಿದನು; ಯಾಕಂದರೆ, ಮೊದಲು ರಾಜಕುಮಾರ ಕಾಲೇಜದಲ್ಲಿರುವಾಗ ಕಾಯಿದೆಯ ಅಭ್ಯಾಸವು ಎಷ್ಟು ಕಠಿಣವಾಗಿದೆಯೆಂಬದರ ಅನುಭವವು ಆತನಿಗೆ ಬಂದಿತ್ತು. "ನೀವು ಸದಾ ಯಾವ ಉದ್ಯೋಗ ಮಾಡುತ್ತಿರುತ್ತೀರಿ?" ಎಂಬ ಪ್ರಶ್ನೆಯು ಆ ಮೇಲೆ ಸಹಜವಾಗಿಯೇ ಆತನಿಂದ ಹೊರಟಿತು. ಈ ಪ್ರಶ್ನೆಯ ಉತ್ತರದಿಂದ ವಿಮಲೆಯ ಮನಸ್ಸಿನ ಸುಸಂಸ್ಕೃತಿ, ಶಿಕ್ಷಣಪ್ರೇಮ ಹಾಗು ಪರೋಪಕಾರ ಬುದ್ಧಿಗಳು ಬಾಯಿಂದ ಒಡನುಡಿಯುದಿದ್ದರೂ ತಿಳಿದು ಹೋದವು. ಅದರಿಂದ ಜೋಜಿಗರಾಯನ ಮುಖದಿಂದ:-"ಈ ಊರ ಚಿಕ್ಕ ಹುಡುಗರು ಬಹು ದೈವಶಾಲಿಗಳಾಗಿರುತ್ತಾರೆ!" ಎಂಬ ಶಬ್ದಗಳು ಸಹಜವಾಗಿ ಹೊರಬಿದ್ದವು. ಅವುಗಳನ್ನು ಕೇಳಿ ಮನೋಹರನ ಮನಸ್ಸು ಆತನನ್ನು ಕುರಿತು: "ನೋಡಿದಿಯಾ? ನಿನ್ನ ಗಾಣಕ್ಕೆ ಮೀನವು ಸಿಕ್ಕತೋ-ಇಲ್ಲವೋ?" ಎಂದಂದಿತು. ಆ ವಿಚಾರದಿಂದ ಉಂಟಾಗುತ್ತಿದ್ದ ನಗೆಯನ್ನು ಹತ್ತೊತ್ತುವದಕ್ಕೆಂದು ಅವನು ಕಿಟಕಿಯ ಬಳಿಗೆ ಹೋಗಿ, ಹೊರಗಿನ ಯಾವುದೋ ಅಪೂರ್ವ ದೃಶ್ಯವನ್ನು ನೋಡುವವರಂತೆ ನಟಿಸಿ, ಹಿಂದಿರುಗಿ ಬಂದು ತನ್ನ ಖುರ್ಚಿಯನ್ನಾಶ್ರಯಿಸಬೇಕಾಯಿತು. ಇನ್ನು ವಿಮಲೆಯ ಶಿಕ್ಷಣಸಂಸ್ಥೆಗೆ ಸರಕಾರದಿಂದೇನಾದರೂ ಗ್ರ್ಯಾಂಟು ಸಿಗುವದೇನೆಂದು ಜೋಜಿಗರಾಯನು ಕೇಳಿದ್ದಕ್ಕೆ "ಸ್ತ್ರೀಶಿಕ್ಷಣದ ಸಂಸ್ಥೆಗೆ ಸರಕಾರೀ ಸಹಾಯವೆಂದರೆ, ಸುಶೀಲೆಯಾದ ಶಿಕ್ಷಕಿಯ ಮೇಲೆ ಅದೊಂದು ಕಠಿಣ ಆಪತ್ತಿಯೇ ಸರಿ! ಆದರೆ ನಾನು ನನ್ನವೆಂದೆನ್ನುತ್ತಿರುವ ನನ್ನ ಸಾಲೆಯೊಳಗಿನ ಹುಡುಗರನ್ನು ಸಂಸ್ಥಾನೀ ಸರಕಾರವು ತನ್ನವೆಂದು ಅಂದರೂ ಅದರಿಂದ ನನ್ನ ಮನಸ್ಸಿಗೆ ಆನಂದವೇ ಆದೀತು" ಎಂದು ಹೇಳಿದಳು; ಆದರೆ ಈ ಸಂಭಾಷಣವು ನಡೆದಿರಲಿಕ್ಕೆ ಆ ಉಭಯತರೂ ಪರಸ್ಪರರ ಕಡೆಗೆ ನೋಡುತ್ತಿರುವದರ ಪ್ರಸಂಗವರಿತು ಮನೋಹರನು "ತನ್ನವೆಂಬದರ ಕಣ್ಣುಗಳು ಎರಡಾದರೂ, ದೃಷ್ಟಿಯೊಂದಾದಾಗಲೇ ಅದಾಗತಕ್ಕದ್ದು" ಎಂದಂದನು; ಆದರೆ ಆ ಕೂಡಲೆ ತ ಕೂಟದೊಳಗಿನ ಗರ್ಭಿತ ಸೂಕ್ಷ್ಮವನ್ನಡಗಿಸುವದಕ್ಕೆಂದು, ಆತನು ತೊದಲುತ್ತ "ಚಿಕ್ಕಮಕ್ಕಳ ವಿಷಯದ ಯೋಚನೆಯು ಮಕ್ಕಳು-ಮರಿಗಳುಳ್ಳ ತಾಯಿ-ತಂದೆಗಳಿಗಿಂತಲೂ ಎಷ್ಟೋ ಸಂದರ್ಭಗಳಲ್ಲಿ ಅವಿವಾಹಿತರಿಗೇ ಹೆಚ್ಚಿರುತ್ತಿರುವದು ಮೋಜಾಗಿದೆ" ಎಂದು ಬಾಯಿ ಚಪ್ಪರಿಸುತ್ತ ನುಡಿದನು; ಆದರೆ ಮನೋಹರನ ಈ ಅಭಿಪ್ರಾಯವು ಸಮರ್ಪಕವಾಗಿಲ್ಲೆಂಬದನ್ನು ತಿಳಿಸುವದಕ್ಕಾಗಿ: "ಅವಿವಾಹಿತರ ಮನಸ್ಸಿನಲ್ಲಿ ಚಿಕ್ಕಮಕ್ಕಳ ಶಿಕ್ಷಣಸಂಬಂಧದ

ಯಾವ ಪ್ರೇಮವಿರುವದೋ, ಅದು ವಿವಾಹಿತರ ಮನಸ್ಸಿನೊಳಗಿನ ಅಪತ್ಯ ಪ್ರೇಮಕ್ಕಿಂತ ಅಧಿಕವಾಗಿದ್ದರೆ, ಹಾಗೆಯೂ ಇದೀತು.'' ಎಂದು ಜೋಜಿಗರಾಯನು ಹೇಳಿದನು.

ಆ ಮೇಲೆ ತಾನು ಫಜೀತಿಗೊಳ್ಳಲಿಲ್ಲೆಂಬದನ್ನು ತೋರಿಸುವದಕ್ಕೆಂದು ಮನೋಹರನು ಬೇರೊಂದು ಹೊಸ ಪ್ರಶ್ನೆಯನ್ನೇ ತೆಗೆದನು: ''ಈ ಊರಲ್ಲೊಂದು ಗರ್ಲ್ಸ್‌ಸ್ಕೂಲಿದೆ; ಆದರೆ ಬಹು ದಿನಗಳಿಂದಲೂ ಅದು ಹಾಳು ಬಿದ್ದಂತಿದೆ! ಆ ಸ್ಕೂಲಿಗೆ ಶಿಕ್ಷಕಿಯರು ದೊರೆಯುವದಿಲ್ಲೆಂದು ಹಾಗಾಗಿದೆಯೆ? ಸಂಸ್ಥಾನದ ಬಜೆಟ್ಟಿನಲ್ಲಿ ಮಾತ್ರ ಆ ಸ್ಕೂಲಿನ ಮಿಸ್ಟ್ರೆಸ್ಸಿನ ಸಂಬಳವು ಖರ್ಚುಬಿದ್ದಿದೆ. ಒಂದುವೇಳೆ ಹೀಗೆಯೂ ಇದ್ದೀತು; ಆ ಮಿಸ್ಟ್ರೆಸ್ಸು ಸಂಬಳವನ್ನು ಪಡೆಯುತ್ತಿದ್ದು, ಮತ್ತಾವ ಉದ್ಯೋಗವನ್ನಾದರೂ ಮಾಡುತ್ತಿರಬಹುದು.'' ವಿಮಲೆಗೆ ಮನೋಹರನ ಈ ಮಾತು ರುಚಿಸಲಿಲ್ಲ. ಆದರಿಂದ ಅವಳು--''ಇದರ ನಿಜವಾದ ಕಾರಣ ತಿಳಿಸಲಿಕ್ಕೆ ನನಗೆ ಸಂಕೋಚವೆನಿಸುತ್ತಿದೆ; ಆದರೆ ತಕ್ಕ ಸಂಬಳ ಕೊಟ್ಟರೂ ಶಿಕ್ಷಕಿಯರು ತಳವೂರಿ ನಿಲ್ಲದಿರುವದಕ್ಕೆ ಬೇರೆಯೇ ಕಾರಣವಿದೆ. ಒಬ್ಬರ ಹಿಂದೊಬ್ಬರಂತೆ ಇಬ್ಬರು ಸ್ಕೂಲ ಮಿಸ್ಟ್ರೆಸ್ಸುಗಳು ಸಂಜೆಯ ಮುಂದೆ ರಜೆಯ ರಿಪೋರ್ಟ ಕಳಿಸಿ, ತಮ್ಮ ಮರ್ಯಾದೆಯುಳಿಸಿಕೊಳ್ಳುವದಕ್ಕೆಂದು ಮಧ್ಯರಾತ್ರಿಯಲ್ಲೇ ಊರುಬಿಟ್ಟು ಹೋಗಿರುವರು; ಮತ್ತು ತಾವು ಹೋದಲ್ಲಿಂದಲೇ ಅವರು ರಾಜೀನಾಮೆಗಳನ್ನು ಕಳಿಸಿಬಿಟ್ಟಿರುವರು! ಹಾಗು ಆ ತೆರವಾದಸ್ಥಳ ತುಂಬುವ ಸಲುವಾಗಿ ಮೊನ್ನೆ ಶಿಕ್ಷಣಾಧಿಕಾರಿಗಳು ವೃತ್ತಪತ್ರಗಳಲ್ಲಿ ಪ್ರಕಟಿಸಿರುವ ಪ್ರಕಟನೆಯಲ್ಲಿ ''ಅರ್ಜಿಯೊಡನೆ ಅರ್ಜದಾರಳು ತನ್ನ ವಿಳಾಸ ಹಾಗು ಫೋಟೋಗಳನ್ನು ಕಳಿಸತಕ್ಕದ್ದು'' ಎಂದು ಒರೆದಿರುತ್ತಾರೆ. ನಾನು ಹೇಳಿದ್ದರಲ್ಲಿ ಅತಿಶಯೋಕ್ತಿಯೂ ಇದ್ದೀತು; ಆದರೆ ಬಡ ಸುಶೀಲ ಮಿಸ್ಟ್ರೆಸ್ಸುಗಳ ಮೇಲೆ ಇವರು ಮಾಡಿರುವ ನಿರಾಧಾರದ ಆರೋಪಗಳನ್ನು ನಾನು ಕೇಳಿಕೊಳ್ಳುವದೆಂತು?

ಆಯಿತು! ಮನೋಹರನು ಅವರೀರ್ವರ ಮಾತಿನಲ್ಲಿ ನಡುವೇ ಬಾಯಿಹಾಕಿದ್ದಕ್ಕೆ ಹೀಗೆ ತಪರಾಕಿ ಹೊಡೆದಂತೆ ಪರಿಣಾಮವಾಯಿತು! ಮನೋಹರನು ಅದನ್ನು ಸಹಜವೆಂದು ನುಡಿದಿದ್ದನು; ಆದರೆ ಅದರಿಂದ ವಿಮಲೆಯ ಅಂತರಂಗದಲ್ಲಿದ್ದ ಸ್ತ್ರೀ ವರ್ಗದ ಸ್ವಾಭಿಮಾನವು ಸಹಜವಾಗಿಯೇ ಪ್ರಜ್ವಲಿತವಾಯಿತು. ಮತ್ತು ಆ ತೇಜದಲ್ಲಿ ಆ ಉಭಯ ಮಿತ್ರರ ಕಣ್ಣುಗಳೂ ಕುಕ್ಕಹತ್ತಿದ್ದರಿಂದ, ಅವರ ಬಾಯಿಯೂ ಕಟ್ಟಾಯಿತು. ಕೂಡಲೆ ವಿಮಲೆಯು ''ನಾನಿನ್ನು ಹೊರಡುತ್ತೇನೆ'' ಎಂದವಳೇ, ಎದ್ದು ನಿಂತಳು; ಮತ್ತು ಪರಸ್ಪರ ನಮಸ್ಕಾರಗಳಾದ ಬಳಿಕ, ಅವಳನ್ನು ಕಳಿಸಲಿಕ್ಕೆಂದು ಮನೋಹರನೂ ಕೆಳಗೆ ಬಂದನು.

ಅದು ಚಿಕ್ಕ ಸಂಭಾಷಣದ ಪ್ರಸಂಗವೇ! ಆದರೂ ಅದರಲ್ಲಿಯೂ ವಿಮಲೆಯ ಹಲವು ಗುಣಗಳು ಜೋಇಜಿಗರಾಯನ ಅನುಭವಕ್ಕೆ ಬಂದುದರಿಂದ, ಅವಳ ವಿಷಯದ ಪ್ರೇಮಭಾವನೆಯಲ್ಲಿ ಆದರ ಬುದ್ಧಿಯು ಭರತಿಯಾಗಿ, ತಾನು ಸಂಸ್ಥಾನಿಕನಾಗಿದ್ದರೂ ಮನುಷ್ಯ ಈ ನಾತೆಯಿಂದ ಅವಳಿಗಿಂತ ಎಷ್ಟು ಅಲ್ಪ ಯೋಗ್ಯತೆಯುವನಿರುವೆನೆಂಬದು ಆತನ ಮನಸ್ಸಿನಲ್ಲಿ ಬಿಂಬಿಸಿತು! ಮನೋಹರನು ಕೆಳಗಿನಿಂದ ಮೇಲೆ ಬರುವವರೆಗೂ ಆತನು ಕುಳಿತ ಸ್ಥಳಬಿಟ್ಟು ಕದಲಲಿಲ್ಲ; ಮತ್ತು ಆ ದಿವಾಣಖಾನೆಯ ಪಡಜಂತಿಗಳ ಮೇಲೆ ನೆಟ್ಟ ಆತನ ದೃಷ್ಟಿಯು ಚಲಿಸಲಿಲ್ಲ. ಆಗ ಅಲ್ಲಿ ಆತನಿಗಾವ ಗೊಂಬೆ ಕುಣಿಯುತ್ತಿರುವಂತೆ ಕಾಣುತ್ತಿದ್ದತೋ ಅದಾರು ಹೇಳಬೇಕು?

ಅಂದೇ ಮಧ್ಯಾಹ್ನದಲ್ಲಿ ಸಂಸ್ಥಾನದ ವಕೀಲೀ ಸನದಿನ ಕಾಗದವನ್ನು ಒಂದು ಮುದ್ರೆ ಮಾಡಲ್ಪಟ್ಟ ಲಕ್ಕೋಟೆಯಲ್ಲಿ ಇಟ್ಟು ವಿಮಲೆಗೆ ಅವಳ ಮನೆಗೇ ಕಳಿಸಲಾಯಿತು. ದಿವಾಣಸಾಹೇಬರು ಅದಕ್ಕೆ ಮೊದಲೇ ಆ ಪ್ರಭಾಕರನ ಪ್ರಕರಣದ ನಿಕಾಲೆ ಮಾಡಲಿಕ್ಕೆ ಅರಮನೆಗೆ ಹೋಗಿದ್ದರು; ಅದರಿಂದ ವಿಮಲೆಯ ಸನದಿನ ಬಗ್ಗೆ ದಿವಾಣ-ಮಹಾರಾಜರಲ್ಲಿ ಚರ್ಚೆಯಾಯಿತೆಂಬದನ್ನು ತಿಳಿಸುವ ಅವಶ್ಯಕತೆಯಿಲ್ಲ. ದಿವಾಣಸಾಹೇಬರು ಕಾಯಿದೆಯ ಮಾತನ್ನೆತ್ತಲು "ಸ್ತ್ರೀಯರಿಗೆ ಸನದು ಕೊಡುವ ಪರಿಪಾಠವಿರದಿದ್ದರೂ ಕೊಡಜಾರದೆಂದು ಕಾಯಿದೆಯಿದೆಯೋ?" ಎಂಬ ಪ್ರಶ್ನ ಹಾಕಿ ಅವರ ಮುಖಭಂಗಗೊಳಿಸಿದರು! "ಸ್ತ್ರೀಯರು ವಕೀಲೀ ಮಾಡಹತ್ತಿದರೆಂದರೆ ನ್ಯಾಯದಾನದಲ್ಲಿ ಶಿಥಿಲತೆಯುಂಟಾಗದಿರದು." ಎಂಬ ದಿವಾಣರ ಅಡ್ಡಿಗೆ "ನ್ಯಾಯಕೋರ್ಟುಗಳಲ್ಲಿ ಸ್ತ್ರೀಯರು ವಕೀಲರೆಂದು ಇದುವರೆಗೆ ಬರದಿದ್ದರೂ ಫಿರ್ಯಾದಿ, ಆರೋಪಿ, ವಾದಿ, ಪ್ರತಿವಾದಿ, ಸಾಕ್ಷಿದಾರರ ನಾತೆಯಿಂದ ಬರಬಹುದೋ ಇಲ್ಲವೊ? ಮತ್ತು ಸ್ತ್ರೀದರ್ಶನದಿಂದ ಮೋಹಿತನಾಗಿ, ಸ್ತ್ರೀಯರ ಪುರಾವೆ-ಸಾಕ್ಷಿಗಳೇ ನಿಜವೆಂದು ನ್ಯಾಯಾಧೀಶನೆಂದರೆ, ಗೊಂದಲವೇ ಆದೀತು! ಹಾಗು ಅದಕ್ಕಿಂತಲೂ ಹೆಚ್ಚು ಗೊಂದಲವು ಇಬ್ಬರು ಹೆಂಗಸರು ಪರಸ್ಪರ ವಿರುದ್ಧ ಪುರಾವೆ-ಸಾಕ್ಷಿ ಕೊಡುವವರು ಬಂದರೆ ಉಂಟಾಗಲಿಕ್ಕಿಲ್ಲೇನು? ಯಾಕಂದರೆ, ಯಾವ ಸ್ತ್ರೀಯು ಹೆಚ್ಚು ಸುರೂಪಿಯೂ ಲೋಭವಶವಾಗುವವಳೂ ಆಗಿರುವಳೋ, ಅವಳಂತೆಯೇ ನ್ಯಾಯದ ನಿಕಾಲೆಯಾಗುವದು!" ಎಂದು ಮಹಾರಾಜರು ಚೊಕ್ಕ ಉತ್ತರ ಕೊಟ್ಟರು. ಅದಕ್ಕೆ ದಿವಾಣಸಾಹೇಬರೇನು ಹೇಳುವರು? ಮತ್ತೆ ಮಹಾರಾಜರೇ: "ನ್ಯಾಯದಾನದಲ್ಲಿ ಅನ್ಯಾಯವೇ ಆಗುವದೆಂದರೆ, ಸ್ತ್ರೀದರ್ಶನದಂತೆಯೇ ಲಂಚ-ರುಸುವತ್ತು, ಮಿತ್ರರ ಭಿಡೆ-ಮುರುವತ್ತು, ಆಪ್ತೇಷ್ಟರ ಋಣಾನುಬಂಧುತ್ವ ಇವು ಪ್ರಭಾವ

ಶಾಲಿಗಳಾದ ಮೋಹನಾಸ್ತ್ರಗಳಲ್ಲವೇನು? ನನಗೆ ನ್ಯಾಯದಾನದ ಇನ್ನೂ ಅನುಭವವಿರದ್ದರಿಂದ ನಿಮ್ಮನ್ನು ಕೇಳಿದೆನಿಷ್ಟೇ?'' ಮಹಾರಾಜರ ಈ ಮಾತಿನ ಸ್ಪಷ್ಟ ಸಂದರ್ಭವು ''ಈ ಮೋಹನಾಸ್ತ್ರಗಳ ಪ್ರಭಾವವು ದಿವಾಣಸಾಹೇಬರೇ, ನಿಮ್ಮ ಮೇಲೆ ಅನೇಕ ಸಾರೆ ಆಗಿದ್ದೀತು; ಅಂದಮೇಲೆ ಸ್ತ್ರೀಯರು ವಕೀಲರಾಗುವದಕ್ಕೇ ನಿಮ್ಮ ಕಟಾಕ್ಷವೇಕೆ'' ಎಂದಿತ್ತು; ಆದರೆ ಮಹತ್ವದ ಕಾರಣಗಳನ್ನು ಮೊದಲು ಹೇಳಿ, ಕ್ಷುಲ್ಲಕ ಕಾರಣಗಳನ್ನು ಹಿಂದಿನಿಂದ ತಿಳಿಸಿ, ತಮ್ಮ ಭಾರವೆಲ್ಲ ಇವುಗಳ ಮೇಲೆಯೇ ಇದೆಯೆನ್ನುವ ದೃಶ್ಯವನ್ನುಂಟು ಮಾಡುವದೊಂದು ಚೇಷ್ಟೆಯು ಪ್ರಕಾರವೇ ಆಗಿರುವದು. ಅದರಂತೆ ಮಹಾರಾಜರು ಕಡೆಗೆ ಎರಡು ಕಾರಣಗಳನ್ನು ಹೇಳಿದರು: ''ಯಾವ ಸ್ತ್ರೀಯಳಿಗೆ ಬ್ರಿಟಿಶ ಮುಲುಖಿನಲ್ಲಿ ಸನದು ಸಿಗುವದೋ, ಅವಳಿಗೆ ಸಂಸ್ಥಾನೀ ದರಬಾರದವರು ಸನದು ಕೊಡುವದಿಲ್ಲೆನ್ನುವದು ಬ್ರಿಟಿಶ ಸರಕಾರದ ಅವಮಾನ ಮಾಡಿದಂತಾಗಲಿಕ್ಕಿಲ್ಲವೇ?'' ಈ ಕಾರಣವನ್ನು ಮಹಾರಾಜರು ಹೃದಯಪೂರ್ವಕವಾಗಿ ಮುಂದೆ ಮಾತಾಡದಿದ್ದರೂ ದಿವಾಣಸಾಹೇಬರ ಮನಸ್ಸಿನ ಮೇಲೆ ಮಾತ್ರ ಅದರ ಪರಿಣಾಮವು ವಿಶೇಷವಾಯಿತು; ಮತ್ತು ಕಟ್ಟಕಡೆಗೆ ನಕ್ಕು ಚಪ್ಪಾಳೆ ಹೊಡೆಯುವಾಗ ಯಾವ ದನಿಯುಂಟಾಗುವದೋ, ಆ ದನಿಯಿಂದ ಮಹಾರಾಜರು:''ಏನಿರಿ ದಿವಾಣಸಾಹೇಬರೇ, ಸನದಿನ ಫೀಯು ಐನೂರು ರೂಪಾಯಿಗಳನ್ನು ಅದೇಕೆ ಕಳಕೊಳ್ಳಬೇಕು?'' ಎಂದು ಅಂದರು. ಸಂಸ್ಥಾನದ ಆದಾಯವು ಕಡಿಮೆಯಾಗಬಾರದೆಂಬದಕ್ಕೆ ದಿವಾಣಸಾಹೇಬರು ಬಹು ದಕ್ಷರಿರುತ್ತಾರೆಂಬ ವ್ಯಂಗ್ಯೋಕ್ತಿಯ ಉಡುಗರೆಯನ್ನು ಈ ಮೊದಲೊಮ್ಮೆ ಮಹಾರಾಜರು ದಿವಾಣರಿಗೆ ಮಾಡಿದ್ದರು. ಹತ್ತು ಸಾವಿರದ ಒಡವೆಯನ್ನು ಪ್ರೊ ಏ. ಮಡಮ್ಮನಿಗೆ ಕೊಡಬೇಕೆಂದರು; ಆದರೆ ಆ ಒಡವೆಯನ್ನಿಟ್ಟುಕೊಡುವ ಬೆಳ್ಳಿಯ ತಬಕವು ಮಾತ್ರ ಸಣ್ಣದಿರಬೇಕೆಂಬ ಸಂಗತಿಯನ್ನು ಆಧಾರಭೂತವಾಗಿಟ್ಟುಕೊಂಡು, ಬೆಳ್ಳಿಯ ಆ ಚಿಕ್ಕ ತಬಕ ಸಹಿತವಾಗಿ ಆ ದೊಡ್ಡ ಒಡವೆ ಕೊಡುವದನ್ನೇ ರಹಿತಪಡಿಸಿ, ಅವರು ದಿವಾಣಸಾಹೇಬರ ಚೇಷ್ಟೆಯನ್ನು ಈ ಮೊದಲೇ ಮಾಡಿದ್ದರು. ವಿಮಲೆಯು ಸ್ತ್ರೀಯಾದ್ದರಿಂದ ಆಕೆಗೆ ಸನದು ಕೊಡಬಾರದೆಂಬ ದಿವಾಣಸಾಹೇಬರ ದೊಡ್ಡ ಮುತ್ಸದ್ದಿತನದ ಧೋರಣದ ಫಜೀತಿಯನ್ನು ಈಗ ಐನೂರು ರೂಪಾಯಿಗಳ ಆಮಿಷದೋರಿ ಮಾಡಿದರು.

ಪ್ರಭಾಕರನನ್ನು ಯಾವ ಸ್ಥಳದಲ್ಲಿ ನೆರೆಯಿರಿಸಬೇಕೆಂಬ ಸಂಗತಿಯಿಂದಲೇ ಉಭಯತರಲ್ಲಿ ಮತಭೇದಕ್ಕೆ ಪ್ರಾರಂಭವಾಗಿತ್ತು. ವಕೀಲೀ ಸನದು ಅದರ ಎರಡನೇ ಮೆಟ್ಟಿಲಾಗಿತ್ತು; ಆದರೆ ದೈವಯೋಗದಿಂದ ಆ ಮತಭೇದದ ಮೂರನೇ ಮೆಟ್ಟಿಲು ನಿರ್ಮಿಸುವ ಯೋಗವು ಕೂಡ ಅಂದೇ ಕೂಡಿಬಂದಿತು. ಅದೆಂತೆಂದರೆ:

ದತ್ತವಿಧಾನವು ರಹಿತವಾದ ಕ್ಷಣದಿಂದ ಪ್ರಭಾಕರನು ತಿರುಗಿ ಬಂದ ಬೊಬ್ಬಾಟವು ಊರ ತುಂಬ ಆಯಿತು. ದಿವಾಣಸಾಹೇಬರು ದತ್ತವಿಧಾನಕ್ಕೆ ಹೊರಟಾಗಲೆ, ಇಂದು ಏನೋ ಅಪೂರ್ವವಿದೆಯೆಂದು ಜನರಿಗನಿಸಿದ್ದಿತು. ಎಂದಾದರೊಮ್ಮೆ ರಣಗಂಟೆಯನ್ನು ಕೊರಳಲ್ಲಿ ಕಟ್ಟಿಕೊಂಡ ಆನೆಯು ರಾಜಮಾರ್ಗದೊಳಗಿಂದ ಸದ್ದಿಲ್ಲದೆ ಹೋಗಬಹುದು; ಆದರ ದಿವಾಣಸಾಹೇಬರ ಸವಾರಿಯು ಹೊರಟಿತೆಂದರೆ ಆ ಮಾರ್ಗವು ಕಿಕ್ಕಿರಿದು ಹೋಗುತ್ತಿತ್ತು! ದತ್ತವಿಧಾನದ ಕಾಲಕ್ಕೆ ಡಬೀರರ ಮನೆಯ ಹೊರಗೆ ಜನರು ಹೆಚ್ಚಾಗಿ ಕಲೆತಿದ್ದರು; ಮತ್ತು ಕಡೆಗೆ ಪ್ರಭಾಕರನು ದೊಡ್ಡ ದನಿಯಿಂದ ಎಲ್ಲರೂ ಒಮ್ಮೆಲೆ ಹೊರಟು ಹೋಗಿರೆಂದು ಹೇಳಿದ್ದನ್ನು ಆ ಜನಸಮೂಹವು ಕೇಳಿಕೊಂಡಿತ್ತು; ಹಾಗು ಅಲ್ಪ ಕ್ಷಣಗಳಲ್ಲಿಯೇ ಮೋರೆಯುಳಿಸಿಕೊಂಡು ಹೊರಬಿದ್ದು ಹೋದ ದಿವಾಣಸಾಹೇಬ ಮೊದಲಾದವರನ್ನು ಅವರು ನೋಡಿದ್ದರು. ಮುಂದ ಅರ್ಧ ತಾಸಿನಲ್ಲಿಯೇ ಊರ ತುಂಬ ಸುದ್ದಿ ಹಬ್ಬಿ ದತ್ತಕವು ರಹಿತವಾಯಿತೆಂಬದು ಚೇಷ್ಟೆಯ ವಿಷಯವಾದರೂ, ಪ್ರಭಾಕರನು ಮರಳಿ ಬಂದನೆಂಬ ಸಂಗತಿಯಿಂದ ಇಡಿ ಊರ ಜನಂಗೆ ಸಂತೋಷವಾಗಿತ್ತು. ಯಾಕಂದರೆ ಆತನು ಅಂಥ ಲೋಕಪ್ರಿಯನೇ ಆಗಿದ್ದನು. ಆತನು ಹುಂಬನಾಗಿದ್ದನು; ಪರೋಪಕಾರನಿರತನಾಗಿದ್ದನು; ಸತ್ಪ್ರವೃತ್ತಿಯವನಾಗಿದ್ದನು; ನ್ಯಾಯದಾನಕ್ಕೆ ಸಹಾಯಕಾರಿಯಾಗಿದ್ದನು; ಅಧಿಕಾರಿಗಳ ಹುಳುಕನ್ನು ಹೊರಗೆಡಹುವವನಾಗಿದ್ದನು; ಮತ್ತು ಎಲ್ಲಕ್ಕೂ ಮಹತ್ವದ ಸಂಗತಿಯೇನಂದರೆ, ತಮ್ಮ ಹಂಡಿರು-ಮಕ್ಕಳ ಮರ್ಯಾದ ಕಾಯುವ ಹುಂಬನಾಗಿದ್ದನೆಂದು ಆತನ ಪ್ರಖ್ಯಾತಿಯಿತ್ತು. ಪ್ರಭಾಕರನ ಸ್ವಾರಿಯು ದಾರಿಹಿಡಿದು ನಡದರೆ, ಆತನೊಡನೆ ಆತನ ಗರಡಿಯೊಳಗಿನ ನಾಲ್ಕಾರು ಜನ ಪೈಲವಾನರು ಇರತಕ್ಕವರೇ! ಅವರೆಲ್ಲರ ಮೈಯಲ್ಲೂ ಕೆಮ್ಮಣ್ಣು ಮೆತ್ತಿದ್ದ ಲಂಡದೊಳಿನ ಅಂಗಿ, ತಲೆಯ ಮೇಲೆ ಅದೇ-ಕೇಶರೀ-ಬಣ್ಣದ ತಿರುಪಾಗಿಟ್ಟಿದ್ದ ಟೊಪ್ಪಿಗೆ, ಕೈಯಲ್ಲಿ ಸೀರ ಬೆತ್ತ ಮತ್ತು ಮೀನಗಂಡಗಳು ಎದ್ದುಕಾಣುವ ಹಾಗ ಉಟ್ಟ ದೋತರ ಈ ವೇಷದ ಆ ಹುಂಬರ ಗುಂಪು ದಾರಿಹಿಡಿದು ಹೊರಟಿತೆಂದರೆ, ಎಲ್ಲ ಜನರೂ ಅವರ ಕಡೆಗೆ ಆದರದಿಂದ ನೋಡುತ್ತಿದ್ದರು; ಹಾಗು ವರಿಷ್ಠ ಅಧಿಕಾರಿಗಳಿಗೆ ಕೂಡ ಇಗದಷ್ಟು ಸಲಾಮು-ನಮಸ್ಕಾರಗಳು ಅವರಿಗಾಗುತ್ತಿದ್ದವು. ಬ್ಯಾಂಡ ಬಾರಿಸುತ್ತ ಹಾಗು ಬೂಟುಗಳನ್ನು ಖಟ್ಟಖಟ್ಟೆಂದು ಸಪ್ಪಳ ಮಾಡಿ ತುಳಿಯುತ್ತ ಇಡಿ ಪೋಲೀಸರ ದಂಡು ದಾರಿಯಲ್ಲಿ ನಡೆದರೂ ಅವರ ಬೆದರಿಕೆಯು ಜನರಿಗೆಷ್ಟು ಆಗುತ್ತಿತ್ತೋ, ಅದಕ್ಕೂ ಹೆಚ್ಚು ಅಂಜಿಕೆಯು ಪ್ರಭಾಕರಾದಿಗಳ ಸಣ್ಣ ಗುಂಪಿನಿಂದ ಆಗುತ್ತಿತ್ತು. ಆತನು ಫರಾರಿಯಾದಾಗ ಮೊದಲು ನಾಲ್ಕೆಂಟು ದಿನಗಳ ವರೆಗೆ ಅಜ್ಞಾನದಿಂದ ಲೋಕ

ಮತವು ಆತನ ಬಗ್ಗೆ ಕಲುಷಿತವಾಗಿತ್ತು; ಆದರೆ ಶೀಘ್ರದಲ್ಲಿಯೇ ಅದು ಬದಲಾಯಿತು. ಮೊದಲನೇ ಚೌಕಶಿಯು ಪ್ರಭಾಕರನ ಗೈರಹಾಜರಿಯಲ್ಲಿ 'ಬೆಲ್ಲದ ಗಣಪತಿ-ಬೆಲ್ಲದ ನೈವೇದ್ಯ' ಈ ನ್ಯಾಯದಿಂದಾಗಿತ್ತು; ಆದರೆ ಮುಂದೆ ಆತನ ಸಹಕಾರಿಯೆಂದು ಶಿಕ್ಷೆಯಾಗಿದ್ದ ಭಾನುವು ಮಾಫಿ ಬೇಡಿ ಬಿಡುಗಡೆ ಹೊಂದಿದನು. ಆಗ ನಿಜ ಸಂಗತಿಯು ತನ್ನಷ್ಟಕ್ಕೆ ತಾನೇ ಹೊರಬೀಳಹತ್ತಿತು. ಅಂದಿನಿಂದ ಊರ ಜನರು ಪ್ರಭಾಕರನ ದಾರಿಯನ್ನು ಬಳ್ಳೇ ಉತ್ಕಂಠೆಯಿಂದ ನಿರೀಕ್ಷಿಸತೊಡಗಿದ್ದರು; ಮತ್ತು ಈಗ ಆತನು ಹೀಗೆ ಅಭಾಪಿತ ರೀತಿಯಿಂದ ಬಹು ದಿನಗಳ ತರುವಾಯ ಪ್ರಕಟನಾದ್ದರಿಂದ, ಆತನ ಪ್ರೇಮದಿಂದ ಜನರು ಬಹು ಮೋದಗೊಂಡಿದ್ದರು. ಪ್ರತಿಯೊಬ್ಬರ ಬಾಯಲ್ಲೂ ಇನ್ನು ಆತನದೇನಾಗುವದೆಂಬ ವಿಷಯವೇ! ಜೋಧ್ಯಪುರದ ಭಾನುವು ಇತ್ತೀಚೆಗೆ ತನ್ನ ನೌಕರಿಯ ಸ್ಥಳದಿಂದ ಜೋಧ್ಯಪುರಕ್ಕೆ ಬರಹತ್ತಿದಂದಿನಿಂದ; ಅವನಿಗೆ ಪಶ್ಚಾತ್ತಾಪದ ಹೃದ್ರೋಗವು ಹೆಚ್ಚಾಗಹತ್ತಿತ್ತು. ಆದರಿಂದ ಪ್ರಭಾಕರನು ಮರಳಿ ಬಂದ ಕೂಡಲೆ ಅವನನ್ನು ಮತ್ತೆ ಸೆರೆಹಿಡಿದರೆಂಬದು ತಿಳಿಯಲು, ಆ ಭಾನುವು ಆ ಕೆಲಸದಲ್ಲಿ ನ್ಯಾಯ ದೊರಕಿಸುವ ನಿಶ್ಚಯ ಮಾಡಿದನು! ನ್ಯಾಯದ ಕೆಲಸವು ಯೋಗ್ಯವಾಗಿ ಆಗಬೇಕಾಗಿದ್ದರೆ, ಖುದ್ದ ಸಂಸ್ಥಾನಿಕರನ್ನು ಕಾಣುವದೇ ಅವಶ್ಯವು; ಆದರೆ ಆ ಭಾನುವನ್ನು ದರ್ಬಾರದಲ್ಲಿ ಮಾತಾಡಿಸುವವರಾರು? ಅದರಿಂದ ಆತನು ಬ್ರಿಟಿಶ ಮುಲುಖಿನಂತೆ ಮತಪ್ರಸಾರಕ ಶಿಕ್ಷಣದ ಉಪಯೋಗ ಮಾಡಿಕೊಂಡು, ಊರಲ್ಲೆಲ್ಲ ಡಂಗುರ ಸಾರಿ ಜಾಹೀರಸಭೆಯನ್ನು ಕೂಡಿಸಿದನು. ಪಟ್ಟಣಶೆಟ್ಟಿಯಾದ ಧೀರಜಲಾಲನನ್ನು ಅಧ್ಯಕ್ಷನನ್ನಾಗ ಮಾಡಿದನು. ಹನ್ನೆರಡು ವರ್ಷದ ಮುಂಚಿನ ತನ್ನ ಖೊಟ್ಟಿ ಸಾಕ್ಷಿಯ ಸಂಗತಿಯನ್ನೆಲ್ಲ ವಿವರಿಸಿ ಹೇಳಿದನು; ಮತ್ತು ಜೋಜಿಗಮಹಾರಾಜರ ಕಡೆಗೆ ಶಿಷ್ಟಮಂಡಲವನ್ನು ಕಳಿಸುವ ಗೊತ್ತುವಳಿ ಪಾಸು ಮಾಡಿಸಿಕೊಂಡನು.

ವಿಮಲೆಯ ಸನದಿನ ವಿಷಯವಾಗಿ ದಿವಾಣ-ಮಹಾರಾಜರಲ್ಲಿ ಚರ್ಚೆ ನಡೆದ ಕಾಲಕ್ಕೆ ಆ ಶಿಷ್ಟಮಂಡಳಿಯು ಮಹಾರಾಜರ ಭೆಟ್ಟಿಗೆ ಬಂದ ವರ್ತಮಾನವು ಬಂತು. ಇಷ್ಟರಲ್ಲಿ ಈ ಮೊದಲಿನ ಚರ್ಚೆಯು ಮುಗಿದಿದ್ದರೂ ಈ ಹೊಸ ಕೆಲಸಕ್ಕೆಂದು ಮಹಾರಾಜರು ದಿವಾಣಸಾಹೇಬರನ್ನು ನಿಲ್ಲಿಸಿಕೊಳ್ಳಲೇ ಬೇಕಾಯಿತು. ಶಿಷ್ಟಮಂಡಳದವರು ಅಲ್ಲಿಗೆ ಬಂದ ಬಳಿಕ ಪಟ್ಟಣಶೆಟ್ಟಿಯಾದ ಧೀರಜಲಾಲನು ಮಹಾರಾಜರಿಗೆ ಅಂದಿನ ಜಾಹೀರ ಸಭೆಯ ಗೊತ್ತುವಳಿಯನ್ನು ಓದಿ ತೋರಿಸಿ: "ಪ್ರಭಾಕರನ ಈ ಪ್ರಕರಣವು ತಂಗಳವಾಗಿ ಹಳಸಿ ಹೋಗಿದೆ. ಅದರಿಂದ ಅದನ್ನು ಬಿಸುಟಿ ಬಿಡಬೇಕು; ಅಂದರೆ ಪಟ್ಟಣವಾಸಿಗಳಿಗೆ ಸಂದೋಶು

ವದು." ಎಂದು ಹೇಳಿದನು. ಯಾರಿಗೆ ಕಾಯಿದೆಯ ಜ್ಞಾನವಿರುವದಿಲ್ಲವೋ ಅವರಿಗೆ ತಮ್ಮ ಮನಸ್ಸಿಗೆ ಬಂದದ್ದನ್ನು ಕೇಳಿಕೊಳ್ಳಲಿಕ್ಕೆ ಗಡಚೆನಿಸುವದಿಲ್ಲ; ಮತ್ತು ಕಾಯಿದೆಯಾದರೂ ಸಂಸ್ಥಾನಿಕನೇ ರಾಜಿಯಾದ ಬಳಿಕ ಆತನಿಗೆ ಅಡ್ಡಿಮಾಡುವದೆಂತು? ಹೀಗೆಂದು ಎಲ್ಲ ಸಂಸ್ಥಾನೀ ಪ್ರಜೆಗಳ ತಿಳುವಳಿಕೆಯಾಗಿರುತ್ತದೆ; ಆದರೆ ಮಹಾರಾಜರ ಭಾವನೆಯು ಹಾಗಿರಲಿಲ್ಲ. ಅಂತೆಯೇ ಅವರು ಕೆಲ ವೇಳೆಯವರೆಗೆ ಈ ಪ್ರಕರ್ಣದ ಮಾಹಿತಿಯೇ ಇಲ್ಲದವರಂತೆ ನಟಿಸಿ, ದಿವಾಣಸಾಹೇಬರಿಂದ ಅದನ್ನು ಆ ಜನರ ಸಮಕ್ಷ ಕೇಳಿಕೊಂಡರು. ಅದರಿಂದ ದಿವಾಣಸಾಹೇಬರಿಗೆ ಹುರುಪುಂಟಾಗಿ ತಾವಾಗಿಯೇ: "ಒಮ್ಮೆ ನಿಕಾಲೆಯಾದ ಪ್ರಕರ್ಣವು ಮತ್ತೆ ಮತ್ತೆ ನಿಕಾಲೆಯಾಗುತ್ತಿರುವದಿಲ್ಲ; ಮತ್ತು ನ್ಯಾಯದಾನದ ಇಂಥ ಪ್ರಕರ್ಣಗಳನ್ನು ಮುಚ್ಚಿ ಹುಗಿಯಲಿಕ್ಕೂ ಬರುತ್ತಿರುವದಿಲ್ಲ." ಎನ್ನಲು, ಆ ಕೂಡಲೆ ಭಾನುವು ಸಿಟ್ಟಿನಿಂದ ಉರಿಯುತ್ತ: "ನಿಕಾಲೆಯಾದದ್ದೇನು? ಅದು ನ್ಯಾಯದೇವತೆಯ ವಿಡಂಬನೆಯೇ ಸರಿ!" ಆಗ ಮಹಾರಾಜರು ಸಹಜವಾಗಿ:-"ಇವರಾರು?" ಎಂದು ಪ್ರಶ್ನೆ ಮಾಡಲು, ಆಗ ಭಾನುವೇ: "ಪ್ರಭಾಕರನ ಸಹಕಾರಿಯೆಂದು ಶಿಕ್ಷೆಯಾದವನೂ ಮಾಫಿ ಬೇಡಿದ ನೆವದಿಂದ ಬಂಧಮುಕ್ತನಾದವನೂ ಆದ ಬಂದಿಯು ನಾನೇ." ಆ ಮಾಹಿತಿಯನ್ನು ಕೇಳಿ, ಮಹಾರಾಜರು: "ಹಾಗಾದರೆ ಯಾವ ಒಂದು ಸಾಕ್ಷಿಯಲ್ಲಿ ನಂಬಿಗೆಯಿಟ್ಟು ಡಬೀರರಿಗೆ ಶಿಕ್ಷೆಯಾಯಿತೋ, ಆ ಸಾಕ್ಷಿಯೇ ಖೊಟ್ಟಿ ಹಾಗು ಕೃತ್ರಿಮವಿದ್ದಿತೇ? ಮತ್ತು ಆ ಸಾಕ್ಷಿದಾರನೇ ನಾನು ಆಗ ಖೊಟ್ಟಿ ಸಾಕ್ಷಿ ನುಡಿದೆನೆಂದು ತನ್ನ ಬಾಯಿಂದಲೇ ನಮಗೆ ಹೇಳುತ್ತಿರುವನೇ?" ಭಾನುವು: "ಅಹುದು. ಮಹಾರಾಜರೆ, ದುರ್ದೈವದ ಮೂಲಕ ವಸ್ತುಸ್ಥಿತಿಯು ಹಾಗೆಯೇ ಇದೆ!' ಮಹಾರಾಜ: "ಹಾಗಾದರೆ ನೀವು ಆ ಕಟ್ಟಿನ ಖಟ್ಲೆಯಲ್ಲಿ ಮಾಫಿ ಬೇಡಿ ಬಿಡುಗಡೆ ಹೊಂದಿದ್ದರೂ, ಖೊಟ್ಟಿ ಸಾಕ್ಷಿ ನುಡಿದ ಬಗ್ಗೆ ಈಗ ಮತ್ತೆ ಖಟ್ಲೆಯಾಗುವದಲ್ಲ! ಅದರ ಗತಿಯೇನು?" ಭಾನುವು: "ಖೊಟ್ಟಿ ಸಾಕ್ಷಿ ನುಡಿದ ಬಗ್ಗೆ ಖಟ್ಲೆಯಾಗಿ ಶಿಕ್ಷೆಯಾದರೆ ಅದೇ ನನಗೆ ತಕ್ಕ ಪ್ರಾಯಶ್ಚಿತ್ತವು! ಆದರೆ ಮೊಟ್ಟಮೊದಲು ಪ್ರಭಾಕರನ ಬಿಡುಗಡೆಯಾಗಲೇ ಬೇಕು!"

ಆ ಮೇಲೆ ಗುಪ್ತೆಗಾರನ ಅಂದರೆ, ಯಾರ ಮೇಲೆ ಫೌಜದಾರಿ ಖಟ್ಲೆಯಾಗಿದೆಯೋ ಆತನ ಗೈರಹಾಜರಿಯಲ್ಲಿ ಆ ಖಟ್ಲೆಯ ವಿಚಾರಣೆ-ನಿಕಾಲೆಗಳು ಆಗುವದೇ ಶಕ್ಯವಿಲ್ಲೆಂಬ ಮುದ್ದೆಯನ್ನು ಭಾನುವು ಮುಂದಿಟ್ಟನು; ಯಾಕಂದರೆ, ಆ ಭಾನುವು ಬಿ. ಎ. ಪರೀಕ್ಷೆ ಪಾಸಾದ ಬಳಿಕ ಅಲ್ಪಸ್ವಲ್ಪಾದರೂ ಕಾಯಿದೆಗಳ ಅಭ್ಯಾಸ ಮಾಡಿದ್ದನು; ಆದರೆ ದಿವಾಣಸಾಹೇಬರೆಂದರೆ, ಅನುಭವಿಕರಾದ ನ್ಯಾಯಾಧೀಶರು! ಅವರು ತಮ್ಮ "ಅನುಕೂಲ ಸಿಂಧು" ವಿನೊಳಗಿನ ವಿರುದ್ಧ

ಆಧಾರವನ್ನು ಹೇಳಿದರು; ಆದರೆ ಇಂಥ ಕಟಕಟಿಯ ಪ್ರಕರಣಗಳ ನಿಕಾಲೆಯನ್ನು ಈ ಒಗೆಯ ಖಾಸಗೀ ಸಂಭಾಷಣದಲ್ಲಿ ಮಾಡಲಿಕ್ಕೆ ಬರುವದಿಲ್ಲೆಂದು, ಮಹಾರಾಜರು ಕಡೆಗೆ ತಮ್ಮ"ಅಜ್ಞಾನ ಸಿಂಧು"ವಿನ ಆಧಾರಕೊಟ್ಟು ಹೇಳಿ:"ಒಳ್ಳೇದು. ಈ ಬಗ್ಗೆ ನಾನು ವಿಚಾರಿಸುವೆನು" ಎಂಬ ರೀತಿಯ, ಆದರೆ ಪೊಳ್ಳು ಆಶ್ವಾಸನದ ಉತ್ತರ ಕೊಟ್ಟು ಮಹಾರಾಜರು ಪಟ್ಟಣಶೆಟ್ಟಿ ಹಾಗು ಆತನ ಸಂಗಡಿಗರನ್ನು ದಾರಿಗೆ ಹಚ್ಚಿದರು. ಬಳಿಕ ಅವರು ದಿವಾಣಸಾಹೇಬರನ್ನು ಕುರಿತು: "ಏನಿರಿ, ದಿವಾಣ ಸಾಹೇಬರೇ, ನೀವಂತೂ ಈ ಖಟ್ಲೆಯೊಳಗಿನ ಫಿರ್ಯಾದಿಗಳೇ ಆಗಿರುತ್ತೀರಿ. ನನಗೆ ನ್ಯಾಯಕೋರ್ಟಿನ ಅಧಿಕಾರವಿದ್ದರೂ ಸಾಕಷ್ಟು ಕಾಯಿದೆಯ ಜ್ಞಾನವಿಲ್ಲ; ಮತ್ತು ಈ ಪ್ರಕರಣದಲ್ಲಿ ಇಡೀ ಊರವರ ಹಿತಸಂಬಂಧವಿದ್ದಂತೆ ತೋರುತ್ತದೆ; ಆದ್ದರಿಂದ ಇದಕ್ಕೆ ತಕ್ಕ ದಾರಿಯೆಂದರೆ, ಪೋ. ಏ. ಸಾಹೇಬರಿಗೆ ಬರೆದು ಖಾಲಸಾ ಇಲಾಖೆಯೊಳಗಿನ ಯಾವನೊಬ್ಬ ಬುದ್ಧಿವಂತ ವಕೀಲನನ್ನು ಸ್ಪೆಶಲ್ ಪಬ್ಲಿಕ್ ಪ್ರಾಸಿಕ್ಯೂಟರನೆಂದು ಬರಮಾಡಿಕೊಳ್ಳಬೇಕು. ಆತನು ಇದರ ಕಾಗದ-ಪತ್ರಗಳನ್ನೆಲ್ಲ ನೋಡಿ ಈ ಮೊದಲಾಗಿದ್ದ ನಿಕಾಲೆಯೇ ಯೋಗ್ಯವಾಗಿದೆಯೆಂದರೆ, ಕೆಲಸವೇ ತೀರಿತು. ಪುನರ್ವಿಚಾರಣೆಯಾಗಬೇಕೆಂದು ಸಲಹೆ ಕೊಟ್ಟರೆ, ಅತ್ತಣಿಂದಲೇ ಯಾವನೊಬ್ಬ ಸ್ಪೆಶಲ್ ನ್ಯಾಯಾಧೀಶನನ್ನು ಕರೆಸಿಬಿಟ್ಟರೆ ಆಯಿತು.

ಕಾಯಿದೆಯ ಪ್ರಶ್ನೆಯ ಬಗ್ಗೆ ಮಹಾರಾಜರು ಹೀಗೆ ಸ್ವತಂತ್ರ ಸಲಹೆ ಪಡೆಯುವ ಹಂಚಿಕೆಯನ್ನು ತೆಗೆಯಲು ದಿವಾಣಸಾಹೇಬರ ಮನಸ್ಸಿಗೆ ಕಚ್ಚಿನಿಸಿತು; ಮತ್ತು ಅವರಿಗೆ ಬೆದರಿಕೆಯೂ ಉಂಟಾಯಿತು; ಆದರೆ ಮಹಾರಾಜರು ನುಡಿದದ್ದು ಯೋಗ್ಯವೇ ಇದ್ದದರಿಂದ "ತಮಗಿಷ್ಟವಾಗಿ ತೋರುವಂತೆಯೇ ಮಾಡಬಹುದೆ"ಂದು ಬಣಗಿದ ಸೊಂಡೆಯಿಂದ ಹೇಳಿ, ಅಟ್ಟದಿಂದಿಳಿದರು.

ಮನೆಗೆ ತಲುಪಿದ ಕೂಡಲೆ ದಿವಾಣಸಾಹೇಬರು ಪೋ. ಏ. ಶಿರಸ್ತೆದಾರರ ಹೆಸರಿಗೆ ವಿಸ್ತೃತವಾದೊಂದು ಪತ್ರವನ್ನು ಸ್ವದಸ್ತೂರ ಬರೆದರು; ಮತ್ತು ಆ ಕೂಡಲೆ ತಮ್ಮ ನಂಬಿಗೆಯ ಜಮಾದಾರನನ್ನು ಕರೆದು ಆತನಿಂದ ಅದಕ್ಕೆ ಮುದ್ರೆ ಮಾಡಿಸಿ ಅದನ್ನು ತಮ್ಮ ಮೇಜಿನ ಡ್ರಾವರಿನಲ್ಲಿಟ್ಟುಬಿಟ್ಟರು. ಆ ಮೇಲೆ ಅವರು ಆ ಜಮಾದಾರನಿಗೆ ಬಾಯಿಮಾತಿನಿಂದ:—"ನಾಳೆ ಬೆಳಗ್ಗೆ ಹತ್ತರ ಗಾಡಿಗೆ ನೀನು ಚೆಲ್ಲೆಯ ಊರಿಗೆ ಹೋಗಿ, ಪೋ. ಏ. ಶಿರಸ್ತೆದಾರರ ಹೆಸರಿನ ಒಂದು ಪತ್ರವನ್ನು ಅವರಿಗೆ ತಲುಪಿಸಿ ಬರಬೇಕಾಗಿದೆ. ಕಾರಣ ನೀನಿನ್ನು ನಾಳೆ ಹೊರಗುವ ಸಿದ್ಧತೆಗೆ ತೊಡಗು" ಎಂದು ಆಜ್ಞೆ ಮಾಡಿದರು.

ಬರೆದು ರವಾನಿಸಿದ ಪತ್ರಗಳೆಲ್ಲ ಹೋಗತಕ್ಕಲ್ಲಿಗೆ ಹೋಗಿ, ತಲುಪುವವರಿಗೇ ತಲುಪುತ್ತವೆಂದು ಅದಾರು ಹೇಳಬೇಕು? ಟಪಾಲ ಖಾತೆಯವರು "ಡೆಡ್

ಲೆಟರ್ ಆಫೀಸ'' ಎಂಬದೊಂದು ಕಚೇರಿಯನ್ನಿಟ್ಟಿದ್ದಾರೆ. ಸತ್ತ ಪತ್ರಗಳು ಅಲ್ಲಿಗೆ ಹೋಗಿ ಬೀಳುತ್ತವೆ; ಅಲ್ಲಿ ಮತ್ತೆ ಜೀವಗಳೆದುಂಬಿದ ಪತ್ರಗಳು ತಲುಪಬೇಕಾದವರಿಗೆ ಹೋಗಿ ತಲುಪುತ್ತವೆ; ಇಲ್ಲದಿದ್ದರೆ ಅವು ಸತ್ತದ್ದೇ ನಿಜವೆಂದು ನಾಶಗೊಳಿಸಲ್ಪಡುತ್ತವೆ! ಆ ಕಚೇರಿಯ ವ್ಯವಹಾರವನ್ನು ಕಣ್ಮುಟ್ಟ ನೋಡಿದವರು ''ಡೆಡ್ ಲೆಟರಗಳ ಇತಿಹಾಸವು ಬಹು ಮನೋರಂಜಕವಾಗಿರುತ್ತದೆ. ಪತ್ರಕ್ಕಾದರೂ ಸಾವಿರುತ್ತದೆ! ಆ ಸಾವಿನ ಕಾರಣ ತಿಳಿಯ ಹೋದರೆ ಮನುಷ್ಯಮಾತ್ರರಲ್ಲಿಯ ಅನವಧಾನ, ಮೂರ್ಖತನ, ಎಚ್ಚರಗೇಡಿತನ, ತಪ್ಪುತಿಳುವಳಿಕೆ, ದುರಹಂಕಾರ ಹಾಗು ಕಡೆಗೆ ಅಜ್ಞಾನ ಇವುಗಳ ಪ್ರಕಾರಗಳೆಷ್ಟಿರುವವೋ ಅವೆಲ್ಲವುಗಳ ಕೋಷ್ಟಕವನ್ನೇ ಮಾಡಿಡಬೇಕಾದೀತು. ಆ ಎಲ್ಲ ಉಪಾಧಿಗಳು ಆ ಪತ್ರರೂಪೀ ಜೀವಕ್ಕೆ ಅದಕ್ಕಿಷ್ಟವಾದ ಮೋಕ್ಷ ದೊರೆಯುವ ಕೆಲಸದಲ್ಲಿ ಅಡ್ಡ ಬರುತ್ತವೆ. ಎಂಬತ್ನಾಲ್ಕು ಲಕ್ಷ ಜೀವರಾಶಿಗಳನ್ನು ದಾಟಿದ ಬಳಿಕಾದರೂ ಪ್ರಾಣಿಗೆ ಮನುಷ್ಯಜನ್ಮವು ಖಾತ್ರಿಯಿಂದ ಲಭಿಸುವದು; ಆದರೆ ಎಂಬತ್ನಾಲ್ಕು ಕಡೆಗೆ ಪತ್ತೆಬದಲಿಸಿಯೂ ನಿರಾಶೆಯ, ಅಸ್ವೀಕಾರದ ಅಪಮಾನ ಇವುಗಳ ದುಃಖದ ಮುದ್ರೆಗಳನ್ನು ಮೈತುಂಬ ಒತ್ತಿಸಿಕೊಂಡು, ದಣಿದು ಬಾಯಾರಿದ ಆ ಪತ್ರವು ಯಾವಾಗ ಡೆಡ್ ಲೆಟರ ಆಫೀಸಿಗೆ ಹೋಗುವದೋ, ಆಗ ಅದು ಮೃತಪ್ರಾಯವಾಗಿರುತ್ತದೆ; ಮತ್ತು ನಿಯಮಿತ ಅವಧಿಯ ನಂತರ ಅದು ಸಂಪೂರ್ಣವಾಗಿ ಸತ್ತಿತೆಂದು ತಿಳಿದು, ಜೀವವಿರಲಿಕ್ಕೇ ಅದರ ದಹನವಿಧಿಯಾಗುತ್ತದೆ! (ಯವನರು ಯವನರಿಗೆ ಉರ್ದು ಭಾಷೆಯಲ್ಲಿ ಬರೆದ ಪತ್ರದ ದಹನವಿಧಿಯು ಅವರ ಧರ್ಮವಿರುದ್ಧವಾಗುವದರಿಂದ, ಅದರ ದಫನವಿಧಿಯಾಗಬೇಕೆಂಬ ಗೊತ್ತುವಳಿಯು ಬೇಗನೆ ಅಸೆಂಬ್ಲಿಯಲ್ಲಿ ಬರಲಿರುವದಂತೆ; ಆದರೆ ಸಧ್ಯಕ್ಕಂತೂ ಅದರದೂ ದಹನವಿಧಿಯೇ ಆಗುತ್ತದೆ) ಇಲ್ಲವೆ ಯಾವುದೊಂದು ಕಾಗದ ತಯಾರಿಸುವ ಕಾರಖಾನೆಗೆ ಅದು ಹೋದರೆ, ಸಮಂತ್ರಕ ಶುದ್ಧೋದಕದ ಸಿಂಚನದಿಂದ ಅದನ್ನು ದೇಹಾಂತರಗೊಳಿಸಬರುತ್ತದೆ.''

ಈ ಬಗೆಯಿಂದ ಕೆಲ ಪತ್ರಗಳಿಗೆ ರೀತೀಪ್ರಕಾರ ಯಥಾ ಕಾಲದಲ್ಲಿ ಸಾವುಂಟಾಗುತ್ತದಾದರೂ ಕೆಲ ಕೆಲವು ಪತ್ರಗಳಿಗೆ ಮೃತ್ಯುವೊದಗದೆ, ಏನಾದರೂ ಅಪಘಾತವಾಗುತ್ತದೆ. ಮಾಲಕರ ವಿಳಾಸ ಬರೆದು ಪೋಷ್ಟಿನ ಡಬ್ಬಿಯಲ್ಲಿ ಚಲ್ಲಿದ ಪತ್ರವು ಯೋಗ್ಯ ದಾರಿ ಹಿಡಿಯದೆ, ಎತ್ತಿಂದ ಎತ್ತೋ ಹೋಗಿ ಯಾವನೊಬ್ಬ ತ್ರಯಸ್ಥನ ಕೈಗೆ ಬೀಳುತ್ತದೆ! ಮತ್ತು ಗಂಡಾಂತರವು ದಾಟಿತೆಂದರೆ, ಜೀವಕ್ಕೆ ಹೆಚ್ಚು ಆಯುಷ್ಯ ಲಭಿಸುತ್ತದೆಂಬ ಜನಪ್ರವಾದದಂತೆ ಈ ಬಗೆಯಾಗಿ ಹಾದಿಯ ಹಾವಣ್ಣನ ಕೈಗೆ ಸಿಕ್ಕ ಆ ಪತ್ರವು ವಿಶೇಷ ರೀತಿಯಿಂದ ಸಂರಕ್ಷಿಸಲ್ಪಡುತ್ತದೆ! ಅದಕ್ಕೆ ಕಾದಿಡುವ ಕಾಗದ-ಪತ್ರಗಳ ಗಂಟಿನಲ್ಲಿ ಇಲ್ಲವೆ ಕೇವಲ ಖಾಸಗಿಯ

ಕಪಾಟು-ತಿಜೋರಿಗಳ ಗುಪ್ತ ಗಂಹ್ವರಗಳಲ್ಲಿ ಸುರಕ್ಷಿತವಾದ ಸ್ಥಳವು ದೊರೆಯುತ್ತಿರುತ್ತದೆ; ಮತ್ತು ಮುಂದೆ ಅದನ್ನು ಯಾರಾದರೂ ಎಂದಾದರೂ ಅಪಹರಿಸಬಹುದು; ಇಲ್ಲವೆ ನಾಶಗೊಳಿಸಬಹುದೆಂದು ಅವರ ಲಿಂಗದೇಹದ-ಸೂಕ್ಷ್ಮ ಶರೀರದ-ಛಾಯಾಚಿತ್ರ ತೆಗೆಯಿಸಿ ಸಂರಕ್ಷಿಸಲಾಗುತ್ತದೆ. ಪಾಪ! ಆ ದುರ್ದೈವಿ ಪತ್ರದ ಬಗ್ಗೆ ಹೀಗೆ ತಿರುವು-ಮುರುವುಗಳ ಎಷ್ಟೋ ಸ್ಥಿತ್ಯಂತರಗಳಾಗುತ್ತವೆ! ಈ ಪ್ರಕರಣದಲ್ಲಿ ಸಣ್ಣ ಹುಡುಗರಿಗೆ ಕಥೆ ಹೇಳಿ ಬೇಸರಿಕೆ ಬಂದಿತೆಂದರೆ, "ಕಥೆ ಕಥೆ ಕಬ್ಬಿಣ ಕಾ ಕಾ ದೇವಿ, ದೀಪಾ ತಂದು ದೇವರ ಮುಂದಿಟ್ಟು...." ಎಂದು ಹೇಳುವಂತೆಯೇ ಹಲವು ವಿಷಯುಗಳ ಸಂಗ್ರಹವಾಗಿದೆ.

---

## ೨೦ ಮೀನದ ಹೊಟ್ಟೆ ಸೀಳುವ ಚೂರಿ!

ದಿವಾಣಸಾಹೇಬರು ಪ್ರೊ. ಎ. ಸಾ. ಶಿರಸ್ತೆದಾರರಿಗೆ ತಲುಪಿಸುವ ಸಲುವಾಗಿ ಯಾವ ಪತ್ರವನ್ನು ತಮ್ಮ ಸ್ವಂತ ಜವಾದಾರನ ಕಡೆಗೆ ಕೊಟ್ಟರೆಂದು ಹಿಂದೆ ಹೇಳಿದೆಯೋ, ಆ ಪತ್ರಕ್ಕೂ ಹೀಗೆಯೇ ಅಪಘಾತವುಂಟಾಯಿತು. ಆ ಜವಾದಾರನಿಗೆ ಪ್ರವಾಸದ ಖರ್ಚು ಕೊಟ್ಟು ದಿವಾಣಸಾಹೇಬರು: "ಪತ್ರವನ್ನು ಚೆನ್ನಾಗಿ ಸಂರಕ್ಷಿಸು; ಮತ್ತು ಶಿರಸ್ತೆದಾರರ ಕೈಯಲ್ಲೇ ಕೊಡು" ಎಂದು ಬಜಾಯಿಸಿ ಹೇಳಿ ರವಾನಿಸಿದರು. ಆತನು ಆ ಪತ್ರವನ್ನು ತನ್ನ ಅಂಗಿಯ ಒಳಗಿನೆಯಲ್ಲಿ ಭದ್ರವಾಗಿರಿಸಿದನು; ಮತ್ತು ಆ ಪ್ರವಾಸ ಮುಗಿಸಿಕೊಂಡು ಬರಲಿಕ್ಕೆ ಎರಡು-ಮೂರು ದಿನಗಳಾದರೂ ಹಿಡಿಯುತ್ತಿದ್ದುದರಿಂದ, ಕೆಲ ಉಪಾಹಾರದ ಪದಾರ್ಥಗಳನ್ನೂ ದೋತರ-ಕಂಬಳಿಗಳನ್ನೂ ತರಲಿಕ್ಕೆಂದು ತನ್ನ ಮನೆಗೆ ನಡೆದನು. ದಾರಿಯಲ್ಲಿ ಆತನಿಗೆ ಸುಭೇದಾರರ ಮನೆಯು ಹತ್ತಿತು. ಬಾಗಿಲಲ್ಲಿ ಸ್ವತಃ ಸುಭೇದಾರರೇ ನಿಂತುಕೊಂಡಿದ್ದರು. ಅವರನ್ನು ಕಂಡು ಆ ಜವಾದಾರನು ರಾಮ ರಾಮ ಮಾಡಿದನು ಸುಭೇದಾರರು ದಿವಾಣಸಾಹೇಬರ ಮನೆಗೆ ದಿನಾಲು ಒಂದೆರಡು ಸಾರೆಯಾದರೂ ಹೋಗುವವರೂ, ಅವರಲ್ಲಿ ತಿಂಡಿ-ತೀರ್ಥ ತಕ್ಕೊಳ್ಳುವವರೂ, ನಗೆದಾಟ-ಕೆಲೆದಾಟಗಳಲ್ಲಿ ಭಾಗ ವಹಿಸುವವರೂ ಆದ ದಿವಾಣರ ಜೀವದ ಗೆಳೆಯರು! ತನ್ನನ್ನು ತಮ್ಮ ಯಜಮಾನರು ಒಳ್ಳೇ ಮಹತ್ವದ ಹಾಗು ನಂಬಿಗೆಯ ಕೆಲಸಕ್ಕೆ ಕಳುಹಿಸಿರುವರೆಂಬ ಗರ್ವವನ್ನು ಆಡಿ ತೋರಿಸಲಿಕ್ಕೆ ತನ್ನ ಮನೆಯವರಂತಿದ್ದ ಹಾಗು ದಿವಾಣಸಾಹೇಬರ ಪರಮಮಿತ್ರರಾದವರು ಗಂಟುಬಿದ್ದ ಮೇಲೆ ನಿಂತು, ಅವರೊಡನೆ ಕೆಲ ಮಾತುಗಳನ್ನಾಡಬೇಕೆಂದು ಆತನಿಗೆ ಸಹಜವಾಗಿಯೇ ಅನಿಸಿತು.

ಸುಭೇದಾರನು ಆತನನ್ನು ಕುರಿತು ಸಹಜವಾಗಿ:—ಏನೋ ಸುಭಾನಾ?

ನೀನೆಲ್ಲಿಗೆ ಹೊರಟಿರುತ್ತೀ? ತುಸ ಅವಸರದಲ್ಲಿದ್ದಂತೆ ಕಂಡದ್ದರಿಂದ ಕೇಳಿದೆನು.

ಸುಭಾನನು:—ಒಳ್ಳೇ ಮಹತ್ವದ ಕೆಲಸದಲ್ಲಿದ್ದೇನೆ! ಇಗೋ, ಈ ಪತ್ರದ ಮೇಲೆ ಎಷ್ಟು ದಪ್ಪನ್ನ ಅರಗು ಹಾಕಿ ಮುದ್ರೆ ಮಾಡಿರುತ್ತಾರೆಂಬದನ್ನು ನೋಡಿದಿರೇನು? ನಾನು ಈಗಿಂದೀಗಲೆ ಜಿಲ್ಲೆಯ ಸ್ಥಳಕ್ಕೆ ಹೋಗಿ ಏಜಂಟಸಾಹೇಬರ ಶಿರಸ್ತೆದಾರರಿಗೆ ಈ ಪತ್ರ ತಲುಪಿಸುವ ಹುಕುಮುನ್ನು ಧಣಿಯರು ಮಾಡಿರುತ್ತಾರ್ರೀಪ, ಹೀಗೆಂದು ಹೇಳಿ ಸುಭಾನನು ತಾನಾಗಿಯೇ ತನ್ನ ಅಂಗಿಯ ಒಳಗಿನೆಯೊಳಗಿನ ಆ ಪತ್ರವನ್ನು ತೆಗೆದು ಸುಭೇದಾರರ ಕೈಗಿತ್ತನು. ಅದನ್ನು ಅತ್ತಿತ್ತ ಹೊರಳಿಸಿ ನೋಡಿದ ಬಳಿಕ ಸುಭೇದಾರರ ಮನಸ್ಸಿನಲ್ಲಿ ಎಂಥದೋ ಕಲ್ಪನೆ ಬಂತು; ಮತ್ತು ಅದು ಅಕಲ್ಪಿತ ರೀತಿಯಿಂದ ಉಂಟಾದ್ದರಿಂದ, ವಿದ್ಯುಚ್ಛಕ್ತಿನ ಸಂಚಾರವಾದಂತಾಗಿ ಅವರ ಮೈ ನಡುಗಿತು. ಆ ಲಕೋಟೆಯನ್ನು ಕೈಯಲ್ಲಿ ಹಿಡಿದೇ ಅವರು: "ಏನೋ, ರೈಲಿಗಿನ್ನೂ ಅವಕಾಶವಿದೆ. ನಾನಾದರೂ ಕೆಲ ಕೆಲಸಕ್ಕಾಗಿ ಅಲ್ಲಿಗೇ ಹೋಗಬೇಕಾಗಿದೆ. ಆ ಕೆಲಸದಲ್ಲಿ ನನಗೆ ನಾಲ್ಕು ದುಡ್ಡು ಸಿಗತಕ್ಕದ್ದಿದೆ. ಒಬ್ಬ ಶ್ರೀಮಂತ ಪಕ್ಷಕಾರನನ್ನು ಒಬ್ಬ ವಕೀಲನಿಗೆ ಭೆಟ್ಟಿ ಮಾಡಿಸಿ ಆ ವಕೀಲನಿಗೆ ಇವನಿಂದ ದಾವೇಯ ಕೆಲಸ ಕೊಡಿಸುವದಿದೆ. ನೀನೂ ನನ್ನ ಜೊತೆಗೆ ಬರುತ್ತಿದ್ದರೆ, ನನ್ನ ಸೆಕಂಡ ಕ್ಲಾಸಿನ ಟಿಕೀಟಿನೊಡನೆ ನಿನ್ನ ಥರ್ಡಕ್ಲಾಸಿನ ಟಿಕೀಟನ್ನೂ ಕೊಂಡುಕೊಟ್ಟೇನು. ಈ ಯೋಗವು ಸಹಜವಾಗಿ ಕೂಡಿತೆನ್ನಬೇಕಲ್ಲವೆ? ನೀನು ಬಡವ. ನಿನಗೆ ನನ್ನ ಆ ಶ್ರೀಮಂತನಿಂದಲೂ ನಾಲ್ಕು ರೂಪಾಯಿ ದೊರೆತರೆ? ನಿನ್ನ ಊಟಪಾಟಗಳ ವ್ಯವಸ್ಥೆಯನ್ನು ನಾನೇ ಮಾಡಿಸುತ್ತೇನೆ, ಎಂದಂದರು.

ಸುಭಾನನ ಬಾಯಿಗೆ ನೀರೊಡೆಯಿತು! ಸುಭೇದಾರರು ಪುಕ್ಕಟೆಯಾಗಿ ಟಿಕೀಟು ಕೊಂಡುಕೊಟ್ಟರೆ ದಿವಾಣರು ಖರ್ಚಿಗಾಗಿ ಕೊಟ್ಟಿರುವ ಹಣದೊಳಗಿನ ೨-೩ ರೂ. ಗಳು ಉಳಿದಂತಾದವೆಂಬ ಆಲೋಚನೆಯಿಂದ ಆತನು ಉತ್ಸಾಹಗೊಂಡು "ತಮ್ಮ ಇಚ್ಛೆಯಂತೆಯೇ ಆಗಲಿ. ತಾವು ಈ ಬಡವನ ಹಿತ ಮಾಡಲಿಕ್ಕೆ ತತ್ಪರರೇ ಆಗಿರುತ್ತೀರಿ; ಆದರೆ ನಾನು ಮನೆಗೆ ಲಗುಬಗನೆ ಹೋಗಿ ಬರುವೆನು ಹೋದವನೇ, ನಾಲ್ಕು ತುತ್ತು ಉಂಡು, ಕಂಬಳಿ-ದೋತರಗಳನ್ನು ತಕ್ಕೊಂಡು ಅದೇ ಕಾಲಿನಿಂದ ಹಿಂದಿರುಗುತ್ತೇನೆ ನೋಡಿರಿ."

"ಊಟವನ್ನೇ ಮಾಡುವದಾದರೆ, ಮನೆಗೇತಕ್ಕೆ ಹೋಗಬೇಕು? ನಾನು ಇನ್ನು ಊಟಕ್ಕೇ ಕೂಡ್ರತಕ್ಕವನಿದ್ದೇನೆ. ನಿನ್ನ ಎಲೆಯನ್ನಾದರೂ ಹೊರಗೆ ಕಟ್ಟೆಯ ಮೇಲಿಟ್ಟು ಬಡಿಸ ಹೇಳುತ್ತೇನೆ; ಅಂದರೆ ಇಷ್ಟರಲ್ಲೇ ಬಂದು ನಿಲ್ಲುವ ಟಾಂಗೆಯಲ್ಲಿ ಇಬ್ಬರೂ ಕುಳಿತು ಹೋಗಿ ಬಿಡೋಣ, ರೈಲಿಗೆ."

"ಇಲ್ಲಿಯೇ ಉಣ್ಣುತ್ತಿದ್ದೆನು; ಆದರೆ ಎರಡು-ಮೂರು ದಿನ ಪರಸ್ಥಳಕ್ಕೆ ಹೋಗಬೇಕಾದ್ದರಿಂದ ಮನೆಯ ಹಿರಿಯರಿಗೆ ಹೇಳಿ ಬರಬೇಡವೇ? ಮತ್ತು ಹಾಸಿಗೆ-ಹೊದಿಕೆಗಳನ್ನು ತರಬೇಡವೇ? ಏತಕ್ಕೆಂದರೂ ಮನೆಗೆ ಹೋಗಲೇಬೇಕು. ಅಂದಬಳಿಕ ಅಲ್ಲಿಯೇ ನಾಲ್ಕು ತುತ್ತು ಉಂಡೇ ಬರುತ್ತೇನೆ. ತಮ್ಮ ಊಟ ವಾಗುವಷ್ಟರಲ್ಲಿ ಲಗುಬಗನೆ ಬಂದೇ ಬಿಡುವೆನು."

ಹೀಗೆಂದು ಹೇಳಿ, ಸುಭೇದಾರರ ಕೈಗೆ ಕೊಟ್ಟಿದ್ದ ಪತ್ರವನ್ನು ಹಿಂದಿರುಗಿ ಇಸಕೊಳ್ಳಲಿಕ್ಕೆಂದು ಆತನು ಎರಡೂ ಕೈಗಳ ಬೊಗಸೆಯನ್ನು ಮುಂದೆ ಮಾಡಿದನು; ಆದರೆ ಆ ಪತ್ರವನ್ನು ಆತನಿಗೆ ಹಿಂದಿರುಗಿ ಕೊಡುವದು ಸುಭೇದಾರರ ಮನಸ್ಸಿನಲ್ಲಿರಲಿಲ್ಲ; ಅಂತೆಯೇ ಅವರು ಅದನ್ನು ಆತನೆದುರಿಗೇ ತಮ್ಮ ಶಾರ್ಟ ಕೋಟಿನ ಜೇಬಿನಲ್ಲಿರಿಸುತ್ತ: "ಹುಚ್ಚಾ! ಇಂಥ ಮಹತ್ವದ ಪತ್ರವನ್ನು ಮನೆಯಲ್ಲೆಲ್ಲಾದರೂ ಮರೆತು ಬಂದೆಯೆಂದರೆ, ಕೆಲಸವೇ ಕೆಟ್ಟೀತು. ನಿಮ್ಮ ಮನೆಯೊಳಗಿನ ಹುಡುಗರು ನಿನ್ನ ಜೇಬಿನೊಳಗೆ ಕೈಹಾಕಿ ಈ ಕೆಂಪು ಅರಗಿನ ಚಂದ್ರದ ಆಶೆಯಿಂದ ಹರಿದು, ಆಟಕ್ಕೆಂದು ಕಿತ್ತುಕೊಂಡೊಯ್ದರೆ? ಹಾಗೆ ಒಯ್ಯದಿದ್ದರೂ, ಇದು ಅಲ್ಲಿ ಹೊಲಸಾದರೂ ಆದೀತು. ಆದ್ದರಿಂದ ಇದು ಇಲ್ಲಿಯೇ ನನ್ನ ಬಳಿಯಲ್ಲಿರಲಿ. ನಾವೀರ್ವರೂ ರೈಲಿನಿಂದ ಜಿಲ್ಲೆಯ ಸ್ಥಳದಲ್ಲಿಳಿದೆವೆಂದರೆ, ಮೊದಲು ಟಾಂಗೆ ಮಾಡಿ ನಿನ್ನನ್ನು ಶಿರಸ್ತೆದಾರ ಸಾಹೇಬರೆಡೆಗೆ ಈ ಪತ್ರದೊಡನೆ ಕಳಿಸಿ, ಬಳಿಕ ನಾನು ನನ್ನ ಮಾರ್ಗಕ್ಕೆ ಹತ್ತುತ್ತೇನೆ; ಅಥವಾ ನಾನೂ ಈ ಸಾರೆ ಅವರಲ್ಲಿಯೇ ಉಳಿದುಕೊಳ್ಳುತ್ತೇನೆ; ನಾನು ಅಲ್ಲಿಗೆ ಹೋದಾಗೆಲ್ಲ ಅವರಲ್ಲಿಯೇ ಉಳಿದುಕೊಳ್ಳುವ ಪರಿಪಾಠವಿದೆ.' ಹೀಗೆಂದು ನುಡಿದು, ಅವರು ಅತ್ತಿತ್ತ ಹೊರಳಿ ನೋಡಿ ಸಮೀಪದಲ್ಲಿ ಯಾರೂ ಇರದ್ದನ್ನು ಖಾತ್ರಿ ಮಾಡಿಕೊಂಡು, ಮೆಲ್ಲನೆ: "ಮಗನೇ, ಇದು ನನ್ನ ಕೆಲಸದ ಕಾಗದವೇ ಇದೆ. ತಿಳಿಯಿತೇ? ಅಂದು ನಮ್ಮ ದತ್ತವಿಧಾನವು ರಹಿತವಾಗಲಿಲ್ಲವೆ? ಅದರ ಸಂಬಂಧದ ಕಾಗದವೇ ಶಿರಸ್ತೆದಾರರಿಗಿದೆಯಿದು! ಮತ್ತು ಆ ಸಂಬಂಧದ ತುಸ ಕೆಲಸವೂ ಅಲ್ಲಿ ನನಗಿದೆ. ಈ ಪತ್ರವನ್ನು ನಾನು ಒಳಗೆ ಹೋದವನೇ ನನ್ನ ಪ್ರವಾಸದ ಬ್ಯಾಗಿನೊಳಗಿನ ಗುಪ್ತ ಖಾನೆಯಲ್ಲಿರಿಸುತ್ತೇನೆಂದು ತಿಳಿ. ಹೋಗು; ಬೇಗನೆ ಹೋಗಿ ಉಂಡುಟ್ಟು, ದೊತರ-ಕಂಬಳಿಗಳೊಡನೆ ಹೊರಳಿ ಬಾ. ನೀನು ಬರುವಷ್ಟರಲ್ಲಿ ಟಾಂಗೆಯು ಸಿದ್ಧವಾಗಿರುತ್ತದೆ. ಸುಮ್ಮನೆ ತಡಮಾಡಬೇಡ ಕಂಡೆಯಾ? ರೈಲು ತಪ್ಪೀತು?" ಹೀಗೆ ಹೇಳಿ ಉತ್ತರದ ದಾರಿ ನೋಡದೆ, ಅವರು ನೆಟ್ಟಗೆ ಮನೆಯೊಳಗೆ ಹೊಕ್ಕು ಬಿಟ್ಟರು. ಬಡ ಸುಭಾನನು ಇಂಥ ದೊಡ್ಡ ಮನುಷ್ಯನಲ್ಲಿ, ಅದರಲ್ಲಿಯೂ ತಮ್ಮ ಧಣಿಯರ ಜೀವದ ಗೆಳೆಯನಲ್ಲಿ ಅವಿ

ಶ್ವಾಸ ಪಡುವದೆಂತು? ಸುಭೇದಾರನ ಕೃಪೆಯಿಂದ ತನಗೆ ಕೆಲ ರೂಪಾಯಿಗಳ ಲಾಭವಾಗುವದೆಂಬ ಆಶೆಯು ಆತನ ಅಂತರಂಗದಲ್ಲಿ ತಲೆಯೆತ್ತಿದ್ದರಿಂದ ಆತನು ಅದಕ್ಕೆ ಬಲಿಬಿದ್ದು, ಹಾಗೆಯೇ ಹಿಂದಿರುಗಿ, ಉಂಡುಟ್ಟು ಮನೆಯ ಹಿರಿಯಳ ಅಪ್ಪಣೆ ಪಡೆಯುವದಕ್ಕೆಂದು ಮನೆಯ ದಾರೀ ಹಿಡಿದನು.

ಸುಭೇದಾರನು ಚಾಣಾಕ್ಷನಿದ್ದನು. ಈ ಮುದ್ರೆ ಮಾಡಿದ ಮಹತ್ವದ ಲಕ್ಕೋಟೆಯಲ್ಲಿ ಅಂಥ ಮಹತ್ವದ ಕಾಗದವೇ ಇರಬೇಕೆಂದು ಅವನು ಆಗಲೆ ತರ್ಕಿಸಿದ್ದನು. ಆ ಕಾಗದವು ದಕ್ತರದ ಬಗ್ಗೆ ಇಲ್ಲವೆ ಪ್ರಭಾಕರನ ಬಗ್ಗೆ ಅಥವಾ ಅವೆರಡರ ಬಗ್ಗೆಯೂ ಇರಬೇಕೆಂದೆನಿಸಿತು. ಅದೇನಿದೆಯೆಂಬದನ್ನು ನೋಡಲೇ ಬೇಕು; ಮುದ್ರೆ ತೆಗೆದು ಲಕ್ಕೋಟೆ ಹರಿಯಬೇಕು; ಹಾಗು ನೋಡಿಕೊಂಡ ಬಳಿಕ ಬೇರೆ ಲಕ್ಕೋಟೆಯಲ್ಲಿ ಅದನ್ನಿರಿಸಿ ದಿವಾಣಸಾಹೇಬರ ಅಕ್ಷರದಂತೆ ತಾನೇ ಅಕ್ಷರ ಬರೆದು, ಲಕ್ಕೋಟೆಯ ಮೇಲೆ ಬಹು ದೊಡ್ಡ ಅರಗಿನ ಚಂದ್ರ ಮನನ್ನಿರಿಸಿ, ಅದನ್ನು ತಾನೇ ಶಿರಸ್ತೆದಾರರಿಗೊಯ್ದು ಕೊಡಬೇಕು. ದಿವಾಣ ಸಾಹೇಬರಿಗೂ ತನಗೂ ಎಷ್ಟು ಸ್ನೇಹವಿದೆಯೆಂಬದು ಶಿರಸ್ತೆದಾರರಿಗೆ ಗೊತ್ತೇ ಇದೆ. ನಾವೆಲ್ಲರೂ ಒತ್ತಟ್ಟಿಗೇ ಇರುವವರು. ಅದರಿಂದ ಅವರಿಗೆ ಸಂಶಯು ಬರಲಾರದು; ಮತ್ತು ಅವಸರದಿಂದ ಪತ್ರ ಕೊಟ್ಟು ನನ್ನನ್ನು ಬೇಕಂತ ಕಳಿಸಿದ ರೆಂದೂ ಅವರು ನನ್ನ ಸಂಗಡ ತಮ್ಮ ಖಾಸ ಜವಾದಾರನನ್ನು ಕಳಿಸಿರುತ್ತಾ ರೆಂದೂ ಹೇಳಿಬಿಟ್ಟರೆ ಎಲ್ಲವೂ ಸರಿಹೋಗುವದು. ಈ ಪ್ರಕಾರ ಯೋಚಿಸಿ, ಅವನು ಬ್ಯಾಗನ್ನು ತುಂಬಿ ಸಿದ್ಧಪಡಿಸಿದನು. ಹಾಸಿಗೆ ಕಟ್ಟಿದನು. ಮನೆಯೊಳಗೆ ಅಡಿಗೆ ಸಿದ್ಧವಾಗಿದೆಯೆಂದು ಆತನು ಸುಭಾನನಿಗೆ ಹೇಳಿದ ಸಂಗತಿಯು ತೀರ ಸುಳ್ಳು; ಆದರೆ ಇಂಥ ಅವಸರ-ಮಹತ್ವ-ದಕೆಲಸವನ್ನು ಊಟಕ್ಕಾಗಿ ಕೆಡಿಸಿಕೊಳ್ಳುವವ ನಲ್ಲ. ಅವನು ತಮ್ಮ ಆಳು ಕಳಿಸಿ ಟಾಂಗೆ ತರಿಸಿದನು; ಮತ್ತು ಬಕ್ಕಣದೊಳ ಗಿನ ಲಕ್ಕೋಟೆಯನ್ನು ತಕ್ಕೊಂಡು ಅಟ್ಟವನ್ನೇರಿದನು.

ಟಾಂಗೆಯನ್ನೇರಲಿಕ್ಕೆ ಇನ್ನೂ ಅರ್ಧತಾಸಿತ್ತು. ಸುಭೇದಾರನು ಅಟ್ಟ ವೇರಿದ ಕೂಡಲೆ ಬಾಗಿಲವನ್ನಿಕ್ಕಿಕೊಂಡು, ಒಂದು ಖಾಲಿ ಕವ್ಹರು, ಅರಗು, ದೀಪ ಮುಂತಾದ ಸಾಮಾನುಗಳನ್ನು ಸಜ್ಜುಪಡಿಸಿಕೊಂಡನು; ಹಾಗು ಕತ್ತರಿ ಯಿಂದ ದಿವಾಣಸಾಹೇಬರ ಆ ಕವ್ಹರನ್ನು ಕತ್ತರಿಸಿ ಮೆಲ್ಲನೆ ಒಳಗಿನ ಪತ್ರತೆಗೆದು ಓದಿಕೊಂಡನು. ಅದನ್ನೋದಿ ಆತನು ಕ್ಷಣಕಾಲ ಸ್ತಂಭಿತನಾದನು. ವಿಶೇಷ ವಾಗಿ ಅದರೊಳಗಿನ ಐದು ಸಾವಿರ ರೂ. ಗಳ ಸಂಗತಿಯನ್ನೋದಿ ಹಾಗು ತನ್ನ ನ್ನು ಬೈದು ತುಚ್ಛೀಕರಿಸಿದ್ದನ್ನು ನೋಡಿ ಅವನಿಗೆ ಸಹಜವಾಗಿಯೇ ಸಿಟ್ಟುಬಂತು. ಕೂಡಲೆ ಸ್ವಾರ್ಥಸ್ಫೂರ್ತಿಯಿಂದಲೂ ಸೇಡಿನ ಭಾವನೆಯಿಂದಲೂ ಆತನ ಬಾ-

ಯಿಂದ ಈ ಕೆಳಗೆ ಬರೆದಂತೆ ಸ್ವಗತಭಾಷಣವಾಯಿತು: "ದತ್ತಕವು ರಹಿತವಾದದ್ದು ನನ್ನ ದುರ್ದೈವವೇ ಸರಿ! ಆದರೆ ಅದರ ದುಃಖವು ಈ ಚಾಂಡಾಲನಿಗೇನೂ ಇಲ್ಲ; ಮತ್ತು ತಮ್ಮಪ್ಪನ ಗಂಟಿಂದು ಆ ಐದು ಸಾವಿರವನ್ನೆತ್ತಿ ಹಾಕಲಿಕ್ಕೆ ಮಾತ್ರ ಈತನ ಸಿದ್ಧತೆಯು! ನಾಳೆ ಮಾರವಾಡಿಯು ತನ್ನ ಬಾಗಿಲಿಗೆ ಬಂದರೆ? ಒಳ್ಳೇದು. ದತ್ತಕವು ರಹಿತವಾದರೆ ಆಗಲಿ; ಈ ಪತ್ರದ ಆಧಾರದಿಂದ....ಮಗನೇ ಇನ್ನು ನಿನಗಾ ಹರಾಮದ ಐದು ಸಾವಿರದ ಗಂಟನ್ನು ಕಾರಹಚ್ಚದಿದ್ದರೆ ನಾನು ಸುಭೇದಾರನೇ ಅಲ್ಲ."

ಇತ್ತ ಕಡೆಯಿಂದ ಟಾಂಗೆಯೂ ಅತ್ತ ಕಡೆಯಿಂದ ಸುಭಾನನೂ ಒಮ್ಮೆಲೆ ಸುಭೇದಾರರ ಮನೆಯ ಬಾಗಿಲಿಗೆ ಬಂದರು. ಕೂಡಲೆ ಸುಭೇದಾರರು ತಮ್ಮ ಸಾಮಾನುಗಳನ್ನೆಲ್ಲ ತರಿಸಿ ಟಾಂಗೆಯಲ್ಲಿರಿಸಿಕೊಂಡು, ತಾವು ಸ್ವತಃ ಹತ್ತಿ ಹಿಂಬದಿಗೆ ಕುಳಿತುಕೊಂಡರು; ಹಾಗು ಮುಂಬದಿಗೆ ಸುಭಾನನನ್ನು ಕೂರಿಸಿಕೊಂಡರು. ರೈಲ ಸ್ಟೆಶನ್ನಿನಲ್ಲಿ ಬುಕ್ಕಿಂಗ ಆಫೀಸಿಗೆ ಹೋಗಿ ತಮಗಾಗಿ ನಾಲ್ಕೇ ಮೈಲಿನಂತರದ ಮುಂದಿನ ಸ್ಟೇಶನ್ನಿನ ಸೆಕಂಡ ಕ್ಲಾಸಿನ ಟಿಕೀಟನ್ನೂ ಸುಭಾನನಿಗಾಗಿ ಜಿಲ್ಲೆಯ ಸ್ಥಳದ ಥರ್ಡ ಕ್ಲಾಸಿನ ತಿಕೀಟನ್ನೂ ತಂದರು. ಆ ಸುಭಾನನ ಮೇಲೆಯೇ ತಮ್ಮ ಸಾಮಾನುಗಳನ್ನು ಹೋರಿಸಿಕೊಂಡು, ಪ್ಲ್ಯಾಟ ಫಾರ್ಮಿನಲ್ಲೊಯ್ದು ಎಲ್ಲಕ್ಕೂ ಮುಂದಿದ್ದ ಸೆಕಂಡ ಕ್ಲಾಸ ಡಬ್ಬಿಯಲ್ಲಿರಿಸಿದರು; ಹಾಗು ಸ್ಥಳ ವಿಶಾಲತೆಯ ದೃಷ್ಟಿಯಿಂದ ಸುಭಾನನನ್ನು ಎಲ್ಲಕ್ಕೂ ಹಿಂದಿನ ೩ನೇ ವರ್ಗದ ಡಬ್ಬಿಯಲ್ಲಿ ಕೂಡ್ರಿಸಿದರು; ಮತ್ತು: "ಇನ್ನು ನೀನು ಚೆನ್ನಾಗಿ ನಿದ್ದೆ ಮಾಡು; ನಾನೂ ನನ್ನ ಡಬ್ಬಿಯಲ್ಲಿ ಮಲಗುತ್ತೇನೆ" ಎಂದು ಹೇಳಿ ಹೊರಟು ಹೋದರು. ಬಳಿಕ ರೈಲು ಬಿಡಲು ಒಂದೆರಡು ನಿಮಿಷವಿರಲು, ಹಮಾಲರಿಂದ ಮೆಲ್ಲನೆ ತಮ್ಮ ಸಾಮಾನನ್ನಿಳಿಸಿ ಸ್ಟೇಶನ್ನಿನ ಹೊರಗೆ ಕಳಿಸಿ, ತಾವು ಎಂಜನ್ನಿನ ಬಳಿಯ ಪ್ಲ್ಯಾಟ ಫಾರ್ಮಿನೊಳಗಿನ ಕಿಂಡಿಯೊಳಗಿಂದ ಹೊರಬಿದ್ದರು; ಹಾಗು ರೈಲು ಹೊರಡುವದಾರಿನೋಡುತ್ತ ಮರೆಗೆ ನಿಂತುಕೊಂಡರು. ರೈಲು ಹೊರಟಿತು. ಸುಭಾನನು ತಂಬಾಕ ಸೆದುತ್ತ ಕಿಟಕಿಯ ಕಡೆಗೆ ಬೆನ್ನು ಮಾಡಿ ಕುಳಿತದ್ದನ್ನು ಕಂಡು ಅವರು ತಮ್ಮಷ್ಟಕ್ಕೆ ಗಟ್ಟಿಯಾಗಿ ನಕ್ಕರು; ಮತ್ತು ಟಾಂಗೆಯಲ್ಲಿ ತಮ್ಮ ಸಾಮಾನನ್ನಿಟ್ಟುಕೊಂಡು ಮನೆಗೆ ಹಿಂದಿರುಗಿದರು.

ಸುಭೇದಾರರು ಮನೆಗೆ ಬಂದ ಮೇಲೆ ತಾಸಿನ ವರೆಗೆ ಸ್ವಸ್ಥವಾಗಿ ಕುಳಿತು ಆಗಾಮಿ ಬೇತು ಹಾಕಿದರು; ಮತ್ತು ಆ ನಿಶ್ಚಿತ ಬೇತಿನಂತೆ ಕೂಡಲೆ ಎದ್ದು ಅಂಗಿ-ರುಮಾಲುಗಳನ್ನು ಹಾಕಿಕೊಂಡು, ಆ ಪತ್ರವನ್ನು ಬಕ್ಕಣದಲ್ಲಿರಿಸಿ, ಮಹಾರಾಜರ ಪ್ರಾಯವ್ಹೇಟ ಸೆಕ್ರೆಟರಿಯಾದ ಮನೋಹರಪಂತರಲ್ಲಿಗೆ ನಡೆದರು.

ಆಗ ಮನೋಹರಪಂತರು ತಮ್ಮ ಮನೆಯಿಂದ ಅರಮನೆಗೆ ಹೊರಡುವ ಸಿದ್ಧತೆಯಲ್ಲಿದ್ದರು; ಆದರೆ ಅಷ್ಟರಲ್ಲಿ ಸುಭೇದಾರರು ಬಂದಿದ್ದರಿಂದ ಅವರನ್ನು ಒಳಗೆ ಕರೆದರು. ಅವರಿಬ್ಬರಲ್ಲಿ ಪ್ರತ್ಯಕ್ಷವಾಗಿ ಇದೇ ಪ್ರಥಮ ಭೆಟ್ಟಿಯಾಗಿತ್ತು. ಸುಭೇದಾರರು ಬೊಗ್ಗಿ ನೆಲಕ್ಕೆ ಕೈಹಚ್ಚಿ ನಮಸ್ಕಾರ ಮಾಡಿ, ಕಣ್ಣಲ್ಲಿ ನೀರು ತಂದು ಕೊಂಡು: "ಕೃತಕರ್ಮಕ್ಕೆ ಪಶ್ಚಾತ್ತಾಪಗೊಂಡ ಈ ಪ್ರಾಣಿಯು ತಮ್ಮೆದುರಿಗೆ ಬಂದು ನಿಂತಿರುತ್ತಾನೆ. ತಾವು ಈತನನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು."

ಮ:-ನಿಮ್ಮ ದುಃಖವನ್ನು ತೋಡಿಕೊಳ್ಳುವ ಮೊದಲು ನೀವು ನನಗೆ ನಿಮ್ಮ ಹೆಸರನ್ನು ತಿಳಿಸಿದ್ದರೆ ವಿಹಿತವಾಗುತ್ತಿತ್ತು. ನಿಮ್ಮ ಹೆಸರು ತಿಳಿಯದ ಹೊರತು ನನಗೆ ನಿಮ್ಮ ಸಂಗತಿಯು ಜ್ಞಾನವಾಗುವದೆಂತು?

ಸು:—ಅಹುದು. ಅದು ನನ್ನ ತಪ್ಪಾಯಿತು. ನನ್ನ ಭಾವನೆಗಳ ಭರದಲ್ಲಿ ನಾನದನ್ನು ಮರೆತೇ ಬಿಟ್ಟೆನು. ನನ್ನನ್ನು ಸುಭೇದಾರನೆನ್ನುವರು. ನಾನು ಈ ಪಟ್ಟಣದ ರಹಿವಾಸಿಯೂ ಸಂಸ್ಥಾನದ ತೈನಾತದಾರ ಸುಭೇದಾರರಾದ ಡಬೀರರ ಮನೆತನದವನೂ-ಅಲ್ಲಲ್ಲ ಗೋತ್ರಜನೂ-ಆಗಿದ್ದೇನೆ. ನನ್ನ ಹೆಸರು ಕೂಡ ತಮ್ಮ ಕೇಳಿಕೆಯಲ್ಲಿರಬಹುದು.

ದತ್ತಕದ ಸಂಗತಿಯು ಊರ ತುಂಬ ಹಬ್ಬಿತ್ತು. ಅದರಿಂದ ಮನೋಹರಪಂತರಿಗೆ ಅದರೊಳಗಿನ ಮುಖ್ಯ ಪಾತ್ರವಾದ ಸುಭೇದಾರರ ಹೆಸರು ತಿಳಿದಿದ್ದರೆ ಸೋಜಿಗವೇನು? ಆ ಸಂಗತಿಯೂ ಆ ಹೆಸರೂ ದೊಡ್ಡಿಸ್ತಿಕೆಯವಾಗಿರಲಿಲ್ಲ; ಆದರೆ ವಿಶೇಷ ಅರವಿನ ಗುರ್ತು ಕೊಡದೆ, ನಸುನಕ್ಕು ಮನೋಹರಪಂತರು:- ಹೀಗೆಯೊ? ಸುಭೇದಾರರೆಂದರೆ ನೀವೇ ಅಂದಂತಾಯಿತು! ಆದರೆ ನೀವು ಕೃತಕರ್ಮವೆಂದಂದಿರಲ್ಲ! ಅದೇನು? ಮತ್ತು ನಿಮ್ಮನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಲಿಕ್ಕೆ ನಾನೆಷ್ಟರವನು? ಇತ್ಯಾದಿಗಳ ಬಗ್ಗೆ ನನಗೇನೂ ಗೊತ್ತಾಗಲಿಲ್ಲ. ಅದನ್ನು ತಿಳಿಸಿ ಹೇಳಿದರೆ ಒಳಿತಾಗಲಿಕ್ಕಿಲ್ಲವೆ?

ಸು: -ಭಾವೂಸಾಹೇಬ ಡಬೀರರಿಗೆ ನನ್ನ ಮಗನನ್ನು ದತ್ತಕ ಕೊಡುವ ಬುದ್ಧಿಯು ನನಗಾಯಿತು;ಆದರೆ ಹಾಗೆಮಾಡುವದು ಒಟ್ಟಿನಲ್ಲಿ ದೇವರಿಗಿಷ್ಟವಿರಲಿಲ್ಲ.

ಮ:-ಅದೇಕೆ? ಹಿಂದು ಧರ್ಮಶಾಸ್ತ್ರದಂತೆ ದತ್ತಕ ಕೊಡ-ತಕ್ಕೊಳ್ಳುವದು ಸದ್ಧರ್ಮವಲ್ಲವೆ? ಸದ್ಧರ್ಮದ ಕೆಲಸವು ದೇವರಿಗೇಕೆ ಒಪ್ಪಬಾರದು?

ಸು: ಭಾವೂಸಾಹೇಬರ ಮಗನು ಜೀವಿಸಿದ್ದರೂ ದತ್ತಕಕೊಡುವ ಪ್ರಯತ್ನವು ನನ್ನಿಂದಾಯಿತು!

ಮ:-ಆ ಸಂಗತಿಯನ್ನು ನಾನು ಪರಭಾರೆ ಕೇಳಿಕೊಂಡಿರುತ್ತೇನೆ; ಮತ್ತು ನೀವು ನಿಮ್ಮ ಹುಡುಗನನ್ನು ದತ್ತಕವೆಂದು ಭಾವೂಸಾಹೇಬರ ತೊಡೆಯ ಮೇಲೆ

ಕೂಡ್ರಿಸಲಿಕ್ಕೆಂದು ಪ್ರತ್ಯಕ್ಷ ಎತ್ತಿ ಹಿಡಿಯುವವರೆಗೂ ಭಾವೂಸಾಹೇಬರ ಮಗನು ಜೀವಿಸಿರುವನೋ-ಇಲ್ಲವೋ ಎಂಬ ಸಂಗತಿಯು ಗೊತ್ತಿದ್ದಿಲ್ಲವೆಂಬದನ್ನೂ ನಾನು ಕೇಳಿರುತ್ತೇನೆ.

ಸು:—ಆಹುದು. ಬುದ್ಧ ಪ್ರಭಾಕರನು ನಡುಮನೆಯೊಳಗಿಂದ ಪಡಸಾಲೆಗೆ ಬರುವವರೆಗೂ ಆತನೆಲ್ಲಿರುವನೆಂಬದರ ಕಲ್ಪನೆ ಕೂಡ ನನಗಿರಲಿಲ್ಲೆಂಬದು ನಿಜವು; ಆದರೂ ಕೂಡ ನಾಮುದಿಷ್ಟ ಮನುಷ್ಯನ ಬಗ್ಗೆ ಆತನು ಸತ್ತಿರುವನೆಂದೂ, ಮನೆಗೆ ಎಂದೂ ಹಿಂದಿರುಗನೆಂದೂ ಅಜ್ಞಾನದ ತಪ್ಪುಕಲ್ಪನೆಯಾದರೂ, ಗುಪ್ತವೆಯೇ ಆಯಿತೆಂದೆನ್ನಬೇಕಾಗುತ್ತದೆ; ಯಾಕಂದರೆ, ಆತನು ಸತ್ತನೆಂದು ಕಲ್ಪಿಸುವದಕ್ಕಿಂತ ಜೀವಿಸಿರುವನೆಂದು ಕಲ್ಪಿಸಿಕೊಂಡೇ ಆತನು ಯಾವಾಗಲಾದರೂ ಹಿಂದಿರುಗಿ ಒಂದು ಮನೆಯ ಯಜಮಾನನಾಗುವನೆಂದು ದತ್ತಕದ ಪ್ರಯತ್ನ ಮಾಡದಿರುವದು ಮನುಷ್ಯತ್ವಕ್ಕೆ ಹೆಚ್ಚು ಒಪ್ಪುವದಿಲ್ಲವೆ? ಆದರೆ ದೇವರು ನನ್ನ ತಪ್ಪನ್ನು ನನ್ನ ಕೊರಳಿಗೆ ಕಟ್ಟಿ, ತಲೆಕೆಳಗೆ ಹಾಕಿಸಲಿಕ್ಕೆ ಹೀಗೆ ಮಾಡಿರುತ್ತಾನೆ. ಅಂತೆಯೋ ನಮ್ಮ ದತ್ತಕವು ದೇವರಿಗಿಷ್ಟವಿರಲಿಲ್ಲೆಂದೆನಿಸುತ್ತದೆ; ಅಲ್ಲದೆ ಈ ಪ್ರಯತ್ನದಲ್ಲಿ ನನ್ನ ಐದುಸಾವಿರ ರೂಪಾಯಿಗಳು ನಿಷ್ಕಾರಣವಾಗಿ ಮುಣುಗಿ ಹೋದವು. ದೇವರು ನನಗೀ ದಂಡವನ್ನೇ ವಿಧಿಸಿರುತ್ತಾನೆ!

ಮು:—ಅವು ಹೇಗೆ ಮುಣುಗಿದವು?

ಸು:—ದತ್ತಕ ಮಾಡಿಕೊಳ್ಳುವ ಬಗ್ಗೆ ಭಾವೂಸಾಹೇಬರ ಮನಸ್ಸು ತಿರುಗಿಸುವದಕ್ಕೆ ಹಾಗು ಈ ದತ್ತಕದ ಪ್ರಯತ್ನದಲ್ಲಿ ಪೋ. ಏ. ಶಿರಸ್ತೇದಾರರನ್ನು ಅನುಕೂಲ ಮಾಡಿಕೊಳ್ಳುವ ಬಗ್ಗೆ ಫೀ ಎಂದು ದಿವಾಣಸಾಹೇಬರು ಆ ಹಣವನ್ನು ನನ್ನಿಂದ ಇಸಕೊಂಡಿರುತ್ತಾರೆ.

ಮು:—ಈ ದತ್ತಕ ರಹಿತವಾದ ಬಳಿಕಾದರೂ ನಿಮ್ಮ ಹಾನಿಯನ್ನು ಮನದಂದು, ಆ ದುಡ್ಡನ್ನು ಅವರು ನಿಮಗೆ ತಿರುಗಿ ಕೊಟ್ಟುಬಿಡಬೇಕು.

ಸು:—ಆದರೆ ಮೀನ ನುಂಗಿದ ಮಾಣಿಕವು ತಿರುಗಿ ಸಿಗುವದುಂಟೆ?

ಮು:—ಆಹುದು. ಅದೂ ನಿಜವೇ; ಆದರೆ ಮಾಣಿಕವನ್ನು ನುಂಗುವ ಮೀನವು ಬುದ್ಧಾಗಿ ಮೀನಗಾರನ ಗಾಣಕ್ಕೆ ಒಮ್ಮೊಮ್ಮೆ ಸಿಕ್ಕುಬೀಳುತ್ತದೆ; ಮತ್ತು ಕಡೆಗೆ ಆ ಮೀನವನ್ನು ಹೆಚ್ಚಿದರೆಂದರೆ, ಆ ಮಾಣಿಕವೂ ತಿರುಗಿ ದೊರಕುತ್ತದೆ.

ಸು: ತಾವು ಮಾತಾಡಿದುದು ಲೋಕದೊಳಗಿನ ಸರ್ವಸಾಮಾನ್ಯ ನ್ಯಾಯವೆಂದು ನುಡಿಯಬಹುದು; ಆದರೆ ಈ ಕ್ಷಣಕ್ಕೆ ಅದು ದೇವರ ಸ್ಫೂರ್ತಿಯಿಂದಲೇ ತಮ್ಮ ಬಾಯಿಂದ ಹೊರಬಿದ್ದಿತೆನ್ನಬೇಕಾಗುವದು. ಮೀನವನ್ನು ಹೆಚ್ಚಿದರೆ ಹೊಟ್ಟೆಯೊಳಗಿಂದ ಮಾಣಿಕವು ಹೊರಬಿದ್ದೀತು; ಆದರೆ ಅಷ್ಟು ದೊಡ್ಡ ಮೀನವನ್ನು

ನೀರೊಳಗಿಂದ ಹಿಡಿದೆತ್ತಿ ಹೊರಗೆ ತರಲಿಕ್ಕೆ ಎರಡರ ಬದಲು ನಾಲ್ಕು ಕೈಗಳಾದರೂ ಬೇಕಾಗುತ್ತವೆ. ಕಾರಣ ತಮ್ಮ ಸಹಾಯವು ಗವಸ್ಯಾದರೂ ದೊರೆತರೆ, ನುಂಗಿದ ಮಾಣಿಕವನ್ನು ಹಿಂತಿರುಗಿ ಪಡೆಯಲಿಕ್ಕೆ ನನಗೆ ಧೈರ್ಯ ಬಂದೀತು. "ಮೀನ ಹಿಡಿಯುವ ಗಾಣ ಹಾಗು ಮೀನ ಕೊಚ್ಚುವ ಚೂರಿ ಇವೆರಡೂ ಈ ಚಿಕ್ಕ ಕವ್ಹರಿನಲ್ಲಿವೆ. ಹೇಗೆಂಬುದನ್ನು ನೀವೇ ನೋಡಿಕೊಳ್ಳಿರಿ; ಅಂದರೆ ನನ್ನೊಡನೆ ಮೀನಗಾರನ ಕಸಬು ಮಾಡಲಿಕ್ಕೆ ನಿಮಗೂ ಹುರುಪು ಬಂದೀತು." ಹೀಗೆಂದು ಹೇಳಿ, ಸುಭೇದಾರನು ಒಕ್ಕಣದೊಳಗಿನ ಪತ್ರ ತೆಗೆದು ಮನೋಹರಪಂತರ ಕೈಗಿತ್ತನು. ಅವನಿಗೆ ಮೊದಮೊದಲು ಏನೂ ಹೊಳೆಯಲಿಲ್ಲ; ಆದರೆ ಕವ್ಹರನ್ನು ತಿರುವಿ ನೋಡಲು, ಅದರ ಮೇಲೆ ಪೊ. ಎ. ಶಿರಸ್ತೇದಾರರ ವಿಳಾಸವಿದ್ದು, ಕಳಿಸುವವರ ಸ್ಥಳದಲ್ಲಿ ದಿವಾಣಸಾಹೇಬರ ಸಂಕ್ಷಿಪ್ತ ಸಹಿಯಿದ್ದಿತು. ಆದರಿಂದ ಆಶ್ಚರ್ಯಗೊಂಡ ಆತನು: "ಈ ಪತ್ರವು ನನ್ನದಲ್ಲ; ಇದನ್ನು ತಕ್ಕೊಂಡು ನಾನೇನು ಮಾಡಲಿ? ಮತ್ತು ಎಲ್ಲಕ್ಕಿಂತಲೂ ಮಹತ್ವವಾದ ಪ್ರಶ್ನೆಯೆಂದರೆ, ಈ ಪತ್ರವು ನಿಮ್ಮ ಕೈಗೆ ಹೇಗೆ ಬಂತು?"

ಸು: —ಅದನ್ನು ನಾನೇ ಏತಕ್ಕೆ ಹೇಳಲಿ? ಬಾಯಿ ಹರಿದ ಈ ಕವ್ಹರಿನೊಳಗಿನ ಪತ್ರವನ್ನು ಓದಿಕೊಳ್ಳಿರಿ; ಅಂದರೆ ಎಲ್ಲ ಸಂಗತಿಯೂ ತಮಗೆ ತಿಳಿದೀತು.

ಕೂಡಲೆ ಮನೋಹರನು ಕವ್ಹರಿನೊಳಗಿನ ಪತ್ರ ತೆಗೆದು ಮನಸ್ಸಿನಲ್ಲಿಯೇ ಸಾವಕಾಶವಾಗಿ ಓದತೊಡಗಿದನು:

"ಸಾ. ನಮಸ್ಕಾರಗಳು. ತಾವು ಜೋಂದ್ಯಪುರಕ್ಕೆ ಬಂದು ಹೋದಮೇಲೆ ಇಲ್ಲಿ ಹಲವು ಆಕಸ್ಮಿಕ ಮತ್ತು ಉದ್ವೇಗ ಜನಕ ಸಂಗತಿಗಳುಂಟಾದವು; ಇನ್ನೂ ಆಗತಕ್ಕ ಸಂಭವವು ಹೆಚ್ಚಾಗಿರುತ್ತದೆ. ಹೊಸ ಸಂಸ್ಥಾನಿಕರು ತಮ್ಮ ಅಪೂರ್ಣ ಅಧಿಕಾರಗಳ ದುರುಪಯೋಗ ಮಾಡತೊಡಗಿರುತ್ತಾರೆ. ಭಾವೂಸಾಹೇಬ ಡಬೀರರಿಗೆ ಸುಭೇದಾರರ ಮಗನನ್ನು ದತ್ತಕ ಕೊಡುವದು ನಿಶ್ಚಿತವಾಗಿ ಇನ್ನು, ಪ್ರತ್ಯಕ್ಷ ಆ ಕಾರ್ಯಭಾಗವು ನೆರವೇರುವಷ್ಟರೊಳಗೇನಾಯಿತೆಂದು ನಿಮಗನಿಸುತ್ತದೆ? ಖುದ್ದ ಪ್ರಭಾಕರನೇ ಅನಪೇಕ್ಷಿತವಾಗಿ ಅಲ್ಲಿಗೆ ಬಂದು, ಆತನು ನಿಮ್ಮ ನನ್ನ ಸಹಿತವಾಗಿ ಎಲ್ಲರಿಗೂ ಬಾಯಿಗೆ ಬಂದಂತೆ ಬೈದು, ದತ್ತವಿಧಾನವನ್ನು ಚದರಿಸಿಬಿಟ್ಟನು; ಅದರಿಂದ ಸುಭೇದಾರನು ಐದು ಸಾವಿರಗಳನ್ನು ಹಿಂದಿರುಗಿ ಕೇಳತೊಡಗಿದ್ದಾನೆ. ಅವುಗಳನ್ನು ಹಿಂದಿರುಗಿ ಕೊಡುವದು ಶಕ್ಯವಿದೆಯೆ? ಈ ಬಗ್ಗೆ ನೀವೇ ಯೋಚಿಸಿರಿ. ದತ್ತಕವನ್ನು ಅಂದರೆ, ಅದು ಇನ್ನು ಮುಂದೆ ಈ ಸಂಸ್ಥಾನದಲ್ಲಿ ಬೇಕಾಯಿದೆಯೆಂದು ನಿಶ್ಚಯಿಸುವ ಕಾಯಿದೆಯನ್ನು ಹೊಸ ಯಜಮಾನರು ಮಾಡತಕ್ಕ ಆಲೋಚನೆಯು ತಮಗೆ ಗೊತ್ತೇ ಇದೆ. ಅದಕ್ಕೆ ಮೊದಲೇ

ಈ ದತ್ತವಿಧಾನ ಮಾಡಿಬಿಡುವ ಸಲುವಾಗಿ ನಾನೂ ನೀವೂ ಎಷ್ಟು ಪ್ರಯತ್ನ ಮಾಡಿದೆವೆಂಬುದನ್ನು ನಿಮಗೆ ಹೇಳಬೇಕಾಗಿಲ್ಲ; ಆದರೆ ಆ ಸುಭೇದಾರ........ ಮಗನ ದೈವವೇ ಅಂಥದಾದ್ದರಿಂದ ಯಾರೇನು ಮಾಡಬೇಕು? ಈಗಲಂತೂ ಪ್ರಭಾಕರ ಡಬೀರನು ಪ್ರಕಟವಾಗಿರುತ್ತಾನಿಷ್ಟೇ ಅಲ್ಲ, ಆತನ ಪುನರ್ವಿಚಾರಣೆಯು ಬಹಿರಂಗವಾಗಿ ಆಗಬೇಕೆಂಬ ವಿಷಯದ ಪ್ರಯತ್ನಗಳೂ ನಡೆದಿರುತ್ತವೆ. ನಾನು ಪ್ರಭಾಕರನನ್ನು ಪ್ರತಿಬಂಧಿಸಿ ಸೆರೆಯಲ್ಲಿರಿಸಿದ್ದೇನೆ; ಮತ್ತು ಕೇವಲ ತುರಂಗವಾರಂಟು ಕೊಟ್ಟು ಆತನನ್ನು ಜಿಲ್ಲಾಧಿಕಾರಿಗಳ ಕಡೆಗೆ ಕಳಿಸಿ, ಅಲ್ಲಿಂದ ಅಂದಮಾನಕ್ಕೆ ಕಳಿಸಬೇಕೆಂದು ನನ್ನ ಯೋಜನೆಯಿತ್ತು; ಆದರೆ ಮೊದಲಿನ ಖಟ್ಲೆಯೊಳಗಿನ ಸಹಕಾರಿ ಆರೋಪಿ ಹಾಗು ಸಾಕ್ಷಿದಾರನಾದ ಭಾನುವು ಈಗ ವಿರುದ್ಧವಾಗಿದ್ದು, ಮುಂಚಿನ ಎಲ್ಲ ಕೃತ್ರಿಮ ಪ್ರಕಾರಗಳನ್ನು ಆತನು ಒಳ್ಳೇ ಧೈರ್ಯದಿಂದ ಬೈಲಿಗೆಳೆಯುವಂತೆ ತೋರುತ್ತದೆ.

ಈ ಹೊಸ ಕೃತ್ರಿಮವೆಲ್ಲ ಒಮ್ಮೆಲೆ ಆಕಲ್ಪಿತವಾಗಿ ಆಗಿದೆ. ಅದು ಹೇಗೆಂಬುದನ್ನು ನಾನು ಸ್ಪಷ್ಟವಾಗಿ ಹೇಳುತ್ತೇನೆ: ಇದನ್ನೆಲ್ಲ ಯಾರೋ ಬುದ್ಧಿಪೂರ್ವಕವಾಗಿ ರಚಿಸಿರಬಹುದಾಗಿದೆ. ಅದಿಲ್ಲದಿದ್ದರೆ ಪ್ರಭಾಕರನಿಗೆ ಆ ದತ್ತವಿಧಾನದ ಸಂಗತಿಯು ಸಕಾಲಕ್ಕೆ ತಿಳಿಯುವ ಬಗೆ ಹೇಗೆ? ಮತ್ತು ಹನ್ನೆರಡು ವರ್ಷಗಟ್ಲೆ ಫರಾರಿಯಾಗಿದ್ದ ಆತನು ಒಮ್ಮೆಲೆ ಆ ದತ್ತಕದ ಕಾಲಕ್ಕೆ ಭೂಮಿಭಂಗಗೊಳಿಸಿ ಬಂದಂತೆ ಬರುವ ಬಗೆ ಹೇಗೆ? ಈ ಎಲ್ಲ ಕಟ್ಟು ಹೊಸದಾಗಿ ಬಂದಿರುವ ಆ ಪ್ರಾಯಿವ್ಹೇಟ ಸೆಕ್ರೆಟರಿಯದಿದೆ. ಮಹಾರಾಜರೂ ಆತನೂ ಬಾಲಮಿತ್ರರೆಂದು ಅನ್ನುತ್ತಾರೆ. ಆತನ ತಾಯಿಯು ಗುಪ್ತ ಹೋಟಲನ್ನಿಟ್ಟಿದ್ದಳಂತೆ! ಮತ್ತು ನಮ್ಮ ಈ ಹೊಸ ಮಹಾರಾಜರು ಆ ಹೋಟಲಿನಲ್ಲಿ ಉಂಡುಸಂಬಳದ ಎಂಜಲ-ಗೋಮುದ ಅಧಿಕಾರಿಗಳಾಗಿದ್ದರಂತೆ! ಅಂಥ ಹೋಟಲಿನ ನೌಕರ-ಪೋರನೇ ಸಂಸ್ಥಾನಿಕನಾದ ಬಳಿಕ, ಆತನ ಪೂರ್ವಾಶ್ರಮದ ಯಜಮಾನನು ಅವನ ಪ್ರಾಯಿವ್ಹೇಟ ಸೆಕ್ರೆಟರಿಯಾದರೂ ಆಗಲೇಬೇಕು; ನಾಳೆ ನನ್ನ ಸ್ಥಳದಲ್ಲಿ ಆತನು ದಿವಾಣನಾದರೂ ಆಗುವ ಸಂಭವವಿದೆ! ಆದರೆ ಸದ್ಯಕ್ಕಂತೂ ಅಂತಸ್ಥ, ಅತ್ಯಂತ ಅಂತಸ್ಥ ಸಂಗತಿಗಳ ಮಾಲಕನಂತೂ ಆತನೇ ಆಗಿರುತ್ತಾನೆ. ಆತನು ಮಹಾರಾಜರನ್ನು ಸೂತ್ರದ ಗೊಂಬೆಯಂತೆ ಕುಣಿಸುತ್ತಾನೆ; ಆದರೆ ಮತ್ತೊಂದು ನಗೆದಾಡಿ-ಕೆಲೆದಾಡುವ ಜೀವಂತ ಗೊಂಬೆಯು ಈ ಪ್ರಕರಣದ ಬುಡಕ್ಕಿದೆ. ಅವಳು ಪ್ರಭಾಕರ ಡಬೀರನ ತಂಗಿಯಾದ ವಿಮಲೆಯು! ನೀವು ಹಿಂದಕ್ಕೆ ನಮ್ಮ ಮನೆಗೆ ಔತಣಕ್ಕೆ ಬಂದಾಗ ಇಷ್ಟು ವರ್ಷಗಳ ವರೆಗೆ ಅವಿವಾಹಿತರಾಗಿರುವ ನಮ್ಮ ಯಜಮಾನರಿಗೆ-ಮುದಿವರನಿಗೆ, ಯಾವ ಊರಬಸವಿಯನ್ನು ವಧುವೆಂದು ಅಂದಿನ ಸಂಭಾಷಣದಲ್ಲಿ

ಗೊತ್ತುಪಡಿಸಿದ್ದೆವ್ವೋ ಆಕೆಯು! ಅಂದಿನ ನಮ್ಮ ಭವಿಷ್ಯವೇ ಇಂದು ನಿಜವಾಗು ವಂತೆ ತೋರುತ್ತದೆ! ಆದರೆ ಮಹಾರಾಜರೂ ಪ್ರಾ. ಸೆ. ಗಳೂ ಇಬ್ಬರೂ ಹೊಸ ಪೀಳಿಗೆಯ ಸುಧಾರಕ ವೀರರು! ಇಂಗ್ಲಂಡ ಅಮೇರಿಕೆಗಳ ಕಡೆಗೆ ಹೋಗಿ ನವಕಲ್ಪನೆಗಳನ್ನು ಅಂಟಿಸಿಕೊಂಡು ಬಂದವರು! ಅಂದ ಬಳಿಕ ಲಗ್ನವಿಧಿ, ಏಕ ಪತಿತ್ವದ ರೀತಿಯು ಹುಚ್ಚುತನದ್ದು, ಕೇವಲ ಹಿಂದು ಹಾಗು ಕಾಡು ಸ್ಥಿತಿಯವ ರದು! ಅದರಿಂದ ವಿಮಲೆಯೊಡನೆ ಸಾಮೂಹಿಕ ಪದ್ಧತಿಯ ಲಗ್ನದ ಕರಾರಿನಿಂದ ಉಭಯತರೂ ಬದ್ಧರಾಗುವ ಸಂಭವವಿದೆ. ಆ ವಿಮಲೆಯು ವಕೀಲೀ ಪರೀಕ್ಷೆ ಪಾಸಾಗಿರುವಳು. ಅವಳಿಗೆ ವಕೀಲಿಯ ಸನದು ಕೊಟ್ಟು ಮಹಾರಾಜರು ಸಂಸ್ಥಾ ನದಲ್ಲಿ ಹೊಸ ಪ್ರಾಘಾತ ಕೆಡಹಿರುತ್ತಾರೆ. ಅವಳೇ ತನ್ನ ಅಣ್ಣನ ಖಟ್ಲೆಯಲ್ಲಿ ಆರೋಪಿಯ ಕಡೆಯ ಕೆಲಸ ನಡೆಸುವವಳಂತೆ! ಇನ್ನು ಒಂದೇ ಕೆಲಸವುಳಿಯಿತು; ಅದೇನಂದರೆ, ಪ್ರಾ. ಸೆ. ಸಾಹೇಬರನ್ನು ಈ ಖಟ್ಲೆಯಲ್ಲಿ ಸರಕಾರೀ ವಕೀಲ ರನ್ನಾಗಿ ನಿಯಮಿಸುವದು. ಅವರು ಡಾಕ್ಟರರಾಗಿರುತ್ತಾರಂತೆ; ಆದರೆ ಸಂಸ್ಥಾ ನದಲ್ಲಿ ಬೇಕಾದವರು ಮಾಡದಿರುವ ಅದಾವ ಕೆಲಸವಿದೆ? ಅಥವಾ ನೇಮಿಸಿದ ಕೆಲಸ ಮಾಡುವ ಸೋಗು ಹಾಕಲಿಕ್ಕಾದರೂ? ನಮ್ಮ ಕಡೆಯದೊಂದು ದೇಶೀ ಸಂಸ್ಥಾನದಲ್ಲಿ ಪರದೇಶಗಳಿಗೆ ಹೋಗಿ ಕಲಿತುಬಂದ-ಹಾಗನ್ನಲಿಲ್ಲರೀ-ಸಾಹೇಬೀ ಟೊಪ್ಪಿಗೆ ಹಾಕುವ-ಮನುಷ್ಯರಿಗೆ ದೊಡ್ಡ ದೊಡ್ಡ ನೌಕರಿ ಕೊಡುವ ಹುಚ್ಚು ಹೇಗೆ ಹಾಗು ಎಷ್ಟಿದೆಯೆಂಬದು ಪ್ರಸಿದ್ಧವೇ ಇದೆ; ಹಾಗು ಮತ್ತೊಂದು ದೊಡ್ಡ ಸಂಸ್ಥಾನದಲ್ಲಿ ಪದವೀಧರರಾದ ಡಾಕ್ಟರರು ಅಕೌಂಟಂಟ ಜನರಲ್ಲರ ಹುದ್ದೆಯಲ್ಲಿರುತ್ತಾರೆ. ತಾತ್ಪರ್ಯವೇನಂದರೆ, ಡಾಕ್ಟರ ಮನೋಹರನು ಪ್ರಾ. ಸೆಕ್ರೆಟರಿಯಾದಂತೆ, ಸರಕಾರೀ ವಕೀಲನಾದರೂ ಏಕಾಗಬಾರದು? ಆ ಮೇಲೆ ಪ್ರಭಾಕರನ ಆ ಖಟ್ಲೆಗೆ ಕೌಟುಂಬಿಕ ಸ್ವರೂಪವು ಎಷ್ಟು ಚೆನ್ನಾಗಿ ಬಂದೀತೆಂಬ ದನ್ನೂ, ಆ ನ್ಯಾಯವಿಚಾರಣೆಯು ಮನೆಯವರಿಂದಲೇ ಹೇಗಾದೀತೆಂಬದನ್ನೂ ನೋಡುವಿರಂತೆ! ಒಬ್ಬ ಪ್ರೇಮಪಾತ್ರನು ನ್ಯಾಯಾಧೀಶನು, ಎರಡನೇ ಪ್ರೇಮ ಪಾತ್ರನು ಸರಕಾರೀ ವಕೀಲನು; ಮತ್ತು ಮೂರನೇ ಪ್ರೇಮಪಾತ್ರಳು ಆರೋ ಪಿಯ ವಕೀಲಳು; ಹಾಗು ರಾಜಶಾಲಕನೇ ಆರೋಪಿಯು! ಪ್ರಭಾಕರನು ಯಾವ ದಿವಸ ಸೆರೆಮನೆಯಿಂದ ಬಿಡುಗಡೆ ಹೊಂದುವನೋ, ಅಂದೇ ರಾತ್ರಿ ನಾನೀ ಚೋದ್ಯಪುರದಿಂದ ಹೊರಹೊರಡ ಬೇಕಾದೀತೆಂಬದು ನಿಶ್ಚಿತವೇ ಆಗಿದೆ. ಸಂಸ್ಥಾನವೂ, ಸಂಸ್ಥಾನಿಕರೂ ಸಾಯಲಿ; ಇಲ್ಲವೆ ಬೇಕಾದ ಗೊಂದಲ ಹಾಕಲಿ; ಆದರೆ ನಾನು ನನ್ನ ಪ್ರಾಣರಕ್ಷಣೆಯ ಕಡೆಗೆ ನೋಡಬೇಡವೆ?

ಆದ್ದರಿಂದ ಈಗ ನಿಮ್ಮನ್ನು ಕೇಳಿಕೊಳ್ಳುವದಿಷ್ಟೇ; ನಿಮ್ಮ ಶಿರಸ್ತೆದಾರಿಕೆ

ಯು ಎಲ್ಲ ಬುದ್ಧಿಯೂ ಎಲ್ಲ ಪುಣ್ಯವೂ ಈ ಕಠಿಣ ಪ್ರಸಂಗದಲ್ಲಿ ನನ್ನ ಸಂರಕ್ಷಣೆಗಾಗಿ ಧಾವಿಸಿ ಬರುವವೋ ಇಲ್ಲವೇ? ಪೊ. ಏ. ಸಾಹೇಬರು ಆಯರಿಶವಮನ್ನರಿರುವದರಿಂದ ಲಹರೀ ಸ್ವಭಾವದವರು; ಮತ್ತು ಅವರ ಮಡಮ್ಮ ಸಾಹೇಬರು ಇಂಗ್ಲಿಷರಿರುವದರಿಂದ ಧೂರ್ತರು! ಏಜಂಟಸಾಹೇಬರ ಮನಸ್ಸಿನ ಮೇಲೆ ಯುಜಮಾನಸಾಹೇಬರಲ್ಲಿ ಒಂದು ಒಗೆಯು ದೊಡ್ಡಿಸ್ತಿಕೆಯ ಪರಿಣಾಮವು ಬಹು ಚೆನ್ನಾಗಿ ಆಗಿರುತ್ತದೆ; ಮತ್ತು ಮಡಮ್ಮ ಸಾಹೇಬರು ಮಹಾರಾಜರ ಅಪೂರ್ಣ ಅಧಿಕಾರ ವಹಿಸುವ ಕಾಲಕ್ಕೆ ಅದರ ಸ್ಮೃತಿಚಿಹ್ನವೆಂದು ಅವರು ಮನಸ್ಸಿಟ್ಟಿದ್ದ ಅರಮನೆಯೊಳಗಿನ ಯಾವ ಒಡವೆಗಳನ್ನು ನನ್ನಿಂದ ಅವರಿಗೆ ಕೊಡಿಸಲಾಗಲಿಲ್ಲವೋ, ಆ ಕಾರಣದಿಂದ ಅವರು ನನ್ನಮೇಲೆ ಸಿಟ್ಟಾಗಿರುತ್ತಾರೆ. ಆದ್ದರಿಂದ ಎಲ್ಲಕಡೆಯಿಂದಲೂ ಈ ದಿವಾಣಗಿರಿಯು ಕೆಲಸವು ನನ್ನ ಮೈ ಮೇಲೆ ಕಳಚಿ ಬೀಳುವ ರಂಗು ತೋರುತ್ತದೆ. ಈಗಿನ ಪೊ. ಏ. ರ ಬದಲಿಯಾಗತಕ್ಕದ್ದು ಆಗಿ ಹೋಗಿ, ಬೇರೆಯವರು ಬಂದಿದ್ದರೆ ಹಿತವಾಗುತ್ತಿತ್ತು. ಅದಕ್ಕೂ ಅಡ್ಡಿ ಬಂದಿದೆ. ಈ ಖಟ್ಲೆಯನ್ನು ಪುನಃ ನಡೆಸುವದೇ ಆದರೆ, ಸ್ಪೆಶಲ್ ಜಜ್ಜರನ್ನು ನಿಯಮಿಸುವ ಒತ್ತಾಯ ಮಾಡಿರಿ; ಹಾಗು ಯಾವನೊಬ್ಬನ ಮೇಲೆ ಕಣ್ಣು ಮುಚ್ಚಿ ವಿಶ್ವಾಸವಿಡಬಹುದೋ ಅಂಥ ಉತ್ಕರ್ಷೇಚ್ಛುವೂ ಮಹತ್ವಾಕಾಂಕ್ಷಿಯೂ ಆದ ಮತ್ತ ತಲೆಯ ನ್ಯಾಯಾಧೀಶನ ಹೆಸರನ್ನು ಹುಡುಕಿ, ಸರಕಾರದ ವತಿಯಿಂದ ಸೂಚಿಸಿರಿ. ನಾನಿದನ್ನು ನನ್ನ ಸ್ವಾರ್ಥಕ್ಕೆಂದು ಹೇಳುವದಿಲ್ಲ; ಆದರೆ ಶಿರಸ್ತೆದಾರರೆಂದರೆ, ಪೊ. ಏಜಂಟರು ಎಂದು ಇದುವರೆಗೆ ತಮ್ಮ ವಿಷಯದ ಯಾವ ಪ್ರಖ್ಯಾತಿಯಿದೆಯೋ, ಅದನ್ನೀಗ ನಿಜವೆಂದು ಮಾಡಿ ತೋರಿಸಿರಿ. ಇಷ್ಟೇ ಸಂಕಟಗ್ರಸ್ತನಾದ ಈ ಸೇವಕನು ತಮ್ಮ ಅಡಿದಾವರೆಗಳಲ್ಲಿ ಪ್ರಾರ್ಥಿಸುತ್ತಾನೆ.''

ಈ ಪತ್ರವನ್ನೋದುತ್ತಿರುವಾಗ ಮನೋಹರನಿಗಾಗುತ್ತಿದ್ದ ಆಶ್ಚರ್ಯವು ಆತನ ಕಣ್ಣು ಹಾಗು ಹುಬ್ಬುಗಳ ಚಲನ ವಲನದಿಂದ ಒಡೆದು ಕಾಣುತ್ತಿತ್ತು; ಮತ್ತು ಪತ್ರವೋದುವದಾದಕೂಡಲೆ 'ಅದಾವನೀ ಅಧಮನು? ಅಲ್ಲಲ್ಲ ರಾಕ್ಷಸನು?' ಎಂಬ ಉದ್ಗಾರಗಳು ಆತನ ಬಾಯಿಂದ ಒಮ್ಮೆಲೆ ಹೊರಟವು. ಬಳಿಕ ಆತನು ಸುಭೇದಾರನನ್ನು ಕುರಿತು:-''ಸುಭೇದಾರರೇ, ನೀವು ಈ ಪತ್ರವನ್ನು ಹೇಗೆ ಸಂಪಾದಿಸಿದಿರಿ?''

ಆ ಮೇಲೆ ಸುಭೇದಾರನು ಈ ಮಧ್ಯದಲ್ಲಿ ನಡೆದ ಸಂಗತಿಯನ್ನೆಲ್ಲ ವಿಸ್ತರಿಸಿ ತಿಳಿಸಿದನು. ಆಗ ಮನೋಹರನು:-''ಒಳ್ಳೇದಾಯಿತು. ಮನುಷ್ಯರು ಸಂಕಟಗ್ರಸ್ತರಾದಾಗ, ಎಷ್ಟೋ ಜನರ ಬುದ್ಧಿಯು ಮಸಣಿಸಿ ಹೋಗುತ್ತಿದ್ದರೆ, ಬೇರೆ ಕೆಲ ಜನರ ಮತಿಯು ಸ್ಫೂರ್ತಿಗೊಳ್ಳುತ್ತದೆ. ನೀವು ಈ ಎರಡನೇ ವರ್ಗದವರಾಗಿ

ತೋರುತ್ತೀರಿ. ಇರಲಿ. ಇನ್ನು ನೀವು ಈ ಪತ್ರದ್ದೇನು ಮಾಡಲಿರುವಿರಿ?

"ನೀವು ಹೇಳಿದಂತೆ ಮಾಡುವೆನು."

ಮನೋಹರನು ಕ್ಷಣಕಾಲ ಆಲೋಚಿಸಿ "ಈ ಪತ್ರದ ಫೋಟೋ ತೆಗೆದು ಕೊಳ್ಳಲಿಕ್ಕೆ ಇನ್ನೂ ಸಾಕಷ್ಟು ಪ್ರಕಾಶವಿದೆ. ನಾನಿದರ ಫೋಟೋ ತೆಗೆಯುತ್ತೇನೆ. ಅದು ವರೆಗೆ ನೀವು ವಿಶ್ರಮಿಸಿರಿ" ಎಂದಂದು, ಆತನು ಹೊರ ಮಾಳಿಗೆಯುಮೇಲೆ ಕ್ಯಾಮರಾ ನಿಲ್ಲಿಸಿ ಆ ಪತ್ರವನ್ನು ಎದುರಿಗಿನ ಫಳಕ್ಕೆ ಹಚ್ಚಿ, ಅದರ ಫೋಟೋ ತಕ್ಕೊಂಡನು; ಹಾಗು ಆ ಕೂಡಲೆ ಕಾಜಿಗೆ ರಸಾಯನದ ಮಿಶ್ರಣ ಹಚ್ಚಿ ಅದರ ದೊಂದು ಪ್ರತಿಯನ್ನು ತೆಗೆದನು. ಅದನ್ನು ಸುಭೇದಾರರಿಗೆ ಕೊಟ್ಟು, ಆತನು:- "ಸುಭೇದಾರರೇ, ಪೂನದ ಹೊಟ್ಟೆ ಹೆಚ್ಚಿ ಮಾಣಿಕವನ್ನು ಹೊರಗೆಡವಲಿಕ್ಕೆ ಬೇಕಾಗಿದ್ದ ಚೂರಿಯು ನಿಜವಾಗಿಯೂ ದೊರಕಿತು;" ಆದರೆ ಪ್ರಾಪ್ತಿಯು ಅರ್ಧ ಪಾಲೆಂದು ಮೂಲಪತ್ರವನ್ನು ನಾನಿಟ್ಟುಕೊಳ್ಳುತ್ತೇನೆ; ಮತ್ತು ಫೋಟೋದ ಈ ಪ್ರತಿಯು ನಿಮ್ಮಲ್ಲಿರಲಿ. ಈ ಪ್ರತಿಯನ್ನು ತೋರಿಸಿ ಬೆದರಿಸಿದಿರೆಂದರೆ, ನಿಮ್ಮ ಐದು ಸಾವಿರ ರೂಪಾಯಿಗಳು ದಿವಾಣಸಾಹೇಬರ ಪೆಟ್ಟಿಗೆಯಿಂದ ಹೊರನುಗ್ಗಿ, ಓಡಿ ಬಂದವೆಂತಲೇ ತಿಳಿಯಿರಿ. ಈ ಪತ್ರದಲ್ಲಿ ನಿಮ್ಮಂತೆಯೇ ನಮ್ಮಗಳ ವಿಷಯು ವಾಗಿಯೂ ಸಂಗತಿಯಿದೆಯೆಂಬದನ್ನು ನೀವೂ ಓದಿರುತ್ತೀರಿ. ಆದ್ದರಿಂದ ಈ ಮೂಲ ಪತ್ರವನ್ನು ನಾನೇ ಇಟ್ಟುಕೊಳ್ಳುತ್ತೇನೆ. ನಡೆಯಿರಿನ್ನು, ನಾವೀರ್ವರೂ ಕೂಡಿಯೇ ಪೂನದ ಹೊಟ್ಟೆಹರಿಯಲಿಕ್ಕೆ ಹೋಗೋಣ, ನಡೆಯಿರಿ.

---

## ೨೧ ಸ್ವರಾಜ್ಯಕ್ಕೆ ಮೋರಿಯ ವಿರೋಧ.

ದಿವಾಣಸಾಹೇಬರು ಶಿರಸ್ತೆದಾರರಿಗೆ ಕಳಿಸಿದ್ದ ಪತ್ರದ ಗತಿಯೇನಾಯಿ ತೆಂಬದನ್ನು ತಿಳಿಸಿದೆ; ಆದರೆ ಎಲ್ಲ ಪತ್ರಗಳಿಗೂ ಹೀಗೆಯೇ ಅಪಘಾತಗಳಾಗು ತ್ತಿರುವದಿಲ್ಲ; ಯಾಕಂದರೆ ಜೋಜಿಗಮಹಾರಾಜರು ಖುದ್ದ ಏಜಂಟರಾದ ರಾಬರ್ಟ ಮೆಕಸ್ವಿನೀ ಸಾಹೇಬರಿಗೆ ಕಳಿಸಿದ ಪತ್ರವು ಅವರಿಗೆ ತಪ್ಪದೆ ತಲುಪಿತು; ಮತ್ತು ಅದರ ಯೋಗ್ಯ ಪರಿಣಾಮವೂ ಆಯಿತು. ಆ ಪತ್ರದ ಸಂಗತಿಯು ಹೀಗಿದ್ದಿತು:

"ಸರ, ಸಂಸ್ಥಾನದಲ್ಲಿ ಒಂದು ಹಳೆ ಪ್ರಕರಣವು ಹೊಸ ವೇಷದಿಂದ ಹೊರಬಿದ್ದಿದೆ. ಅದಕ್ಕೆ ರಾಜದ್ರೋಹ ಮತ್ತು ಕೊಲೆಯ ಪ್ರಯತ್ನ ಇವೆರಡೂ ಸ್ವರೂಪಗಳಿವೆ. ಸುಮಾರು ಹನ್ನೆರಡುವರ್ಷಗಳ ಮುಂಚೆ ನನ್ನ ದತ್ತಕ ಮಹಾರಾ ಜರ ಕಾಲಕ್ಕೆ ಈ ಪ್ರಕರಣವು ಉದ್ಭವಿಸಿತು. ಪ್ರಸ್ತುತದ ದಿವಾಣರೇ ಆಗಲೂ ದಿವಾಣರಾಗಿದ್ದರು. ಆ ಪ್ರಕರಣದ ಸಂಕ್ಷಿಪ್ತ ಸಂಗತಿಯು ಹೀಗಿದೆ: ನನ್ನ

ರಾಜಧಾನಿಯೊಳಗಿನವನೊಬ್ಬ ಪ್ರಭಾಕರ ಡಬೀರನೆಂಬ ಹೆಸರಿನ ತರುಣನು ಸಂಸ್ಥಾನದ ವಿರುದ್ಧವಾಗಿ ಜಾಹೀರನಾಮೆ ಬರೆದು ಹಚ್ಚಿದನು; ಮತ್ತು ದಿವಾಣ ಸಾಹೇಬರ ಕೊಲೆಯ ಪ್ರಯತ್ನ ಮಾಡಿದನೆಂದು ಆತನ ಮೇಲೆ ಆರೋಪವಿದ್ದಿತು; ಆದರೆ ಆತನನ್ನು ಸೆರೆ ಹಿಡಿಯುವ ಮೊದಲೇ ಆತನು ಫರಾರಿಯಾದನು; ಮತ್ತು ಆತನ ಸಹಕಾರಿಯೊಬ್ಬನು ತಮ್ಮ ಗುಹ್ನೆಯನ್ನೊಪ್ಪಿ, ಕೋರ್ಟಿನಲ್ಲಿ ಹಾಗೆಂದು ಸಾಕ್ಷಿ ಹೇಳಿದನು. ಅದರ ಮೇಲಿಂದ ನ್ಯಾಯಕೋರ್ಟಿನವರು ಖಟ್ಲೆಯು ಸಾಬೀತಾಯಿತೆಂದು ತಿಳಿದು, ಅವರಿಬ್ಬರಿಗೂ ೧೨-೧೨ ವರ್ಷಗಳ ಕರಿನೀರಿನ ಶಿಕ್ಷೆ ವಿಧಿಸಿದರು; ಆದರೆ ಮೂಲ ಆರೋಪಿಯು ಗೈರಹಾಜರಿಯಲ್ಲಿ ಆ ಖಟ್ಲೆಯ ವಿಚಾರಣೆಯಾದ್ದರಿಂದ ಆತನಿಗೆ ಸಮಕ್ಷ ಶಿಕ್ಷೆ ಹೇಳಿ, ಕರಿನೀರಿಗೆ ಕಳಿಸಲಾಗ ಲಿಲ್ಲ. ಎರಡನೇ ಆರೋಪಿಗೆ ಕರಿನೀರಿನ ಶಿಕ್ಷೆಯಾಗಿದ್ದರೂ ಕೆಲ ದಿನ ಆತನನ್ನು ಸಂಸ್ಥಾನದ ಜೇಲಿನಲ್ಲಿಯೇ ಇಟ್ಟು, ಮುಂದೆ ಆತನಿಂದ ಮಾಫಿ ಬರೆಯಿಸಿ ಕೊಂಡು ಅವನನ್ನು ಬಿಟ್ಟುಬಿಡಲಾಗಿದೆ. ಈ ಬಗೆಯಿಂದ ಆಗ ಆ ಪ್ರಕರಣ ವನ್ನು ಮುಗಿಸಿ, ಅವರ ಕಾಗದ-ಪತ್ರಗಳೂ ರಿಕಾರ್ಡಿಗೆ ಕಳಿಸಲ್ಪಟ್ಟವು; ಆದರೆ ಮುಖ್ಯ ಆರೋಪಿಯಾದ ಪ್ರಭಾಕರ ಡಬೀರನು ತನ್ನಿಂದ ತಾನೇ ಮೊನ್ನೆ ಆಕಸ್ಮಿಕ ರೀತಿಯಿಂದ ಜೋಧ್ಯಪುರದಲ್ಲಿ ಪ್ರಕಟನಾದನು. ಅದರಿಂದ ರಿವಾಜಿ ನಂತೆ ವಾರಂಟು ತೆಗೆದು, ಆತನನ್ನು ಪ್ರತಿಬಂಧಿಸಿ ಸೆರೆಮನೆಯಲ್ಲಿರಿಸಲಾಗಿದೆ. ಆತನ ನಿಕಾಲೆಯು ಯಾವ ರೀತಿಯಿಂದಾಗಬೇಕೆಂಬ ಪ್ರಶ್ನೆಯು ಉಪಸ್ಥಿತ ವಾಗಿದ್ದು, ಕಾಯಿದೆಯ ದೃಷ್ಟಿಯಿಂದ ಅದು ವಿಶೇಷ ವಿವಾದಿತವಾಗಿ ತೋರು ತ್ತದೆ. ಸ್ವಂತ ನನಗೆ ಸೆಶನ್ಸ ಜಜ್ಜನ ಅಧಿಕಾರಗಳಿರುತ್ತವೆ; ಆದರೂ ಈ ಖಟ್ಲೆಯಲ್ಲಿ ಕಾರಣವಿಶೇಷದಿಂದ ನಾನು ಜಜ್ಜನೆಂದು ಕೆಲಸ ಮಾಡಲಿಚ್ಛಿ ಸುವದಿಲ್ಲ; ಆದಕಾರಣ ತಾವು ಬ್ರಿಟಿಶ ಮುಲುಖಿನೊಳಗಿನ ಯಾವನೊಬ್ಬ ಪ್ರಸಿದ್ಧ ಕಾಯಿದೆ ಪಂಡಿತನೂ ಹಾಗು ನಿಷ್ಪಕ್ಷಪಾತಿಯೂ ಎಂದು ಪ್ರಸಿದ್ಧ ಗೊಂಡ ನ್ಯಾಯಾಧೀಶನನ್ನು ವರಿಷ್ಠಸರಕಾರದ ಅಪ್ಪಣೆಪಡೆದು ಕಳಿಸಬೇಕು. ನಾನು ಇಲ್ಲಿಯ ಸೆಶನ್ಸಜಜ್ಜನ ಅಧಿಕಾರಗಳನ್ನು ಆತನನ್ನು ನೇಮಿಸಿಕೊಂಡ ಮೇಲೆ ಆತನಿಗೆ ಕೊಡುತ್ತೇನೆ; ಅಲ್ಲದೆ ತಾವು ಶಿಫಾರಸು ಮಾಡಿ ಸೂಚಿಸಿದ ತಲಬನ್ನೂ ಕೊಡುವೆನು. ಅದರಂತೆಯೇ ಅದಕ್ಕೂ ಮೊದಲು ಸರಕಾರದ ವತಿಯಿಂದ ಯಾವನೊಬ್ಬ ಬುದ್ಧಿಶಾಲಿಯಾದ ವಕೀಲನನ್ನು ಕಳಿಸಬೇಕು. ಸಂಸ್ಥಾನದಲ್ಲಿ ಸರಕಾರೀ ವಕೀಲನಿರುವನು; ಆದರೆ ಈ ಕೆಲಸದಲ್ಲಿ ಆತನ ಉಪಯೋಗವು ಅಷ್ಟೊಂದು ಆಗಲಿಕ್ಕಿಲ್ಲ. ನನ್ನ ಹೇಳಿಕೆಯಿಂದ ಇಲ್ಲವೆ ಭಿಡೆ ಮುರುವತ್ತಿನಿಂದ ಆತನು ಏನಾದರೂ ಮಾಡಿದನು ಇಲ್ಲವೆ ಮಾಡತಕ್ಕದ್ದನು; ಮಾಡಲಿಲ್ಲೆಂಬ

ಸಂಶಯವಾದರೂ ಜನರಿಗೆ ಬರಬಾರದೆಂದೇ ನನಗೆ ಖಾಲಸಾಇಲಾಖೆಯೊಳಗಿನ ಸ್ವತಂತ್ರವೃತ್ತಿಯ ವಕೀಲನ ಅವಶ್ಯಕತೆಯಿದೆ. ಆದ್ದರಿಂದ ಈ ನ್ಯಾಯದಾನದ ಕೆಲಸದಲ್ಲಿ ತಮ್ಮಿಂದ ನನಗೆ ಸಹಾಯ ದೊರಕೀತೆಂದು ನನಗೆ ನಂಬಿಗೆಯಿದೆ.

ಅಪೂರ್ಣಅಧಿಕಾರ ವಹಿಸುವ ಕಾಲಕ್ಕೆಯಾವ ಚೌಕಶಿಯ ಕೆಲಸಕ್ಕೆಂದು ನಾನು ಸಂಪೂರ್ಣ ಅಧಿಕಾರ ಸ್ವೀಕರಿಸಿರಲಿಲ್ಲವೋ, ಅದಿನ್ನು ಬಹುಮಟ್ಟಿಗೆ ಪೂರೈಸಿದಂತಾಗಿದೆ. ಕಾರಣ ಇನ್ನು ಮುಂದೆ ನನ್ನಿಂದ ಬರೆದು ಬಂದ ಕೂಡಲೆ ತಾವು ಸಂಪೂರ್ಣ ಅಧಿಕಾರ ವಹಿಸಿಕೊಟ್ಟ ಮುಖತ್ಯಾರನಾಮೆಯ ಔಪಚಾರಿಕ ಕಾಗದವನ್ನು ಕಳಿಸಿ ಕೊಡಬೇಕು. ಆ ಮುಖತ್ಯಾರಿಯ ಸಮಾರಂಭವು ರಿವಾಜಿನಂತೆ ಸಣ್ಣ ಪ್ರಮಾಣದಲ್ಲೇ ಆದೀತು; ಮತ್ತು ಆ ಕಾಲಕ್ಕೂ ಮೊದಲಿನ ಪ್ರಸಂಗದಂತೆ ತಾವು ಇಲ್ಲಿಗೆ ಬರುವ ಕೃಪೆಮಾಡಬಹುದೆಂದು ನನ್ನ ನಂಬಿಗೆಯಿದೆ. ತಾವು ಈ ಜಿಲ್ಲೆಯಿಂದ ಪರಜಿಲ್ಲೆಗೆ ವರ್ಗವಾಗಿ ಹೋಗತಕ್ಕವರು ಇಷ್ಟು ದಿನ ಹೋಗದಿರುವದೊಂದು ಸುಯೋಗವೇ ಕಾಣುತ್ತದೆ. ಅಂತೆಯೇ ಮೇಲೆ ವಿವರಿಸಿರುವ ಈ ನನ್ನ ಕೆಲಸಗಳು ತಮ್ಮಿಂದ ಕೈಗೂಡುವ ವರೆಗೆ ತಮ್ಮ ವರ್ಗದ ಅವಧಿಯು ಹೆಚ್ಚೀತೆಂಬ ನಂಬಿಗೆಯನ್ನು ನಾನೇಕೆ ವಹಿಸಬಾರದು?”

ಈ ಪತ್ರವನ್ನೋದಿ ಏಜಂಟ ಸಾಹೇಬರಿಗೆ ಆಶ್ಚರ್ಯವೆನಿಸಿತು. ಅದಕ್ಕೆ ಆ ಹಳೇ ಖಟ್ಲೆಯ ಬಗ್ಗೆ ಆತನಿಗೆ ನೆನಪೇ ಇರಲಿಲ್ಲವೆಂಬದು ಮೊದಲನೇ ಕಾರಣವು. ಸ್ವಂತಕ್ಕೆ ಸೆಶನ್ಸ ಜಜ್ಜನ ಅಧಿಕಾರಗಳಿರಲು ಅವುಗಳನ್ನುಪಯೋಗಿಸದೆ, ಸ್ಪೆಶಲ್ ನ್ಯಾಯಾಧೀಶ ಹಾಗು ಸರಕಾರದ ವತಿಯಿಂದ ಫಿರ್ಯಾದಿಯ ಕೆಲಸ ನಡಿಸುವ ವಕೀಲರನ್ನು ಕಳಿಸಬೇಕೆಂದು ಸಂಸ್ಥಾನಿಕನು ಬೇಡುವ ಸಂಗತಿಯಿಂದ ಆತನ ವಿಶೇಷ ಪ್ರಕಾರದ ಆಶ್ಚರ್ಯಕ್ಕೆ ಎರಡನೇ ಕಾರಣವುಂಟಾಗಿತ್ತು! ಜೋಜಿಗಮಹಾರಾಜರ ಸಂಬಂಧವಾಗಿ ಏಜಂಟನ ಅಭಿಪ್ರಾಯವು ಅನುಕೂಲವಾಗಿದ್ದರೂ ಮುಂಜಾಗ್ರತೆಯದಾಗಿತ್ತೆಂಬದು ಈ ಮೊದಲಿನ ಒಂದು ಪ್ರಕರಣದಲ್ಲಿ ಆತನು ಸರಕಾರಕ್ಕೆ ಬರೆದ ಪತ್ರದಿಂದ ವಾಚಕರಿಗೆ ತಿಳಿದಿದೆ; ಆದರ ಈಗಿನ ಈ ಜೋಜಿಗರಾಯನ ಕೃತಿಯಿಂದ ಆತನ ಗ್ರಹವು ಮತ್ತಿಷ್ಟು ಅನುಕೂಲವಾಯಿತು. ಕೈಯಲ್ಲಿ ಅಧಿಕಾರವಿರಲಿಕ್ಕೆ ಅದನ್ನು ನ್ಯಾಯದಾನದ ವಿಷಯದಲ್ಲಿ ನಡೆಯಿಸದಿರುವದರಲ್ಲಿ ಸಾತ್ವಿಕ ಆತ್ಮನಿಯಮನವಿರುವದು ಮೇಲೆಯೇ ಕಾಣಿಸುತ್ತದೆ; ಅಲ್ಲದೆ ಏಜಂಟಸಾಹೇಬನು ಆಯರಿಶ್ ಗೃಹಸ್ಥನಿದ್ದದರಿಂದ ರಾಜಕೀಯ ಕಾಮಿಲೆಯ ರೋಗವಾಗಿ ಆತನ ಕಣ್ಣುಗಳು ಹಳದೀ ಬಣ್ಣದವಾಗಿರಲಿಲ್ಲ. ಆತನಿಗೆ ಯೋಗ್ಯ ಮಾತುಗಳು ಯೋಗ್ಯವಾಗಿಯೇ ತೋರುತ್ತಿದ್ದವು. ಆತನಿಗೆ ಅದೆಲ್ಲ ಸಂಗತಿಯು ಸೋಜಿಗದ್ದೆನಿಸಲು, ಆತನು ತನ್ನ ಮಡಮ್ಮಳನ್ನು ಒಳಗಿ

ನಿಂದ ಕೂಗಿ ಕರೆದು, ಅವಳಿಗೆ ಅದನ್ನೆಲ್ಲ ಹೇಳಿ, ನಮ್ಮ ಶಿರಸ್ತೆದಾರಸಾಹೇಬರ ಸ್ವಭಾವದ ಇನ್ನೊಂದು ಮಾದರಿಯನ್ನು ನಿನಗೆ ತೋರಿಸುತ್ತೇನೆ. ನೀನು ಇಲ್ಲಿಯೇ ತುಸ ಹೊತ್ತು ಕೂಡ್ರು, ಹೀಗೆಂದು ಹೇಳಿ, ಶಿಪಾಯಿ ಕಳಿಸಿ ಶಿರಸ್ತೆದಾರರನ್ನು ಕರೆಸಿಕೊಂಡನು. ಬಳಿಕ ಅವರೀರ್ವರಲ್ಲಿ ನಡೆದ ಸಂಭಾಷಣವು:—

ಪ್ರೊ ವಿ:—ಶಿರಸ್ತೆದಾರರೇ, ಜೋಧ್ಯಪುರದ ಸಂಸ್ಥಾನಿಕರ ಈ ಪತ್ರವನ್ನು ನೋಡಿದಿರೇನು? ಈ ವಿಷಯದಲ್ಲಿ ನಿಮ್ಮ ಸಲಹೆಯೇನಿದೆ?

ಶಿ:—ತಮಗಿಷ್ಟದೋರಿದಂತೆಯೇ ಮಾಡಬಹುದು.

ವಿ:—ನಾನು ನಿಮಗೆ ಸಲಹೆ ಕೇಳಿರುವೆನು; ಅಪ್ಪಣೆ ಕೇಳಿರುವದಿಲ್ಲ. ಸಂಸ್ಥಾನಿಕರದು ಇದರಲ್ಲೇನಾದರೂ ಕಪಟನಾಟಕವಿರಬೇಕು; ಅದಿಲ್ಲದಿದ್ದರೆ ಸ್ವಂತದ ಅಧಿಕಾರಿಗಳನ್ನು ನಡಿಸಲಿಕ್ಕೆ ಅವರಿಗೆ ಅಡ್ಡಿಯೇನು?

ಶಿ:—ನನಗೂ ಹಾಗೆಯೇ ಅನಿಸುತ್ತದೆ. ಸ್ವಂತದ ಕಾಯಿದೆಯ ಅಜ್ಞಾನವನ್ನು ತೋರಗೊಡಬಾರದೆಂದು ಒಂದುವೇಳೆ ಅವರ ಪ್ರಯತ್ನವಿದ್ದರೂ ಇದ್ದೀತು; ಆದರೂ ಸರಕಾರೀ ನ್ಯಾಯಾಧೀಶನನ್ನು ಕಳಿಸಕೂಡದು; ಅಂದರೆ ಅವರ ಕಾಯಿದೆಯ ಅಜ್ಞಾನವು ನಿದರ್ಶನಕ್ಕೆ ಬಂದೀತು; ಮತ್ತು ಮುಂದೆ ಸಂಪೂರ್ಣ ಅಧಿಕಾರ ಕೇಳುವಾಗ ಆ ಮಾತಿನ ವಿಚಾರ ಮಾಡಲಿಕ್ಕೆ ಅನುಕೂಲವಾದೀತು.

ವಿ:—ಆದರೆ ಕೈಯಲ್ಲಿ ಅಧಿಕಾರಿಗಳಿದ್ದು ಅವುಗಳನ್ನುಪಯೋಗಿಸದಂತಹ ಈ ಸಂಸ್ಥಾನಿಕನೇ ಮೊದಲನೆಯವನೆಂದು ನಿಮಗನಿಸುವದಿಲ್ಲವೆ?

ಶಿ:—ಅದೂ ನಿಜವಿದೆ. ಇದಕ್ಕೆ ವಿಪರೀತವಾಗಿ ಒಮ್ಮೊಮ್ಮೆ ಇಲ್ಲದ ಅಧಿಕಾರಗಳನ್ನು ನಡೆಸಿ, ಆ ಬಗ್ಗೆ ಮುಂದೇನು ಮಾಡಬೇಕೆಂಬ ಅಡಚಣೆಯನ್ನು ಸರಕಾರಕ್ಕೆ ಉಂಟುಮಾಡುವ ಸಂಸ್ಥಾನಿಕರೇನು ಕಡಿಮೆಯಾಗಿರುವರೇ?

ವಿ:—ಕೈಯಲ್ಲಿದ್ದ ಅಧಿಕಾರ ನಡಿಸದಿರುವ ಲಕ್ಷಣಕ್ಕೆ ನೀವೇನೆನ್ನುತ್ತೀರಿ?

ಶಿ:—ಕೈಲಾಗದ, ಅಜ್ಞಾನದ ಇಲ್ಲವೆ ಕಪಟದ ಲಕ್ಷಣವೆನ್ನುವೆನು.

ವಿ:—ಕೇವಲ ನ್ಯಾಯಬುದ್ಧಿಯ ವಿಶೇಷ ಪ್ರೇಮದಿಂದ ಹೀಗಾಗಲಿಕ್ಕಿಲ್ಲೆಂದು ನಿಮಗನಿಸುವದೇ?

ಶಿ:—ಸಂಸ್ಥಾನಗಳೂ ನ್ಯಾಯಬುದ್ಧಿಯೂ ಇವೆರಡೂ ಕೂಡಿದ್ದದ್ದನ್ನು ಎಂದಾದರೂ ಯಾರಾದರೂ ನೋಡಿ ಇಲ್ಲವೆ ಕೇಳಿರುತ್ತಾರೇನು?

ವಿ:—ಆದರೆ ಶಿರಸ್ತೆದಾರರೇ, ಈ ಖಟ್ಲೆಯನ್ನು ಸಂಸ್ಥಾನಿಕರೇ ಸ್ವತಃ ನಡಿಸಲಿಕ್ಕೆ ರಾಜಿಯಿರದಿದ್ದರೆ, ಸೆಶನ್ಸ ಜಜ್ಜನ ಅಧಿಕಾರಗಳನ್ನು ದಿವಾಣ ಸಾಹೇಬರಿಗೆ ಕೊಡಲಿಕ್ಕೆ ಅಡ್ಡಿಯೇನು? ಅವರಿಗೆ ಕಾಯಿದೆಯ ಜ್ಞಾನವು ಚೆನ್ನಾಗಿದೆ.

ಶಿ:—ಅಹುದು. ಈ ಯೋಜನೆಯು ಒಳ್ಳೇದಾದೀತು.

ಏ:—ಮತ್ತು ಅವರು ನ್ಯಾಯದಾನವನ್ನೂ ಚೆನ್ನಾಗಿ ಮಾಡಬಲ್ಲರು.

ಶಿ:—ಸಂಶಯವಿಲ್ಲ.

ಏ:-ಆದರೆ ಅವರಿಂದಾದರೂ ಯೋಗ್ಯನ್ಯಾಯವು ಹೇಗೆ ಆದೀತು? ಸಂಸ್ಥಾನಗಳೂ ನ್ಯಾಯದಾನವೂ ಒಟ್ಟಾಗಿರುವದಿಲ್ಲೆಂದು ಆಗಲೆ ನೀವೇ ಹೇಳಲಿಲ್ಲವೆ?

ಶಿರಸ್ತೆದಾರನು ಒಳಗಿಂದೊಳಗೇ ನಾಲಿಗೆ ಕಚ್ಚಿಕೊಂಡು: "ಅಹುದು. ಅದಂತೂ ನಿಜವೇ! ಆದರೆ ನಾನಂದದ್ದು ಸಂಸ್ಥಾನದ ಸಂಸ್ಥಾನಿಕರನ್ನು ಕುರಿತು.

ಏ:-ಹಾಗಾದರೇನು, ಸಂಸ್ಥಾನಗಳೊಳಗಿನ ಸಂಸ್ಥಾನಿಕರಷ್ಟೇ ಕೆಡಕರು; ಮತ್ತು ದಿವಾಣರು ಮಾತ್ರ ಒಳ್ಳೆಯವರು; ನಿಮ್ಮ ಅಭಿಪ್ರಾಯವು ಹೀಗೆಯೋ?

ಶಿ:—ಅಹುದು; ಮನುಷ್ಯರ ಮೇಲೆ ಎಲ್ಲಿಯಾದರೂ ತುಸ ಅವಲಂಬನವು ಇದ್ದೇಇರುತ್ತದೆ.

ಏ:-ಅಂದರೆ, ದಿವಾಣರೆಂದರೆ ಮನುಷ್ಯರು; ಮತ್ತು ಸಂಸ್ಥಾನಿಕರಾರು? ಜೋಧ್ಯಪುರದ ಈಗಿನ ಸಂಸ್ಥಾನಿಕರಿಂದ ಅನ್ಯಾಯವಾದ ಬೊಬ್ಬಾಟವೇನಾದರೂ ನಮ್ಮ ಕಡೆಗೆ ಬಂದದ್ದು ನಿಮಗೆ ಸ್ಮರಿಸುವದೇನು?

ಶಿ:—ಸಂಸ್ಥಾನದ ಪ್ರಜೆಗಳೇ ಅಂಜುಬುರುಕರಾಗಿರುತ್ತಾರೆ. ಅಂಥವರಿಂದ ಮೇಲಿನ ವರೆಗೂ ಬೊಬ್ಬಾಟಮಾಡುವದೆಂತಾಗಬೇಕು? ಅವರು ಹೀಗೆಯೇ ಅನ್ಯಾಯದಲ್ಲಿ ತೊಳಲಾಡುತ್ತಿರುವವರು.

ಈ ಉತ್ತರವನ್ನು ಕೇಳಿ ಏಜಂಟಸಾಹೇಬರು ಗಟ್ಟಿಯಾಗಿ ನಕ್ಕರು; ಮತ್ತು ಅವರು ತಮ್ಮ ಟೇಬಲ್ಲಿನ ಬಲಗಡೆಯ ಡ್ರಾವರನ್ನೆಳೆದು "ಗುಪ್ತಮಾಹಿತಿಗಾಗಿ" ಎಂದು ಯಾವ ಫೈಲಿನ ಮೇಲೆ ಕೆಂಪು ಲೇಬಲ್ಲು ಹಚ್ಚಲ್ಪಟ್ಟಿತ್ತೋ, ಅದನ್ನು ತೆಗೆದು ಶಿರಸ್ತೆದಾರರ ಕೈಗಿತ್ತು: -"ಇದರಲ್ಲಿ ದಿವಾಣಸಾಹೇಬರ ವಿರುದ್ಧವಾಗಿ ಜೋಧ್ಯಪುರದ ಪ್ರಜೆಗಳಿಂದ ಬಂದ ಎಲ್ಲ ಪ್ರಕಾರದ ಆರೋಪಗಳುಳ್ಳ ಇಪ್ಪತ್ತೈದು ಅರ್ಜಿಗಳಿರುತ್ತವೆ. ಇವುಗಳ ಬಗ್ಗೆ ಏನು ಮಾಡಬೇಕು?"

ಶಿರಸ್ತೆದಾರಸಾಹೇಬರು ಮತ್ತೆ ನಾಲಿಗೆ ಕಡಕೊಳ್ಳಬೇಕಾಯಿತು; ಆದರೂ ಅವರು:—"ಸಂಸ್ಥಾನೀ ಪ್ರಜೆಗಳು ತಮ್ಮಲ್ಲಿಗೆ ಯಾವ ದಿವಾಣನು ಬರುವನೋ ಆತನು ಹೊರಟು ಹೋಗುವ ಇಲ್ಲವೆ ಸಾಯುವ ಬಗ್ಗೆ ಗಳಿಗೆಬಟ್ಟಲವನ್ನೇ ಹಾಕಿ ಕುಳಿತಿರುತ್ತಾರೆ."

ಏ:—ಆದರೆ ನೀವು ಈ ಮೊದಲು ಸಂಸ್ಥಾನದ ಪ್ರಜೆಗಳು ಅಂಜುಬುರುಕರೆಂದೆನ್ನಲಿಲ್ಲವೆ?

ಶಿರಸ್ತೆದಾರರು ಮತ್ತೆ ನಾಲಿಗೆ ಕಡಕೊಳ್ಳಬೇಕಾಯಿತು. ಆಗ ಅವರು:-ಸಂಸ್ಥಾನದ ಪ್ರಜೆಗಳು ಅಂಜುಬುರುಕರೆಂದರೇನು? ಮತ್ತು ದಿಟ್ಟರೆಂದರೇನು?

ಆದರೆ ಅವರು ಮೂರ್ಖರಿರುತ್ತಾರೆಂಬದು ಮಾತ್ರ ನಿಜವು; ಸದ್ಯದ ದಿವಾಣಸಾಹೇಬರು ಆ ಸಂಸ್ಥಾನದಲ್ಲಿ ಹದಿನಾಲ್ಕು ವರ್ಷಗಟ್ಟಲೆ ದಿವಾಣರೇ ಆಗಿರುವರಲ್ಲವೆ? ಯೋಗ್ಯರಿರದ ಹೊರತು ಅವರು ಇಷ್ಟು ವರ್ಷ ಅಲ್ಲಿ ಹೇಗೆ ಉಳಿದಾರು?

ಏ:—ಆದರೆ ಆ ಹದಿನಾಲ್ಕು ವರ್ಷಗಳಲ್ಲಿ ಮೊದಲಿನ ಎರಡು ವರ್ಷ ಗತಿಸಿದ ಮಹಾರಾಜರು ಪ್ರತಿಯೊಂದು ಕೆಲಸದಲ್ಲಿ ಅವರ ಪರಮಮಿತ್ರರಾಗಿದ್ದರು; ಮತ್ತು ಮುಂದೆ ಹನ್ನೆರಡು ವರ್ಷಗಳ ವರೆಗೆ ಸಂಸ್ಥಾನದ ಪಟ್ಟದ ಮೇಲೆ ಅರಸನೇ ಇರಲಿಲ್ಲ. ಅದಿರಲಿ; ಆದರೆ ಶಿರಸ್ತೆದಾರರೇ, ದಿವಾಣಸಾಹೇಬರಿಗೂ ನಿಮಗೂ ಸ್ನೇಹವೆಷ್ಟರಮಟ್ಟಿಗಿದೆ?

ಶಿ:-ನಮ್ಮಗಳಲ್ಲಿ ಸ್ನೇಹವೆಂತಹದು? ಸಂಸ್ಥಾನದ ವಾರ್ಷಿಕ ತಪಾಸಣೆಯ ಕಾಲಕ್ಕೆ ಕಚೇರಿಯೊಡನೆ ಜೋಧ್ಯಪುರಕ್ಕೆ ಯಾವ ಒಂದೆರಡು ದಿನ ಹೋಗಬೇಕಾಗುತ್ತಿರುವದೋ, ಅದೇ ಅವರ-ನನ್ನೊಳಗಿನ ಸಂಬಂಧವು.

ಏ:-ಆದರೆ ಜೋಧ್ಯಪುರದಲ್ಲಿ ಮೊನ್ನೆ ಮೊನ್ನೆ ಆದ ದತ್ತಕ ಪ್ರಕರಣದಲ್ಲಿ ದಿವಾಣಸಾಹೇಬರೊಡನೆ ನಿಮ್ಮದೂ ಕೆಲ ಸಂಬಂಧವಿದೆಯೆನ್ನುವರಲ್ಲ? ಹೀಗೆಂದು ಕೇಳಿ, ಏಜಂಟಸಾಹೇಬರು ಆ ಫೈಲಿನೊಳಗಿನ ಕಡೆಯ ಅರ್ಜಿಯನ್ನು ಶಿರಸ್ತೆದಾರರಿಗೆ ತೋರಿಸಿದರು. ಅದನ್ನು ನೋಡಿ ಶಿರಸ್ತೆದಾರರು ತಲೆದೂಗಿಸಿದರು. ಆಗ ಏಜಂಟಸಾಹೇಬರು:-"ದಿವಾಣಸಾಹೇಬರೊಡನೆ ನಿಮಗೂ ಒಡತಫಾಗದಿದ್ದರೆ ಪಾರಾದಿರೆಂದು ತಿಳಿಯಿರಿ. ಜೋಜಿಗಮಹಾರಾಜರು ಕೇಳಿಕೊಂಡಿರುವಂತೆ ಸ್ಪೆಶಲ್ ನ್ಯಾಯಾಧೀಶ-ವಕೀಲರನ್ನು ನಾನಂತೂ ಕೊಡುತ್ತೇನೆ; ಮತ್ತು ಆ ಇಡಿ ಪ್ರಕರಣದಲ್ಲಿ ಏನೇನು ಹೊರಬೀಳುತ್ತದೆಂಬದರ ಕಡೆಗೆ ನನ್ನ ಲಕ್ಷ್ಯವೂ ಇದ್ದೀತು. ನಿಮ್ಮ ಸಲಹೆಯು ತಿಳಿಯಿತು. ನಡೆಯಿರಿನ್ನು" ಎಂದು ಹೇಳಿ ಶಿರಸ್ತೆದಾರರನ್ನು ಕಳಿಸಿಕೊಟ್ಟರು.

ಇದೆಲ್ಲ ಸಂಭಾಷಣ ನಡೆದಿರುವಾಗ ಮೇರೀ ಮೆಕಸ್ಮಿನಿಯು ಅಲ್ಲಿಯೇ ಇದ್ದರೂ ಸಾಹೇಬನ ಮಾತುಗಳನ್ನು ಕೇಳಿಕೊಳ್ಳಲಿಲ್ಲೆಂಬ ನೋಗಿನಿಂದ ಉಣ್ಣೆಯ ನೂಲನ್ನೂ ಆನೆಯ ಕೋರೆಯ ಹೆಣಿಕೆಯ ಸೂಜಿಗಳನ್ನೂ ಹಿಡಕೊಂಡು ಕಾಲು ಚೀಲ ಹೆಣೆಯುತ್ತ ಕುಳಿತಿದ್ದಳು. ಶಿರಸ್ತೆದಾರನು ಹೊರಟು ಹೋಗಲು, ಏಜಂಟನು ಮಡಮ್ಮಳನ್ನು ಕರೆದನು. ಅವಳು ಸಮೀಪದ ಖುರ್ಚಿಯ ಮೇಲೆ ಬಂದು ಕುಳಿತ ಮೇಲೆ ಅವನು:-ಮೇರೀ, ಕೇಳಿಕೊಂಡೆಯಾ, ನಮ್ಮ ಶಿರಸ್ತೆದಾರನು ಗಿಳಿಯಂತೆ ಹೇಗೆ ಮಾತಾಡುತ್ತಿದ್ದನೆಂಬದನ್ನು?

ಮೇರಿ:—ಛೇ. ಛೇ. ರಾಬರ್ಟ, ನನಗೇನೂ ಕೇಳಿಸಲಿಲ್ಲ!

ರಾಬರ್ಟ:—ಹಾಗಲ್ಲವೆ? ಎರಡೂ ಕಿವಿಗಳನ್ನು ತೆರೆದಿಟ್ಟು, ಅಲ್ಲದೆ ಶರೀರ

ದೊಳಗಿನ ಬೇರೆ ಎರಡು ಕಿವಿಗಳನ್ನು ಕಡತಕ್ಕೊಂಡು ನೀನು ನಮ್ಮ ಸಂಭಾಷಣ ಕೇಳುತಿದ್ದೆಯೆಂಬದು ನನಗೆ ಗೊತ್ತಿಲ್ಲವೇನು? ಮತ್ತು ಕೇಳಿಕೊಳ್ಳದಂತಹ ಸೋಗು ಮಾತ್ರ ಆಗ ನೀನು ಬಹು ಚೆನ್ನಾಗಿ ಹಾಕಿದ್ದೆ!

ಮೋ:—ಅಂದಮೇಲೆ ನಿನ್ನಂತಹ ಪ್ರೊ. ಎ. ನ ಹೆಂಡತಿಯಾಗಿ ಇಷ್ಟು ಸಹಜವಾದ ಕಪಟವನ್ನೂ ಮಾಡಲಿಕ್ಕೆ ನಾನು ಕಲಿಯಬಾರದೆಂದು ನೀನನ್ನುತ್ತಿರುವೆಯೇನು?

ರಾ:—.ಒಳ್ಳೇದು. ಕೇಳಿಕೊಂಡರೆ ಕೇಳಿಕೋ; ಆದರೆ ಈ ವಿಷಯದಲ್ಲಿ ನೀನೇನು ಸಲಹೆ ಕೊಡುತ್ತೀ?

ಮೋ:—ನಾನೇನು ನಿನ್ನ ಸಂಬಳದ ಶಿರಸ್ತೆದಾರಳಿರುವೆನೇ, ಸತ್ತೆಯು ಸಲಹೆ ಕೇಳಲಿಕ್ಕೆ? ನಾನು ಹೇಳಿದರೂ ಅದನ್ನು ಕೇಳದಿರಲಿಕ್ಕೆ; ಹಾಗು ಮೇಲೆ ಹಾಗೆ ಅನಿಸಿಕೊಳ್ಳಲಿಕ್ಕೆ?

ರಾ: ನಾನು ಅವನಿಗೆ ಸುಮ್ಮನೆ ಅನ್ನಲಿಲ್ಲ. ನಾನು ಇಂಥವರ ಸಲಹೆಯನ್ನು ಅವಲಂಬಿಸುವವನೆಂದು ನಿನಗನಿಸುತ್ತಿದೆಯೆ? ಆದರೆ ಜೋದ್ಯಪುರದಲ್ಲಿ ಮೊನ್ನೆ ಉದ್ಭವಿಸಿದ ಆ ದತ್ತಕ ಪ್ರಕರಣದಲ್ಲಿ ದಿವಾಣನೊಡನೆ ಈತನೂ ಲಂಚ ತಿಂದಿರುವನೆಂಬದನ್ನು ನನ್ನ ಮನಸ್ಸಿನಲ್ಲಿ ಆತನಿಗೆ ತಿಳಿಸುವದಿತ್ತು; ಅಂತೆಯೇ ಆತನನ್ನು ಕರೆಯಿಸಿ, ಆತನ ಹೊಸ ಮೋಜನ್ನು ನಿನಗೆ ತೋರಿಸಿದೆನು. ಅಲ್ಲಿಯ ದಿವಾಣಸಾಹೇಬರು ಹೇಗಿರುತ್ತಾರೆಂಬದಂತೂ ನಿನಗೆ ಗೊತ್ತೇ ಇದೆ.

ಮೋ:—ಆತನ ಹೆಸರನ್ನು ಕೂಡ ಎತ್ತಬೇಡ! ಆತನು ತೀರ ಕೈಲಾಗದ ಹೇಡಿಯಿರುತ್ತಾನೆಂಬದನ್ನು ನಾನು ಅಲ್ಲಿಯ ಸಮಾರಂಭದ ಕಾಲಕ್ಕೇ ಗೊತ್ತು ಮಾಡಿಕೊಂಡಿರುತ್ತೇನೆ.

ರಾ:—ಇನ್ನುಳಿದವನು ಬುದ್ಧ ಸಂಸ್ಥಾನಿಕನು. ಆತನ ವಿಷಯವಾಗಿ ನಿನ್ನ ಅಭಿಪ್ರಾಯವೇನಿದೆ?

ಮೋ: —ನಿನ್ನ ಮತವಂತೂ ಮೊದಲು ಗೊತ್ತಾಗಲಿ.

ರಾ: —ಆತನ ಬಗ್ಗೆ ನನ್ನ ಮನಸ್ಸಿನಲ್ಲಿ ಒಳ್ಳೇ ಅಭಿಪ್ರಾಯವುಂಟಾಗಿದೆ. ಆತನೆಷ್ಟು ನ್ಯಾಯಿಯೂ, ಸರಳ ಸ್ವಭಾವದವನೂ ಆಗಿರುವನೆಂಬದು ಪ್ರಸ್ತುತದ ಫೌಜದಾರಿ ಕಟ್ಲೆಯಿಂದ ಒಡೆದು ಕಾಣುತ್ತಿದೆ; ಮತ್ತು ಆತನು ಬೇಗನೆ ತನ್ನ ಪ್ರಜೆಗಳಿಗೆ ಸ್ವರಾಜ್ಯದ ಹಕ್ಕುಗಳನ್ನೀಯುತ್ತಾನೆಂದು ಸುದ್ದಿಯಿದೆ. ಹಿಂದುಸ್ಥಾನದ ಸಂಸ್ಥಾನದೊಳಗಿನ ರಾಜಕಾರಣದಲ್ಲಿ ಸ್ವರಾಜ್ಯದ ಈ ಹೊಸ ಮನ್ವಂತರವೇ ಅವತರಿಸುವದೆಂದೆನ್ನಬಹುದು.

ಮೋ:—ಏನಂದಿ ರಾಬಿ? ಸ್ವರಾಜ್ಯ-ಸುವ್ವರವ್ವೊ? ಅಹುದಹುದು, ಸುವ್ವರ

ರಾಜ್ಯವೇನೋ ನಿಜ! ಹಿಂದಕ್ಕೆ ಮುಖತ್ಯಾರಿಯ ಪ್ರಸಂಗದಲ್ಲಿ ನಾವು ಜೋಧ್ಯಪುರಕ್ಕೆ ಹೋದಾಗ ನಮ್ಮ ಮೋಟರಿನೆದುರಿಗೆ ಪಟ್ಟಣದ ಅಗಸೆಯ ಹತ್ತಿರ ಎರಡು ಮೂರು ಹಂದಿಗಳು-ಸುವ್ವರಗಳು ಸಾಯಲಿಕ್ಕೆ ಬಂದಿರಲಿಲ್ಲವೆ? ನಿನ್ನ ಚಾತುರ್ಯದಿಂದ ಅವು ಸ್ವಲ್ಪದರಲ್ಲಿ ಉಳಕೊಂಡವು. ಸುವ್ವರರ ರಾಜ್ಯವೆಂದರೂ ಈ ಸಂಸ್ಥಾನೀ ಪ್ರಜೆಗಳೆಂಬ ಸುವ್ವರಗಳ ಮರಣವೇ ಸರಿ! ಅಂತೆಯೇ ಆ ಸುವ್ವರರನ್ನು ನೀನು ಆ ಸುವ್ವರರಾಜ್ಯದಿಂದಾದರೂ ಹಾಗೆಯೇ ಉಳಿಸಬೇಕೆಂದು ನನಗನಿಸುತ್ತದೆ.

ರಾ:—ಮೇರೀ, ಯಾವ ಅನ್ನವನ್ನು ಯಾವ ಮನುಷ್ಯನುಣ್ಣುವನೋ, ಅದರ ಹೆಸರು ಆತನ ಬಾಯಿಯಲ್ಲಿರುವದು ಯೋಗ್ಯವೇ ಆಗಿದೆ. ಅಂತೆಯೇ ಸ್ವರಾಜ್ಯ ಶಬ್ದವನ್ನು ನೀನು ಹೀಗೆ ಆಡಿಕೊಳ್ಳುತ್ತಿರುವೆ! ಆದರೆ ನನಗಂತೂ ಸಂಸ್ಥಾನೀ ಪ್ರಜೆಗಳಿಗೆ,-ಬರಿಯ ಸಂಸ್ಥಾನೀ ಪ್ರಜೆಗಳಿಗೇ ಏಕೆ-ಇಡಿ ಹಿಂದುಸ್ಥಾನದ ಪ್ರಜೆಗಳಿಗೆ ಸ್ವರಾಜ್ಯದ ಹಕ್ಕು ದೊರೆಯುವ ದೃಶ್ಯವು ಬಹು ಅದ್ಭುತ ರಮ್ಯವೆನಿಸುತ್ತದೆ. ಸ್ವಾತಂತ್ರ್ಯವೆಂದೊಡನೆ ನನ್ನ ಹೃದಯದೊಳಗಿಂದ ಆನಂದದ ಲಹರಿಗಳೇ ಏಳುತ್ತವೆ!

ಮೇರಿಯು ಗಟ್ಟಿಯಾಗಿ ನಕ್ಕು:-ಯೋಗ್ಯವೇ ಇದೆ. ಆನಂದಲಹರಿಗಳು ನಿನಗೇಕೆ ಉಂಟಾಗಬಾರದಪ್ಪಾ?

ರಾ:— ಹೀಗೇಕನ್ನುತ್ತೀ? ನನ್ನನ್ನೇನಾದರೂ ಕೆಣಕಬೇಕೆಂದು ನಿನ್ನ ಮನಸ್ಸಿನಲ್ಲಿರುವಂತೆ ಕಾಣುತ್ತದೆ.

ಮೇ:— ನೀನಿರುವೆ ಆಯರ್ಲಂಡದ ಸುಪುತ್ರನು! ನಿನಗೆ ಸ್ವಪ್ನದಲ್ಲಿಯೂ ಬ್ರಿಟಿಶ ಸಾಮ್ರಾಜ್ಯವಿಧ್ವಂಸಕ ಸ್ವಾತಂತ್ರ್ಯವೇ ಕಾಣಿಸತಕ್ಕದ್ದು! ನನಗಂತೂ ಆ ಸ್ವರಾಜ್ಯದ ಹೆಸರು ಕೇಳಿ ಸಿಟ್ಟೇ ಬರುತ್ತದೆ.

ರಾ:—ಯೋಗ್ಯವೇ ಇದೆ. ಅದೇಕೆ ಸಿಟ್ಟು ಬರಲಿಕ್ಕಿಲ್ಲವ್ವಾ ನಿನಗೆ?

ಮೇ:—ಹೀಗೇಕನ್ನುತ್ತೀ? ನೀನೂ ನನ್ನನ್ನು ಕೆಣಕಲಿರುವಂತೆ ತೋರುತ್ತಿದೆ. ಹಾಗಿದ್ದರೆ ಮಾತಾಡು ಏನೆಂಬದನ್ನು!

ರಾ:—ಎಲೇ, ಸ್ವಾತಂತ್ರ್ಯದ ಬಗ್ಗೆ ನಿನಗೆ ಸಿಟ್ಟು ಬರತಕ್ಕದ್ದೇ! ಯಾಕಂದರೆ,ನೀನಿರುವೆ ಇಂಗ್ಲಂಡದ ಸುಪುತ್ರಿಯು! ಸಾಮ್ರಾಜ್ಯ ಮಂಟಪದ ಕೀಲವು! ಸಾಮ್ರಾಜ್ಯದ ಪ್ರಜೆಗಳಿಗೆ ಸ್ವರಾಜ್ಯಕೊಡುವ ಮಾತು ಹೊರಟರೆ, ನಿಮ್ಮ ಶುದ್ಧ ನೀಲೀ ರಕ್ತದ ಇಂಗ್ಲಿಷರ ದೇಹದೊಳಗಿನ ಪ್ರಾಣವೇ ಹೊರಹೊರಟಂತಾಗುವದು!

ಮೇ:—ಅದೇಕೆ ಹೊರಡಲಿಕ್ಕಿಲ್ಲ? ನಮ್ಮ ಇಂಗ್ಲಿಷ್ಟರಿಗೆ ಸಾಮ್ರಾಜ್ಯ

ಸ್ಥಾಪಿಸಲಿಕ್ಕೆ ಎಷ್ಟು ದುಡ್ಡು ಖರ್ಚು ಮಾಡಬೇಕಾಯಿತು, ಎಷ್ಟು ಜೀವಗಳನ್ನು ಕಳಕೊಳ್ಳಬೇಕಾಯಿತೆಂಬದು ನಿನಗೆ ಗೊತ್ತಿದೆಯೋ?

ರಾ:—ನನಗೆಲ್ಲವೂ ಗೊತ್ತಿದೆ. ಸಾಮ್ರಾಜ್ಯಸ್ಥಾಪನೆಯ ಕಾಳಗಗಳಲ್ಲಿ ಇಂಗ್ಲಿಷರಿಗಿಂತಲೂ ಆಯರಿಶ ಶಿಪಾಯಿಗಳ ಪ್ರಾಣಗಳೇ ಹೆಚ್ಚು ಖರ್ಚಾಗಿರುತ್ತವೆ; ಇನ್ನು ಖರ್ಚಿನ ಹಣದ್ದೆಂದರೆ, ಇಷ್ಟು ದೊಡ್ಡ ಹಿಂದುಸ್ತಾನವನ್ನು ನಿಮ್ಮ ಇಂಗ್ಲಿಷರು ಕೈವಶ ಮಾಡಿಕೊಂಡು, ಆ ಸಂಬಂಧದ ಎಲ್ಲ ಖರ್ಚನ್ನು ಹಿಂದುಸ್ತಾನದ ಮೇಲೆಯೇ ಹೇರಲಿಲ್ಲೇನು? ಯಾವನನ್ನು ಗುಂಡು ಹಾಕಿ ಕೊಲ್ಲುವದೋ, ಆತನಿಂದಲೇ ಅವನನ್ನು ಹುಗಿಯುವದಕ್ಕೆಂದು ಮೊದಲು ತೆಗ್ಗು ತೋಡಿಸಿಡುವದೇ ನಿಮ್ಮ ಇಂಗ್ಲಿಷರ ಸಾಮ್ರಾಜ್ಯನೀತಿಯು! ನಿಮ್ಮ ಇಂಗ್ಲಿಷರ ಹಾಗು ನಮ್ಮ ಆಯರಿಶರ ಸಾಮ್ರಾಜ್ಯ ವಿಷಯದ ಕಾಮಗಾರಿಯು ಮೇರೀ ಹೇಗಾಯಿತೆಂಬದನ್ನು ಹೇಳಲೋ?

ಮೇ:—ರಾಬಿ, ಹೇಳು ನೋಡೋಣ.

ರಾ:—"ಕೇಳಿಕೋ ಹಾಗಾದರೆ. ಹಿಂದುಸ್ತಾನದಲ್ಲಿ ಪೂರ್ವಕಾಲದ ಒಂದು ಯುದ್ಧದಲ್ಲಿ ಒಂದು ಭದ್ರವಾದ ಕೋಟೆಯನ್ನು ವಶಪಡಿಸಿಕೊಳ್ಳುವ ಬಗ್ಗೆ ಸೇನಾಪತಿಯು ಅಪ್ಪಣೆ ಮಾಡಿದನು. ಆ ಯುದ್ಧದ ದಂಡಿನಲ್ಲಿ ಇಂಗ್ಲಿಷ, ಸ್ಕಾಚ್ ಮತ್ತು ಆಯರಿಶ್ ಹೀಗೆ ಮೂರು ಕಂಪನಿಗಳಿದ್ದವು. ಅದರೊಳಗಿನ ಆಯರಿಶ್ ಕಂಪನಿಯು ಮುಂದರಿದು ಹೋಗಿ ಕೋಟೆಗೆ ತೂತು ಕೆಡಹಿ ಒಳಗೆ ಪ್ರವೇಶ ಮಾಡಿತು; ಅಷ್ಟರಲ್ಲಿ ಆ ಕಂಪನಿಯೊಳಗಿನ ಎಲ್ಲ ಶಿಪಾಯಿಗಳೂ ರಣದೇವತೆಗೆ ಬಲಿಬಿದ್ದರು! ಆದರ ಅದರಿಂದ ಸ್ಕಾಚ್ ಕಂಪನಿಗೆ ಒಳಗೆ ಪ್ರವೇಶ ದೊರೆಯಿತು. ಅವರು ಕೋಟೆಯನ್ನು ಸಂರಕ್ಷಿಸುತ್ತಿದ್ದವರನ್ನೆಲ್ಲ ಸೆರೆ ಹಿಡಿದರು. ಎಲ್ಲಕ್ಕೂ ಹಿಂದಿನಿಂದ ಬಂದ ಇಂಗ್ಲಿಷ ಕಂಪನಿಯು ಒಳನುಗ್ಗಿತು. ಅದರೊಳಗಿನ ಶಿಪಾಯಿಗಳು ಆ ಸೆರೆ ಹಿಡಿದಿದ್ದ ಹಾಗು ಸತ್ತು ಬಿದ್ದಿದ್ದ ಜನರ ಬಕ್ಕಣಗಳನ್ನು ಕತ್ತರಿಸಿ ಅವುಗಳೊಳಗಿನ ಎಲ್ಲ ಹಣ-ಕಾಸುಗಳನ್ನೆತ್ತಿ ಹಾಕಿದರು!"

ತಮ್ಮ ಜಾತಿಯ ಈ ವರ್ಣನವನ್ನು ಕೇಳಿ ಮೇರಿಯು ಕ್ರೋಧಗೊಂಡಂತೆ ನಟಿಸಿದಳು. ಕೂಡಲೆ ಅವಳು ಗಂಡನ ಮುಸುಡಿಗೆ ತನ್ನ ಕೈಯೊಳಗಿನ ಬೀಸಣಿಕೆಯಿಂದ ಒಂದು ಏಟು ಕೊಟ್ಟು ಆತನ ಬಾಯೊಳಗಿನ ಸಿಗರೇಟನ್ನು ನೆಲಕ್ಕೆ ಕೆಡಹಿದಳು! ಆ ದಂಪತಿಗಳ ಜಗಳವು ಹಾಗೆಯೇ ಮುಂದರಿಯಿತು; ಆದರೆ ಅವರು ಪ್ರೇಮಲ ಗಂಡ-ಹೆಂಡಿರಿದ್ದರು. ಹಿಂದುಸ್ತಾನದೊಳಗೆ ನೌಕರಿಯಲ್ಲೇ ಯಾರು ತಮ್ಮ ಆಯುಷ್ಯ ಕಳೆಯಬೇಕಾಗುತ್ತದೆಯೋ ಆ ಯುರೋಪಿಯನ್ ಜನರಿಗೆ ಸಮವಯಸ್ಸಿನ ಮತ್ತು ಸುಶಿಕ್ಷಿತ ಉತ್ಸಾಹದ ಗೃಹಿಣಿಯು ಈ ಭೂಲೋಕದೊಳ

ಕೋಟಿಗಟ್ಟಲೆಯಾಗಿ ಅವಾರು ಕೊಂಡುಕೊಳ್ಳುವವರು? ಕಾಯಿದೆ-ಕೌನ್ಸಿಲ್ಲುಗಳಲ್ಲಿ ಲೋಕಮತದ ಮೇಲೆ ಭಾರವನ್ನು ಹತ್ತಿಕ್ಕಿ ನಿಮಗೆ ಅದಾರು ಜಯದೊರಕಿಸಿ ಕೊಡುವವರು? ನಿಮ್ಮಗಳ ಒಂದೇ ದಿನದ ಭೆಟ್ಟಿಗಾಗಿ ಸಂಸ್ಥಾನಿಕರು ಲಕ್ಷಗಟ್ಟಲೆ ರೂಪಾಯಿ ಖರ್ಚು ಮಾಡಿ ಮಯ ಸಭೆ ಮತ್ತು ಇಂದ್ರಲೋಕಗಳನ್ನು ನಿರ್ಮಿಸುತ್ತಿರುವಂತೆ ಮುಂದೆ ಆದೀತೇ? ನಿಮ್ಮಗಳ ಸತ್ಕಾರಕ್ಕೆಂದು ಈಗಿನ ಹಾಗೆ ಆನೆಯ ಒಜ್ಜೆಯ ಪುಷ್ಪಹಾರಗಳಂತಿರಲಿ; ಆದರೆ ಒಣಗಿದ ಹೂವಿನ ಒಂದು ರೆಂಬಿಯಾದರೂ ಸಿಗಲಿಕ್ಕಿಲ್ಲ.

ರಾ:—ಮೇರಿ, ನಮ್ಮ ಸಾಹೇಬ ಜನರ ಹಾನಿಯ ಉದಾಹರಣೆಗಳನ್ನೇ ಕೊಟ್ಟೆ; ಆದರೆ ನಿಮ್ಮ ಮಡಮ್ಮಗಳ ಹಾನಿಯೂ ಸಂಸ್ಥಾನಗಳಲ್ಲಿ ಸ್ವರಾಜ್ಯವು ಅವತರಿಸಿತೆಂದರೆ ಅಷ್ಟೇ ಆಗುವದಿಲ್ಲವೇ? ನೀನು ನಿನ್ನೀ ಭಯಪ್ರದ ಸಂಕಟಗಳ ವರ್ಣನೆಯನ್ನು ಸಾಕು ಮಾಡು. ನಮ್ಮ ಸಿವ್ಹಿಲ್ ಸರ್ವ್ಹಂಟ್ಸರಿಗೆ-ನಮ್ಮಲ್ಲಿಯ ಕೆಲ ಜನರಿಗಾದರೂ-ಹೊಸ ಲೋಕವು ಕಾಣಿಸತೊಡಗಿದೆ. ನಿಮ್ಮ ಇಂಗ್ಲಿಷರ ಸಾಮ್ರಾಜ್ಯವು ಇನ್ನೂ ನಾಲ್ಕೊಪ್ಪತ್ತು ಹೆಚ್ಚು ಬಾಳಬೇಕೆಂತಿದ್ದರೆ, ಅದನ್ನು ಕಂದಿಲಿಯಿಂದ ಕತ್ತರಿಸಿ ಇಲ್ಲವೆ ಸುತ್ತಿಗೆಯಿಂದ ಕುಟ್ಟಬಾರದಾಗಿದ್ದರೆ, ಕೇವಲ ಅಂತರ್ಗತ ಸ್ವರಾಜ್ಯದಾನದಂತಹ ಯೋಗ್ಯ ಉಪಾಯವು ಇನ್ನೊಂದಿಲ್ಲ. ಹಿಂದುಸ್ತಾನದೊಳಗಿನ ಆರೇಳುನೂರು ಸಂಸ್ಥಾನಗಳು ಬೇಜವಾಬುದಾರ ರಾಜ್ಯ ಪದ್ಧತಿಯಿಂದ ಕಂಗೆಟ್ಟು ಹೋಗಿವೆ! ಈ ದೇಶದ ಸುಂದರ ದೇಹದ ಮೇಲೆ ಈ ಆಗ್ರಹೀ ಸತ್ತೆಯ ಸಂಸ್ಥಾನಗಳ ಹುಣ್ಣಿನ ಕಲೆಗಳ ತೆಗ್ಗುಗಳು ವಿದ್ರೂಪವಾಗಿ ತೋರುತ್ತವೆ. ಪ್ರಜೆಗಳಿಗೆ ಸ್ವರಾಜ್ಯಕೊಟ್ಟು ಅವುಗಳನ್ನು ಸುಧಾರಿಸಬೇಕು; ಮತ್ತು ಆ ಕುರೂಪವನ್ನು ಹೋಗಲಾಡಿಸಬೇಕು.

ಮೇ:—ರಾಬೀ, ನೀನು ಕೊಟ್ಟ ಉಪಮೆಯೇ ನಿನಗೆ ಬಾಧಕವಾಗುತ್ತದೆ. ಹುಣ್ಣಿನ ಕಲೆ ಹಾಗು ತೆಗ್ಗುಗಳು ಹುಚ್ಚಾ, ಎಂದಾದರೂ ಮುಚ್ಚಬರುತ್ತವೇನು? ಮತ್ತು ಸಂಸ್ಥಾನದ ಆ ಕುರೂಪದ ಕಲೆಗಳಿರುತ್ತವೆಂದೇ ಅವುಗಳ ತುಲನೆಯಿಂದ ನಮ್ಮ ಖಾಲಸಾ ಇಲಾಖೆಯೊಳಗಿನ ರಾಜ್ಯಕಾರಭಾರದ ಸುರೂಪವು ಎದ್ದು ಕಾಣುತ್ತದೆ. ಸಂಸ್ಥಾನಿಕರು ನಮ್ಮ ಇಚ್ಛೆಗೆ ವಿರುದ್ಧವಾಗಿ ತಮ್ಮ ಪ್ರಜೆಗಳಿಗೆ ಸ್ವರಾಜ್ಯವನ್ನು ಕೊಡಲಕ್ಕೆ ಅವರ ತಾಯಿಯೇನು ಹಡೆದಾಳು?

ರಾ.—ಅದೇಕೆ? ಆ ವಿಷಯದಲ್ಲಿ ಅವರಿಗೆ ಒಪ್ಪಂದದಿಂದ ಸ್ವಾತಂತ್ರ್ಯವಿರುತ್ತದೆ.

ಮೇ:-ಒಪ್ಪಂದದ ಮಾತುಗಳನ್ನೇಕೆ ಮಾತನಾಡುತ್ತೀ? ಒಪ್ಪಂದವೆಂದರೆ ಕಾಗದದ ಹಾಳೆ! ಮೇಜಿನ ಮೇಲೆ ಬಿದ್ದಿರುವ ಆ ಎ. ಪಿ. ನಿಕಲಸನ್ನನ ಹೊಸ

ಪುಸ್ತಕವಾದ "Scraps of Papar" ಇದನ್ನೋದು. ಇಂಗ್ಲಂಡದ ರಾಣಿಯಿದ್ದವಳು ಬಾದಶಾಹಿನಿಯಾದಳು! ಆದರೆ ಸಂಸ್ಥಾನಗಳ ಬಗ್ಗೆ Dynasty (ರಾಜಮನೆತನ) ಎಂಬ ಶಬ್ದವು ಅಳಿದು, ಅದಕ್ಕೆ ಪ್ರತಿಯಾಗಿ Family (ಕುಟುಂಬ) ಎಂಬ ಶಬ್ದವು ಬಂದಿದೆ! ಇದರಂತೆಯೇ ಇನ್ನುಳಿದದ್ದೆಲ್ಲ. ತಿಳಿಯಿತೇ?

ಹೀಗೆಂದು ನುಡಿದು, ಅವರಿಬ್ಬರೂ ನಗುತ್ತ ಎದ್ದರು. ಮೇರಿಯು:—ರಾಬಿ, ಹೋಗಲಿ ಬಿಡು. ಮಂದಿಯ ಬಗ್ಗೆ ನಾವೇಕೆ ಜಗಳಾಡಬೇಕು? ನಾನಿನ್ನು ಕ್ಲಬ್ಬಿಗೆ ಟೇನಿಸನ್ನಾಡಲಿಕ್ಕೆ ಹೋಗಬೇಕಾಗಿದೆ. ಆದ್ದರಿಂದ ನೀನು ನನ್ನ ಬೂಟು, ಶಾಲು, ಬ್ಯಾಟು ಹಾಗು ಸ್ಮೆಲ್ಲಿಂಗ ಸಾಲ್ಟಿನ ಬಾಟ್ಲಿ ಇವುಗಳನ್ನು ಹಿಡಕೊಂಡು ನನ್ನೊಡನೆ ನಡೆ. ಇನ್ನೂ ಇಂಗ್ಲಿಷ ಸಾಮ್ರಾಜ್ಯಶಾಹಿಯು ಅಳಿಯುದಿರುವ ವರೆಗೆ ನಮ್ಮ ಆಯರಿಶ್ ಪ್ರಜೆಯನ್ನು ದುಡಿಸಿಯಾದರೂ ದುಡಿಸೋಣ!

ಅದಕ್ಕೆ ಪ್ರೊ. ಏ. ನಾದ ರಾಬರ್ಟನು: ಒಳ್ಳೇದು. ಇಹಜನ್ಮದ ತಪ್ಪನ್ನು ಇಹಜನ್ಮದಲ್ಲಿಯೇ ನಿಸ್ತರಿಸಿಕೊಳ್ಳಬೇಕು. ನಿಮ್ಮ ಸಾಮಾನನ್ನು ಹೊರುತ್ತೇನೆ. ಅವ್ವನವರೇ, ಸಾವಕಾಶವಾಗಿ ನಡೆಯಿರಿ, ಎಂದಂದನು.

---

## ೨೨ ಕ್ಷೌರಿಗನ ಹಡಪದೊಳಗಿನ ಶಕುನವಂತಿ.

ಮನೋಹರನು ಸುಭೇದಾರನೊಡನೆ ಬೇಗನೆ ದಿವಾಣರ ಮನೆ ಸೇರಿದನು. ಅಟ್ಟದ ಮೇಲೆ ದಿವಾಣಸಾಹೇಬರೊಬ್ಬರೇ ಕುಳಿತಿರುವದನ್ನು ಕಂಡು ಮತ್ತು "ಇನ್ನು ತಮಗೆ ಏಕಾಂತಕ್ಕೆ ಅಡ್ಡಿಯಿಲ್ಲ"ವೆನೆನಿಸಿ, ಅವನು ದ್ವಾರರಕ್ಷನನ್ನು ಕರೆದನು. ಈತನು ಬಂದೊಡನೆ "ದಿವಾಣಸಾಹೇಬರು ಮಹತ್ವದ ಕೆಲಸದಲ್ಲಿರುತ್ತಾರೆ. ನಾವು ಕೆಳಗಿಳಿದು ಬರುವವರೆಗೆ ಯಾರನ್ನಾದರೂ ಮೇಲೆ ಬಿಟ್ಟಿಯೆಂದರೆ, ಖಬರದಾರ!" ಎಂದಂದನು.

ಈ ಅಧಿಕ-ಪ್ರಸಂಗವನ್ನು ಕಂಡು ದಿವಾಣರು ಸಿಟ್ಟಿನಿಂದ: "ಏನರೀ, ನನ್ನ ಮನೆಗೆ ಬಂದು, ನನ್ನ ನೌಕರರಿಗೆ ಹುಕುಮು ಮಾಡುವದರ ಅರ್ಥವೇನು?

ಮನೋಹರ:—ಅರ್ಥವು ಬೇಗನೆ ತಿಳಿದೀತು. ಸೋಕ್ಷ-ಮೋಕ್ಷಗಳ ಪ್ರಸಂಗದಲ್ಲಿ ಶಿಷ್ಟಾಚಾರವನ್ನಾರು ನೋಡುವರು?

ದಿ: —ಸೋಕ್ಷ-ಮೋಕ್ಷವೇತರದು?

ಮ:—ನಿಮ್ಮ ದಿವಾಣಗಿರಿಯ ಹಾಗು ಪ್ರಜೆಗಳ ದುಃಖದ! ಇಗೋ, ಇತ್ತ ನೋಡಿರಿ. ಈ ನಿಮ್ಮ ಜೀವದ ಗೆಳೆಯರಾದ ಸುಭೇದಾರರಿಂದ ನೀವು ಐದು ಸಾವಿರ ಲಂಚ ತಿಂದಿರುತ್ತೀರಿ; ಅವುಗಳನ್ನು ಅವರಿಗೆ ಈಗಲೆ ತಿರುಗಿ ಕೊಟ್ಟು ಬಿಡಿರಿ ನೋಡೋಣ!

ದಿ:—ನಾನು ಐದುಸಾವಿರ ತಕ್ಕೊಂಡೆನೆಂದು ಅದಾರು ಅನ್ನುತ್ತಾರೆ?

ಕೂಡಲೆ ಮನೋಹರನು ಕಾಗದದ ಫೋಟೋ ಮುಂದೆ ಹಿಡಿದು, ದಿವಾಣ ಸಾಹೇಬರಿಗೆ ತೋರಿಸಿ:—ಇವು ನಿಮ್ಮ ಶಬ್ದಗಳು; ಹಾಗು ನಿಮ್ಮ ಅಕ್ಷರಗಳು!

ತಾವು ಶಿರಸ್ತೆದಾರರಿಗೆ ಬರೆದ ಪತ್ರವನ್ನು ನೋಡಿದೊಡನೆಯೆ ದಿವಾಣ ಸಾಹೇಬರ ಮುಸುಡಿಯು ಕಪ್ಪಿಟ್ಟಿತು; ಆದರೆ ಬೇರೆ ಅವಸಾನವನ್ನು ತಂದು ಕೊಂಡು: ನಾನೂ ಸುಭೇದಾರರೂ ಏನಿದ್ದದ್ದನ್ನು ನೋಡಿಕೊಳ್ಳುವೆವು. ಇದರಲ್ಲಿ ನಿಮ್ಮ ಸಂಬಂಧವೇನು?

ಮ:-ಈ ಕ್ಷಣಕ್ಕೆ ಐದುಸಾವಿರ ತಿರುಗಿ ಕೊಡದಿದ್ದರೆ ನೀವು ಲಂಚ-ರುಸು ವತ್ತು ತಕ್ಕೊಂಡ ಫೌಜದಾರನ ಸರಕಾರೀ ಫಿರ್ಯಾದಿಯು ನನ್ನ ಜೇಬಿನಲ್ಲಿದೆ; ಮತ್ತು ಅದರೊಡನೆ ಮಹಾರಾಜರ ಸಹಿಯು ಜಾಮೀನು ಸ್ವೀಕರಿಸದ ವಾರಂಟೂ ಇದೆ. ಕೈಕಾಲುಗಳಿಗೆ ಬೇಡಿ ಬಂದಾವು! ಊರ ತುಂಬ ಮೆರವಣಿಗೆಯಾದೀತು!

ದಿವಾಣಸಾಹೇಬರು ಬೆದರಿದರು ಸ್ತಂಭಿತರಾದರು. ಕೂಡಲೆ ಅವರು ಕೀಲಿ ತೆಗೆದು ಸೇಫಿನೊಳಗಿನ ಐದುಸಾವಿರದ ನೋಟುಗಳ ಪುಡಿಕೆಯನ್ನು ತೆಗೆದು ಸುಭೇದಾರರ ಕಡೆಗೆ ಕೊಟ್ಟುಬಿಟ್ಟರು! ಆ ಕೂಡಲೆ ಮನೋಹರನು:—"ಸುಭೇ ದಾರರೇ, ಮೀನ ನುಂಗಿದ ಮಾಣಿಕವು ನಿಮ್ಮದು ನಿಮಗೆ ಸಿಕ್ಕಿತಲ್ಲವೆ?"ಎಂದಂದು, ದಿವಾಣಸಾಹೇಬರ ಕಡೆಗೆ ಹೊರಳಿ: "ಇನ್ನು ಬೇರೆ ಪ್ರಕರಣವು. ಈ ಪತ್ರದಲ್ಲಿ ನೀವು ಜೋಜಿಗಮಹಾರಾಜರ ಹಾಗು ನನ್ನ ಒಗ್ಗೆ ಏನೇನು ಬರೆದಿರುತ್ತೀರಿ?

ದಿ:—ನನ್ನ ಆ ಪತ್ರವು ಖಾಸಗಿಯದಾಗಿತ್ತು. ಅದನ್ನು ನೀವು ಕದ್ದು ಒಡೆ ದಿರುತ್ತೀರಿ. ಅದರೊಳಗಿನ ಸಂಗತಿಯಿಂದ ನಿಮ್ಮಗಳ ಹೆಸರು ಕೆಟ್ಟರೆ, ಅದಕ್ಕೆ ನೀವೇ ಹೊಣೆಗಾರರು.

ಈ ಶಬ್ದಗಳು ಕಿವಿಗೆ ಬಿದ್ದ ಕೂಡಲೆ ಮನೋಹರನು ಬಕ್ಕಣದೊಳಗಿಂದ ಆರುಬಾರಿನ ಪಿಸ್ತೂಲನ್ನು ಹೊರ ಹೊರಡಿಸಿ, ಗಟ್ಟಿಯಾಗಿ ಕೂಗಿ:—ಹೀಗಲ್ಲವೆ? ಅಧಮತನವನ್ನು ಮಾಡಿಯೂ ಮಾಡಿ ಮೇಲೆ ಅಧಿಕಪ್ರಸಂಗಿತನವೇ? ದಿವಾಣಸಾಹೇ ಬರೆ, ನಾನು ನನ್ನ ಜವಾಬುದಾರಿಯನ್ನು ಹೇಗೆ ನೀಗಿಸಿಕೊಳ್ಳುತ್ತೇನೆಂಬದನ್ನು ಕೇಳಿಕೊಳ್ಳಿರಿ. ಮಹಾರಾಜರ ಅಪಮಾನದ ಸೇಡನ್ನು ನಾನು ನಿಮ್ಮ ಕೊಲೆ ಮಾಡಿ ತೀರಿಸಿಕೊಂಡರೂ ಅದು ಯೋಗ್ಯವೇ ಆದೀತು; ಆದರೆ ಮಹಾರಾಜರು ಸಜ್ಜ ನರು. ದಯಾಲುಗಳು. ಅಂತೆಯೇ ನಾನು ಈಗ ಅವರನ್ನು ಸ್ಮರಿಸಿ ನನ್ನ ಪಿಸ್ತೂ ಲಿನ ಕೈಯನ್ನು ಬಿಗಿಹಿಡಿಯುತ್ತೇನೆ; ಆದರೆ ನಾನು ಹೇಳುವಂತೆ ಕೇಳದಿದ್ದರೆ ಮಾತ್ರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.

ಮನೋಹರನ ಬೆದರಿಕೆಯ ಶಬ್ದಗಳನ್ನೂ ಆತನ ಕೈಯೊಳಗಿರುವ ಪ್ರತ್ಯಕ್ಷ

ಪಿಸ್ತೂಲನ್ನು ಕಂಡು ದಿವಾಣಸಾಹೇಬರ ಹೊರಜೀವವು ಹಾರಿತು. ಆಗ ಅವರು ಅಂಜಿ ಕೈಜೋಡಿಸಿಕೊಂಡು:—"ನೀವು ಹೇಳುವಂತೆಯೇ ಮಾಡುತ್ತೇನೆ." ಎಂದೆನ್ನಲು, "ಒಳ್ಳೇದು ಮಹಾರಾಜರ ಪರವಾಗಿ ನಿಮಗೆ ನನ್ನ ಹುಕುಮು ಹೀಗೆ ಇದೆ. ನೀವು ಈಗಿಂದೀಗಲೇ ದಿವಾಣಗಿರಿಯ ರಾಜೀನಾಮೆಗೆ ಸಹಿ ಮಾಡಿ ನನ್ನ ಕಡೆಗೆ ಕೊಡತಕ್ಕದ್ದು; ಹಾಗು ಇಂದಿನ ರಾತ್ರಿಯ ರೈಲಿನಿಂದ ಉಟ್ಟ ದೋ-ತರ-ತೊಟ್ಟ ಅರಿವೆಗಳೊಡನೆ ನೀವು ಜೋಧ್ಯಪುರ ಸಂಸ್ಥಾನವನ್ನು ಬಿಟ್ಟು ಮೊಗಲಾಯಿಯೊಳಗೆ ಹೊರಟುಹೋಗತಕ್ಕದ್ದು. ನಿಮ್ಮ ಮನೆಯೊಳಗಿನ ಎಲ್ಲ ವಸ್ತ್ರ-ಒಡವೆಗಳು ಸರಕಾರಕ್ಕೆ ಸೇರಿಸಲಾಗಿವೆ. ಇಂದು ರಾತ್ರಿಯೇ ನಿಮ್ಮ ಮನೆಯ ಮೇಲೆ ಸರಕಾರೀ ಪಹರೆಯು ಗುಪ್ತರೀತಿಯಿಂದಿರಿಸಲಾಗುವದು; ಮತ್ತು ನೀವು ಅತ್ತಿತ್ತ ಅಲುಗಾಡಿದರೆ, ಈ ಪಿಸ್ತೂಲು ತನ್ನ ಕೆಲಸ ಮಾಡದಿರದು. ನಿಮ್ಮ ಹದಿನಾಲ್ಕು ವರ್ಷಗಳ ದುಷ್ಟ ಆಡಳಿತಕ್ಕೆ ಇದೇ ಬಗೆಯ ಪ್ರಾಯಶ್ಚಿತ್ತಕೊಡುವದು ಗೊತ್ತಾಗಿದೆ. ನೀವು ಈ ಮನೆಯೊಳಗಿಂದ ಹೊರಬಿದ್ದು ಹೋದಾಗಲೇ ನಾನೀ ಮನೆ ಬಿಟ್ಟು ಹೋದೇನು!"

ಮರುದಿನ ಬೆಳಗಾಗುವಷ್ಟರಲ್ಲಿ ದಿವಾಣಸಾಹೇಬರ ಮನೆಗೆ ಬಹು ದೊಡ್ಡ ಕೀಲಿ ಬಿದ್ದಿತ್ತು; ಮತ್ತು ಮನೆಯ ಮುಂದೆ ಸಂಗಿನಿಗಳನ್ನು ಹಿಡಿದಿದ್ದ ಪಹರೆಯವರು ನಿಂತುಕೊಂಡಿದ್ದರು. ಇದನ್ನು ಕಂಡು ಪಟ್ಟಣದ ಜನರೆಲ್ಲ ಬೆರಗಾಗಿ ಹೋದರು. ಬೇಕಾದವರು ಬೇಕಾದ ಹಾಗೆ ತರ್ಕಿಸತೊಡಗಿದರು; ಆದರೆ ಜನರ ಎಲ್ಲ ತಪ್ಪುತಿಳುವಳಿಕೆಗಳು ದೂರಾಗಬೇಕೆಂದು ದಿವಾಣಸಾಹೇಬರು ರಾಜೀನಾಮೆ ಕೊಟ್ಟು ಫರಾರಿಯಾಗಿರುತ್ತಾರೆಂಬ ಸಂಗತಿಯನ್ನಷ್ಟೇ ಮುದ್ರಿಸಿದ ಹಸ್ತಪತ್ರಿಕಗಳನ್ನು ಮನೋಹರನು ಊರಲ್ಲೆಲ್ಲ ಹಂಚಿಸಿದನು.

ನಡೆದ ಸಂಗತಿಯನ್ನು ಮಹಾರಾಜರೆದುರಿಗೆ ತಿಳಿಸಲಿಕ್ಕೆ ಮನೋಹರನಿಗೆ ಏನೂ ಶ್ರಮವಾಗಲಿಲ್ಲ. "ದಿವಾಣಸಾಹೇಬರು ಏಟಿಗೆ ಅಂಜಿ ಸ್ವಸಂತೋಷದಿಂದ ರಾಜೀನಾಮೆ ಕೊಟ್ಟು ಫರಾರಿಯಾದರು. ಅದರಿಂದ ಸ್ಪೆಶಲ್ ಪ್ರಾಸ್ಸಿಕ್ಯೂಟರ ಅಥವಾ ಸ್ಪೆಶಲ್ ಜಜ್ಜರನ್ನು ಕಳಿಸಿಕೊಡುವ ಅವಶ್ಯಕತೆಯಿರುವದಿಲ್ಲ" ಎಂಬ ಸಂಗತಿಯ ತಂತಿಯು ಪೊ. ಏ. ಕಡೆಗೆ ಆ ಕೂಡಲೆ ಕಳಿಸಲಾಯಿತು. ದಿವಾಣಸಾಹೇಬರ ಮನೆಯೊಳಗಿನ ಎಲ್ಲ ಜೀನಸುಗಳನ್ನು ಸರಕಾರೀ ಕಚೇರಿಗೊಯ್ಯಲಾಯಿತು; ಮತ್ತು ಪ್ರಭಾಕರನನ್ನು ಬಿಟ್ಟುಬಿಡಲಾಯಿತು.

ಆಗ ಮಹಾರಾಜರು ಮನೋಹರನನ್ನು ಕಂಡು:—"ಮನೋಹರಾ, ನೀನು ಅಮೇರಿಕೆಯೊಳಗಿನ ಸಾಹಸೀ ಪ್ರಕಾರಗಳನ್ನು ಚೆನ್ನಾಗಿ ಕಲಿತು ಬಂದೆಯೆನಬೇಕು."

ಅದಕ್ಕೆ ಮನೋಹರನು:-ಮನುಷ್ಯನಲ್ಲಿಯು ಅಪಮಾನದ ಪ್ರತೀಕಾರದ ಬುದ್ಧಿಯು ಎಲ್ಲವನ್ನೂ ಕಲಿಸುತ್ತದೆ. ಅದಕ್ಕಾಗಿ ಅಮೇರಿಕೆಗೇ ಹೋಗಬೇಕಾಗುವದಿಲ್ಲ. ನಡೆದ ಸಂಗತಿಯೊಳಗೇನಾದರೂ ಅಮೇರಿಕೆಯು ಸಾಹಸವಿದ್ದರೆ, ಅದು ಕೇವಲ ನನ್ನ ಬಳಿಯು ಆರುಬಾರಿನ ಪಿಸ್ತೂಲೇ. ಎಂಥ ದೇವರೋ ಅಂಥವೇ ಅದಕ್ಕೆ ಪೂಜೆ-ನೈವೇದ್ಯಗಳು. ನನ್ನ ಆ ಪಿಸ್ತೂಲಿನಲ್ಲಿ ಗುಂಡುಗಳನ್ನು ಕೂಡ ತುಂಬಿರಲಿಲ್ಲ! ಆದರೆ ಬರಿಯ ಬೆದರಿಕೆಯೇ ನನ್ನ ಕೆಲಸ ಮಾಡಿತು. ಕಾಗದ-ಪತ್ರಗಳ ಕುದುರೆಗಳನ್ನು ಕುಣಿಕುಣಿಸಿ ದಿವಾಣಸಾಹೇಬರನ್ನು ಹೊರಗಟ್ಟಲಿಕ್ಕೆ ನಿಮಗೆ ಆರೆಂಟು ತಿಂಗಳುಗಳಾದರೂ ಸಾಲುತ್ತಿದ್ದಿಲ್ಲ; ಆದರೆ ಆ ಕೆಲಸವನ್ನು ನಾನು ಬಾಯ ಉಸಿರಿನಿಂದ ಹತ್ತು ನಿಮಿಷಗಳಲ್ಲಿ ಮಾಡಿಬಿಟ್ಟೆನಲ್ಲವೆ?''

ವಿದ್ಯುತ್ತಿನ ಎರಡು ತಂತಿಗಳನ್ನು ಒಂದಕ್ಕೊಂದು ಜೋಡಿಸಿದೊಡನೆ ಕೈಗೆ ಧಕ್ಕೆ ಹತ್ತುತ್ತದೆ. ಅದರಂತೆ 'ದಿವಾಣಸಾಹೇಬರು' ಮತ್ತು 'ಓಡಿಹೋದರು' ಇವೆರಡು ಶಬ್ದಗಳನ್ನು ಒಟ್ಟುಗೂಡಿಸಿದರೆ ಪ್ರತಿಯೊಬ್ಬ ಸಂಸ್ಥಾನೀ ಪ್ರಜೆಯ ಮನಸ್ಸಿಗೆ ಆಶ್ಚರ್ಯದ ಧಕ್ಕೆ ಹತ್ತದಿರುವದು ಶಕ್ಯವಿಲ್ಲ. 'ದಿವಾಣಸಾಹೇಬ' ಎಂಬ ಶಬ್ದವೇ ಅಂಥ ದುರ್ದಮ ಸಂಸ್ಕಾರಗಳಿಂದ ಕೂಡಿದ್ದಾಗಿರುತ್ತದೆ. ಪಟ್ಟಕ್ಕೆ ಕುಳಿತ ರಾಜನು ಅಧಿಕಾರಸಂಪನ್ನನಾಗಿದ್ದರೂ ಮೂರ್ಖನಿದ್ದನೆಂದರೆ, ಈತನು ಆ ರಾಜನ ಖುಷಿ-ಮೋಜು ಮಾಡಿ ಪ್ರಜೆಗಳನ್ನು ಪೀಡಿಸುತ್ತಾನೆ. ಆತನು ಅಜ್ಞಾನನಿದ್ದರೆ ಪೊ. ಏ. ಸಾಹೇಬರ ಖುಷಿ-ಮೋಜು ಮಾಡಿ ಆ ರಾಜನನ್ನೂ ಪ್ರಜೆಗಳನ್ನೂ ಕೂಡಿಯೇ ಪೀಡಿಸುತ್ತಾನೆ. ಆತನು ಸುಜ್ಞಾನಿ ಮತ್ತು ಮುಖತ್ಯಾರ ಪಡೆದವನಿದ್ದು ಸ್ವತಂತ್ರ ಬುದ್ಧಿಯುವನಿದ್ದರೆ, ಆತನ ವಿಷಯದ ಖೊಟ್ಟಿ ಸುದ್ದಿಗಳನ್ನು ಸರಕಾರಕ್ಕೆ ತಿಳಿಸಿ, ಪ್ರಾಮುಖ್ಯವಾಗಿ ರಾಜನನ್ನು ಪೀಡಿಸುತ್ತಾನೆ; ಮತ್ತು ಇದನ್ನೆಲ್ಲ ಮಾಡುತ್ತಿರುವಾಗ ಸ್ವಂತದ ಮಾನ-ಮರ್ಯಾದೆ, ದೊಡ್ಡ ಸಂಬಳ ಇವುಗಳನ್ನು ಸಂಗ್ರಹಿಸುತ್ತಿರುತ್ತಾನೆ. ಎಲ್ಲರ ಅಧಿಕಾರಗಳನ್ನಪಹರಿಸುವದು ಸುಲಭ; ಆದರೆ ಎಲ್ಲರ ಮನಸ್ಸನ್ನೊಲಿಸಿ ಅವರ ಹಿತಮಾಡುವದೂ, ನಿಸ್ವಾರ್ಥವಾಗುವದೂ ಕಠಿಣವಿದೆ.

ಜೋಧ್ಯಪುರದ ದಿವಾಣಸಾಹೇಬರು ಯಾವುದೊಂದು ಗಿಡದ ಮೇಲಿನ ಭೂತ ಪಿಶಾಚಿ-ಬ್ರಹ್ಮರಾಕ್ಷಸನಂತೆ ಅಲ್ಲಿಯ ಪ್ರಜೆಗಳಿಗಾಗಿದ್ದರು! ಇಂಥ ಒಂದು ಆಲದ ಮರದ ಮೇಲಿನ ದೆವ್ವವು ಒಂದಾನೊಂದು ರಾತ್ರಿಯಲ್ಲಿ ಆಕಸ್ಮಿಕವಾಗಿ ಹೊರಟು ಹೋದರೆ, ಇಲ್ಲವೆ ಸದ್ಗತಿ ಹೊಂದಿತೆಂದು ಊರವರ ಅನುಭವಕ್ಕೆ ಬಂದರೆ, ಅವರಿಗೆಷ್ಟು ಆನಂದವಾದೀತು! ಆ ಪಿಶಾಚಿಯು ಏನು ಮಾಡದಿದ್ದರೂ ಆ ಗಿಡದ ಸುತ್ತಮುತ್ತಲಿನ ಪ್ರದೇಶದಲ್ಲಡ್ಡಾಡುವ ಜನರು ಅಂಜುತ್ತಾರೆ. ಅದಕ್ಕೆ

ಗೊತ್ತಾದ ನೈವೇದ್ಯವನ್ನು ಕೊಡಲೇ ಬೇಕು; ಅದನ್ನು ತಪ್ಪಿಸಿದರೆ ಕೈಗೆ ಸಿಕ್ಕ ಜನರ ಗೋಣನ್ನು ಮುರಿಯತಕ್ಕದ್ದೇ! ಆದರೆ ದಿನಾಲು ನೈವೇದ್ಯ ತಿನ್ನುವ ಆ ಭೂತವು ಆ ಪ್ರದೇಶದೊಳಗಿನ ಪ್ರಜೆಗಳನ್ನು ಯಾವ ಸಂಕಟದಿಂದಲಾದರೂ ಕಾಪಾಡಿತೆಂಬದನ್ನು ಇಲ್ಲವೆ ರೋಗ-ರುಜಿಗಳನ್ನು ಹೋಗಲಾಡಿಸಿತೆಂಬದನ್ನು ಅಥವಾ ದರವಡೆ-ಕಳವುಗಳಿಗೆ ಅಡ್ಡಿಮಾಡಿತೆಂಬದನ್ನು ಯಾರಾದರೂ ಕೇಳಿರುವ ರೇನು? ಅದೇ ಉದಾಹರಣೆಯು ಸಂಸ್ಥಾನದೊಳಗಿನ ದಿವಾಣಸಾಹೇಬರಿಗೆ! ಇರಲಿ.

ಹನ್ನೆರಡು ವರ್ಷಗಳಿಗೊಮ್ಮೆ ಸಂಸಾರದೊಳಗಿನ ಯುಗಾಂತರವಾಗುತ್ತದೆ. ಹನ್ನೆರಡು ವರ್ಷಗಳ ಮುಂಚೆ ಪ್ರಭಾಕರನು ಫರಾರಿಯಾಗಿ ಯಾವ ಅಂಜಿಕೆಯು ಹಾಗು ಔದಾಸೀನ್ಯದ ಯುಗವು ಅಲ್ಲಿ ಅವತರಿಸಿದ್ದಿತೋ, ಅದು ದಿವಾಣಸಾಹೇಬರ ಫರಾರಿಯಿಂದ ಸಮಾಪ್ತಿಗೊಂಡು, ಅದಕ್ಕೆ ಬದಲು ಆಶೆ ಮತ್ತು ಉಲ್ಹಾಸಗಳ ಯುಗವು ಅವತರಿಸಿತು. ದಿವಾಣಸಾಹೇಬರು ತಮ್ಮ ಮುಸುಡಿಗೆ ಮಸಿ ಒಳ ಕೊಂಡಿದ್ದರಿಂದ ಸಂಸ್ಥಾನೀ ಪ್ರಜೆಗಳ ಮುಖಗಳು ಪ್ರಸನ್ನ ಹಾಗು ತೇಜಃಪುಂಜ ಗಳಾದವು. ಹೊಲದೊಳಗಿಟ್ಟ ಸುಣ್ಣಬಳಿದ ಬೆದರಿನ ಕರೇ ಗಡಿಗೆಯನ್ನು ತೆಗೆದೊಗೆ ದರೆ, ಹಕ್ಕಿ-ಪಕ್ಷಿಗಳು ಹಾರಿ ಹಾರಿ ಬಂದು ಸಮೀಪದ ಗಿಡ-ಮರಗಳ ಮೇಲೆ ಕೂಡ್ರುತ್ತವೆ; ಒಂದಕ್ಕೊಂದು ಭೆಟ್ಟಿ ಪ್ರತಿಭೆಟ್ಟಿಗಳನ್ನು ಕೊಡುತ್ತವೆ; ನಿರ್ಭೀತಿ ಯಿಂದ ಕೆಳಗಿಳಿದು ಬಂದು ಬಿಸಿಲಲ್ಲಿ ಆಡ್ಹಾಡುತ್ತವೆ; ಮತ್ತು ಆನಂದಗೀತಗಳನ್ನ ನ್ನುತ್ತವೆ. ಇದರಂತೆಯೇ ದಿವಾಣಸಾಹೇಬರ ಅಭದ್ರವಾದ ಬೆದರು ಇಲ್ಲದಂತಾದ್ದ ರಿಂದ ತಾವು ಬಹು ದಿನಗಳಿಗೆ ಒಮ್ಮೆಲೆ ನಿರ್ಭಯರಾದೆವೆಂದು ಪ್ರಜೆಗಳಿಗನಿಸಿತು; ಮತ್ತು ಅದರಲ್ಲಿಯೇ ಹೊಸ ಯಜಮಾನನ ವಿಷಯವಾಗಿ ತೋರುವ ಅನನು ಭೂತ ಪ್ರೇಮದ ಮೂಲಕ ಉಲ್ಹಾಸವು ಪೂರ್ಣವಾಯಿತು. ಪಟ್ಟಣದಲ್ಲೆಲ್ಲ ನವ ಚೈತನ್ಯವು ತಲೆದೋರಹತ್ತಿತ್ತು.

ಮರುದಿನ ಜೋದ್ಯಪುರ ಪಟ್ಟಣದ ಎಲ್ಲ ಜನರ ಬಾಯಲ್ಲೂ ಅದೇ ವಿಷ ಯವು! ಆ ಬ್ರಹ್ಮರಾಕ್ಷಸನನ್ನು ಹುಗಿದುಬಿಟ್ಟ ಮಾಂತ್ರಿಕನಾರೆಂಬ ಬಗ್ಗೆ ಪ್ರತಿ ಯೊಬ್ಬರೂ ತಮ್ಮ ಬುದ್ಧಿಗೆ ತೋರಿದಂತೆ ತರ್ಕಿಸಲಾರಂಭಿಸಿದರು. ಕೆಲವರು ಆ ಶ್ರೇಯಸ್ಸನ್ನು ಜೋಜಿಗಮಹಾರಾಜರಿಗೆ ಕೊಟ್ಟರು; ಕೆಲವರು ಅದನ್ನು ಪ್ರಭಾ ಕರನಿಗೆ ಕೊಟ್ಟರು; ಆದರೆ ನಾಳೆ ತಲೆಯೆತ್ತಲಿರುವ ಪ್ರಭಾಕರನ ಖಟ್ಲೆ, ಅದ ರಲ್ಲಿ ಆಗಬೇಕಾಗಿದ್ದ ತಮ್ಮ ಸಾಕ್ಷಿ, ಅದರಿಂದ ಆಗಬಹುದಾಗಿದ್ದ ತಮ್ಮ ಅವ ಮಾನ ಇವುಗಳೇ ದಿವಾಣಸಾಹೇಬರು ಓಡಿ ಹೋಗಲಿಕ್ಕೆ ನಿಜವಾದ ಕಾರಣಗಳಿರು ತ್ತವೆಂದು ಕೆಲ ಸ್ವಲ್ಪ ಪ್ರಾಜ್ಞಜನರ ತರ್ಕವಾಗಿದ್ದರೆ ಆಶ್ಚರ್ಯವಲ್ಲ.

ಹೇಗೆಯೇ ಆದರೂ ಸಾಲೆಗೆ ಹೋಗಿದ್ದ ಹುಡುಗರಿಗೆ ಆಕಸ್ಮಿಕವಾಗಿ ರಜೆ

ದೊರಕಿತೆಂದರೆ ಅವರ ಆನಂದವು ಇಮ್ಮಡಿಯಾಗುವಂತೆ, ಜೋಧ್ಯಪುರದ ಪ್ರಜೆಗಳ ಆನಂದಕ್ಕೆ ಭರತಿಯುಂಟಾಯಿತು; ಉಸಿರು ಕಟ್ಟಿ ನೆತ್ತಿಯಿಂದ ಪ್ರಾಣ ಹಾರುವದೇನೋ ಎಂಬಂತೆ ಬಾಯಿಗೆ ಒತ್ತಿ ಹಿಡಿದಿದ್ದ ಕೈಯು ಒಮ್ಮೆಲೆ ತೆಗೆದಂತಾಯಿತು! ಎಲ್ಲ ಪ್ರಜೆಗಳೂ ಬೈಲುಹವೆಯಲ್ಲಿ ಚೆನ್ನಾಗಿ ಶ್ವಾಸೋಚ್ಛ್ವಾಸ ಮಾಡಹತ್ತಿದ್ದರಿಂದ ಅವರ ಮೋರೆಗಳ ಮೇಲೆ ಸುಪ್ರಸನ್ನತೆಯು ಬಂದಿತು.

ಆದರೆ ಸುಖವಾದರೂ ದುಃಖದಂತೆ ಒಂದೇ ಎಂದೂ ಬರುತ್ತಿರುವದಿಲ್ಲ; ಸಂಗಡ ತನ್ನ ಜೀವದ ಗೆಳೆಯರನ್ನು ಕಟ್ಟಿಕೊಂಡೇ ಬರುತ್ತಿರುತ್ತದೆ. ಜೋಜಿಗ ಮಹಾರಾಜರು ಸಂಪೂರ್ಣ ಅಧಿಕಾರ ವಹಿಸಿಕೊಳ್ಳುವದನ್ನು ನಿಶ್ಚಯಿಸಿದರು; ಆದರೆ ಆ ಮುಖತ್ಯಾರಿಯು ಹೇಗೆ ಒತ್ತಟ್ಟಿಗೆ ಬ್ರಿಟಿಶ ಸರಕಾರದಿಂದ ತಮಗೆ ದೊರೆಯುವದೋ, ಹಾಗೆಯೇ ಅದನ್ನು ಮತ್ತೊತ್ತಟ್ಟಿಗೆ ತಮ್ಮ ಪ್ರಜೆಗಳಿಗೆ ಕೊಡುವದು ಹೀಗೆ ಸಂಪೂರ್ಣ ಅಧಿಕಾರ ವಹಿಸಿಕೊಳ್ಳುವದರ ಅವರ ಅರ್ಥವಾಗಿತ್ತು. ರಾಜ್ಯದ ಎಲ್ಲ ಅಧಿಕಾರಗಳು ಪ್ರಜೆಗಳವು. ಅವರು ಅವುಗಳೊಳಗಿನ ಬೇಕಾದ ಕೆಲವು ಅಧಿಕಾರಗಳನ್ನು ತಮ್ಮ ಕಡೆಗಿಟ್ಟುಕೊಳ್ಳಬೇಕು; ಬೇರೆ ಕೆಲವುಗಳನ್ನು ಸಂಸ್ಥಾನಿಕರಿಗೆ ಕೊಡಬೇಕು; ಮತ್ತು ಸಂಸ್ಥಾನಿಕರು ಅವುಗಳನ್ನು ಪ್ರಜಾಪ್ರತಿನಿಧಿಯಿಂದಂದುಕೊಂಡು ನಡಿಸಬೇಕು. ಹೀಗೆಂದು ಜೋಜಿಗರಾಯರ ಉಪಪತ್ತಿಯಿತ್ತು; ಮತ್ತು ಈ ಕಾರ್ಯಕ್ರಮವನ್ನು ಹೇಗೆ ಜಾರುಗಾಣಿಸಬೇಕೆಂಬ ವಿಷಯವಾಗಿ ಮನೋಹರನ ಸಲಹೆ ಪಡೆಯಬೇಕೆಂದು ಆತನನ್ನು ಕರೆಕಳುಹಿ, ಆತನ ಮಾರ್ಗನಿರೀಕ್ಷಿಸುತ್ತ ಕುಳಿತಿದ್ದರು.

ಸ್ವಸ್ಥತೆಯ ಮೂಲಕ ಇಂದು ಮಹಾರಾಜರು ಕ್ಷೌರ ಮಾಡಿಸಿಕೊಳ್ಳಬೇಕೆಂದರು. ಜೋಜಿಗಮಹಾರಾಜರು ಸ್ವಂತದ ಚಾಕರಿಯನ್ನು ಶಕ್ಯವಾದ ಮಟ್ಟಿಗೂ ತಾವೇ ಮಾಡಿಕೊಳ್ಳಬೇಕೆಂಬ ಮತದವರಾಗಿದ್ದರು. ವಿಲಾಯತಿಯಿಂದ ಬರುವಾಗ ಅವರು ಮುಖಕ್ಷೌರ ಮಾಡಿಕೊಳ್ಳುವ ಎಲ್ಲ ಸಾಹಿತ್ಯಗಳನ್ನು ಕೊಂಡು ತಕ್ಕೊಂಡು ಬಂದಿದ್ದರು; ಅಲ್ಲದೆ ಹಿಂದೆ ಮುಂದೆ ನಿಲುವುಗನ್ನಡಿಗಳನ್ನಿರಿಸಿ ಕೊಂಡು ತಮ್ಮ ಕ್ರಾಫಿನ ಕೂದಲುಗಳನ್ನು ಹದವರಿತು ತಾವೇ ಕತ್ತರಿಸಿಕೊಳ್ಳುತ್ತಿದ್ದರು. ವಿಶೇಷ ಕೆಲಸಬಿದ್ದಾಗ ಮಾತ್ರ ಕ್ಷೌರಿಗನನ್ನು ಕರೆಸುತ್ತಿದ್ದರು. ಅಪೂರ್ಣ ಅಧಿಕಾರ ವಹಿಸಿದಂದಿನಿಂದ ಆ ಯೋಗವೇ ಒದಗಿರಲಿಲ್ಲ; ಆದರೆ ಇಂದು ಅವರ ಅಂಗೈಗೆ ಹುಣ್ಣಾದ್ದರಿಂದ ತಮ್ಮ ಮುಖಕ್ಷೌರವನ್ನು ತಾವೇ ಮಾಡಿಕೊಳ್ಳುವದು ಸಾಧ್ಯವಿರಲಿಲ್ಲ. ಅಂತೆಯೇ ಅವರು ಕ್ಷೌರಿಗನನ್ನು ಕರೆಕಳುಹಿದರು. ಆತನು ಬಂದಾಗ ಸಂಸ್ಥಾನದ ಭಾವೀ ನಿಯೋಜಿತ ಸುಧಾರಣೆಗಳ ಬಗ್ಗೆ ಮಹಾರಾಜರು ಮನೋಹರನೊಡನೆ ಮಾತಾಡುತ್ತಿದ್ದರು; ಕ್ಷೌರಿಗನು ಬಂದದ್ದು

ರಿಂದ ಅದಕ್ಕೆ ಪ್ರತಿಬಂಧವಾಯಿತು; ಅಲ್ಲದೆ ಕ್ಷೌರಿಗನ ಶಂಭುವು ಇಂದು ದಿನಕ್ಕಿಂತ ಬೇರೆಯಾಗಿ ತೋರುತ್ತಿದ್ದನು. ಇದರಿಂದ ಮಹಾರಾಜರ ಲಕ್ಷ್ಯವೂ ಆತನ ಕಡೆಗೆ ಹೊರಳಿತು. ಪ್ರತಿಯೊಬ್ಬ ಸಂಸ್ಥಾನಿಕರಲ್ಲಿ ತೈನಾತದ ಕ್ಷೌರಿಗರು ಚಾಕರಿಗಿದ್ದೇ ಇರುತ್ತಾರೆ. ಶಂಭುವು ಅಂಥ ತೈನಾತದ ಚಾಕರನೇ ಆಗಿದ್ದನು; ಆದರೆ ಮಹಾರಾಜರು ಸಂಪೂರ್ಣ ಅಧಿಕಾರ ವಹಿಸುವ ಪೂರ್ವದಲ್ಲಿ ಆತನು ಯಾವ ಸಾದಾ ಡ್ರೆಸ್ಸಿನಿಂದ ಕ್ಷೌರಕ್ಕೆ ಬರುತ್ತಿದ್ದನೋ ಇಂದು ಹಾಗೆ ಬರದೆ, ತೈನಾತದಾರನ ಡ್ರೆಸ್ಸು ಧರಿಸಿ, ಬೆಳ್ಳಿಯ ಸರಂಜಾಮುದೊಡನೆ ಬಂದಿದ್ದನು! ಮೊದಲಿನ ಆತನ ಕಸ್ಬದ ಹಡಪವು ಸಾಮಾನ್ಯತರದ್ದಾಗಿತ್ತು; ಆದರೆ ಇಂದು ಅದರ ಮೇಲೆ ಜರತಾರಿಯ ಹೂವಿಕೆಲಸವು ಹೊಳೆಯುತ್ತಿದ್ದಿತು. ಅವನು ತೆಗೆದ ನೀರು ಹಚ್ಚುವ ಬಟ್ಟಲವು ಹಳೆಯದಾದರೂ ಬೆಳ್ಳಿಯದಿತ್ತು. ಮಹಾರಾಜರ ಮೈಮೇಲೆ ಕೂದಲು ಬೀಳಬಾರದೆಂದು ಹಾಕಿದ ಬಿಳೇ ಝೂಲವು ಕೆರಮುಂಜೀ ಬಣ್ಣದ ರೇಶ್ಮಿಯದಾಗಿತ್ತು. ದಿನದ ಒಂದು ಮುಜುರೆಯ ಬದಲು ಇಂದು ಆತನು ಮಹಾರಾಜರಿಗೆ ಮೂರು ಮೂರು ಸಾರೆ ಮುಜುರೆ ಮಾಡಿದನು!

ಮಹಾರಾಜರಿಗೆ ಆ ಬಗ್ಗೆ ತುಸ ಸೋಜಿಗವೆನಿಸಿತು. ಇದರಿಂದ ಅವರು ಅವನನ್ನು ಕುರಿತು "ಏನೋ ಶಂಭೂ! ಇಂದು ನಿನ್ನ ಹೆಸರಾದರೂ ಶಂಭುವೆಂದಿದೆಯೋ ಬೇರೆಯಿದೆಯೋ?" ಶಂಭು:-ಸರಕಾರ! ಅದು ಹೇಗೆ?

ಸೋ:-"ನೀನಿಂದು ಕ್ಷೌರಕ್ಕೆ ತಂದ ಸಾಹಿತ್ಯಗಳೆಲ್ಲ ಹೊಸವೆಂದು ತೋರಿದ್ದರಿಂದ ಕೇಳಿದೆನು"

ಶಂ:-ಸರಕಾರ! ಹೊಸ ಸಾಹಿತ್ಯವೇ ಹಳೆಯದು. ಇದು ಏನಿಲ್ಲೆಂದರೂ ಮೂರನೇ ಪೀಳಿಗೆಯದಾಗಿದೆ. ತಮಗೆ ಸಾಹೇಬನು ರಾಜ್ಯದ ಅಧಿಕಾರಗಳನ್ನು ವಹಿಸಿಕೊಟ್ಟರೂ ತಮ್ಮ ಹೆಸರು ಬೇರೆ ಬದಲಿಸಲಿಲ್ಲವೆ! ಅಂದ ಮೇಲೆ ಈ ಬಡವನ ಹೆಸರನ್ನಾದರೂ ಯಾರು ಬದಲಿಸುವವರು? ಅಂದರೆ ನಾನು ಹಳೇ ತೈನಾತದ ಚಾಕರಿ ಮಾಡುವವನೇ! ತಮ್ಮ ರಾಜ್ಯವು ಹೇಗೆ ಅಖಂಡವೋ ಹಾಗೆಯೇ ನನ್ನ ತೈನಾತವೂ ಅಖಂಡವೇ! ಇನ್ನು ಪೀಳಿಗೆಯ ಬಗ್ಗೆ ಯಾರದೇ ಇರಲಿ-ಯಜಮಾನನದಾಗಲಿ, ತೈನಾತದಾರನದಾಗಲಿ-ರಾಜ್ಯವು ರಾಜ್ಯವೇ; ಮತ್ತು ತೈನಾತವು ತೈನಾತವೇ!

ಸೋ: ಆದರೆ ನೀನು ತಂದಿರುವ ಕ್ಷೌರದ ಸಾಹಿತ್ಯವು ಹೊಸದಾಗಿ ತೋರಿದ್ದರಿಂದ ಕೇಳಬೇಕಾಯಿತು.

ಶಂ: ಸರಕಾರ, ಹಾಗಿಲ್ಲ. ಇವುಗಳನ್ನು ನಾನು ಇಂದು ತಂದೆನೆಂದು ಇವು ಹೊಸವಾದವು; ಆದರೆ ಇವು ಹಳೆಯವೇ ಇವೆ. ಈ ಸಾಮಾನುಗಳೆಲ್ಲ ಈ ಪಟ್ಟದ

ಹಿಂದಿನ ಮಹಾರಾಜರ ಕಾಲಕ್ಕೆ ಇದ್ದವನ್ನು ನಾನು ಹಾಗೆಯೇ ಜತನದಿಂದ ಕಾದಿಟ್ಟಿದ್ದೆನು. ತಮ್ಮನ್ನು ಗದ್ದುಗೆಯ ಪಟ್ಟಕ್ಕೆ ಕೂಡ್ರಿಸಿದಾಗಲೂ ತಮ್ಮ ಕ್ಷೌರಕ್ಕೆಂದು ನಾನಿವನ್ನು ಹೊರಹೊರಡಿಸಿರಲಿಲ್ಲ; ಆದರೆ ತಮಗೆ ಸಂಪೂರ್ಣ ಅಧಿಕಾರ ದೊರೆತಂದಿನಿಂದ ಸರಕಾರರು ಮೊಟ್ಟಮೊದಲು ಇಂದೇ ಈ ಕತ್ತೀಮಗನನ್ನು ಕ್ಷೌರಕ್ಕೆ ಕರೆಸಿದುದು. ತಮಗೆ ಪೂರ್ಣ ಮುಖತ್ಯಾರಿ ದೊರೆತದ್ದರಿಂದ ಈ ಹಳೇ ಸಾಮಾನುಗಳನ್ನು ತರಬೇಕಾದವೇ?

ಜೋ: — ಹಾಗಾದರೆ ಇವೆಲ್ಲ ಹಳೇ ಕತ್ತಿಗಳೇ ಇದ್ದಿದ್ದಾವು; ಆದರೆ ಅವು ಜಂಗು ಹಿಡಿದಿಲ್ಲವಷ್ಟೇ? ಇಲ್ಲವಾದ್ದರೆ ನನ್ನ ಮುಸುಡೆ-ಗಡ್ಡಗಳನ್ನು ಕೆತ್ತಿ ರಕ್ತ ತೆಗೆದೀ! ನನ್ನ ಮುಖತ್ಯಾರಿಯ ಸಮಾರಂಭದಲ್ಲಿ ನನ್ನ ಮೋರೆಗೆ ಹತ್ತಲಿರುವ ಗುಲಾಲು ಇಂದು ರಕ್ತದ ರೂಪದಿಂದ ಹತ್ತೀತು!

ಶಂ: —ಸರಕಾರ! ಹಾಗೆ ಹೇಗಾದೀತು? ನಾನು ಈ ಹಳೇ ಕತ್ತಿಗಳನ್ನು ಆಗಾಗ್ಗೆ ತೆಗೆದು ಸಾಣೆ ಹಚ್ಚಿ ಎಣ್ಣೆ ತೊಡೆದಿಟ್ಟು, ನಿಮ್ಮ ಮುಖತ್ಯಾರಿಯ ಮಾರ್ಗ ನಿರೀಕ್ಷಿಸುತ್ತಿರಲಿಲ್ಲವೆ?

ಜೋ: ಆದರೇನೋ ಶಂಭೂ! ಕತ್ತಿಯ ಅಲಗುಗಳು ಸಾಣೆ ಹಿಡಿ ಹಿಡಿದು ಎಂದಾದರೂ ಸಂಪೂರ್ಣ ಸವೆದು ಹೋಗುತ್ತಿರಬಹುದಲ್ಲವೆ?

ಶಂ: ಸರಕಾರ, ಆಹುದು. ಹಾಗೆ ಸವೆದವೆಂದರೆ, ತೆಗೆದು ತಿಪ್ಪೆಗೆ ಎಸೆದು ಬಿಡುತ್ತೇನೆ; ಮತ್ತು ಹೊಸ ಅಲಗು ಕೊಂಡುಕೊಂಡು ಹಳೇ ಹಿಡಿಕೆಗೇ ಕೂಡ್ರಿಸುತ್ತೇನೆ.

ಜೋ: —ಅಂದರೆ ತೈನಾತದಾರ ತಂದೆಯು ಗತಿಸಿ ಮಗನು ಕ್ಷೌರ ಮಾಡ ಹತ್ತಿದರೂ ಹಳೆಯ ತೈನಾತದಾರ ಹಿಡಿಕೆಯು ಕಾಯಮವಾಗಿರುತ್ತದಲ್ಲವೆ?

ಶಂಭುವು ನಕ್ಕು: —ಆಹುದು ಸರಕಾರ, ನನ್ನ ತಂದೆಯಂತೆ ನಾನೂ, ನನ್ನಂತೆ ನನ್ನ ಕತ್ತಿಯೂ ತೈನಾತದಾಗಿವೇ ಆಗಿವೆ. ಸಂಸ್ಥಾನೀ ಪಟ್ಟದ ಚಾಕರ ಹಾಗು ನನ್ನ ಮನೆತನದ ದೇವರು! ಅಂತೆಯೇ ನಾವಿದರ ಮೇಲೆ ಖಂಡೇನವಮಿಯ ದಿವಸ ಗಂಧಾಕ್ಷತೆಗಳನ್ನೇರಿಸುತ್ತಿರುವೆನು.

ಜೋ: —ಆದರೆ ಕತ್ತಿಯು ಒಂದು ಅಲಗಿನೊಳಗಿಂದ ಬೇರೆ ಅಲಗು ತಾನಾಗಿಯೇ ಹೊರಡುವದಿಲ್ಲ. ಆದರಿಂದ ಬೇರೆ ಕಡೆಯ ಅಲಗನ್ನೇ ತಂದು, ನಿಪುತ್ರಿಕ ಅರಸರಿಗೆ ದತ್ತು ಮಾಡುವಂತೆ ಅದಕ್ಕೆ ಕೂಡ್ರಿಸಬೇಕಾಗುತ್ತದೆ; ಮತ್ತು ಶಂಭೂ, ನಿಮ್ಮ ತೈನಾತದಾರ ಕ್ಷೌರಿಗರ ಮನೆತನದಲ್ಲಿಯೂ ಔರಸ ಮಗನಿರದಿದ್ದರೆ ನಡುನಡುವೆ ಹೀಗೆ ದತ್ತು ಮಾಡಿಕೊಳ್ಳಬೇಕಾಗುತ್ತದಲ್ಲವೆ?

ಶಂ: — ಛೇ. ಛೇ. ಬಡವರಲ್ಲಿ ಸರಕಾರ, ಸಂತತಿಗೆ ಕೊರತೆಯಾಗುವದಿಲ್ಲ.

ಬಡವರಿಗೇ ಮಿತಿಯಿಲ್ಲದಷ್ಟು ಮಕ್ಕಳು. ದೇವರಲ್ಲಿ ಅದೇ ಬಗೆಯ ನ್ಯಾಯ ವಿದೆ. ದೇವರು ಯಾವ ಬಗೆಯಿಂದಾದರೂ ಪ್ರತಿಯೊಬ್ಬ ಬಡವನಿಗೆ ಮಕ್ಕಳನ್ನು ಕೊಟ್ಟಿಕೊಡುತ್ತಾನೆ! ಸರಕಾರ, ಸಿರಿವಂತರ ಮಾತೇ ಬೇರೆ. ದತ್ತಕ-ಗಿತ್ತಕ ಗಳನ್ನು ಅವರೇ ತಕೊಳ್ಳಬೇಕಾಗುತ್ತದೆ; ಮತ್ತು ಅದಾದರೂ ಸರಕಾರ, ಯೋಗ್ಯವೇ ಆಗಿದೆ.

ಜೋಜಿಗರಾಯನು ನಕ್ಕು:-ಶಂಭೂ, ಅದು ಹೇಗೆ? ಹೇಳು ನೋಡೋಣ.

ಶಂ:-ಸರಕಾರ, ಸಿರಿವಂತರಿಗೆ ಯಾವಾಗಲೂ ಹೊಟ್ಟೆಯ ಮಕ್ಕಳೇ ಆದರೆ, ಅವರ ಶ್ರೀಮಂತಿಕೆಯು ಸದಾ ಅವರ ಮನೆಯಲ್ಲೇ ಉಳಿಯುವದಲ್ಲವೆ? ಅಂದ ಮೇಲೆ ಅದು ಬಡವರಿಗೆಂದೂ ದೊರೆಯಲಿಕ್ಕಿಲ್ಲ. ಅಂತೆಯೇ ಸಿರಿವಂತರಿಗೆ ದೇವರು ಬಹುಶಃ ಹೊಟ್ಟೆಯ ಮಕ್ಕಳನ್ನು ಕೊಡುವದಿಲ್ಲ. ಆ ಮೇಲೆ ಅವರು ಬಡವರ ಮಕ್ಕಳನ್ನೇ ದತ್ತು ಮಾಡಿಕೊಳ್ಳಬೇಕಾಗುತ್ತದೆ. ಸರಕಾರ, ಎರಡನೆಯವರ ಪೋರನು ಮನೆಯ ಭರತಿಗಾಗಿ ಬಂದರೂ ಮನೆಯು ಮನೆಯಲ್ಲಿಯೇ ಉಳಿಯುವದೆಂದು ಹೇಳುವರು.

ಕ್ಷೌರಿಗರ ಶಂಭುವು ಈ ರೀತಿಯಾಗಿ ಕ್ಷೌರ ಮಾಡಮಾಡುತ್ತ ದತ್ತಕದ ಮೀಮಾಂಸೆಯನ್ನು ಮಾಡುತ್ತಿದ್ದನು; ಆದರೆ ತಾನು ಯಾರ ಕ್ಷೌರ ಮಾಡುತ್ತಿರುವೆನೋ ಆ ತನ್ನ ಹೊಸ ಯಜಮಾನನಾದರೂ ಬಡವರ ಮನೆಯ ಪೋರನೆಂಬದೂ, ಆ ಪೋರನು ಈ ಸಂಸ್ಥಾನಕ್ಕೆ ಭರತಿಯಾಗಿ ಬಂದು, ಬಿಟ್ಟಿಯ ಸಿರಿವಂತಿಕೆಯ ಒಡೆಯನಾಗಿರುವನೆಂಬದೂ ಆ ದಡ್ಡನಿಗೆ ತಿಳಿಯಲಿಲ್ಲ; ಆದರೆ ಆ ಮೀಮಾಂಸೆಯನ್ನು ಮಾಡುವಾಗ ಬಡವನ ಕುಂದು-ಕೊರತೆಯ ಬದಲು, ದೇವರ ನ್ಯಾಯಬುದ್ಧಿಯ ಕೌತುಕ ಮಾಡುವದೇ ಕ್ಷೌರಿಗರ ಶಂಭುವಿನ ಮುಖ್ಯ ಉದ್ದೇಶವಾಗಿತ್ತು. ಲೋಕದಲ್ಲಿ-ಕೇವಲ ಹಿಂದೂ ಸಮಾಜದಲ್ಲಾದರೂ-ಶ್ರೀಮಂತ-ಬಡವರೊಳಗೆ ಒಂದೇ ಕುಲದಲ್ಲಾದರೂ ಸಂಪತ್ತಿಯ ಯೋಗ್ಯ ವಿಭಾಗಣೆಯು ಒಂದು ದತ್ತಕ ಸಂಸ್ಥೆಯಿಂದಲೇ ಆಗುವದೆಂಬ ಅರ್ಥಶಾಸ್ತ್ರದ ಸಿದ್ಧಾಂತವನ್ನು ಅಜ್ಞನಾದ ಕ್ಷೌರಿಗರ ಶಂಭುವು ಗೊತ್ತಿಲ್ಲದಂತೆ ಪ್ರತಿಪಾದಿಸುತ್ತಿದ್ದನು.

ಕ್ಷೌರ ಮಾಡುತ್ತಿರುವಾಗ ಕ್ಷೌರಿಗರು ಒಲು ಹರಟೆ ಕೊಚ್ಚುತ್ತಾರೆಂಬದು ಎಲ್ಲ ದೇಶಗಳೊಳಗಿನವರ ಅನುಭವಸಿದ್ಧವಾಗಿದೆ; ಅದರಂತೆಯೇ ಕ್ಷೌರ ಮಾಡಿಸಿಕೊಳ್ಳುತ್ತಿರುವಾಗ ವರ್ತಮಾನಪತ್ರಗಳನ್ನೋದುವದಕ್ಕಿಂತ ಕ್ಷೌರಿಗಳ ಕೂಡ ಹರಟೆ ಕೊಚ್ಚುವದರಿಂದ ತಮಗೆ ಹೆಚ್ಚು ಮನರಂಜನೆಯಾಗುತ್ತದೆಂಬದು ಎಲ್ಲ ದೇಶದ ಜನರ ಅನುಭವವೂ ಇದೆ. ಅರೇಬಿಯನ್ ನಾಯಿಟ್ಸದಲ್ಲಿ ಒಬ್ಬ ಕ್ಷೌರಿಗನು ಕ್ಷೌರ ಮಾಡುತ್ತಿರುವಾಗ ನಡುವೇ ತಡೆದು, ತನ್ನ ಯಂತ್ರವನ್ನು

ನಿಲ್ಲಿಸಿ, ಸೂರ್ಯನ ವೇಧ ತಕ್ಕೊಳ್ಳುತ್ತಿದ್ದುದನ್ನು ಬಹು ಜನ ವಾಚಕರು ಓದಿ ತಿಳಿದಿರುವರು; ಆದರೆ ಕ್ಷೌರಿಗರ ಈ ಬಡ ಶಂಭುವು ಅಷ್ಟು ಶಾಸ್ತ್ರಕೋವಿದನಾಗಿರಲಿಲ್ಲ. ಆದರೂ ಈತನು ಅಜ್ಞಾತತ್ವಜ್ಞಾನಿಯಾಗಿದ್ದುದು ನಿಜ. ಹರಟೆಗನಾದ ಶಂಭುವನ್ನು ಕಂಡು ಈತನನ್ನು ಹರಟೆಗೆ ಹಚ್ಚಿದರೆ, ಈತನು ಬೇಕಾದ್ದನ್ನು ಹೇಳುವನೆಂದು ತಿಳಿದು, ಮನೋಹರನು ಜೋಜಿಗರಾಯನನ್ನು ಕುರಿತು ಇಂಗ್ಲಿಷ ಭಾಷೆಯಿಂದ ಮೆಲ್ಲನೆ:—ಮಹಾರಾಜರೇ, ಈತನಿಗೆ ಪೂರ್ವಕಾಲದ ಎಷ್ಟೋ ಸಂಗತಿಗಳು ಗೊತ್ತಿರಬೇಕು; ಇವನನ್ನು ಕೇಳಿಕೊಳ್ಳಿರಿ, ಎಂದೆನ್ನಲು,

ಜೋ:—ಶಂಭೂ, ನೀನು ನಮ್ಮ ಹಿರಿಯರ ಪ್ರೀತಿಯ ಕ್ಷೌರಿಗನಿದ್ದೆಯಲ್ಲವೆ?

ಶಂ:—ಸರಕಾರ, ನಾನದನ್ನು ನನ್ನ ಬಾಯಿಂದಲೇ ಹೇಳುವದೆಂತು? ಮಹಾರಾಜರೇ ಏಕೆ, ಆದರೆ ದಿವಾಣಸಾಹೇಬರೂ ಕೂಡ ಒಂದು ದಿನವಾದರೂ ನನ್ನನ್ನು ಬಿಟ್ಟು ಬೇರೆಯುವರಿಂದ ಕ್ಷೌರ ಮಾಡಿಸಿಕೊಳ್ಳಲಿಲ್ಲ. ಶ್ರೀಮಂತರು ತಮ್ಮ ಕೈಯಿಂದಲೇ ತಾವು ಕ್ಷೌರಮಾಡಿಕೊಂಡು, ಬಡವರ ಹೊಟ್ಟೆಯ ಮೇಲೆ ಕಾಲುಕೊಡುವ ಕೆಟ್ಟ ದಿನಗಳು ಸರಕಾರ, ಇತ್ತೀಚೆಗೆ ಬಂದಿರುತ್ತವೆ.

ಶಂಭುವು ಹೊಸ ಯುಗವನ್ನು ಕುರಿತೇ ನುಡಿದನು; ಆದರೆ ಅದು ಪ್ರತ್ಯಕ್ಷ ಜೋಜಿಗರಾಯ-ಮನೋಹರರಿಗೆ ಉದ್ದೇಶಗೊಳ್ಳುತ್ತಿತ್ತು; ಅದನ್ನು ಕೇಳಿ ನಗೆ ಚಾಟಿಕೆಯಿಂದ ಮನೋಹರನು:—ಏನಪ್ಪಾ ಶಂಭೂ! ಹೊಸ ಸುಧಾರಕ-ಶ್ರೀಮಂತರು ತಮ್ಮ ಕೈಯಿಂದ ತಾವು ಕ್ಷೌರ ಮಾಡಿಕೊಂಡರೂ ನಿಮ್ಮ ತೈನಾತದ ರಕಮು ಏನೂ ಕಡಿಮೆಯಾಗುವದಿಲ್ಲವಷ್ಟೇ? ಹಳೆಯಕಾಲದ ಶ್ರೀಮಂತ ಜನರು ಅದೇ ತೈನಾತನ್ನು ಕೊಟ್ಟು, ಬಿನಾ ಕಾರಣ ಕ್ಷೌರವನ್ನೇ ಅಲ್ಲ, ಮೈಯನ್ನೆಲ್ಲ ಮಾಲಿಶ ಮಾಡಿಸಿಕೊಂಡು ನಿನ್ನನ್ನು ದುಡಿಸುತ್ತಿದ್ದರಲ್ಲವೇ? ಅದಲ್ಲದೆ ಮಹಾರಾಜರ ಕ್ಷೌರಿಗನು ಬೇರೆಯವರ ಕ್ಷೌರಮಾಡಕೂಡದೆಂಬ ನಿರ್ಬಂಧವೂ ನಿಮ್ಮ ಮೇಲಿದ್ದಿತು! ಈಗ ನೀವು ನಿಮ್ಮ ಬಿಡುವಿನ ವೇಳೆಯಲ್ಲಿ ಬೇಕಾದವರ ಕ್ಷೌರ ಮಾಡಲಿಕ್ಕೆ ಸಲೂನನ್ನಿಟ್ಟರೆ, ನಿಮ್ಮ ತೈನಾತದ ಹೊರತು ನಿಮಗೆ ಅದರಿಂದಲೂ ಪ್ರಾಪ್ತಿಯಾದೀತು; ಮತ್ತು ನಮ್ಮ ಮಹಾರಾಜರು ದೊಡ್ಡ ಮನಸ್ಸಿನವರಿದ್ದದರಿಂದ, ರಾಜ-ಪ್ರಜೆಗಳಲ್ಲಿ ಭೇದವನ್ನೆಣಿಸುವ ಇಚ್ಛೆಯು ಇವರಿಗಿಲ್ಲ. ಅದರಿಂದ ಖಾಸಗಿ ಸಲೂನನ್ನಿಟ್ಟುಕೊಂಡು ಬೇರೆಯವರ ಕ್ಷೌರಮಾಡಲಿಕ್ಕೆ ಇವರು ನಿಮ್ಮನ್ನು ಪ್ರತಿಬಂಧಿಸಲಾರರು. ಒಂದೇ ಕತ್ತಿಯು ರಾಜ-ಪ್ರಜೆಗಳ ತಲೆಯ ಮೇಲೆ ಆಡ್ಡಾಡಿತೆಂದರೆ, ರಾಜ-ಪ್ರಜೆಗಳಲ್ಲಿ ನಿಜವಾದ ಸಮತೆಯಾಯಿತೆಂದು ನಿಮ್ಮ ಮಹಾರಾಜರು ಅಂಬಾರು; ಆದರೆ ನಿಮ್ಮ ತೈನಾತದಾರ ಕ್ಷೌರಿ

ಗರ ತ್ರೈನಾತದ ಕತ್ತಿಯು ಬರಿಯು ರಾಜಮನೆತನದವರ ತಲೆಯು ಮೇಲೆಯೇ ಅಡ್ಡಾಡಬೇಕೆಂದು ನೀವೇ ಪ್ರತಿಬಂಧ ಹಾಕಿರುವದರಿಂದ ನಿರುಪಾಯುವಾಗಿದೆ!'' ಮನೋಹರನು ಆಡಿದ ಮಾತಿನ ಮರ್ಮವು ಶಂಭುವಿಗೆ ತಿಳಿಯದಷ್ಟು ಗಡಬಿದ್ದಿತು. ಇರಲಿ.

ಹೀಗೆ ಶಂಭುವನ್ನು ಹರಟೆಗೆ ಹಚ್ಚಿದ ಬಳಿಕ ಆತನು ಹಳೇ ಮಹಾರಾಜರ ಕಾಲದೊಳಗಿನ ಸ್ವಂತದ ಅನುಭವದ ಎಷ್ಟೋ ಸಂಗತಿಗಳನ್ನು ಹೇಳಿದನು. ಅದನ್ನು ಕೇಳಿ ಮನೋಹರನೂ ಜೋಜಿಗರಾಯನೂ ಬಿದ್ದು ಬಿದ್ದು ನಗುತ್ತಿದ್ದರು. ಶಂಭುವು ಮುಗ್ಧ ಮನುಷ್ಯನಾಗಿದ್ದನು. ಅದರಿಂದ ತಾನು ಹೇಳುವ ಸಂಗತಿಗಳಲ್ಲಿ ಹಳೇ ಮಹಾರಾಜರ, ದಿವಾಣಸಾಹೇಬರ ಹಾಗು ಅವರ ಪರಿವಾರದವರ ಅಮಾನುಷ ಕೃತ್ಯ, ದುಶ್ಚಟ, ದುರ್ವ್ಯಸನ ಇವುಗಳನ್ನು ತಾನು ಹೇಗೆ ಹೊರಗೆಡಹುತ್ತಿರುವೆನೆಂಬದರ ಅರಿವು ಆತನಿಗಿರಲಿಲ್ಲ. ತಾನು ಹೇಳುವ ಸಂಗತಿಗಳಲ್ಲಿ ಬೇರೆಯವರ ನಿಂದೆ-ಹಾವಿಗಳಿರದೆ, ತನ್ನ ಪ್ರೌಢಿಮೆಯಷ್ಟೇ ಇರುತ್ತದೆಂದು ಆತನು ಹಾಗೆ ಹೇಳುತ್ತಿದ್ದನು; ಆದರೆ ಕೇಳಿಕೊಳ್ಳತಕ್ಕವರು ವಿಶೇಷ ಮರ್ಮಜ್ಞರಾಗಿದ್ದರು. ಕೆಲಹೊತ್ತಿನ ಮೇಲೆ ಆ ಸಂಭಾಷಣವು ಮುಗಿಯಲು, ಶಂಭುವು ತನ್ನ ಸಾಮಾನುಗಳನ್ನೆಲ್ಲ ಸರಿಯಾಗಿರಿಸಿಕೊಂಡನು. ಶ್ರೀಮಂತರ ಮನೆಯ ಪುರೋಹಿತರಿಗೆ ಹೋಮ, ಹವನ, ಪುಣ್ಯಾಹವಾಚನಾದಿ ಪ್ರಸಂಗಗಳಲ್ಲಿ ಎಲ್ಲವನ್ನೂ ವ್ಯವಸ್ಥಿತವಾಗಿರಿಸಬೇಕಾದರೆ ಎಷ್ಟು ಶ್ರಮ ವಹಿಸಬೇಕಾಗುವದೋ, ಅಷ್ಟೇ ಶ್ರಮವನ್ನು ಸಂಸ್ಥಾನಿಕರ ಕ್ಷೌರ ಮಾಡುವಾಗ ಕ್ಷೌರಿಗನು ವಹಿಸಬೇಕಾಗುತ್ತದೆ.

ಕ್ಷೌರಿಗರ ಶಂಭುವು ತನ್ನ ಹಡಪವನ್ನು ತಕ್ಕೊಂಡು ಮಹಾರಾಜರಿಗೆ ಮೂರು ಮೂರು ಸಾರೆ ಮುಜುರೆ ಮಾಡಿ ಹೊರಟು ಹೋದ ಬಳಿಕ, ಕರವಸ್ತ್ರದಿಂದ ಮೈಮೇಲೆ ಬಿದ್ದಿದ್ದ ಕೂದಲುಗಳನ್ನು ಕೊಡಹಿಕೊಳ್ಳುತ್ತ ಮಹಾರಾಜರು: ಮನೋಹರಾ, ನೋಡಿದೆಯಾ ನನ್ನ ಸಂಸ್ಥಾನದೊಳಗಿನ ತ್ರೈನಾತದಾರ ಕ್ಷೌರಿಗನು ಹೇಗಿರುವನೆಂಬದನ್ನು? ಇತಿಹಾಸ, ಅರ್ಥಶಾಸ್ತ್ರ ಮುಂತಾದ ಎಲ್ಲ ವಿಷಯಗಳೂ ಆತನಿಗವಗತವಾಗಿರುತ್ತವೆ.

ಮ:-ಹಾಗಾದರೆ ನೀವು ಆತನನ್ನು ನಿಮ್ಮ ದಿವಾಣನನ್ನಾಗಿ ನೇಮಿಸಿಕೊಳ್ಳುವ ಯೋಜನೆ ಮಾಡಬಹುದಲ್ಲವೆ? ಹಳೆಯ ದಿವಾಣರು ಹೊರಟು ಹೋದ್ದರಿಂದ ಆ ಸ್ಥಳವು ಅನಾಯಾಸ ತೆರೆವಾಗಿರುತ್ತದೆ; ಮತ್ತು ಆತನನ್ನು ದಿವಾನಾ ಎಂದಲ್ಲದಿದ್ದರೆ, ನನ್ನ ಪ್ರಾ. ಸೆ. ಯ ಸ್ಥಳಕ್ಕಾದರೂ ನೇಮಿಸಿಕೊಳ್ಳತಕ್ಕದ್ದು.

ಮನೋಹರನ ವಿನೋದಪ್ರಚುರ ಭಾಷಣದಲ್ಲಿ ಗಂಭೀರತೆಯನ್ನು ನೇರಿಸಿ

ಜೋಜಿಗ ಮಹಾರಾಜನು: ಈತನನ್ನು ದಿವಾಣನಲ್ಲದಿದ್ದರೂ ಪ್ರಾಯವ್ಹೇಟ ಸೆಕ್ರೆಟರಿಯೆಂದು ನಿಯಮಿಸಲಿಕ್ಕೆ ಅಡ್ಡಿಯಿಲ್ಲ. ಮ:—ಹೇಗದು?

ಜೋ:—ನೀನು ನನ್ನ ಪ್ರಾ. ಸೆ. ಯಾದಂದಿನಿಂದ ನನ್ನ ಯಾವ ಮತಗಳು ವಿಕ್ಷಿಪ್ತವೆಂದು ನಿನಗೆ ತೋರುತ್ತಿರುವವೋ ಅವುಗಳ ಬಗ್ಗೆ ನೀನು ನನ್ನ ಎದಿರು ಕಷ್ಟವನ್ನೇ ಮಾಡುತ್ತಿರುವೆಯಲ್ಲವೆ? ಅದರಲ್ಲಿ ಭೇದವಿದ್ದರೆ, ನೀನು ನನ್ನ ತಲೆಯ ಒಳಮಗ್ಗಲ ಕ್ಷೌರ ಮಾಡುತ್ತಿರುತ್ತೀ; ಆತನು ಮೇಲ್ಮೈಯ ಕ್ಷೌರ ಮಾಡುವನು. ಇಷ್ಟೇ.

ಮ: ಹೀಗೆಯೋ? ಆಗಲೆ ನಾನು ನಿಮ್ಮ ಸಮತೆಯ ಹುಚ್ಚಿನ ಬಗ್ಗೆ ಟೀಕೆ ಮಾಡಿದುದರ ಬದಲು ನನ್ನನ್ನು ಕ್ಷೌರಿಗನನ್ನಾಗಿ ಮಾಡಿದಿರಲ್ಲವೆ? ಆದರೆ ನಿಜವಾಗಿ ಹೇಳುವದೆಂದರೆ, ಶಂಭುವಿನ ಕತ್ತಿಯ ಪುರಾಣದಿಂದ ನಿಮ್ಮ ವಿಷಯದ ಇತ್ತೀಚೆಗಿನ ನನ್ನ ಟೀಕೆಯ ಸಮರ್ಥನವೇ ಆಗಿದೆ.

ಜೋ:—ಇರಲಿ ಬಿಡು, ಆ ಹರಟೆಗಳು. ನನಗೆ ಕ್ಷೌರಿಗರ ಶಂಭುವಿನ ಆ ಹಡಪದೊಳಗೆ ರಾಜಕಾರಣದೊಳಗಿನ ನ್ಯಾಟವೇ (ಶಕುನವಂತಿಯೇ) ದೊರಕಿತು.

ಮ:—ಅದು ಹೇಗೆ?

ಜೋ:—ಕತ್ತಿಯ ಅಲಗು ಸವೆದು ಹೋಯಿತೆಂದರೆ, ಅದನ್ನು ಕಿತ್ತೊಗೆದು ಬೇರೆ ಹಾಕಬೇಕಾಗುತ್ತದೆಂದು ಶಂಭುವು ಅನ್ನಲಿಲ್ಲವೆ? ಅಂದರಾಯಿತು. ಸಂಸ್ಥಾನೀ ರಾಜ್ಯಕಾರಭಾರದ ಪದ್ಧತಿಯು ಹಳೆಯದೂ, ನಿರುಪಯುಕ್ತವೂ ಆಯಿತೆಂದರೆ, ಅದನ್ನು ಹಾಗೆಯೇ ತ್ಯಜಿಸಿ, ಅದರ ಬದಲು ಬೇರೆ ಹೊಸ ಪದ್ಧತಿಯನ್ನು ಜಾರಿಗೆ ತರಬೇಕೆಂದು ನಾನು ಯಾವಾಗಲೂ ನಿನಗೆ ಏನು ಹೇಳುತ್ತಿರುವೆನೋ ಅದನ್ನೇ ಆ ಕ್ಷೌರಿಗರ ಶಂಭುವು ಹೇಳಿದನು.

ಮ:—ಆದರೆ ನಿಮ್ಮಂತೆಯೇ ನನಗೂ ಆ ಕ್ಷೌರಿಗನ ಹಡಪದೊಳಗಿನ ಶಕುನವಂತಿಯಿಂದ ನನ್ನ ಪ್ರಶ್ನೆಗು ಉತ್ತರವೂ ದೊರೆತಿಗೆ. ಜೋ:—ಅದೇನು?

ಮ:—ರಾಜ್ಯಪದ್ಧತಿಯನ್ನು ಬದಲಿಸುವದೆಂದರೆ, ರಾಜ್ಯಪದದ ವಿಧ್ವಂಸಗೊಳಿಸುವದೆಂದು ನೀವನ್ನುತ್ತೀರಿ; ಆದರೆ ರಾಜ್ಯಪದವನ್ನು ಕಾಯಮವಾಗಿಟ್ಟು, ಕಾರಭಾರವನ್ನಷ್ಟೇ ಸುಧಾರಿಸಬೇಕೆಂದು ನಾನನ್ನುತ್ತಿರುವದಿಲ್ಲವೆ! ಕ್ಷೌರಿಗರ ಶಂಭುವು ತನ್ನ ಕತ್ತಿಯ ಅಲಗು ಬದಲಿಸುವನಲ್ಲದೆ, ಹಿಡಿಕೆಯನ್ನು ಕಾಯಮವಾಗಿಯೇ ಇಡುತ್ತೇನೆಂದದ್ದನ್ನು ಕೇಳಿಕೊಳ್ಳಲಿಲ್ಲವೇ? ಅಂದರಾಯಿತು. ರಾಜ್ಯಪದ್ಧತಿಯೆಂದರೆ, ತೈನಾತದಾರ ರಾಜಕ್ಷೌರಿಗನ ಕತ್ತಿಯ ಹಿಡಿಕೆಯು; ಮತ್ತು ಕಾರಭಾರದ ಪದ್ಧತಿಯೆಂದರೆ ಅಥವಾ ವ್ಯಕ್ತಿಶಃ ಕಾರಭಾರಿಯೇ ಆ ಹಿಡಿಕೆಯಲ್ಲಿ ಕೂಡ್ರಿಸತಕ್ಕ ಹೊಸ ಅಲಗು.

ಈ ಮೇರೆಗೆ ಅವರಿಬ್ಬರಲ್ಲಿ ತಿರುವು ಮುರುವಾದ ಸಂಭಾಷಣವು ಎಷ್ಟೋ ಹೊತ್ತಿನ ವರೆಗಾದ ಮೇಲೆ "ಸ್ವರಾಜ್ಯದಾನದ ಸಂಬಂಧವಾಗಿ ಮಹಾರಾಜರು ಒಂದು ಜಾಹೀರನಾಮೆಯನ್ನು ಪ್ರಕಟಿಸಬೇಕು; ಆ ಮೇಲೆ ಪ್ರಜಾಪ್ರತಿನಿಧಿಗಳ ಸಭೆ ಕೂಡಿಸಿ, ಎಲ್ಲ ಪ್ರಜೆಗಳ ಮತ-ಸೂಚನೆಗಳನ್ನು ಕೇಳಿಕೊಳ್ಳಬೇಕು; ಮತ್ತು ಕೊನೆಗೆ ಮಹಾರಾಜರು ಹೊಸ ರಾಜ್ಯಘಟನೆಯ ಯೋಜನೆಯನ್ನು ಗೊತ್ತು ಪಡಿಸಿ, ಅದನ್ನು ಅಮಲಿನಲ್ಲಿ ತರಬೇಕು" ಎಂದು ನಿರ್ಧರಿಸಲ್ಪಟ್ಟಿತು.

ಮನೋಹರನು ಅಮೇರಿಕೆಯೊಳಗಿನ ಲೋಕಶಾಹಿಯ ಕಾರಭಾರವನ್ನು ನೋಡಿ ಹೇಸಿಗೊಂಡು ಬಂದಿದ್ದನು. ಚೋಜಿಗರಾಯನು ಸಂಸ್ಥಾನಿಕರ ಚರಿತ್ರಗಳನ್ನು ಕಂಡು ಕೇಳಿ ಹೇಸಿಗೊಂಡಿದ್ದನು. ಆದರೂ ಪ್ರಜೆಗಳ ಹಿತವಾಗಬೇಕೆಂದು ಉಭಯತರಲ್ಲಿಯೂ ನಿಜವಾದ ಇಚ್ಛೆಯಿದ್ದದರಿಂದ, ತಾವು ಅದನ್ನು ಸಿದ್ಧಿಗೊಯ್ಯುವದಕ್ಕೆಂದು ಏನಾದರೂ ಯೋಜನೆ ಮಾಡಿಯೇ ಮಾಡುವೆವೆಂದು ಅವರಿಬ್ಬರಿಗೂ ನಂಬಿಗೆಯೆನಿಸುತ್ತಿದ್ದಿತು.

---

## ೨೩ ಚೋಜಿಗರಾಯನ ಚೋಜಿಗದ ಜಾಹೀರನಾಮೆ.

ಹಿಂದೆ ಹೇಳಿದಂತೆ ಮನಸ್ಸಿನಲ್ಲಿ ಯೋಚಿಸಿಕೊಂಡು ಚೋಜಿಗಮಹಾರಾಜರು ಜಾಹೀರನಾಮೆಯನ್ನು ಪ್ರಕಟಿಸಿದರು. ಅದು ಹೀಗಿದ್ದಿತು:—

"ಪರಮಪ್ರಿಯರಾದ ನಾಗರಿಕ ಪ್ರಜಾಜನ ಬಂಧುಗಳೇ, ಬ್ರಿಟಿಶ ಸರಕಾರವು ಕೆಲ ದಿನಗಳ ಮುಂಚೆ ನನಗೆ ಸಂಸ್ಥಾನದ ಮುಖತ್ಯಾರಿಯನ್ನು ವಹಿಸಿರುವದು ನಿಮಗೆ ಗೊತ್ತೇ ಇದೆ; ಅದನ್ನು ಸ್ವೀಕರಿಸುವಾಗ ನಾನಾಗಿಯೇ ಅದರ ವರ್ಣನವನ್ನು 'ಅಪೂರ್ಣ ಅಧಿಕಾರ ಸ್ವೀಕಾರ' ಎಂಬ ಶಬ್ದಗಳಿಂದ ಮಾಡಿದ್ದೆನು; ಇತ್ತೀಚೆಗೆ ನಾನು ಸಂಪೂರ್ಣ ಅಧಿಕಾರ ವಹಿಸುವ ಆಲೋಚನೆಯಲ್ಲಿದ್ದೇನೆ; ಆದರೆ ಅದು ನನಗೆ ಸಾಮ್ರಾಜ್ಯ ಸರಕಾರದಿಂದ ದೊರೆಯತಕ್ಕದ್ದಾಗಿಲ್ಲ. ಅದು ನನ್ನ ರಾಜ್ಯದೊಳಗಿನ ಪ್ರಜೆಗಳಿಂದಲೇ ನನಗೆ ದೊರೆಯಬೇಕಾಗಿದೆ. ಈ ರಾಜ್ಯಕ್ಕೆ ಯಾರು ನಿಜವಾಗಿಯೂ ಮಾಲಕರೋ, ಅವರೇ ನನಗೆ ಆ ಅಧಿಕಾರಗಳನ್ನು ಕೊಡಲಿಕ್ಕೆ ಶಕ್ತರು. ಇವರಲ್ಲಿ ಸಾಮ್ರಾಜ್ಯ ಸರಕಾರದ ಸಂಬಂಧವೇ ಬರುವದಿಲ್ಲ; ಮತ್ತು ನಾನು ಅದನ್ನು ನನ್ನ ರಾಜ್ಯದೊಳಗಿನ ಜನರಿಂದ ಕೇಳಿಕೊಳ್ಳುವ ಬಗ್ಗೆ ಸರಕಾರದ ಅಡ್ಡಿಯೇನೂ ಇರುವದಿಲ್ಲೆಂದು ಪೋ. ಏ. ಸಾಹೇಬರಿಂದಲೂ ಬರೆದು ಬಂದಿದೆ.

ಈ ರಾಜ್ಯವನ್ನು ಯಾವ ಮೂಲ ಸಂಪಾದಕನು ಸಂಪಾದಿಸಿದನೋ, ಅದನ್ನು ಆತನು ಯಾವ ಪರಾಕ್ರಮವನ್ನೂ ಮಾಡಿ ಸಂಪಾದಿಸಿರಲಿಲ್ಲ; ಆದರೆ

ತನಗಿಂತ ವರಿಷ್ಠರಾದ ತತ್ಕಾಲದ ರಾಜರ ಖುಷಿ-ಮೋಜು ಮಾಡಿ ಹಾಗು ಅವರ ದುರ್ವ್ಯಸನಗಳಲ್ಲಿ ಅಂಗಭೂತನಾಗಿ, ಸಹಾಯಕನಾಗಿ, ಗಳಿಸಿರುತ್ತಾನೆ! ಆ ವ್ಯಸನಪರಂಪರೆಯು ಗತಿಸಿದ ನನ್ನ ದತ್ತಕ ತಂದೆಯವರ ವರೆಗೂ ಅಖಂಡವಾಗಿತ್ತು; ಮತ್ತು ಕಳೆದ ಏಳು ಪೀಳಿಗೆಗಳಲ್ಲಿ ಈ ಸಂಸ್ಥಾನದೊಳಗಿನ ಎಷ್ಟು ಮನೆತನಗಳ ಹೆಂಗಸರ ಮರ್ಯಾದೆಯು ನಮ್ಮ ರಾಜಪುರುಷರಿಂದ ಮಲಿನವಾಗಿರುತ್ತದೆಂಬದನ್ನು ಮನಸ್ಸಿನಲ್ಲಿ ತರುವಾಗ ನನಗೆ ಅತ್ಯಂತ ದುಃಖವಾಗುತ್ತದೆ. ನಾನು ಅಜ್ಞಾನದೆಸೆಯಲ್ಲಿರುವಾಗ, ನಾನು ಸಂಸ್ಥಾನಿಕರ ಒಬ್ಬ ಗೋತ್ರಜನೆಂದೇ ನನ್ನನ್ನು ಪಟ್ಟಕ್ಕೆ ಕೂರಿಸಲಾಗಿದೆ. ಇದರಲ್ಲಿ ದತ್ತವಿಧಾನದ ಸಂಬಂಧವಿದ್ದಿಲ್ಲ; ಯಾಕೆಂದರೆ ನನ್ನ ಜನಕ ತಂದೆ-ತಾಯಿಗಳಿಬ್ಬರೂ ಮೃತರಾದ್ದರಿಂದ ಕಾಯಿದೆಗನುಸಾರವಾಗಿ ನನ್ನನ್ನು ದತ್ತಕ ಕೊಡುವವರಾರೂ ಇರಲಿಲ್ಲ. ನಡೆದ ದತ್ತವಿಧಾನವು ಕೇವಲ ಔಪಚಾರದ್ದಾಗಿತ್ತು; ಆಗಿನ ಸ್ವಂತದ ಅಜ್ಞಾನಾವಸ್ಥೆಯೊಳಗಿನ ಬೇರೆಯವರ ತಪ್ಪನ್ನು ಈಗ ಸಜ್ಞಾನನಾದ ಬಳಿಕ ತಿದ್ದುವದನ್ನು ನಾನು ಮನಸ್ಸಿನಲ್ಲಿ ಯೋಜಿಸಿರುತ್ತೇನೆ. ಆ ತಪ್ಪು ತಿದ್ದುವದೆಂದರೆ, ಇಡಿ ರಾಜಸತ್ತೆಯನ್ನು ಪ್ರಜೆಗಳಿಗರ್ಪಿಸಿ, ಅವರು ತಾವಾಗಿ ನನಗಾವ ಅಧಿಕಾರಗಳನ್ನು ಕೊಡುವರೋ ಅವುಗಳನ್ನಷ್ಟೇ ಸ್ವೀಕರಿಸುವದು.

ಪೂರ್ವಕಾಲದಲ್ಲಿ ರಾಜ್ಯವು ದೇವ-ಬ್ರಾಹ್ಮಣರದೆಂದೆನ್ನುವ ಪರಿಪಾಠವಿತ್ತು. ಅದರ ನಿಜವಾದ ಅರ್ಥವನ್ನು ಲಕ್ಷಿಸದ್ದರಿಂದ ಹಲವು ವಿಪರೀತ ಸಿದ್ಧಾಂತಗಳು ನಿರ್ಮಾಣಗೊಂಡವು. ರಾಜ್ಯವು ದೇವರದೇನೋ ನಿಜವು. ಅಂದರೆ ಅದರ ಉತ್ಪತ್ತಿ ಸ್ಥಿತಿ-ಲಯ ಈ ಮೂರೂ ದೇವಾಧೀನವೆಂದು ಅರ್ಥಮಾಡುವ ಮಟ್ಟಿಗೆ. ರಾಜನು ಸುವಿನೀತನಾಗಿರಬೇಕು; ಮತ್ತು ರಾಜ್ಯದ ಆಪಾಯದೊಳಗಿನ ಕೆಲ ವಂಶವನ್ನು ಯಥಾನ್ಯಾಯವಾಗಿ ಧರ್ಮ ತತ್ವ ಮತ್ತು ನೀತಿ ತತ್ವಗಳ ಸಂರಕ್ಷಣಕ್ಕೂ ಶಿಕ್ಷಣಕ್ಕೂ ಖರ್ಚ ಮಾಡುತ್ತಿರಬೇಕು. ಇನ್ನು ರಾಜ್ಯವು ಬ್ರಾಹ್ಮಣರದೆಂಬದರ ಅರ್ಥವೇನಂದರೆ, ರಾಜ್ಯದೊಳಗಿನ ನಿಃಸ್ವಾರ್ಥಿಗಳು ಹಾಗು ಜ್ಞಾನಿಗಳು ಇವರ ಸಲಹೆಯಿಂದ ರಾಜನು ರಾಜ್ಯಕಾರಭಾರ ಸಾಗಿಸಬೇಕು. ಈ ಅರ್ಥಗಳಂತೆಯೇ ನಾನಾದರೂ ನನ್ನ ರಾಜ್ಯವು ದೇವ-ಬ್ರಾಹ್ಮಣರದಿರುವದೆಂದು ತಿಳಿಯುತ್ತೇನೆ.

ರಾಜ್ಯವು ದೇವರದೆಂದರೂ ಆ ದೇವರು ಪ್ರತ್ಯಕ್ಷವಾಗಿ ಅದರ ಉಪಭೋಗ ಮಾಡುವದಿಲ್ಲ. ನಿತ್ಯದ ನಾನಾ ನೈವೇದ್ಯವನ್ನು ಕೂಡ ಯಾವ ದೇವರು ತನ್ನ ಹೊಟ್ಟೆಗೆ ತಾನು ತಿನ್ನುವದಿಲ್ಲವೋ, ಅಂಥವನು ರಾಜ್ಯವನ್ನು ತಕ್ಕೊಳ್ಳುವದಾದರೂ ಹೇಗೆ? ಮತ್ತು ಉಪಭೋಗಿಸುವದೆಂತು? ನೈವೇದ್ಯವು ಹೆಸರಿಗೆ ದೇವರ

ದಾದರೂ ಉಪಭೋಗವು ಭಕ್ತರದೇ! ದೇವರಿಗೆ ಜೇನುತುಪ್ಪ-ಸಕ್ಕರೆಗಳ ಅಭಿಷೇಕ ಮಾಡಿದರೆ, ತಮ್ಮ ಬಾಯಲ್ಲಿ ಬೀಳುವ ತೀರ್ಥವೇ ಸಿಹಿ-ಮಧುರವಾಗುತ್ತದೆ! ದೇವರಿಗೇರಿಸಿದ ಹೂವುಗಳ ವಾಸನೆಯನ್ನು ಆತನು ತಕೊಳ್ಳುವದಿಲ್ಲ; ನಾವೇ ಆಘ್ರಾಣಿಸುತ್ತೇವೆ. ಅದೇ ಬಗೆಯಾಗಿ ದೇವರಿಗೆಂದು ರಾಜ್ಯವನ್ನು ತೆಗೆದಿಟ್ಟರೂ ಅದರ ಉಪಭೋಗವನ್ನು ಜನರೇ ಪಡೆಯುತಕ್ಕವರು! ಬ್ರಾಹ್ಮಣರ ರಾಜ್ಯವೆಂದರೂ ಅದೇ. ಬ್ರಾಹ್ಮಣರಿಗೆ ಕೊಡುವ ದಾನಗಳು ಧರ್ಮಗ್ರಂಥಗಳಲ್ಲಿ ವಿವರಿಸಲ್ಪಟ್ಟಿವೆ. ಅವುಗಳಲ್ಲಿ ರಾಜ್ಯದಾನವು ಹೇಳಿರುವದಿಲ್ಲ. ಅದರಿಂದ ಅಂಥ ದಾನವನ್ನು ಕೊಟ್ಟರೆ, ತಕೊಳ್ಳುವವನಿಗೆ ಪಾಪ ಬರುತ್ತದೆ. ಶ್ರೀ ಶಿವಛತ್ರಪತಿಯು ತನ್ನ ರಾಜ್ಯದ ಸನದನ್ನು ಬರೆದು ಶ್ರೀ ಸಮರ್ಥ ರಾಮದಾಸರ ಜೋಳಿಗೆಯಲ್ಲಿ ಹಾಕಿದನು; ಮತ್ತು ಸಮರ್ಥರು ಪ್ರಸಾದವೆಂದು ಅದೇ ಸನದನ್ನು ಶಿವಾಜಿಗೆ ಕೊಟ್ಟರು. ದೇವ-ಬ್ರಾಹ್ಮಣರ ರಾಜ್ಯವನ್ನು ರಾಜ್ಯದೊಳಗಿನ ಪ್ರಜೆಗಳೇ ಉಪಭೋಗಿಸತಕ್ಕದ್ದಿದೆ. ಆ ಉಪಭೋಗವು ಅವರಿಗೆ ದೊರೆಯುವದೆಂಬ ಬಗ್ಗೆ ಯಾರು ಜಾಮೀನದಾರಾಗುವರೋ, ಅವರೇ ರಾಜರು.

ರಾಜಧರ್ಮ ಮತ್ತು ಪ್ರಜಾಧರ್ಮ ಇವುಗಳ ಸಮೀಕರಣವು ಅಬಾಧಿತವಾಗಿರುತ್ತದೆ; ಆದರೆ ಇದುವರೆಗೆ ಈ ರಾಜ್ಯದಲ್ಲಿ ಪ್ರಜಾಧರ್ಮವೆಂಬದರ ಅರ್ಥವು ಪ್ರಜೆಗಳು ರಾಜನಲ್ಲಿ ಏಕಾಂತಿಕವಾದ ರಾಜನಿಷ್ಠೆಯನ್ನಿಡಬೇಕು; ಮತ್ತು ರಾಜಧರ್ಮದ ಅರ್ಥವು ರಾಜನು ಸ್ವಂತಕ್ಕೆ ಈಶ್ವರನ ಪ್ರತಿನಿಧಿಯೆಂದು ತಿಳಿದು, ಸ್ವೇಚ್ಛೆಯಿಂದ ಅನಿಯಂತ್ರಿತವಾದ ಅಧಿಕಾರಗಳಿಂದ ರಾಜ್ಯಸುಖವನ್ನು ಭೋಗಿಸಬೇಕು ಹೀಗೆ ಮಾಡಲ್ಪಡುತ್ತಿತ್ತು. ಇಂದಿನಿಂದ ನಾನು ಆ ಅರ್ಥವನ್ನು ಬದಲಿಸತಕ್ಕವನು.

ನಾನು ಸ್ವತಃ ಸಂಸ್ಥಾನದ ರಾಜಮನೆತನದ ಕುಲಗೋತ್ರಗಳಲ್ಲಿ ಹುಟ್ಟಿದವನೆಂಬದಕ್ಕಿಂತ ಸಂಸ್ಥಾನದ ರಾಜನಾಗಲಿಕ್ಕೆ ನನಗೆ ಯಾವ ಹೆಚ್ಚು ಹಕ್ಕು ಪ್ರಾಪ್ತವಾಗುವದಿಲ್ಲ. ನನ್ನ ತಾಯಿ-ತಂದೆಗಳು ಅತ್ಯಂತ ಧರ್ಮನಿಷ್ಠರೂ ಸಚ್ಛೀಲರೂ ಆಗಿದ್ದರು. ಅವರು ತೀರ ಬಡತನದಲ್ಲಿ, ಆದರೆ ವಿಶೇಷ ಮರ್ಯಾದೆಯಿಂದ ಬಾಳಿದ್ದರು. ಅವರ ವಾರಸದಾರನೆಂದು ನಾನು ಅವರಲ್ಲಿಯ ಗುಣಗಳೊಡನೆ ಅವರ ನಿರ್ಧನತೆಯನ್ನೂ ಸ್ವೀಕರಿಸಲಿಕ್ಕೆಬೇಕು; ಅಂತೆಯೇ ಇನ್ನು ಮುಂದೆ ರಾಜ್ಯದೊಳಗಿನ ಪ್ರಜೆಗಳು ಯಾವ ಖರ್ಚಿನ ಹಣವನ್ನು ತಮ್ಮ ಇಚ್ಛೆಯಿಂದ ನನಗೆ ಗೊತ್ತುಮಾಡಿ ಕೊಡುವರೋ, ಅದರಲ್ಲಿಯೇ ನಾನು ಸಮಾಧಾನಪಟ್ಟೇನು; ಮತ್ತು ನನ್ನ ಬುದ್ಧಿಯೋಗಕ್ಕೆ ತಕ್ಕಂತೆ ರಾಜ್ಯದಾಡಳಿತದ ಕೆಲಸ ಮಾಡಿ ನಾನದರ ಪ್ರತಿಫಲವನ್ನು ಅವರಿಗೆ ಕೊಟ್ಟು ಋಣಮುಕ್ತನಾದೇನು.

ಆದರಿಂದ ನಾನು ಪ್ರಜೆಗಳಲ್ಲಿ ಪ್ರಾರ್ಥಿಸುವದೇನಂದರೆ, ನಾನಿನ್ನು ಬೇಗನೆ ಒಂದು ದರಬಾರು ಕೂಡಿಸತಕ್ಕವನಿದ್ದೇನೆ. ಅದರಲ್ಲಿ ಹಾಜರಿರುವದಕ್ಕೆ ಪ್ರಜೆಗಳು ತಮಗೆ ಸರಿದೋರುವ ಪ್ರತಿನಿಧಿಗಳನ್ನು ಗೊತ್ತು ಮಾಡಿ, ಅವರ ಮುಖಾಂತರವಾಗಿ ನನ್ನ ಮುಖ್ಯಕರ್ತವ್ಯದ ಕೆಲಸಗಳಾವವೆಂಬದನ್ನು ನನಗೆ ತಿಳಿಸಬೇಕು; ಅಂದರೆ ನಾನು ಅದರಂತೆ ಇನ್ನು ಮುಂದೆ ಆಡಳಿತ ನಡಿಸೇನು.”

† † † † †

ಆ ಜಾಹೀರನಾಮೆಯು ಸುವರ್ಣಾಕ್ಷರಗಳಿಂದ ಬರೆಯಬಹುದಾಗಿತ್ತೆಂದು ಅಲಂಕಾರ ಭಾಷೆ ಬಳಸುವದಂತೂ ಹೇಳ ಬಂದೇ ಬರುವದು; ಆದರೆ ಮಹಾರಾಜರ ಆಜ್ಞೆಯ ಮೇರೆಗೆ ಅದು ನಿಜವಾಗಿಯೂ ಸೋನೇರೀ ಮಸಿಯಿಂದ (Golden Ink)ಲೇ ಛಾಪಿಸಿ ಪ್ರಸಿದ್ಧಿಸಲಾಗಿತ್ತು.

ಆ ಅಪೂರ್ವ ಪ್ರಕಟನೆಯನ್ನೋದಿ ಪ್ರಜೆಗಳಿಗೆ ವಿಶೇಷವಾದ ವಿಸ್ಮಯವೆನಿಸಿತು. ಆ ಜಾಹೀರನಾಮೆಯೆಂದರೆ, ಸ್ವರಾಜ್ಯವೆಂದರೇನು? ಅದು ಏಕೆ ಬೇಕು! ಇಷ್ಟೇ ಅಲ್ಲ, ಆದರೆ ಅದನ್ನು ಸ್ವಾಧೀನ ಪಡಿಸಿಕೊಳ್ಳುವ ಸಿದ್ಧತೆಯೇ ಆಗಿತ್ತು. ಮೇಲಾಗಿ ಅದು ಪ್ರತ್ಯಕ್ಷ ರಾಜನಿಂದಲೇ!

ಶ್ರೀ ಗುರುಪುತ್ರರಾದ ಶ್ರೀ ದತ್ತಮಹಾರಾಜರ ಕೃಪೆಯಿಂದ ಒಬ್ಬ ೬೦ ವರ್ಷದ ಬಂಜೆಗೆ ಗರ್ಭನಿಂತಿತು! ಅದರಿಂದ ಅವಳು ದೊಡ್ಡ ಪೇಚಿಗೆ ಬಿದ್ದಳು. ಅವಳು ಗರ್ಭನಿಲ್ಲುವ ಚಾರಿತ್ರ್ಯವನ್ನು ಬೇರೆ ಸ್ತ್ರೀಯರ ಸಂಬಂಧವಾಗಿ ನೋಡಿದ್ದಳು; ಆದರೂ ತಾನು ಸ್ವತಃ ಬಸಿರಿರುವೆನೆಂಬದೋ ಇಲ್ಲವೆ ತನಗೆ ಯಾವುದೊಂದು ರೋಗವಾಗಿದೆಯೋ ಎಂಬುದು ಅವಳಿಗೆ ತಿಳಿಯಲೊಲ್ಲದು. ಬೇರೆ ಗೆಳತಿಯರನ್ನು ಕೇಳುವ ಬಗ್ಗೆ ಅವಳಿಗೆ ನಾಚಿಕೆಯೆನಿಸಿತು; ಯಾಕಂದರೆ ಅವರು ಆ ಬಗ್ಗೆ ಸಲಹೆ ಹೇಳುವದು ಒತ್ತಟ್ಟಿಗೇ ಇರಲಿ, ಅವರೊಳಗಿನ ಕೆಲವರು ಚೇಷ್ಟೆ ಮಾಡಿ ಮಾಡಿ ನಾಚಿಸಿ ಬಿಡುವರು, ಮತ್ತು ಕೆಲವರು “ಬಸಿರಿನ ಸೋಗು ಹಾಕಿದ್ದಾಳೆ”ಂದು ತನ್ನ ನಿಂದೆ ಮಾಡುವರೆಂಬ ಅಂಜಿಕೆ! ಅರವತ್ತು ವರ್ಷದ ವಯಸ್ಸಾದರೂ ಪುತ್ರವತಿಯಾಗುವ ಸ್ತ್ರೀಯರ ಜನ್ಮಸಿದ್ಧವಾದ ಹಕ್ಕು ಹೇಗೆ ಹೋಗುವದು? ಆದರೆ ಯಾವುದೊಂದು ಜೀವನದ ಸಂಗತಿಯು ಸಂಭವಿಸಲಿಕ್ಕೆ ಯೋಗ್ಯವೂ ಉಚಿತವೂ ಆದ ಕೆಲವೊಂದು ನಿಸರ್ಗದತ್ತವಾದ ಅವಧಿಯಿರುತ್ತದೆ. ಅದು ಮೀರಿ ಹೋದ ಮೇಲೆ ಅಂಥ ಒಂದು ಸಂಗತಿಯು ಸಂಭವಿಸಿತೆಂದರೆ, ಆ ಬಗ್ಗೆ ಕೌತುಕವುಂಟಾಗುವದಕ್ಕಿಂತ ಚೇಷ್ಟೆಯಾಗುವ ಸಂಭವವೇ ಹೆಚ್ಚಿರುತ್ತದೆ. 'ಮುದುಕಿಗೆ ಬಯಕೆಗಳಾಗಿ ಕಾಡಿಕೊಳ್ಳಹತ್ತಿದರೆ, ಅವಳಿಗೆ ಔಷಧೋಪಚಾರ ಮಾಡುವಾಗ ಅವಳು ಹೊಟ್ಟೆಯ ಮೇಲೆ ಅರವೆಯ ಮಡಿಕೆಗಳನ್ನೇನಾದರೂ ಇಟ್ಟುಕೊಂಡಿರುವಳೇನೆಂಬದರ

ಬಗ್ಗೆ ಅವಳ ಗೆಳತಿಯರು ಸಹಜವಾಗಿ ಹೊಟ್ಟೆಯ ಮೇಲೆ ಹತ್ತೊತ್ತಿಕ್ಕಿ ನೋಡತಕ್ಕವರೇ!

ಜೋಧ್ಯಪುರದ ಮಹಾರಾಜರು ಪ್ರಸಿದ್ಧಿಸಿದ ಜಾಹೀರನಾಮೆಯನ್ನೋದಿ ಕೆಲ ಸರಳವೃತ್ತಿಯ ಧ್ಯೇಯವಾದೀ ಜನರಿಗೆ ಬಹಳ ಆನಂದವಾಯಿತು! ಆದರೆ ಎಲ್ಲರ ಮನಸ್ಸೂ ಹಾಗಿರುವದಿಲ್ಲ. ಸಂಶಯಬದ್ಧ ಜನರಿಗೆ ಮಹಾರಾಜರ ಮನಸ್ಸಿನಲ್ಲಿ ಪ್ರಜೆಗಳಿಗೆ ಖಂಡಿತವಾಗಿಯೂ ಸ್ವರಾಜ್ಯದಾನ ಮಾಡುವದಿದೆಯೋ ಅಥವಾ ಅವರು ಸುಮ್ಮನೆ ಚೇಷ್ಟೆ ನಡಿಸಿರುವರೋ? ಎಂಬ ಬಗ್ಗೆ ಮೊದಲನೇ ಸಂಶಯು ಬಂದಿತು; ಮತ್ತು ಪ್ರಜೆಗಳಿಗೆ ಸ್ವರಾಜ್ಯಬೇಕೆಂಬದನ್ನು ಮಹಾರಾಜರು ಗ್ರಹಿಸಿರುವದಾದರೂ ನಿಜವೆಂದು ಹೇಗೆ ಹೇಳಬೇಕೆಂಬ ಎರಡನೇ ಸಂಶಯವೂ ಉಂಟಾಯಿತು. ಅದರಿಂದ ದಾರಿಯಲ್ಲಿ ಒಬ್ಬನು ಇನ್ನೊಬ್ಬನಿಗೆ ಭೆಟ್ಟಿಯಾದರೆ ಕೆಳಗೆ ಬರೆದಂತೆ ತಿರುವುಮುರುವು ಉದ್ಗಾರಗಳು ಅವರ ಸಂಭಾಷಣದಲ್ಲಿ ಬರತೊಡಗಿದವು:

"ಪ್ರಜೆಗಳಿಗೇನೋ ಸ್ವರಾಜ್ಯ ಕೊಡುವರಂತೆ! ನಾಳೆ ಬೆಳಿಗ್ಗೆ ಸೂರ್ಯನುದಯಿಸುವನೋ ಹೇಗೆಂಬದನ್ನು ನೋಡುವದಕ್ಕೆ ಪಶ್ಚಿಮದಿಕ್ಕಿನ ಕಡೆಗೆ ನೋಡಬೇಕೇ?"

"ಅಸಂಭವದ ಸಂಗತಿಯೇನೋ ನಿಜ; ಆದರೆ ಅದು ಎಂದಿಗೂ ಸಂಭವಿಸಕೂಡದೆಂದಾದರೂ ಅದೇಕೆ ಹೇಳಬೇಕು?"

"ಏನರೀ, ಸ್ವರಾಜ್ಯದ ಕಲ್ಲು ಹಾಕಿಕೊಳ್ಳುವಿರಿ, ಬಾಳೆಯ ಎಲೆಯ ಜೋಳಿಗೆಗಳು ಹೊಲಿದು ಸಿದ್ಧವಾಗಿಲ್ಲವೇ?"

"ಬಾಳೆಯ ಎಲೆಯ ಜೋಳಿಗೆಗಳೇತಕ್ಕೆ? ಕಪ್ಪಣದ ತಿಜೋರಿಗಳಿರುತ್ತವೆ. ಸ್ವರಾಜ್ಯ ಸಿಕ್ಕ ಕೂಡಲೆ ಒಮ್ಮೆಲೆ ಸೇಫಿನೊಳಗೇ ಇಟ್ಟುಬಿಡುವೆನು. ಆ ಮೇಲೆ ಅದನ್ನಾರು ಕಸಕೊಳ್ಳುವರೆಂಬದನ್ನು ನೋಡೋಣ!"

"ಎಷ್ಟು ಸಬಕಾರ ಹಚ್ಚಿ ತೊಳೆದರೂ ಗಾರ್ದಭವು ಕುದುರೆಯಾಗಬಲ್ಲದೆ? ಪ್ರಜೆಗಳು ಪ್ರಜೆಗಳೇ; ರಾಜನು ರಾಜನೇ!"

"ಏನು ಹೇಳುತ್ತೀರದನ್ನು? ವಿನಾಯಕ-ವಾನರಗಳು ಒಂದೇ ಮಣ್ಣಿನಿಂದ ಮಾಡಿದ ಎರಡು ಗೊಂಬೆಗಳು! ಅದರೊಳಗಿನ ಯಾವುದೊಂದನ್ನು ಮುರಿದು, ಅದರಿಂದಲೇ ಬೇರೊಂದನ್ನು ಸಿದ್ಧಪಡಿಸಬರುತ್ತದೆ."

"ಸ್ವರಾಜ್ಯದ ಅಧಿಕಾರಗಳನ್ನು ರಾಜನು ಒಂದು ವೇಳೆ ಕೊಟ್ಟರೂ ಕೊಟ್ಟಾನು; ಆದರೆ ಅವುಗಳನ್ನು ಬಜಾಯಿಸಲಿಕ್ಕೆ ಪ್ರಜೆಗಳಲ್ಲಿರಬೇಕಾದ ಜ್ಞಾನ, ನಿಃಸ್ವಾರ್ಥದ ಉದ್ಯೋಗ ಹಾಗು ಉತ್ಸಾಹ ಇವುಗಳನ್ನೆಲ್ಲಿಂದ ತರಬೇಕು?"

"ಅವಶ್ಯಕತೆಯ ಮೂಲಕ ಎಲ್ಲವೂ ಉಂಟಾಗುತ್ತದೆ. ಬೆಳಿಗ್ಗೆ ಎದ್ದ ಕೂಡಲೆ

ಶುಚಿಭರ್ೂತವಾಗಲಿಕ್ಕೆ ಯಾವ ಹಲವು ವಿಧಿಗಳನ್ನು ಮಾಡಬೇಕಾಗುವದೋ, ಅವುಗಳನ್ನು ನಮ್ಮಿಷ್ಟಕ್ಕೆ ನಾವೇ ಮಾಡುವೆವೋ ರಾಜನ ಅಧಿಕಾರಿಗಳು ಬಂದು ಮಾಡುವರೋ? ನಮ್ಮ ಹಲ್ಲು ತಿಕ್ಕಲಿಕ್ಕೆ ರಾಜನ ಅಧಿಕಾರಿಯು ಕೈ ಮುಂದೆ ಮಾಡಿದರೆ, ಆತನ ಹಲ್ಲು ಮುರಿಯಲಿಕ್ಕೆ ನಮ್ಮ ಕೈಯು ಮುಂದಾಗದಿದ್ದೀತೇ? ಯಾವುದೊಂದು ಕೆಲಸ ಮಾಡಲಿಕ್ಕೆ ಮರ್ಯಾದೆಯಿರಲಿಕ್ಕಿಲ್ಲ; ಆದರೆ ಅದನ್ನು ಮಾಡಿಸಿಕೊಳ್ಳಲಿಕ್ಕೆ ಮರ್ಯಾದೆಯು ಇದ್ದೇ ಇದೆ!'' ಇತ್ಯಾದಿ. ಇತ್ಯಾದಿ.

ಭಾನುವು ತನ್ನ ರಜೆಯನ್ನು ಪುಕ್ಕಟೆ ಕಳೆಯದೆ, ಸಂಸ್ಥಾನದ ಪ್ರಜೆಗಳ ಹಿತದ ಯಾವ ಕೆಲಸವನ್ನಾದರೂ ಮಾಡಬೇಕೆಂದು ಗೊತ್ತು ಮಾಡಿಕೊಂಡಿದ್ದನು; ಆದರೆ ಕೆಲಸ ಮಾಡುವ ಆಲೋಚನೆಯು ಮನಸ್ಸಿನಲ್ಲಿ ಬಂದ ಕೂಡಲೆ ಈ ಪ್ರಜೆಗಳಿಗೆ ತಮ್ಮ ಹಿತವು ಎತರಲ್ಲಿದೆಯೆಂಬದು ಸ್ಪಷ್ಟವಾಗಿ ತಿಳಿಯುವದಿಲ್ಲ; ಮತ್ತು ತಿಳಿದರೂ ಅದನ್ನು ಆಡಿ ತೋರಿಸುವ ಧೈರ್ಯವು ಅವರಲ್ಲಿಲ್ಲೆಂಬದು ಆತನ ನಿದರ್ಶನಕ್ಕೆ ಬಂದಿತು. ರಾಜನಿಷ್ಠೆಯ ಪ್ರಾಚೀನ ಪರಂಪರೆಯ ಅತಿಶಯೋಕ್ತಿಯ ಉಜ್ವಲ ಕಲ್ಪನೆಗಳನ್ನು ಮೊದಲು ಮಾಡಿಕೊಂಡು, ಸದ್ಯಃಫಲದ ಕ್ಷುದ್ರ ಲಾಭಕ್ಕೆ ಬಲಿಬೀಳುವ ಹೀನ ಸ್ವಾರ್ಥ ಬುದ್ಧಿಯವರೆಗೆ ಎಲ್ಲರೂ ತಮ್ಮಿಂದ ತಾವೇ ಪ್ರಗತಿಗೆ ವೈರಿಗಳು! ಸಂಸ್ಥಾನ ಸುಧಾರಿಸುವ ದೃಷ್ಟಿಯಿಂದ ಲೋಕಮತ ತಿಳಿಯುವ ಸಲುವಾಗಿ ಭಾನುವು ತನ್ನ ಗುರುತಿನ ಹಳೇ ಪೀಳಿಗೆಯ ಜನರೊಡನೆ ಯಾವಾಗ ಹೋಗಿ ಮಾತೆತ್ತಿದನೋ, ಆಗ ಆತನಿಗೆ ಆ ವೈರದ ಹಲವು ನಮೂನೆಗಳು ಕಂಡು ಬಂದವು; ಮತ್ತು ಹೊಸ ಪೀಳಿಗೆಯ ಜನರೊಡನೆ ಮಾತಾಡ ಹೋದಾಗ, ಕಮ್ಯುನಿಝಮ್ಮದ ಯಾವುದೊಂದು ಹೊತ್ತಿಗೆಯನ್ನೋದಿದಂತೆ ಸಂಸ್ಥಾನ ಸುಧಾರಣೆಗೆ ಘಾತುಕ ಅಂದರೆ, ಕೆಂಪು ಬಣ್ಣದ ಹೊರತು ಜಗತ್ತಿನಲ್ಲಿ ಬೇರೆ ಬಣ್ಣವೇ ಇಲ್ಲೆಂಬ ತಲುತಿರುಕ ತರುಣರ ನಮೂನೆಗಳು ದೃಷ್ಟಿಗೆ ಬಿದ್ದವು! ಹಳೇ ಪೀಳಿಗೆಯವರಿಗೆ ನಿರುಪಯುಕ್ತ ರಾಜನಿಷ್ಠೆಯ ಮೂಲಕ ಸುಧಾರಣೆ ಬೇಡ! ಮತ್ತು ಹೊಸ ಪೀಳಿಗೆಯವರಿಗೆ ಅರಸು ಬೇಡ, ಸಂಸ್ಥಾನ ಬೇಡ; ಅಂತೆಯೇ ಸುಧಾರಣೆಯೂ ಬೇಡ!

ರಾಜ್ಯಕಾರಭಾರದಲ್ಲಿ ಸುಧಾರಣೆ ಸೂಚಿಸುವದೆಂದರೆ, ದೇವರ ಮನೆಯೊಳಗೆ ಜೋಡು ಹಾಕಿಕೊಂಡು ಹೋಗುವಂತೆ ಉನ್ಮತ್ತತನದ್ದಾದೀತು. ರಾಜನು ರಾಜಧರ್ಮವನ್ನು ಹೇಗೆ ಪಾಲಿಸಬೇಕೆಂಬ ಬಗ್ಗೆ ದೇವರ ಪ್ರೇರಣೆಯೇ ಆತನಿಗಾಗಬೇಕು. ಗಂಗೋತ್ರಿಯ ಕುಂಡದೊಳಗಿಂದ ತಾನಾಗಿ ಹರಿದು ಬರುವದೇ ಗಂಗೆಯು! ಯಾತ್ರಿಕರಿಗೆ ತೀರ್ಥದ ಕೊರತೆಯುಂಟಾಗುವದೆಂದು ಅಲ್ಲಿ ಪಂಪು ಹಚ್ಚಿ ನೀರಿನ ಭರತಿ ಮಾಡುವದನ್ನು ಯಾರಾದರೂ ಮನಸ್ಸಿನಲ್ಲಿ

ತರುವರೇನು? ಚಿಕ್ಕಮಕ್ಕಳಿಗೆ ಹೊಟ್ಟೆ ಹಸಿದದ್ದನ್ನು ತಾಯಿಯೇ ಗುರ್ತಿಸತಕ್ಕದ್ದಾಗಿದೆ; ಮಗುವು ಹೇಳುವ ಆವಶ್ಯಕತೆಯಿಲ್ಲ. ಸಂಸ್ಥಾನದ ರಾಜನನ್ನು ಮೂಲದಲ್ಲಿ ಪ್ರಜೆಗಳೇನೂ ರಾಜನನ್ನಾಗಿ ಮಾಡಿಲ್ಲ! ಆತನು ತನ್ನ ಪರಾಕ್ರಮದಿಂದಲೇ ಆ ಪದವಿಗೇರಿರುತ್ತಾನೆ; ಮತ್ತು ಪರಾಕ್ರಮವು ಯಶಸ್ವಿಯಾಗುವದು ದೇವರ ಇಚ್ಛೆಯನ್ನವಲಂಬಿಸಿರುವದರಿಂದ, ಆ ರಾಜ್ಯಪದವನ್ನು ದೇವರೇ ಆತನಿಗೆ ದಯಪಾಲಿಸಿದನೆನ್ನಬೇಕಾಗುತ್ತದೆ. ಅಂತೆಯೇ ಪ್ರಜೆಗಳು ಆಡಳಿತದ ಅಧಿಕಾರಗಳನ್ನು ಹಕ್ಕಿನಿಂದ ಕೇಳುವದೆಂದರೆ, ರಾಜನ ಹಕ್ಕನ್ನು ಅಪಹರಿಸುವ ಬುದ್ಧಿ ಮಾಡಿದಂತಾಗುವದು ಖಂಡಿತವು! ಇನ್ನು ಪ್ರಜೆಗಳಿಗೆ ಅಧಿಕಾರ ಕೊಡಬೇಕೆಂದು ರಾಜನಿಗೆ ಅನಿಸಿದರೆ, ಅದಕ್ಕೆ ಮಾತ್ರ ಸಾತ್ವಿಕದಾನವೆನ್ನಬಹುದು; ಮತ್ತು ಅದರಿಂದ ಅವನಿಗೆ ಪುಣ್ಯವೂ ಲಭಿಸೀತು; ಆದರೆ ದಾನವನ್ನು ದಾತೃವು ಆತ್ಮಸ್ಫೂರ್ತಿಯಿಂದ ಕೊಡತಕ್ಕದ್ದಿರುತ್ತದೆ. ತಾನಾಗಿ ತನಗೆ ಇಂಥ ದಾನ ಸಿಗಬೇಕೆನ್ನುವವನು ಭಿಕ್ಷುಕನು; ಮತ್ತು ಒತ್ತಾಯದಿಂದ ಅಪಹರಿಸಲಿಚ್ಛಿಸುವವನು ಕಳ್ಳನು; ದರವಡೆಗಾರನು! ನಿಜವಾದ ಪ್ರಜಾಧರ್ಮವೆಂದರೆ, ಪ್ರಜೆಗಳ ಕಲ್ಯಾಣ ಮಾಡುವ ಬುದ್ಧಿಯು ರಾಜನಲ್ಲಿ ಹುಟ್ಟಬೇಕು; ಅಂದರೆ ಆತನಿಗೆ ಅದನ್ನು ದೇವರು ಕೊಡಬೇಕೆಂದು ಪ್ರಾರ್ಥಿಸುವದೇ ಆಗಿದೆಯೆಂದು ಹಳೇ ಪೀಳಿಗೆಯ ಜನರಿಗನಿಸುತ್ತಿತ್ತು.

ಭಾನುವು ಒಬ್ಬ ಹೊಸ ಪೀಳಿಗೆಯವನಿಗೆ ಭೆಟ್ಟಿಯಾಗಲು, ಆತನು ಸಂಸ್ಥಾನ ಸುಧಾರಣೆಯ ವಿರುದ್ಧವಾಗಿಯೇ ಮತಪ್ರದರ್ಶನ ಮಾಡಿದನು! ಆತನ ಹೆಸರು ಕಾಮ್ರೇಡ್ ಡಂಬಿಯೆಂದು. ಆತನಿಗೆ ಈ ಹೆಸರು ಬೀಳಲಿಕ್ಕೆ ಕಾರಣವೇನಂದರೆ, ಡಂಬಿಯು ತನ್ನ ಪ್ರತಿಯೊಂದು ಭಾಷಣದಲ್ಲಿ ಹಳೇ ರಾಜ್ಯಗಳು, ಜಮೀನದಾರರು, ತೈನಾತದಾರರು, ಸಾವುಕಾರರು ಹಾಗು ಶ್ರೀಮಂತ ಜನರು ಇವರನ್ನೆಲ್ಲ ಕುಸ್ತಿಯಲ್ಲಿ ಅಡ್ಡಿಗ್ಗಾಲು ಕೊಟ್ಟು ಕೆಡವುವಂತೆ ಒಮ್ಮೆಲೆ ರಸಾತಳಕ್ಕೆ ಹಾಕಿ ಬಿಡುವನು. ಅಂಥ ಜೇಳಿನ ಕೊಂಡಿಯಂತಹ ಪ್ರಾಣಿಗೆ ಜನರು 'ಡಂಬಿ' ಎಂದೆನ್ನಹತ್ತಿದರು. ಆ ಗೃಹಸ್ಥನು ಜೋದ್ಯಪುರ ಸಂಸ್ಥಾನದ ರಹಿವಾಸಿಯಾಗಿರಲಿಲ್ಲ. ಅಂದಮೇಲೆ ಅವನು ಆ ಸಂಸ್ಥಾನದ ಪ್ರಜೆಯೆಂತಿರಬೇಕು? ವಾಂಡರಿಂಗ ಜ್ಯೂ ಜನರಂತೆ ಆತನೊಬ್ಬ ಮಾರ್ಗಸ್ಥ ನಾಗರಿಕನಾಗಿದ್ದನು! ಆತನ ಮೈಮೇಲಿನ ಡ್ರೆಸ್ಸು ಬೆಲೆಯುಳ್ಳ ವಿದೇಶೀ ಉಣ್ಣೆಯದಿದ್ದು, ತಲೆಯ ಮೇಲಿನ ನರಿಯ ಕೂದಲಿನಂತಹ ಟೊಪ್ಪಿಗೆಯು ದಂಡಿನವರ ಟೊಪ್ಪಿಗೆಯಂತೆ ತಿರುವಾಗಿರುತ್ತಿತ್ತು. ಆತನಿಗೆ ಯಾವನೊಬ್ಬ ಶ್ರೀಮಂತನ ಉಡಾಳ ಹುಡುಗನೆಂದು ಜನರು ತಪ್ಪಿ ಅನ್ನುವ ಸಂಭವವಿತ್ತು. ರಶಿಯನ್ ಕಮ್ಯುನಿಝಮ್ಮದ ಚಿಹ್ನ ಇಲ್ಲವೆ ಬಿರುದಾಗಿದ್ದ ಕೆಂಪು

ನಿಶಾನಿಯನ್ನು ಯಾವುದೊಂದು ಶೋಭಾಯಮಾನವಾದ ಪದಕದಂತೆ ಆತನು ಪಿನ್ನಿನಿಂದ ತನ್ನ ಎದೆಯ ಮೇಲಿನ ಕೋಟಿನ ಭಾಗಕ್ಕೆ ಚುಚ್ಚಿಕೊಳ್ಳುತ್ತಿದ್ದನು. ಕಾ. ಡಂಬಿಯ ಸಾಮಾನು-ಸಟ್ಟುಗಳು ಜೇಳಿನ ಕೊಂಡಿಯಂತೆ ಆತನ ಬೆನ್ನ ಮೇಲೆ ಯೇ ಸಿದ್ಧವಾಗಿರುತ್ತಿದ್ದವು. ಇರಲಿ.

ಪ್ರಜೆಗಳು ಕೂಡಿಸಲಿರುವ ದರಬಾರದಲ್ಲಿ ಮಹಾರಾಜರು ಹಾಜರಿರ ಬೇಕೋ-ಬಾರದೋ ಎಂಬ ಪ್ರಶ್ನೆ ಹೊರಟಿತು; ಆ ಸಭೆಗೆ ಸ್ವತಃ ಮಹಾರಾಜರು ಹಾಜರಿರಕೂಡದೆಂದು ಮನೋಹರನ ಅಭಿಪ್ರಾಯವಿದ್ದಿತು; ಆದರೆ ಮಹಾ ರಾಜರು: "ಅದೇಕೆ? ಆ ಸಭೆಯಲ್ಲಿ ಭಾಗ ವಹಿಸಲಿಕ್ಕೆ ಎಲ್ಲ ಪ್ರಜೆಗಳಿಗೂ ಇರುವ ಹಕ್ಕು ಸ್ವತಃ ರಾಜನಿಗಿಲ್ಲವ್ರೋ?"

ಮ:—ನಿಮಗೆ ಹಕ್ಕಿಲ್ಲೆಂದು ಆದಾರು ಅನ್ನುವರು? ಆದರೆ ನಿಮ್ಮ ಭಿಡೆ-ಮುರವತ್ತುಗಳ ಮೂಲಕ ನಿಮ್ಮೆದುರಿಗೆ ಮನಬಿಚ್ಚಿ ಮಾತಾಡಬರಲಿಕ್ಕಿಲ್ಲ.

ಜೋ:—ಯಾರಿಗೆ ರಾಜನೆದುರಿಗೆ ಮನಬಿಚ್ಚಿ ಮಾತಾಡಲಿಕ್ಕೆ ಬರುವದಿಲ್ಲ ವೋ, ಅವರು ರಾಜನ ರಾಜ್ಯ ಅಂದರೆ ಸ್ವರಾಜ್ಯ ಪಡೆಯುವ ಮಹಾತ್ವಾಕಾಂಕ್ಷೆ ಯನ್ನಾದರೂ ಏಕೆ ತಾಳಬೇಕು?

ಮ:—ಭಲೆ! ನಿಮ್ಮ ಅಮರ್ಯಾದೆಯಾಗಬಾರದೆಂದೇ ಅವರಿಚ್ಛೆಯಿದೆ. ನೀವು ಸಮಕ್ಷಮ ಇದ್ದರೆ ಒಂದುವೇಳೆ ಆದಾವೀತು?

ಜೋ:—ಹಾಗೆ ಇಚ್ಛೆಯಿದ್ದರೆ ಅಮರ್ಯಾದೆ ಮಾಡದಿದ್ದರೆ ತೀರಿತು.

ಮ:—ಆದರೆ ಅವರೆಲ್ಲರೂ ನಿಮ್ಮ-ನಮ್ಮಂತೆ ಸುಶಿಕ್ಷಿತರಿರುವದಿಲ್ಲ.

ಜೋ:—ಮಾನ ಕಾಯಬೇಕು; ಅಮರ್ಯಾದೆ ಮಾಡಬಾರದು, ಇದಕ್ಕೆ ಶಿಕ್ಷಣವು ಬೇಕಿಲ್ಲ; ಸೌಜನ್ಯವು ಬೇಕಾಗುತ್ತದೆ. ಮನೆಯಲ್ಲಿ ಮಾವನ ಇಲ್ಲವೆ ಗಂಡನ ಅಮರ್ಯಾದೆ ಮಾಡದೆ ಬಾಳ್ವೆಮಾಡುವ ಹೆಣ್ಣುಮಕ್ಕಳೆಲ್ಲ ಸುಶಿಕ್ಷಿತರೇ ಆಗಿರುತ್ತಾರೇನು? ಇದಕ್ಕೆ ವಿಪರೀತವಾಗಿ ಜನರು ಸುಶಿಕ್ಷಿತರಾದರೆಂದರೆ, ಒಬ್ಬ ರಿಗೊಬ್ಬರ ಮರ್ಯಾದೆಯನ್ನೆಷ್ಟು ಕಾಯುತ್ತಿರುವರೆಂಬದು ವೃತ್ತಪತ್ರಗಳ ಮೂಲಕ ನಮಗೆ ತಿಳಿಯುತ್ತಲೇ ಇದೆ! ಇನ್ನು ನಾನಿಲ್ಲದಾಗ ಅವರು ನನ್ನ ಅಮ ರ್ಯಾದೆ ಮಾಡುವದು ವಿಹಿತವೇ? ಅಪ್ರಿಯ ಮಾತನಾಡುವ ಮನಸ್ಸಿದೆ, ಆ ಬಗ್ಗೆ ವಿವಾದವೆನಿಸುವದಿಲ್ಲ; ಆದರೆ ಹಾಗೆ ಮಾತನಾಡುವ ಧೈರ್ಯಮಾತ್ರ ಇಲ್ಲ. ಇಂಥ ಜನರು ಸ್ವರಾಜ್ಯವನ್ನು ಹೇಗೆ ಸಂಪಾದಿಸತಕ್ಕವರು? ಹಾಗು ನಡಿಸುವವರು? ಸದ್ಯಕ್ಕೆ ಸಂಸ್ಥಾನೀ ರಾಜಕಾರಣದಲ್ಲಿ ರೂಢವಾಗಿರುವ "ಮೂಲಭೂತ ಹಕ್ಕು" ಎಂಬ ಶಬ್ದವು ನಿನಗೆ ಗೊತ್ತೇ ಇದೆ. ನ್ಯಾಯವನ್ನು ಕೇಳಿಕೊಳ್ಳುವ ಮೂಲ ಭೂತ ಹಕ್ಕು ಹೇಗೆ ಪ್ರಜೆಗಳಿಗಿದೆಯೋ, ಅದರಂತೆಯೇ ಪ್ರಜೆಗಳಿಂದ ಅಮ

ಯಾ೯ದೆಯಾಗದಂತಹ ಮೂಲ ಭೂತ ಹಕ್ಕು ರಾಜನಿಗಾದರೂ ಇದೆ! ಅದರಿಂದ ಸತ್ಯಮಾತಾಡಬೇಕು, ಅವಶ್ಯವಿದ್ದರೆ ಅಪ್ರಿಯವನ್ನಾದರೂ ಮಾತನಾಡಬೇಕು; ಆದರೆ ಯಾರ ಅಮರ್ಯಾದೆಯನ್ನೂ ಮಾಡದೆ ಮಾತಾಡಬೇಕು. ಔಚಿತ್ಯ ಹಾಗು ಸದಭಿರುಚಿಗಳ ಯೋಗ್ಯ ಮರ್ಯಾದೆಯನ್ನು ತಿಳಿದು ಮಾತಾಡಬೇಕು; ಇದನ್ನೇ ಪ್ರತಿಯೊಬ್ಬನು ಮೊದಲು ಕಲಿಯಬೇಕು. ಅದೇ ಮೂಲ ಭೂತ ಕರ್ತವ್ಯವು. ನಮ್ಮ ದಿವಾಣ ಸಾಹೇಬರು ನನ್ನಿಂದ ನಾಲ್ಕು ಮೊಳ ದೂರದಿಂದ ಮಾತಾಡುತ್ತಿದ್ದರೂ, ಮೋರೆಗೆ ಧೋತರದ ಸೆರಗು ಹಿಡಿದುಕೊಂಡು ಮಾತನಾಡುತ್ತಿದ್ದರೆಂಬುದು ನಿನಗೆ ಗೊತ್ತಿಲ್ಲವೇ?

ಮ:—ಆದರೆ ಅವರು ಹಾಗೆ ಮಾತಾಡುವಾಗ ಅವರ ಹೃದಯದಲ್ಲಿ ನಿಮ್ಮ ಬಗ್ಗೆ ವಿಷವು ಎಷ್ಟು ಕುದಿಯುತ್ತಿತ್ತೆಂಬುದೂ ನಿಮಗೆ ಗೊತ್ತಿಲ್ಲವೆ!

ಜೋ:—ಗೊತ್ತಿದೆ. ಅಂತೆಯೇ ನಾನನ್ನುವದೇನಂದರೆ, ಮನಸ್ಸಿನಲ್ಲಿ ದ್ವೇಷವಿರಕೂಡದು; ಮತ್ತು ಉಗುಳು ಸಿಡಿಯಬಾರದೆಂಬ ಮಿಷದಿಂದ ಬಾಯಿಗೆ ಸೆರಗು ಹಿಡಿದು ಮರ್ಯಾದೆ ಕಾಯುವ ವೇಷವನ್ನು ಯಾರೂ ಹಾಕಬಾರದು! ಪ್ರಜೆಗಳು ನನ್ನೆದುರಿಗೆ ಬಾಯಿಬಿಚ್ಚಿ ಯಾವುದನ್ನು ಕೇಳಲಾರರೋ, ಅವರಿಗೆ ನಾನದನ್ನು ಎಂದಿಗೂ ಕೊಡಲಾರೆನು.

ಈ ಉತ್ತರದಿಂದ ಮನೋಹರನು ಕುಂಠಿತನಾದನು; ಆದರೆ ಇಷ್ಟು ಚೇಷ್ಟೆ ಮಾಡಿದ ಬಳಿಕ ಮಹಾರಾಜರು ಆತನಿಗೆ: "ನಾನು ದರಬಾರದಲ್ಲಿ ಪ್ರಾಸ್ತಾವಿಕ ಭಾಷಣ ಮಾಡಿ ಹೊರಟು ಹೋಗುವೆನು; ಆ ಮೇಲೆ ನಿಮ್ಮ ಸಭೆಯನ್ನು ನೀವೇ ಸಾಗಿಸಿರಿ" ಎಂದು ಆಶ್ವಾಸನೆ ಕೊಟ್ಟರು.

ಗೊತ್ತಾದ ಮೇರೆಗೆ ಸಭೆಯು ಕೂಡಿತು. ದೊಡ್ಡ ದರ್ಬಾರ ಹಾಲಿನಲ್ಲೇ ಎಲ್ಲರ ಆಸನಗಳು ಮಂಡಿಸಿದ್ದವು. ಮಹಾರಾಜರ ಸಲುವಾಗಿ ಸ್ವತಂತ್ರ ಗಾದಿ-ತಕ್ಕೆ-ಲೋಡುಗಳಿರಿಸಲ್ಪಟ್ಟಿದ್ದವು. ವಹಿವಾಟಿಗೆ ವಿರುದ್ಧವಾಗಿ ಮಹಾರಾಜರ ಎಡಕ್ಕೆ ದರಬಾರದ ಮುಖ್ಯ ಮುಖ್ಯ ಅಧಿಕಾರಿಗಳೂ, ತೈನಾತದಾರರೂ, ನಾಕರರೂ, ಸನದೀ ವಕೀಲರೂ ಕುಳಿತಿದ್ದರು; ಮತ್ತು ಬಲಗಡೆಗೆ ಪ್ರಜೆಗಳ ಸಭೆಯಲ್ಲಿ ಆರಿಸಲ್ಪಟ್ಟ ಪ್ರತಿನಿಧಿಗಳು ಕುಳಿತಿದ್ದರು. ವಹಿವಾಟಿಗೆ ವಿರುದ್ಧವಾದ ಈ ತಿರುವು-ಮುರುವುಗಳು ಮಹಾರಾಜರ ಆಜ್ಞೆಯ ಮೇರೆಗೆ ಬೇಕಂತ ಮಾಡಲಾಗಿದ್ದವು. ಪ್ರತಿನಿಧಿಗಳ ಸಮೂಹದಲ್ಲಿ ಪ್ರಮುಖ್ಯ ಸ್ಥಳದಲ್ಲಿ ಪಟ್ಟಣಶೆಟ್ಟಿಯು ಕುಳಿತಿದ್ದು, ಆತನ ಬಳಿಯಲ್ಲೇ ಆದರೆ ಸ್ವತಂತ್ರವಾದ ಸ್ಥಳದಲ್ಲಿ ವಿಮಲೆಯ ಆಸನವು ಮಂಡಿಸಲ್ಪಟ್ಟಿತ್ತು. ಆ ಸಭೆಯಲ್ಲಿ ಬೇರೆ ಯಾವ ಮಹಿಳೆಯರೂ ಇರಲಿಲ್ಲ. ಪ್ರಭಾಕರನನ್ನೂ ಪ್ರಜಾಪ್ರತಿನಿಧಿಯೆಂದು ಜನರು ಆರಿಸಿದ್ದರು; ಆದರೆ ಆತನು ದರಬಾರದ

ಕಾಲಕ್ಕೆ ಮಾವಿನ ತೋಪಿನ ಬಳಿಯ ಗರಡೀ ಮನೆಯಲ್ಲಿ ತನ್ನ ಜೊತೆಗಾರರೊಡನೆ ಹಾಸ್ಯ-ವಿನೋದ ಮಾಡುತ್ತ, ಕೆಮ್ಮಣ್ಣು ಹತ್ತಿದ್ದ ಒಬ್ಬರೊಬ್ಬರ ಬೆನ್ನುಗಳನ್ನು ತಿಕ್ಕುತ್ತ ಕುಳಿತಿದ್ದನು. "ಅಣ್ಣಾ, ಸಭೆಗೆ ಬರುತ್ತೀಯೇನು?" ಎಂದು ವಿಮಲೆಯು ಮನೆಯಿಂದ ಹೊರಡುವಾಗ ಆತನನ್ನು ಕೇಳಲು, "ಆ ಸಭೆ-ಗಿಭೆಯ ಕೆಲಸವನ್ನೆಲ್ಲ ನಿನ್ನದು ನೀನೇ ನೋಡಿಕೋ. ನಾನೇನು, ಹೇಳಿ ಕೇಳಿ ಹುಂಬನು! ಆ ಸಭೆಯಲ್ಲೇನು ಮಾತಾಡಬೇಕೆಂಬದು ನನಗೆ ಹೇಗೆ ತಿಳಿಯುವದಿಲ್ಲವೋ, ಅದರಂತೆಯೇ ಸಭೆಯಲ್ಲಿ ಮಾತನಾಡದೆ ಸುಮ್ಮನೆ ಹೇಗೆ ಕೂಡ್ರಬೇಕೆಂಬದೂ ನನಗೆ ತಿಳಿಯುವದಿಲ್ಲ. ನಮ್ಮ ಬಜರಂಗಬಲಿಯ ಸೇವೆಯೇ ನಮ್ಮ ಸಭೆಯು; ಮತ್ತು ಅದೇ ನಮ್ಮ ಸ್ವರಾಜ್ಯವು. ಯಾರಾದರೂ ರಾಜ್ಯ ಕೊಟ್ಟರೂ ನನಗದು ಬೇಡ. ನಾನು ಪ್ರಜೆಗಳ ಸಂಬಳಿಲ್ಲದ ಕೊತವಾಲನಾಗಲಿಚ್ಛಿಸುತ್ತೇನೆ. ರಾಜನ ಸಂಬಳದ ಕೊತವಾಲನಿಂದ ಯಾವ ಅನ್ಯಾಯಗಳ ಪ್ರತೀಕಾರವಾಗುವದಿಲ್ಲವೋ, ಅದರ ಪ್ರತೀಕಾರವೇ ನನ್ನ ಆಯುಷ್ಯದ ಇತಿಕರ್ತವ್ಯವೆಂದು ನಾನು ಗೊತ್ತು ಮಾಡಿಕೊಂಡಿರುತ್ತೇನೆ. ಅದನ್ನು ನಾನೂ ನನ್ನ ಜೊತೆಗಾರರೂ ಕಡೆತನಕ ಮಾಡುತ್ತಲಿರುವೆವು! ನೀನು ಸಭೆಗೆ ಹೋಗು; ಹಾಗು ಪ್ರಜೆಗಳ ಯಾವ ವಕೀಲಿಯನ್ನು ಮಾಡುವದಿದೆಯೋ, ಮಾಡು! ಹೊಸ ಆಡಳಿತದಲ್ಲಿ ನನ್ನ ಕೊತವಾಲಿಯು ಅವಶ್ಯಕತೆಯೆನಿಸದಿದ್ದರೆ, ನನಗೆ ದೇವರೇ ಒಲಿದನೆನ್ನಬೇಕು."

ಸಭೆಯ ಕೆಲಸವನ್ನು ಪ್ರಾರಂಭಿಸುವಾಗ ಮಹಾರಾಜರು ಎದ್ದು ನಿಂತು ಈ ಕೆಳಗಿನ ಭಾಷಣವನ್ನು ಮಾಡಿದರು; ಬರೆಯಿಸಿ ತರಿಸಿ ಓದಲಿಲ್ಲ. ಅವರು: "ಸಜ್ಜನರಾದ ಪ್ರಜೆಗಳೇ! ನನ್ನ ಅಪೂರ್ಣ ಅಧಿಕಾರ ಸ್ವೀಕಾರದ ಸಮಾರಂಭವು ಈ ಮೊದಲಾದದ್ದನ್ನು ನೀವು ನೋಡಿರುತ್ತೀರಿ. ಇಂದು ನನ್ನ ಸಂಪೂರ್ಣ ಅಧಿಕಾರ ವಹಿಸುವ ಮುಖತ್ಯಾರಿಯ ಸಮಾರಂಭವಿದೆಯೆಂದೇ ನಾನು ತಿಳಿಯುತ್ತೇನೆ; ಆದರೆ ನಾನು ಸಂಪೂರ್ಣ ಅಧಿಕಾರ ವಹಿಸುವದೆಂದರೆ, ಸಂಸ್ಥಾನದ ಪ್ರಜೆಗಳಿಗೆ ಸ್ವರಾಜ್ಯದಾನಮಾಡುವದು ಎಂಬ ಸಿದ್ಧತೆಯನ್ನು ಮನಸ್ಸಿನಲ್ಲಿ ಮಾಡಿಯೇ ನಾನು ಈ ಸಭೆಯನ್ನು ಕೂಡಿಸಿರುತ್ತೇನೆ. ನೀವು ನಿಮಗೆ ಯೋಗ್ಯವೆನಿಸಿದ್ದನ್ನು ನನ್ನಲ್ಲಿ ಕೇಳಿಕೊಳ್ಳಬೇಕು; ಮತ್ತು ನನಗೆ ಯೋಗ್ಯವೆನಿಸಿದ್ದನ್ನು ನಾನು ನಿಮಗೆ ಕೊಡಬೇಕು ಹೀಗೆ ಅಧಿಕಾರ ನಿರ್ದೇಶಗೊಳಿಸಿದರೂ, ಆ ಕೇಳುವ ಕೊಡುವ ಕೆಲಸಗಳಲ್ಲಿ ವಿಶೇಷ ಹೆಚ್ಚು ಕಡಿಮೆಯಾಗಬಾರದೆಂದು ನನ್ನ ಇಚ್ಛೆಯಿದೆ. ನನ್ನ ಪ್ರಜೆಗಳ ಜಾಣತನದ ಬಗ್ಗೆಯೂ ಸೌಜನ್ಯದ ಬಗ್ಗೆಯೂ ನನ್ನ ನಂಬಿಗೆಯಿದೆ."

ಇಷ್ಟು ಮಾತನಾಡಿ ಮಹಾರಾಜರು ಸಭಾಮಂಟಪದೊಳಗಿಂದ ಹೊರಟು ಹೋದರು; ಬಳಿಕ ಚರ್ಚೆಗೆ ಪ್ರಾರಂಭವಾಯಿತು. ಎಲ್ಲರೂ ಬಹುಮತದಿಂದ

ವಿಮಲೆಯನ್ನೇ ಆ ಸಭೆಯ ಅಧ್ಯಕ್ಷಳನ್ನಾಗಿ ಆರಿಸಿದರು. ಸ್ವರಾಜ್ಯವು ಬೇಕು ಅಂದರೇನು? ಹಾಗು ಹೇಗೆ ಬೇಕು? ಇದನ್ನು ಹೇಳುವ ಮೊದಲನೇ ಮರ್ಯಾದೆಯು ಪಟ್ಟಣಶೆಟ್ಟಿಗೆ ಸಹಜವಾಗಿಯೇ ಲಭಿಸಿತು. ಆಗ ಆತನು "ಈಗಿರುವುದು ನಮ್ಮ ರಾಜ್ಯವೇ ಅಲ್ಲವೇನು? ಸುಖ-ಸಮಾಧಾನಗಳಿಂದ ಪ್ರತಿಯೊಬ್ಬನು ತಂ-ತಮ್ಮ ಕಸುಬುಗಳನ್ನು ಮಾಡಬೇಕು; ಮತ್ತು ಮಹಾರಾಜರಿಗೆ ದೀರ್ಘಾಯುಷ್ಯ ಕೊಡಬೇಕೆಂದು ದೇವರನ್ನು ಪ್ರಾರ್ಥಿಸಬೇಕು; ಇದರ ಹೊರತು ಇನ್ನೇನಿದೆ? ದಿವಾಣಸಾಹೇಬರ ಕಾಲಕ್ಕೆ ಹೇರಿರುವ ಅಂಗಡಿಯ ಕಂದಾಯವನ್ನು ತೆಗೆಯಬೇಕು; ಅಂಗಡಿಕಾರರು ತಮ್ಮ ಅಂಗಡಿಗಳ ಮುಂದೆ ರಾಡುಗಳನ್ನಿಳಿಸಿ ಮಾಲು ಹಚ್ಚುವರು; ಹಾಗು ಅಂಗಡಿಯೊಳಗೆ ಗದ್ದಲ ಕೂಡಿತೆಂದರೆ ಆ ಹೊರಗಿನ ರಾಡುಗಳಲ್ಲಿ ಹಮಾಲರಿಗೆ ವಿಶ್ರಮಿಸಲಿಕ್ಕೆ ತುಸ ಅನುವಾಗುತ್ತದೆ! ಆ ರಾಡುಗಳನ್ನು ನಿಲ್ಲಿಸಬಾರದೆಂದು ಆಗಿರುವ ಹುಕುಮು ರದ್ದಾಗಬೇಕು. ಅದರಂತೆ ನಮ್ಮಂತಹ ನಾಲ್ಕಾರು ಜನರೇ ಬೆಳ್ಳಿ-ಬಂಗಾರಗಳ ವ್ಯಾಪಾರ ಮಾಡುವವರು. ಅದರಿಂದ ಪರಸ್ಪರವಾಗಿ ಊರು ಸಿರಿವಂತಿಕೆಯನ್ನು ಹೊಂದುತ್ತದೆ. ಅದರಿಂದ ಈ ಮಾಲಿನ ಮೇಲಿನ ಜಕಾತಿಯನ್ನು ತೆಗೆದುಬಿಡಬೇಕು; ಮತ್ತು ಅದನ್ನು ಲೆಕ್ಕದಿಂದ ವಸೂಲ ಮಾಡುವದೆಂದರೆ, ಜಡವೆನಿಸುವದಿಲ್ಲವೆ? ಮತ್ತೊಂದೇನಂ-ದರೆ, ಕೋರ್ಟುಗಳಲ್ಲಿಯ ದರಖಾಸ್ತು ಹುಕುಮು ನಾಮೆಗಳ ಅಮಲ್‌ಬಜಾವಣೆಯು ತೀವ್ರವಾಗಬೇಕು. ಇದೇ ಸ್ವರಾಜ್ಯವು. ಇದರ ಹೊರತು ಸ್ವರಾಜ್ಯವೆಂದರೆ, ಮತ್ತೇನಿದೆ?"

ಕೂಡಲೆ ಕಾಮ್ರೇಡ್ ಡಂಖಿಯು ಉರಿಮೋರೆಯಿಂದ ಎದ್ದು ನಿಂತು, ತನ್ನ ಜೇಬಿನೊಳಗಿನ ಕೈಗಳನ್ನು ಹೊರಹೊರಡಿಸಿ, ಕೈಗಳಿಂದ ಅಭಿನಯ ಮಾ-ಡುತ್ತ ಒಳ್ಳೇ ಗಟ್ಟಿಯಾಗಿ-ಮೂರನೇ ಸಪ್ತಕದಲ್ಲಿ-ಮಾತಾಡಲಿಕ್ಕೆ ಪ್ರಾರಂಭಿಸಿದನು: "ಇದೆಂಥ ದರ್ಬಾರು? ಹಾಗು ಇದೆಂಥ ಸಭೆಯು? ಸ್ವರಾಜ್ಯದ ಚರ್ಚೆಯು ಸಂಬಂಧದ ಕೇವಲ ಹುಡುಗಾಟಿಕೆಯೇ ಆಗಿದೆ! ಬಡ, ದರಿದ್ರ, ಕೈಲಾಗದ ಪ್ರಜೆಗಳ ಹೃದಯದೊಳಗಿನ ರಕ್ತಪ್ರವಾಹದಿಂದ ಎರಕೊಂಡ ಈ ಪಾಪಮಯ ಭೂಮಿಯಿಂದ, ಸಿರಿವಂತಿಕೆಯ-ಬಂಡವಲುಶಾಹಿಯ ಈ ಮೂಲ ಪೀಠದ ಅಂದರೆ ರಾಜಧಾನಿಯ ಹದ್ದಿನೊಳಗಿಂದ ಮೊದಲು ಹೊರಬೀಳಿರಿ; ಮತ್ತು ಸ್ವರಾಜ್ಯದ ಚರ್ಚೆ ಮಾಡಬೇಕಾಗಿದ್ದರೆ, ಯಾವ ಹೊಲಗಳಲ್ಲಿ ಮಳೆಯ ನೀರಿಗೆ ಸರಿಯಾಗಿ ರೈತರ ಮೈಯೊಳಗಿನ ಬೆವರು ಹಾಗು ಕಣ್ಣೊಳಗಿನ ನೀರು ಬಿದ್ದು ನೆಲವು ತೊಯ್ದಿದೆಯೋ ಅಲ್ಲಿ ಹೋಗಿ ಕೂಡ್ರಿರಿ; ಮತ್ತು ಬಾಯಿ ಬಿಚ್ಚಿರಿ. ಅಂದರೆ ಆ ಅಭಾಗ್ಯ ಭೂಮಿಯೊಳಗಿಂದ ಹೊರಡುವ ಉಷ್ಣ ಉಗಿಯಿಂದ ನಿಮ್ಮ ಬಾಯೊಳಗಿನ ಸ್ವರಾಜ್ಯದ

ನಿಜವಾದ ಅರ್ಥವು ಹೊರಹೊರಟೀತು. ರೈತರ ಯಾವ ರಂಟೆ-ಕುಂಟಿಗಳು ಬಂಜೆರೆಯಾದ ಬಣ ಭೂಮಿಯೊಳಗೆ ಗೆಯ್ದು ಸಾವುಕಾರ-ಇನಾಮುದಾರರುಗಳ ಸಲುವಾಗಿ ಮೇವಿನ ದಂಟುಗಳನ್ನು ಹುಟ್ಟಿಸುವವೋ, ಆ ರಂಟೆ-ಕುಂಟೆಗಳು ಈ ಪಟ್ಟಣಶೆಟ್ಟಿಯ ಮನೆ-ಮಹಾಲುಗಳ ಮೇಲೂ ಮಹಾರಾಜರ ಸಿಂಹಾಸನದ ಸ್ಥಳದ ಮೇಲೂ ಗೆಯ್ಯಹತ್ತಿದಾಗಲೇ ನಿಜವಾದ ಸ್ವರಾಜ್ಯವು ಲಭಿಸೀತು. ಯಾವ ಅಜ್ಜ-ಮುತ್ತಜ್ಜನು ರಾಜ್ಯವನ್ನು ಗಳಿಸಿದನೋ, ಅದನ್ನು ವಂಶಪರಂಪರವಾಗಿ ಅವರ ಮುಂಗ್ಗಲುಗೇಡಿ ವಂಶಜರು ಬರಿಯ ಖುಷಿ-ಮೋಜಿನಲ್ಲಿದ್ದು, ಮನುಷ್ಯತ್ವದ ಕೊಲೆಯಾಗುವಂತೆ ಪ್ರಜೆಗಳನ್ನು ಉಂಸಿಕೊಳ್ಳುತ್ತ ಸುಖದಿಂದ ಉಪಭೋಗಿಸುತ್ತಿರಬೇಕೇ? ನಿಮ್ಮ ರಾಜಭಕ್ತಿಯೆಂದರೆ, ಅದು ಕೇವಲ ನಗ್ನಸ್ವಾರ್ಥವಾಗಿರುತ್ತದೆ! ನಿಮ್ಮ ಕಣ್ಣುಗಳಲ್ಲಿ ರಾಜ್ಯಪದದ ಮೇಲೆ ವಿಲಾಸದಿಂದ ವಿಹರಿಸುತ್ತಿರುವ ಒಂದು ವ್ಯಕ್ತಿಯ ಗೊಂಬೆಯು ಕಾಣಿಯುತ್ತದೆ; ಆದರೆ ಬೇರೆ ಕಡೆಯ ಹೊಟ್ಟೆಗಿಲ್ಲದೆ ಸಾಯುವ, ಸೊರಸೊರಗಿ ಸಾಯುಲಾಗಿದ್ದ, ಹಕ್ಕೆಯೊಳಗಿನ ದನಗಳ ಡಾವಣಿಗೆ ತಮ್ಮ ಗೋಣುಗಳನ್ನು ಪೋಣಿಸಿಕೊಳ್ಳುವ ಸಹಸ್ರಾವಧಿ ಜನರ ಕಡೆಗೆ ನೋಡುವದೆಂದರೆ, ನಿಮ್ಮ ಕಣ್ಣಗುಡ್ಡೆಗಳೇ ಒಡೆದು ಹೋಗುತ್ತವೆ! ರಾಜನೊಡನೆ ರಾಜನಿಷ್ಠ ಭಾಟ-ಹೊಗಳುಬಂಟರಿಗೂ ಕಂದ್ಲಿ-ಕೊಡ್ಲಿಗಳಿಗೂ ಗಂಟುಬಿದ್ದಾಗಲೆ ನಿಜವಾದ ಸ್ವರಾಜ್ಯವು ಸಿಕ್ಕೀತು!'' ಇಷ್ಟು ಮಾತಾಡುವಷ್ಟರಲ್ಲಿ ದನಿ ಕುಗ್ಗಿತು; ಹಾಗು ಕೆಮ್ಮು ನಿಲ್ಲಲೊಲ್ಲದೆಂದು ಕಾಮ್ರೇಡ್ ಡಂಖಿಯು ತನ್ನ ಬಕ್ಕಣದೊಳಗಿನ ಸಿಗರೇಟುಗಳ ಬೆಳ್ಳಿಯ ಪೆಟ್ಟಿಗೆಯನ್ನು ತೆಗೆದು, ಅದರೊಳಗಿನದೊಂದು ಸಿಗರೇಟು ಹಿರಿದು, ಕಡ್ಡಿ ಕೆರೆದು ಅದನ್ನು ನಿಂತಲ್ಲಿಯೇ ಹೊತ್ತಿಸಿ ಬಿಟ್ಟನು.

ಆತನ ಆ ಅದ್ಭುತ ತಾಂಡವ ನೃತ್ಯದಿಂದ ಎಲ್ಲ ಸಭೆಯೂ ಗದಗುಟ್ಟಿ ನಡುಗಿತು. ಪ್ರತಿಯೊಬ್ಬರು ಎರಡನೆಯವರ ಮೋರೆಯ ಕಡೆಗೆ ನೋಡತೊಡಗಿದರು. ದಕ್ಷಯಜ್ಞವನ್ನು ವಿಧ್ವಂಸಗೊಳಿಸಿದ ವೀರಭದ್ರನು ಇಂದು ಜೋಧ್ಯಪುರದಲ್ಲಿಯೇ ಅವತರಿಸಿದನೆಂದು ಪುರಾಣಗಳನ್ನು ಕೇಳಿದ್ದ ಭಾವಿಕ ಜನರಿಗನಿಸಿತು. ಕೆಲವರು ತುಟಿ-ನಾಲಿಗೆಗಳನ್ನು ಕಚ್ಚಿದರು. ಕೆಲವರ ಮುಷ್ಟಿಗಳು ತಮ್ಮಷ್ಟಕ್ಕೆ ತಾವೇ ಜೇತರಿಸಿದವು! ಅಸ್ಫುಟ ಶಬ್ದಗಳ ಗಲಿಬಿಲಿಯುಂಟಾಯಿತು; ಆದರೆ ಅಷ್ಟರಲ್ಲಿ ವಿಮಲೆಯು ತಟ್ಟನೆ ಎದ್ದು ನಿಂತಳು; ಹಾಗು ಶಾಂತ-ಗಂಭೀರ ದನಿಯಿಂದ:—''ಈಗ ಮಾತನಾಡಿದ ಗೃಹಸ್ಥರು ಮೊದಲು ತಮ್ಮ ಸಿಗರೇಟನ್ನು ನಂದಿಸಿ ಜೇಬಿನಲ್ಲಿಟ್ಟುಕೊಳ್ಳಬೇಕು; ಅಂದರೇ ಸಭೆಯ ಕೆಲಸವು ಮುಂದುವರಿಯಲಾದೀತು.''

ಆದರೆ ಬರಿಯ ಭಾಷಣಗಳಲ್ಲಿಯೇ ಈ ಬಗೆಯಾಗಿ ಕಾಲಹರಣವಾಗಬಾರ

ದೆಂದು ಮನೋಹರನು ಮುಂದೆ ಒಂದು ಮಹಾರಾಜರ ಪತಿಯಿಂದ ಒಂದೊಂದೇ ಸೂಚನೆಯನ್ನು ಸಭೆಯವರ ಅನುಮತಿಗಾಗಿ ಇಡಹತ್ತಿದನು:

ಮ:—ಮಹಾರಾಜರ ಅಭಿಪ್ರಾಯವೇನಂದರೆ, "ನಾನು ಬೇಗನೆ ನದೀತೀರದ ಮಾವಿನ ತೋಪಿನೊಳಗಿನ ದಿನ್ನೆಯ ಮೇಲೆ ಕಟ್ಟಲ್ಪಟ್ಟ ಗುಡಿಸಲದಂತಹ ಸುಂದರವಾದ ಮನೆಗೆ ಹೋಗಿ ವಾಸಿಸತಕ್ಕವನಿದ್ದೇನೆ; ಅದರಿಂದ ಪ್ರಜೆಗಳು ನನ್ನೀ ಅರಮನೆಯನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಬೇಕು; ಮತ್ತು ಅದನ್ನು ಬೇಕಾದ್ದಕ್ಕೆ ಉಪಯೋಗಿಸಬೇಕು."

ಕಾ. ಡಂಖಿ:—ಅದನ್ನು ಕೆಡಹಿ ನೆಲಸಮ ಮಾಡಿದಾಗಲೇ ಬಡ ಜನರ ಕಣ್ಣಿಗೆ ಸಮಾಧಾನವೆನಿಸೀತು. ಅದರ ಮೇಲೆ ಕತ್ತೆಯನ್ನು ಹೂಡಿದ ರೆಂಟೆಯನ್ನು ಹೊಡಿಸಬೇಕು!

ಭಾನು:-ಆ ಬಗೆಯ ರೆಂಟೆಹೊಡೆಯುವ ಪ್ರಸಂಗ ಬಂದಾಗ ಅದನ್ನು ತಾವೇ ಹೊಡೆಯುವಿರಂತೆ; ಅಂದರೆ ಅದನ್ನೆಳೆಯುವ ಆ ಪ್ರಾಣಿಗಳು ತಮ್ಮ ಸಹೋದರನೇ ತಮ್ಮನ್ನು ಹೊಡಿರುವನೆಂದು ಸಮಾಧಾನಗೊಂಡಾವು. ಅದುವರೆಗೆ ಅರಮನೆಯು ಇದ್ದ ಹಾಗೆಯೇ ಇರಲಿ; ಮತ್ತು ಅದಕ್ಕೆ ಪ್ರತಿವರ್ಷ ಸುಣ್ಣ-ಬಣ್ಣಗಳನ್ನು ಈಗಿನಂತೆಯೇ ಹಚ್ಚಿಸಿ ದುರಸ್ತಿಡಬೇಕು. 'ರಾಜನ ತ್ಯಾಗವೇ ಪ್ರಜೆಗಳ ಭೋಗವು' ಈ ನ್ಯಾಯದಿಂದ ಅರಮನೆಯು ಪ್ರಜೆಗಳ ಉಪಯೋಗಕ್ಕೆ ಇದ್ದರೆ ತೀರಿತು; ಆ ಉಪಭೋಗವೆಂದರೆ, ಅರಮನೆಯಲ್ಲಿ ಹೊಸ-ಹಳೇ ಪೀಳಿಗೆಯ ದೊಡ್ಡಸ್ತಿಕೆಯ ಯಾವ ಹಳೇ ಗುರ್ತುಗಳಿರುವವೋ ಅಥವಾ ಯಾವುಗಳನ್ನು ಹೊಸದಾಗಿ ಸಿದ್ಧಗೊಳಿಸಲಾದೀತೋ ಅವುಗಳ ಸಂಗ್ರಹಾಲಯವನ್ನು ಮಾಡಬೇಕು; ಮತ್ತು ಮಹಾರಾಜರು ವಾರದಲ್ಲೊಂದು ದಿನ ದರ್ಬಾರದ ಹಾಲಿನಲ್ಲಿ ಪ್ರಜಾಪ್ರತಿನಿಧಿಗಳೊಡನೆ ಕುಳಿತು, ಪ್ರಜೆಗಳ ಸುಖ-ದುಃಖಗಳನ್ನು ಕೇಳಿಕೊಳ್ಳುತ್ತಿರಬೇಕು.

ಇಷ್ಟಾದ ಬಳಿಕ ಆ ಸಭೆಯ ಕೆಲಸವು ಮಧ್ಯಾಹ್ನದ ಎರಡು ಗಂಟೆಯವರೆಗೆ ನಿಲ್ಲಿಸಲಾಯಿತು.

---

## ೨೪ ಸ್ವರಾಜ್ಯದಾನದ ನಜರಾಣೆಯು.

ಮಧ್ಯಾಹ್ನದಲ್ಲಿ ಎರಡು ಗಂಟೆಗೆ ಮತ್ತೆ ದರಬಾರು ಕೂಡಿ ಸಂಸ್ಥಾನ ಸುಧಾರಣೆಯ ಚರ್ಚೆಗೆ ಪ್ರಾರಂಭವಾಯಿತು. ದರಬಾರದಲ್ಲಿ ಮಹಾರಾಜರಿರದ್ದರಿಂದ ಪ್ರಜಾಪ್ರತಿನಿಧಿಗಳ ಸಂಖ್ಯೆಯು ತೀರ ಕಡಿಮೆಯಾಗಿತ್ತು; ಆದರೂ ಕಾಗದದ ಮೇಲೆ ಬರೆದಿದ್ದ ಕಾರ್ಯಕ್ರಮವನ್ನು ಪೂರ್ತಿಗೊಳಿಸಲೇಬೇಕಾಗಿತ್ತು. ಅಂತೆಯೇ ಮನೋಹರನು ಕೈಯಲ್ಲಿ ಟಿಪ್ಪಣೆಯ ಕಾಗದವನ್ನು ಹಿಡಿದು, ವಿಮ

ಲೆಯ ಅನುಜ್ಞೆಯು ಮೋರೆಗೆ ಮಾತಾಡಹತ್ತಿದನು: "ಮಹಾರಾಜರ ಅಂಬೋಣವು ಹೀಗೆ ಇದೆ. ಅರಮನೆಯೊಳಗಿನ ಎಲ್ಲ ಬೆಲೆಯುಳ್ಳ ಮುತ್ತು-ರತ್ನ-ಬಂಗಾರದ ಒಡವೆಗಳು, ರಾಜಭೋಗಕ್ಕೆ ತಕ್ಕವಾದ ವಸ್ತುಗಳು ಇವುಗಳನ್ನು ಜಾಹೀರ ಲಿಲಾವಿನಲ್ಲಿ ಮಾರಿ, ಬಂದ ಹಣವನ್ನು ಬಡ್ಡಿಗೆ ಹಚ್ಚಿ, ಆ ಬಡ್ಡಿಯನ್ನು ಸ್ತ್ರೀಯರ ಶಿಕ್ಷಣಗೃಹ, ಆರೋಗ್ಯಗೃಹ ಮತ್ತು ಪ್ರಸೂತಿಗೃಹಗಳಿಗೆ ಉಪಯೋಗಿಸಬೇಕು."

ಪಟ್ಟಣಶೆಟ್ಟಿ:— ಆ ಹರಳು-ಕಲ್ಲುಗಳನ್ನು ಲಿಲಾವಿನಲ್ಲಿ ಮಾರುವದಾದರೆ ಎರಡು ಶರ್ತುಗಳನ್ನಿಡಬೇಕು. ಸಂಸ್ಥಾನದ ಹೊರಗಿನ ಯಾವನಿಗೂ ಲಿಲಾವಿನಲ್ಲಿ ಕೇಳಲಿಕ್ಕೆ ಅಪ್ಪಣೆಯಿರಕೂಡದು; ಮತ್ತು ಸಂಸ್ಥಾನದೊಳಗಿನ ಯಾವ ಗಿರಾಕಿಯಿಂದ ತೀರ ಹೆಚ್ಚು ಬೆಲೆ ಬಂದೀತೋ ಅದೇ ಮಂಜೂರಾಗಬೇಕು. ಲಿಲಾವಿನ ಮೂರು ಸವಾಲುಗಳೂ ಒಂದೇ ಬೈಠಕಿನಲ್ಲಾಗಬೇಕು.

ಭಾನು:—ಈ ಸೂಚನೆಗೆ ನನ್ನ ಅಡ್ಡಿಯಿದೆ. ಸಂಸ್ಥಾನದ ಹೊರಗಿನವರನ್ನು ಲಿಲಾವಿನಲ್ಲಿ ಕೇಳಗೊಡಲೇಬೇಕು; ಅಂದರೆ ಬೆಲೆ ಹೆಚ್ಚೀತು. ಅದಿಲ್ಲದಿದ್ದರೆ ಅದೆಲ್ಲ ಜಿಂದಿಗೆಯು ಅಲ್ಪಬೆಲೆಯಲ್ಲೇ ಪಟ್ಟಣಶೆಟ್ಟರ ವಶವಾದೀತು.

ಡಂಖಿ:—ಹರಳು-ಕಲ್ಲುಗಳ ಲಿಲಾವು ಮಾಡಿ, ಆ ಹಣದಲ್ಲಿ ಸ್ತ್ರೀಯರ ಸಂಬಂಧದ ಬೇರೆ ಬೇರೆ ಗೃಹಗಳನ್ನು ಸ್ಥಾಪಿಸಿ ನಡಿಸಬೇಕು; ಆದರೆ ಅವುಗಳಲ್ಲಿ ಶ್ರೀಮಂತರ ಹಾಗು ಮಧ್ಯಮ ಸ್ಥಿತಿಯವರ ಸ್ತ್ರೀಯರಿಗೆ ಮನಾಯಿಯಾಗಬೇಕು.

ಭಾನು:—ಆ ಜಿಂದಿಗೆಯನ್ನು ಮಾರಿ ಅದರ ವ್ಯವಸ್ಥೆಯನ್ನು ಮಹಾರಾಜರು ಸೂಚಿಸಿರುವಂತೆ ಮಾಡಬೇಕು; ಆದರೆ ಶ್ರೀಮಂತ ಹಾಗು ಮಧ್ಯಮ ಸ್ಥಿತಿಯ ಹೆಂಗಸರಿಗೆ ಮನಾಯಿ ಮಾಡದೆ, ಅದರೊಳಗಿನ ಸ್ಥಳಗಳನ್ನು ಮೊದಲು ಬಡವರಿಗೆ ಕೊಟ್ಟು, ಉಳಿದ ಸ್ಥಳಗಳನ್ನು ಮಿಕ್ಕವರಿಗೆ ಕೊಡಬೇಕು.

ಮ:-"ಮಹಾರಾಜರ ಸೂಚನೆಯೇನಂದರೆ, ಅರಮನೆಯೊಳಗಿನ ದೇವರ ದರ್ಶನವು ಸಭಾಮಂಟಪದೊಳಗೆ ತುಸ ಅಂತರದ ಮೇಲಿಂದ ಎಲ್ಲ ಜನರಿಗೂ ಸರಿಸಮಾನ ಹಕ್ಕಿನಿಂದ ಆಗಬೇಕು; ಕಥೆ-ಕೀರ್ತನಗಳಲ್ಲಿಯೂ ಹೀಗೆಯೇ ಇರಬೇಕು; ಆದರೆ ಪ್ರತ್ಯಕ್ಷ ದೇವರ ಗುಡಿಯೊಳಗೆ ಅಧಿಕೃತ ಹಾಗು ಶುಚಿರ್ಭೂತ ಪೂಜಾರಿಯ ಹೊರತು ಬೇರೆ ಯಾರೂ ಪ್ರವೇಶಿಸಕೂಡದು. ದೇವರಿಗೆ ಪುಷ್ಪಾದಿ ಭೋಗಗಳನ್ನು ಪೂಜಾರಿಯ ಕೈಯಿಂದಲೇ ಅರ್ಪಿಸಬೇಕು."

ಡಂಖಿ:—ದೇವರುಗಳನ್ನೆಲ್ಲ ಕಿತ್ತೊಯ್ದು ನದಿಯಲ್ಲಿ ಚೆಲ್ಲಿಬಿಡಬೇಕು; ಹಾಗು ದೇವರ ಮನೆ-ಗುಡಿಗಳನ್ನು ನೆಲಸಮ ಮಾಡಿ, ಧರ್ಮೋಪಾಸನೆಯ

ಗುತ್ತುಕೂಡ ಅಲ್ಲಿರಗೊಡಬಾರದು. ಧರ್ಮವೆಂಬದು ಸಮಾಜಕ್ಕೆ ಕಲಂಕ ಪ್ರಾಯವಾಗಿದೆ. ಬಡವರಿಗೆ ಧರ್ಮವೇ ಅಡ್ಡ ಬರುತ್ತದೆ!

ಪಟ್ಟಣಶೆಟ್ಟಿ:—ದೇವರು, ದೇವರ ಗುಡಿ ಹಾಗು ನಿತ್ಯ-ನೈಮಿತ್ತಿಕ ಇವು ಗಳೆಲ್ಲ ಮೊದಲಿನಂತೆಯೇ ನಡೆಯಬೇಕು. ಅಸ್ಪೃಶ್ಯರ ಮೇಲಿನ ಬಹಿಷ್ಕಾರವು ಮೊದಲಿನಂತೆಯೇ ಇರಬೇಕು. ಮಹಾರಾಜರಿಂದ ಇದಾಗದಿದ್ದರೆ ನಾನು ದೇವ ಸ್ಥಾನಗಳನ್ನು ಸಂರಕ್ಷಿಸಿ, ಅವುಗಳ ಖರ್ಚು-ಕಂದಾಯಗಳನ್ನು ಸಾಗಿಸಲಿಕ್ಕೆ ಸಿದ್ಧನಿರುತ್ತೇನೆ.

ಭಾನು:—ಪಟ್ಟಣಶೆಟ್ಟಿಗಳಿಗೆ ತುಸ ತಪ್ಪು ತಿಳುವಳಿಕೆಯಾಗಿದೆ. ದೇವಸ್ಥಾ ನದ ಖರ್ಚು ಸಂಸ್ಥಾನದ ದುಡ್ಡಿನಲ್ಲಿ ಮಾಡಲಿಕ್ಕೆ ಮಹಾರಾಜರ ಅಡ್ಡಿಯಿಲ್ಲ; ಆದರೆ ಸ್ಪೃಶ್ಯಾಸ್ಪೃಶ್ಯ ಭೇದಕ್ಕೆ ಮಾತ್ರ ಅವರ ಅಡ್ಡಿಯಿದೆ.

ಮ:—ಮಹಾರಾಜರ ಮತವೇನಂದರೆ, ಸಂಸ್ಥಾನದ ರಾಜಮನೆತನದೊಳ ಗಿನ ಯಾವ ಪೂರ್ವಜರ ಶ್ರಾದ್ಧ-ಪಕ್ಷಗಳಿಗೂ ಉತ್ಸವಗಳಿಗೂ ಅಳತೆ ಮೀರಿ ಖರ್ಚು ಮಾಡಬಾರದು.

ಡಂಬಿ:—ವಿಹಿತವು! ಅತ್ಯಂತ ವಿಹಿತವು!! ಹಳೇ ಪೀಳಿಗೆಯ ಜನರು ಗಾ ರ್ದಭರಾಗಿದ್ದರು; ಯಾಕಂದರೆ ಅವರೆಲ್ಲರೂ ಬಂಡವಾಲುಶಾಹಿಯ ಉಪಾಸಕರೇ ಆಗಿದ್ದರು.

ಭಾನು:—ಅಂದ ಮೇಲೆ ಅಂಥ ಕತ್ತೆಗಳಿಂದ ಡಂಬಿಯಂತಹ ಮನು ಷ್ಯನು ಹುಟ್ಟಿ ಬರುವದು ಆಶ್ಚರ್ಯವಲ್ಲವೆ?

ವಿಮಲೆ:—ಈ ಉತ್ತರ-ಪ್ರತ್ಯುತ್ತರಗಳು ಸಭ್ಯತೆಗೆ ಒಪ್ಪತಕ್ಕವಲ್ಲ. ಮಹಾರಾಜರ ಸೂಚನೆಯು ತತ್ತ್ವತಃ ಯೋಗ್ಯವಿದೆ; ಆದರೆ ರಾಜಮನೆತನ ಹಾಗು ಪ್ರಜಾಜನ ಇವರ ಹಳೇ ಪೀಳಿಗೆಗಳಲ್ಲಿ ಯಾವ ಜನರು ಯೋಗ್ಯರೂ ಚಿರಸ್ಮರಣೀಯರೂ ಆಗಿ ಹೋದರೋ, ಅವರೆಲ್ಲರ ಸ್ಮರಣವಾಗುವದಕ್ಕೊಂದು ವರ್ಷದೊಳಗಿನ ಒಂದು ದಿನವನ್ನು ಗೊತ್ತು ಮಾಡಿ, ಅವರ ಉತ್ಸವಕ್ಕೊಂದು ಸಂಸ್ಥಾನದ ಖರ್ಚಿನ ಹಣವನ್ನು ಗೊತ್ತುಪಡಿಸಬೇಕು. ಮನುಷ್ಯಮಾತ್ರರೊಳ ಗಿನ ದೊಡ್ಡ ಗುಣವು ಎಲ್ಲಿಯೂ ಯಾವಾಗಲೂ ಉಪಾಸನೀಯವಾದದ್ದೇ. ಆ ದೊಡ್ಡ ಗುಣವು ಶ್ರೀಮಂತರಂತೆ ಬಡವರಲ್ಲಿಯೂ ಇರುತ್ತದೆಂಬದನ್ನು ಮಾತ್ರ ಲಕ್ಷ್ಯದಲ್ಲಿಡಬೇಕು. ಸಂಸ್ಥಾನ ಸಂರಕ್ಷಣದ ಕೆಲಸದಲ್ಲಿ ರಾಜಮನೆತನದ ಪುರುಷರಂತೆ ಪ್ರಜೆಗಳೊಳಗಿನ ಶೂರ, ವೀರ, ಮುತ್ಸದ್ದಿಗಳ ಉಪಯೋಗ ವೂ ಆಗಿರಲಿಕ್ಕೆಬೇಕು.

ಮ:—ಮಹಾರಾಜರು "ತಮ್ಮ ಸ್ವಂತದ ಸಂಬಳವನ್ನು ಪ್ರಜೆಗಳೇ

ಗೊತ್ತು ಪಡಿಸಿ ಕೊಡಬೇಕು. ಯಾವ ಸಂಬಳವು ಗೊತ್ತಾದೀತೋ, ಅದಕ್ಕಾಗಿ ಬೇರೆ ನೌಕರರಂತೆ ದಿನದ ಕೆಲಸದ ಎಲ್ಲ ವೇಳೆಯನ್ನು ನಾನು ಆಡಳಿತ ನಡೆಸಲಿಕ್ಕೆ ವೆಚ್ಚ ಮಾಡೇನು.''

ಪಟ್ಟಣಶೆಟ್ಟಿ:—ಮನೆಯ ಮಾಲಕನಿಗೆ ಹೇಗೆ ಸಂಬಳ ಗೊತ್ತು ಮಾಡುವದೆಂಬದು ನಮಗೆ ತಿಳಿಯುವದೇ ಇಲ್ಲ! ನಾನು ಮನೆಯಲ್ಲಿ ದಿನಾಲು ಅಟಿವಿಯ ಅನ್ನವನ್ನು ಕೂಡ ಉಣ್ಣುವದಿಲ್ಲ. ತಲೆಯ ಮೇಲಿನ ರಗಟಿಗೆ ಜರತಾರಿಯ ಸ್ಪರ್ಶವನ್ನೆಂದೂ ಆಗಗೊಟ್ಟಿರುವದಿಲ್ಲ; ಆದರೆ ನನಗೆ ಇಂತಿಷ್ಟೇ ಖರ್ಚುವಾಡೆಂದು ಅದಾರು ಅನ್ನುವವರು?

ಡಂಬಿ:—ಯಾರು ಅಂದಾರೆಯೇ? ಪ್ರಜೆಗಳಂದಾರು. ಪ್ರಜೆಗಳಲ್ಲ, ಲೋಕಶಾಹಿಯಂದೀತು. ಹಳೇ ಅನ್ಯಾಯಗಳ ಭರಪಾಯಿಯಾಗಬೇಕಾದರೆ, ಖುದ್ದ ಮಹಾರಾಜರೂ ಕೈಯಲ್ಲಿ ಸಲಿಕೆ-ಗುದ್ದಲಿಗಳನ್ನು ತಕ್ಕೊಂಡು ಕೂಲಿ ದೊರಕಿಸಲಿಕ್ಕೆ ಹೊರಹೊರಡಬೇಕು.

ಭಾನು:—ಭಲೆ! ಭಲೆ! ಎಂಥ ಬುದ್ಧಿವಂತಿಕೆಯಿದು! ಖುದ್ದ ಡಂಬಿಯವರ ಕೈ ನೋಡಿರಿ! ಆ ಕೈಗಳಿಗೆ ಸಲಿಕೆ-ಗುದ್ದಲಿಗಳವಂತೂ ಇರಲಿ, ಲೆಕ್ಕಣಿಕೆಯ ದಡ್ಡು ಕೂಡ ಬಿದ್ದಂತೆ ಕಂಡುಬರುವದಿಲ್ಲ. ಇವರ ಕೈ ನೋಡಿ, ಬಳೆತೊಡಿಸಲಿಕ್ಕೆ ಎಷ್ಟು ನಾಜೂಕಾಗಿವೆಯೆಂದಂದು ಬಳಿಗಾರನು ಮಾತ್ರ ಮೋದಗೊಂಡಾನು.

ವಿಮಲೆ:—ಈ ಶಬ್ದಗಳಾದರೂ ಅಸಭ್ಯತನದವೇ! ಮುಖ್ಯ ಪ್ರಶ್ನೆಯು ಮಹಾರಾಜರು ಕೇಳಿಕೊಳ್ಳುತ್ತಿರುವ ಸಂಬಳ ಗೊತ್ತುಮಾಡುವದಿದೆ.

ಈ ಪ್ರಶ್ನೆಯ ಬಗ್ಗೆ ಕಡೆಗೂ ಒಬ್ಬರ ಮತವು ಇನ್ನೊಬ್ಬರ ಮತಕ್ಕೆ ಕೂಡದಾಯಿತು. ಒಬ್ಬನು ಮಹಾರಾಜರಿಗೆ ಕುದುರೆಯ ೨-೩ ರಥ ಕೊಡಬೇಕೆಂದನು. ಅದಕ್ಕೆ ಕಾ. ಡಂಬಿಯ ಸ್ನೇಹಿತನೊಬ್ಬನು ಕೂಗಿ ಹೇಳಿದನೇನಂದರೆ, ''ಅದೇನೂ ಬೇಡ. ಮಹಾರಾಜರಿಗೆ ಮೋಟರನ್ನೇ ಕೊಡಬೇಕು. ಅದಿಲ್ಲದಿದ್ದರೆ ಸತ್ಯಾಗ್ರಹ ಮಾಡುವ ನಾವು ಮೋಟರನೆದುರಿಗೆ ಅಡ್ಡಬೀಳುವ ಬಗೆ ಹೇಗೆ?''

ಏನಾದರೂ ಅಂಕಿಯು ಗೊತ್ತಾಗಲಿಲ್ಲ. ಆಗ ವಿಮಲೆಯು: ಯಾರು ತಾವಾಗಿ ಅರಮನೆಯನ್ನು ತ್ಯಜಿಸಿ ಮಾವಿನ ತೋಪಿನೊಳಗಿನ ಗುಡಿಸಲವನ್ನೇ ತಮ್ಮ ವಾಸಸ್ಥಳವೆಂದು ಗೊತ್ತು ಮಾಡಿಕೊಂಡರೋ, ಯಾರು ಅರಮನೆಯ ಭಾಂಡಾರದೊಳಗಿನ ಬೆಲೆಯುಳ್ಳ ಜೇನಸುಗಳನ್ನು ಮಾರಲಿಕ್ಕೆ ತೆಗೆದರೋ, ಅವರ ಸೂಜ್ಞತನದ ಮೇಲೆಯೇ ನಾವು ಈ ಮಾತನ್ನು ಒಪ್ಪಿಸಿ ಬಿಟ್ಟರೆ, ತಮಗೆ ಯೋಗ್ಯವಾದ ಸಂಬಳವನ್ನು ಅವರೇ ಗೊತ್ತುಮಾಡಿಕೊಳ್ಳಲಿಕ್ಕಿಲ್ಲವೇ?

ಮ:—ಮಹಾರಾಜರ ಅಭಿಪ್ರಾಯವು: ''ಪ್ರಜೆಗಳು ಪರಸ್ಪರವಾಗಿಯೇ

ಯೋಗ್ಯ ರೀತಿಯಿಂದ ವರ್ತಿಸತೊಡಗಿದರೆ ಪೋಲೀಸರ ಖರ್ಚನ್ನು ಹೆಚ್ಚಾಗಿ ಉಳಿಸಬಂದೀತು.''

ಆದರೆ ಪೋಲೀಸರನ್ನು ಕಡಿಮೆ ಮಾಡಿದರೆ ತಮ್ಮ ಸಂರಕ್ಷಣವು ಹೇಗಾಗುವದೆಂಬ ಅಂಜಿಕೆಯಿಂದ ಎಲ್ಲರೂ ಗಾಬರಿಗೊಂಡು:—ಈ ಖರ್ಚನ್ನು ಸ್ವಲ್ಪವೂ ಕಡಿಮೆ ಮಾಡಬಾರದು.

ಆ ಮೇಲೆ ಪ್ರತಿಯೊಂದು ಖಾತೆಯ ಆಡಳಿತದ ಪ್ರಶ್ನೆ ಹೊರಟಿತು. ಅದಕ್ಕೆ ಭಾನುವು: ಮಹಾರಾಜರ ಉದಾರ ಧೋರಣವು ನನಗೆ ತಿಳಿಯಿತು. ಪ್ರಜೆಗಳು ಸಿದ್ಧವಾಗಿದ್ದರೆ ಅವರು ತಮ್ಮ ಇಷ್ಟೆಯ ಮೇರೆಗೆ ಪ್ರತಿಯೊಂದು ಖಾತೆಯ ಅಧಿಕಾರಿಯನ್ನು ನೇಮಿಸಿ ಅವನ ಕಡೆಯಿಂದ ಆಡಳಿತ ನಡಿಸಿಕೊಳ್ಳಬೇಕು; ಮತ್ತು ಅವನು ಯೋಗ್ಯವಿಲ್ಲೆಂದು ಕಂಡು ಬಂದಾಗ ಅವನನ್ನು ಕೆಲಸದಿಂದ ತೆಗೆದು ಬಿಡಬೇಕು. ಇದಕ್ಕಿಂತಲೂ ಹೆಚ್ಚು ಯಾರು ಯಾರಿಗೆ ಕೊಡಲಾದೀತು; ಹಾಗು ಕೇಳಲಾದೀತು? ಆದರೆ ಈ ಸಂಸ್ಥಾನದ ಪ್ರಜೆಗಳನ್ನು ಇದುವರೆಗೆ ಒಳ್ಳೇ ಇಕ್ಕಟ್ಟಿನಲ್ಲಿರಿಸಿ ನಡಿಸಿಕೊಳ್ಳುತ್ತ ಬಂದಿದ್ದರಿಂದ, ರಾಜ್ಯಕಾರಭಾರವೆಂದರೇನು? ಅದನ್ನು ಹೇಗೆ ಮಾಡಬೇಕು? ಇವುಗಳ ಕಲ್ಪನೆಯು ಇವರಿಗಿರುವದಿಲ್ಲ. ಅದರಿಂದ ಪ್ರತಿಯೊಂದು ಖಾತೆಯ ಆಡಳಿತ ನಡಿಸಲಿಕ್ಕೆ ಪ್ರತಿಯೊಂದು ಸಾರೆ ಜವಾಬುದಾರನನ್ನು ನೇಮಿಸುವದು ಹಾಗು ತೆಗೆದು ಹಾಕುವದು ಈ ಅಧಿಕಾರಗಳನ್ನು ಪ್ರಜೆಗಳಿಗೆ ಕೊಟ್ಟರೂ, ಇವರು ಅವುಗಳನ್ನು ನಿಸ್ತರಿಸಿಕೊಳ್ಳಲಾರರು.

ಮ:—ಹಾಗಾದರೆ ಅಧಿಕಾರಿ ವರ್ಗವು ಪ್ರಜೆಗಳಿಗೆ ಜವಾಬುದಾರರಿರಬಾರದೇನು?

ಭಾನು: ಅದೇಕೆ? ರಾಜ್ಯಪದದ ಮೇಲಿರುವ ಮಹಾರಾಜರೂಪೀ ಕುಲ ಮುಖತ್ಯಾರನಿಗೆ ಈ ಅಧಿಕಾರಿಗಳನ್ನು ನೇಮಿಸಲಿಕ್ಕೂ ಕಡಿಮೆಮಾಡಲಿಕ್ಕೂ ಬಂದರೆ ತೀರಿತು. ಆಧುನಿಕ ಕಾಲದ ಲೋಕಸತ್ತಾತ್ಮಕ ರಾಜ್ಯಪದ್ಧತಿಯಲ್ಲಿ ಯಾವುದಕ್ಕೆ ಮಂತ್ರಿಮಂಡಳದ 'ಜವಾಬುದಾರಿ' ಎನ್ನುವರೋ ಅದು ಸುಮ್ಮನೆ ಇದೆ! ಪ್ರಧಾನ ಪದವು ಯಾವನಿಗೆ ದೊರಕುವದೋ ಅವನಿಗೆ ಅದೊಂದು ತಾತ್ಪೂರ್ತಿಕ ಗುತ್ತಿಗೆಯೋ ಎನಿಸುವದು. ಆ ಗುತ್ತಿಗೆಯ ಅವಧಿಯಲ್ಲಿ ಆತನು ತನ್ನ ಹೇಡಿತನವನ್ನು ಎಷ್ಟು ವ್ಯಕ್ತಪಡಿಸಿದರೂ, ಸರಕಾರದ ಹಾಗು ಪ್ರಜೆಗಳ ದುಡ್ಡನ್ನು ಸ್ವಹಸ್ತ-ಪರಹಸ್ತಗಳಿಂದ ಬೇಕಾದಷ್ಟು ಎತ್ತಿಹಾಕಿದರೂ ಆತನನ್ನು ಗೊತ್ತುಪಡಿಸಿದ ಅವಧಿಯ ಮುಂಚೆ ತೆಗೆದು ಹಾಕಲಿಕ್ಕೆ ಎಷ್ಟೋ ಮಹತ್ಪ್ರಯಾಸಪಡಬೇಕಾಗುತ್ತದೆ! ಒಂದು ವೇಳೆ ತೆಗೆದರೂ ಆತನು: ''ಇದರಿಂದೇನಾಯಿತು? ನನಗೂ ಬೇರೆಯುವರಿಗೂ ಮತಭೇದವಾಯಿತೆನ್ನಬಹುದಷ್ಟೇ?'' ಹೀಗೆನ್ನುವನು. ಆ ಮತಭೇದದ ಪಾರಿ

ಭಾಷಿಕ ಶಬ್ದದಿಂದ ಆತನಿಗೆ ತನ್ನ ಬಡತರ್ಫಕ್ಕೆ ಸೌಮ್ಯಸ್ವರೂಪವನ್ನು ತಂದುಕೊಳ್ಳಲಾಗುತ್ತದೆ. ಎಂದಾದರೂ ಕೆಲಸದಿಂದ ಬಿಡುಗಡೆಯಾಗುವದೇ ಎಂದಂದು, ಅಧಿಕಾರದ ಅವಧಿಯೊಳಗೆ ಸಾಧಿಸಿದ ಬಗೆಯಿಂದ ಆತನು ಸಂಬಳ, ಲಂಚ, ರುಸುವತ್ತು ಮುಂತಾದ ಮಾರ್ಗಗಳಿಂದ ಸಾಕಷ್ಟು ಹಣ ಗಳಿಸುವನು. ಆ ಹಣದಲ್ಲಿ ಅವನು ತನ್ನ ಶೇಷಾಯುಷ್ಯವನ್ನೆಲ್ಲ ಸುಖದಿಂದ ಕಳೆಯ ಬರದಿದ್ದರೂ, ಸ್ವತಂತ್ರ ರೀತಿಯಿಂದ ಬೇರೊಂದು ಉದ್ಯೋಗ ಕೈಕೊಳ್ಳಲಿಕ್ಕೆ ಬರುತ್ತದೆ. ಅದೆಂಥ ಜವಾಬುದಾರಿಯು? "ಹೆಸರು ಅಮೃತಪ್ಪ; ಮೈತುಂಬ ವಿಷ!"

ವಿಮಲೆ:—ಹಾಗಾದರೆ ಜವಾಬುದಾರಿಯು ಮೈಗಡರುವಂತಹ ಬೇರೆ ಯಾವುದೊಂದು ಮಾರ್ಗವನ್ನು ನೀವು ಸೂಚಿಸುವಿರೇನು?

ಭಾನು:-ನನಗೆ ತೋರುವ ಒಂದು ಮಾರ್ಗವನ್ನು ನಾನು ಸೂಚಿಸುತ್ತೇನೆ ಅಧಿಕಾರಿಯ ಧೋರಣವು ಪ್ರಜೆಗಳಿಗೆ ನಿಜವಾಗಿಯೂ ಸಮ್ಮತವಾಗದಿದ್ದರೆ ಇಲ್ಲವೆ ಅದು ನಿಜವಾಗಿಯೂ ಪ್ರಾಮಾಣಿಕತನದ್ದಲ್ಲೆಂದು ಗೊತ್ತಾದರೆ ಆತನಿಗೇನೂ ಶಾಸನವಾಗಬಾರದೆಂಬದು ಯೋಗ್ಯವೇ; ಆದರೆ ಆಡಳಿತದ ಧೋರಣದ ಬಗ್ಗೆ ಸೂಕ್ಷ್ಮ ಚೌಕಸಿ ಮಾಡಿದರೆ ಅದರಲ್ಲಿ ಪ್ರಧಾನಾಧಿಕರ ವ್ಯಕ್ತಿಮನೋಗತ ನೈತಿಕ ದೋಷಗಳು ಕಂಡುಬರುತ್ತವೆ. ಕೆಲವರ ಧೋರಣವು ದ್ರವ್ಯಲೋಭದಿಂದ, ಕೆಲವರದು ದ್ವೇಷದಿಂದ, ಕೆಲವರದು ಜಾತಿಮಾತ್ಸರ್ಯದಿಂದ, ಕೆಲವರದು ಸ್ತ್ರೀ ಪ್ರೇಮದಿಂದ ಆವರಿಸಿದುದು ಕಂಡುಬರುತ್ತವೆ; ಅಲ್ಲದೆ ಅಳತೆ ತಪ್ಪಿದ ಅಹಂಕಾರ, ಗರ್ವ, ನೈತಿಕ ದೋಷಗಳೂ ಆ ಧೋರಣದ ಬುಡಕ್ಕೆ ಕಂಡು ಬರುವ ಸಂಭವವಿದೆ. ಈ ದೋಷಗಳಿಂದ ಮಾಡಿದ ಅಪಕೃತ್ಯವು ಸಾಮಾನ್ಯ ಪ್ರಜೆಗಳಲ್ಲಿ ಗುಹ್ನೆಯೆಂದು ನಿಶ್ಚಯವಾಗಿ, ಆತನು ಫೌಜದಾರಿ-ದಿವಾಣಿ ಖಟ್ಲೆಗಳಿಗೆ ಪಾತ್ರನಾಗುತ್ತಿರಲು, ಇಂಥ ಗುಹ್ನೆಗಳ ಬಗ್ಗೆ ಅಧಿಕಾರಿಯು—ಆತನು ಎಂಥ ಉಚ್ಚ ಅಧಿಕಾರಿಯೇ ಇರಲೊಲ್ಲನೇಕೆ—ಅಂದರೆ ಅವನು ರಾಜನಿಂದ ನೇಮಿಸಲ್ಪಟ್ಟವನೇ ಇರಲಿ, ಲೋಕನಿಯುಕ್ತನೇ ಇರಲಿ ಗುಹ್ನೆಗಾರನೆಂದು ಚೌಕಶಿಗೆ ಪಾತ್ರನಾಗಿರಬೇಕು. ಸದ್ಯಕ್ಕೆ ಅಧಿಕಾರಿಗಳಿಗೆ ಈ ಅಂಜಿಕೆಯು ಎಳ್ಳಷ್ಟು ಇರುವದಿಲ್ಲ. ಅಧಕಾರವೆಂದರೆ, ಅದೊಂದು ವಜ್ರಕವಚವೆಂದು ನಿರ್ಧಾರವಾಗಿದೆ. ಕೈಯಲ್ಲಿ ಅಧಿಕಾರವಿರುವದೆಂದು ಅವುಗಳ ಅಂಜಿಕೆಯು ಹೇಗೆ ಪ್ರಜೆಗಳಿಗೋ, ಹಾಗೆಯೇ ಜನರ ಭೀತಿಯು ಅಧಿಕಾರಿಗಳಿಗಿರಲಿಕ್ಕೆ ಬೇಕು. ಖಾಲಸಾ ಇಲಾಖೆಯಲ್ಲಿ ವಿಶೇಷವೆಂದರೆ, ಅಧಿಕಾರಗಳ ಬಡತರ್ಫು ಆಗುತ್ತದೆ; ಆದರೆ ನೈತಿಕ ದೋಷಗಳಿಂದ ಅಪಕೃತ್ಯಗಳಾಗುವ ಹಾಗು ಅವುಗಳನ್ನು ಮಾಡುವ ಎಷ್ಟು ಜನ ಅಧಿಕಾರಿಗಳ ನ್ಯಾಯನಿರ್ಣಯವು ಇದುವರೆಗಾಗಿದೆ? ಅಂಥ

ಒಬ್ಬ ಅಧಿಕಾರಿಗೆ ಸಕ್ರಮಶಿಕ್ಷೆಯಾದರೆ ಮಿಕ್ಕ ಹತ್ತು ಜನರು ಎಚ್ಚರಗೊಂಡಾರು. ಅಧಿಕಾರಿಯನ್ನು ಪ್ರಜೆಗಳ ಮತದಿಂದ ನೇಮಿಸುವ-ಬಡತರ್ಫ ಮಾಡುವ ಹಕ್ಕಿಗಿಂತ, ಪ್ರಜೆಗಳ ಸಾಧಾರಣ ಫಿರ್ಯಾದಿಯಿಂದಲೂ ಅಧಿಕಾರಿಯ ನ್ಯಾಯನಿರ್ಣಯವಾಗಬೇಕೆಂಬ ಅಧಿಕಾರ ಇಲ್ಲವೆ ಹಕ್ಕು ನಾನು ಹೆಚ್ಚು ಮಹತ್ವದ್ದೆಂದು ತಿಳಿಯುತ್ತೇನೆ. ನಮ್ಮ ಹಳೇ ದಿವಾಣರಿಗೆ ಬಡತರ್ಫ ಆದದ್ದು ಶಿಕ್ಷೆಯಂತಹದು! ಅವರು ಓಡಿ ಹೋಗಿರದಿದ್ದರೆ ಅವರದೇನಾಗುತ್ತಿತ್ತು? ಹಳೇ ಇತಿಹಾಸಗಳಲ್ಲಿ ರಾಜ-ಮಹಾಜರು ಸ್ವತಃ ಆಗ್ರಹದ ಸ್ವಭಾವದವರೂ ಸ್ವತಂತ್ರರೂ ಆಗಿದ್ದರೂ, ಅವರ ಮಂತ್ರಿಗಳ ಮೇಲೆ ಫೌಜದಾರೀ ಖಟ್ಲೆಗಳಾಗುತ್ತಿದ್ದವು; ಹಾಗು ಅವರಿಗೆ ಶಿರಚ್ಛೇದದಂತಹ ಪ್ರಖರತಮ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ಇಂದಿಗೆ ಸೊವ್ಹಿಏಟ ರಶಿಯಾದಲ್ಲಿ ಅದೇ ಪ್ರಕಾರವಿದ್ದು, ಅದೇ ಯೋಗ್ಯವಾಗಿದೆ.

ಭಾನುವಿನ ಈ ಮಾತು ಕಾಮ್ರೇಡ್ ಡಂಬಿಗೆ ಹೆಚ್ಚು ರುಚಿಸಿತು. ಆಗ ಆತನು ಕೂಗಿ:-ಯೋಗ್ಯವು-ಯೋಗ್ಯವು-ತೀರ ಯೋಗ್ಯವು! ಈ ಶತಕದೊಳಗಿನ ರಶಿಯನ್ನರು ೧೮ನೇ ಶತಕದೊಳಗಿನ ಫ್ರೆಂಚ ರಾಜ್ಯಕ್ರಾಂತಿಯನ್ನನುಸರಿಸಿ ರಕ್ತದ ಹೊಳೆ ಹರಿಸಿದರು; ಹಾಗು ಕತ್ತರಿಸಿದ ತಲೆಗಳ ಗುಡ್ಡಗಳನ್ನೊಟ್ಟಿದರು. ಅಂತೆಯೇ ಸೊವ್ಹಿಏಟರಿಗೆ ತಮ್ಮ ಮನಸ್ಸಿನಂತೆ ಕೆಲಸ ಮಾಡಬಂದಿತು. ಇಲ್ಲದಿದ್ದರೆ ಫ್ರೆಂಚರ ಲೋಕಶಾಹಿಯೊಳಗಿನ ಮಂತ್ರಿಮಂಡಳದ ಜವಾಬುದಾರಿಯನ್ನು ನೋಡಿರಿ. ನಿಲ್ಲುಗಲ್ಲಿನ ಮೇಲಿದ್ದ ಉದ್ದನ್ನ ಹಲಿಗೆಯ ಎರಡೂ ತುದಿಗಳ ಮೇಲೆ ಕುಳಿತು: "ನೀನು ಕೆಳಗೆ ನಾನು ಮೇಲೆ-ನಾನು ಕೆಳಗೆ ನೀನು ಮೇಲೆ" ಎಂದು ಆಟವಾಡುವ ಹುಡುಗರಂತೆ, ಫ್ರೆಂಚ ಲೋಕಸಭೆಯೊಳಗಿನ ಮಂತ್ರಿಪದದ ಆಟವು ಇಂದಿಗೂ ಸಾಗಿದೆ.

ಆದರೆ ಆ ದರಬಾರದ ಇಂಥ ಸೋಜಿಗದ ಸಂಗತಿಗಳನ್ನು ಇನ್ನು ವಿವರಿಸುತ್ತ ಕೂಡ್ರುವ ಅವಶ್ಯಕತೆಯಿಲ್ಲ. ಹೇಗೆಯೋ ಮತ್ತೆ ಕೆಲವೇಳೆ ಚರ್ಚೆಯಾಗಿ ಸಭೆಯ ಕೆಲಸವು ಕೊನೆಗಂಡಿತು. ತಾತ್ಪರ್ಯವೇನಂದರೆ, "ನನ್ನ ಔದಾರ್ಯಕ್ಕೆ ತಕ್ಕ ಔದಾರ್ಯ ತೋರುವ ಸ್ವರಾಜ್ಯದ ಜ್ಞಾನವನ್ನು ಪ್ರಜೆಗಳು ತೋರಿಸಬಹುದೆ"ಂಬ ಜೋಜಿಗರಾಯನ ಅಪೇಕ್ಷೆಯು ಈಡೇರಲಿಲ್ಲ. ಆ ದರಬಾರದ ಚರ್ಚೆಗೆ ಕೇವಲ ಎರಡು-ಮೂರು ಜನರ ಸಂಭಾಷಣದ ಸ್ವರೂಪ ಬಂತು; ಆದರೆ ಅದರಲ್ಲಿ ಆಶ್ಚರ್ಯವೇನು? ನಮ್ಮಗಳ ಸರ್ವ ಪಕ್ಷೀಯ ಸರಿಷದ-ಸಮ್ಮೇಲನಗಳನ್ನು ನೋಡಿದರೂ ಅವುಗಳಲ್ಲಾದರೂ ಇದೇ ಪ್ರಕಾರವು ಕಂಡು ಬರುತ್ತಿರುವದಿಲ್ಲೇನು? ಯೋಜನೆ ಹಾಗು ವಾದವಿವಾದಗಳ ತಾಲೀಮುಗಳನ್ನು ೪೦-೫೦ ವರ್ಷಗಟ್ಟಲೆ ಮಾಡಿರುವ ಖಾಲಸಾ ಇಲಾಖೆಯೊಳಗಿನವರಲ್ಲಿಯೂ ನಿಜ

ವಾದ ತಜ್ಞರ ಅಭಾವವಿರುತ್ತಿರಲು, ಆ ಜೋಧ್ಯಪುರ ಸಂಸ್ಥಾನದಲ್ಲಿ ಅದು
ಭಾಸವಾದರೆ ಆಶ್ಚರ್ಯವೇನು? ಮನೋಹರನು ಮಹಾರಾಜರದೆಂದು ಸೂಚನೆ
ಯನ್ನು ಸಭೆಯು ಮುಂದಿಡಬೇಕು; ಅದಕ್ಕೆ ಬೇರೆ ಯಾರೂ ನಕಾರ ಹೇಳದೆ ಒಬ್ಬ
ಭಾನುವೇ ಏನಾದರೊಂದು ಉಪಸೂಚನೆ ಮಾಡಿದರೆ, ಡಂಬಿಯೊಬ್ಬನೇ ಅದಕ್ಕೆ
ವಿರುದ್ಧ ಮಾತಾಡಬೇಕು; ಹೀಗಾಗಿ ಆ ಚರ್ಚೆಗಳ ಸೂಚನೆಯ ಯಾದಿಯು
ಬೇಗನೆ ಮುಗಿದು ಹೋಯಿತು. ಆಗ ಕೀಲಿ ತೀರಿದ ಫೋನೋಗ್ರಾಫಿನಂತಿದ್ದ
ಆ ಸಭೆಯ ಸ್ಥಿತಿಯನ್ನು ಕಂಡು, ವಿಮಲೆಯು ಮುಂಜಾಗ್ರತೆಯಿಂದ ಕಾರ್ಯ
ಕ್ರಮವನ್ನು ಮುಗಿಸಿ, ಸಭೆಯು ಮುಗಿಯಿತೆಂದು ಹೇಳಿದಳು.

ಮಹಾರಾಜರನ್ನು ಸ್ತುತಿಸುತ್ತ ಜನರು ತಂತಮ್ಮ ಮನೆಗೆ ಹೋದರು;
ಆದರೆ ನಡೆದ ಚರ್ಚೆಯೊಳಗಿಂದ ಏನು ನಿಷ್ಫಲವಾಯಿತೆಂಬದರ ಯೋಗ್ಯ ಕಲ್ಪನೆ
ಯಿದ್ದ ರಾಜಕಾರಣ ಪಟುಗಳು ಸಂಸ್ಥಾನಗಳಲ್ಲದೆಷ್ಟು ಜನರಿದ್ದರು? ಹಿತ್ತಲ
ದೊಳಗಿನ ಬಾವಿಯ ಹೊಲಸು ನೀರನ್ನು ಪರಟೆಯಲ್ಲಿ ತಕ್ಕೊಂಡು ಮೈಮೇಲೆ
ಉಗುಳಿ ಉಗುಳಿಕೊಂಡು ಜಳಕ ಮಾಡುವ ಚಾಂಡಾಲನನ್ನು ಒಮ್ಮೆಲೆ ಹರಿದ್ವಾರ
ದ ಗಂಗಾಪ್ರವಾಹದಲ್ಲೊಯ್ದು ನಿಲ್ಲಿಸಿದರೆ ಆತನಿಗೆ ಏನೆನಿಸೀತು? ಇದುವರೆಗೆ
ಸಂಸ್ಥಾನಿಕರ ಐಶ್ವರ್ಯದ, ಅಧಿಕಾರ ಮದದ ಮತ್ತು ಸುಖೋಪಭೋಗದ ಹಳಿ
ಬಂಡಿಗಳನ್ನು ಎಳೆಯುವ ದುಃಖವನ್ನೇ ಯಾವ ಪ್ರಜೆಗಳು ಭೋಗಿಸಿದರೋ,
ಅವರಿಗೆ ತಮ್ಮ ಹೆಗಲ ಮೇಲಿನ ನೊಗವು ತಪ್ಪಿದ್ದರ ಆನಂದವೇ ಮಿಗಿಲಾದ್ದ
ರಿಂದ, ಇನ್ನು ಮುಂದೆ ದೊರೆಯುವ ಸ್ವರಾಜ್ಯರೂಪೀ ಸ್ವಾತಂತ್ರ್ಯದ ಯಾವ
ಕಡೆಯ ಹುಲ್ಲನ್ನು ಮೆಯ್ಯಬೇಕೆಂಬ ನಿರ್ಣಯವು ಅವರಿಗೆ ಬೇಗನೆ ಮಾಡಬರಲಿಲ್ಲ.

ಸಭೆಯ ಸಂಗತಿಯನ್ನು ತಿಳಿಸಲಿಕ್ಕೆ ಮನೋಹರನು ಮಹಾರಾಜರ ಕಡೆಗೆ
ಹೋಗಿ ನಗಹತ್ತಲು, ಮಹಾರಾಜರು:—ಯಾಕೋಪ್ಪಾ, ನಗುತ್ತಿರುವೆ?

ಮ:—ನಗದಿದ್ದರೇನು ಮಾಡಲಿ? ಕಾಗದದ ಕುದುರೆಯು ಥಯಗುಟ್ಟಿ
ಕುಣಿಯುಹತ್ತಿತೆಂದರೆ ಯಾರಿಗಾದರೂ ನಗೆ ಬರುವದೇ! ದರಬಾರನ್ನು ಕೂಡಿಸಿ
ನಿಮಗೆ ಲಭಿಸಿದ್ದೇನು? ನೀವು ಸಂಪೂರ್ಣ ಸ್ವರಾಜ್ಯ ಕೊಡಲಿಕ್ಕೆ ಸಿದ್ಧರಾದಿರಿ;
ಸಹಿ ಮಾಡಿದ ಚೆಕ್ಕನ್ನು ಅಂಕಿ ತುಂಬಿಕೊಳ್ಳುವ ಸಲುವಾಗಿ ಪ್ರಜೆಗಳ ಮುಂದೊಗೆ
ದಿರಿ; ಆದರೆ ಅವರಿಗೆ ಆ ಚೆಕ್ಕಿನ ಕಾಗದದಲ್ಲಿ ಅಂಕಿಗಳನ್ನು ಹೇಗೆ ಬರಿಯಬೇ
ಕೆಂಬದು ಗೊತ್ತೇ ಇಲ್ಲ; ಅಲ್ಲದೆ ಅದರಲ್ಲಿ ಬರೆಯುವ ಇಚ್ಛಿತ ಅಂಕಿಯ ಉಚ್ಚಾ
ರವು ಕೂಡ ಅವರ ಬಾಯಿಂದ ಹೊರಡಲೊಲ್ಲದು. ಸಂಸ್ಥಾನೀ ಪ್ರಜೆಗಳ ದಡ್ಡ
ತನವನ್ನು ಬೈಲಿಗೆಳೆದು ನೀವು ಅವರ ಫಜೀತಿಯನ್ನು ಮಾತ್ರ ಮಾಡಿದಿರಿ. 'ವರ
ಕೊಡುವ ದೇವರು ಸಿದ್ಧನಾದರೂ ವರವನ್ನು ಹೊಂದುವ ಯೋಗ್ಯತೆ ಬೇಡವೆ?'

ಆ ಯೋಗ್ಯತೆಯನ್ನು ಎಲ್ಲಿಂದ ಕಡತರಬೇಕು? ಸ್ವರಾಜ್ಯ ಕೊಡುವ ಮೊದಲು ಸ್ವರಾಜ್ಯವೆಂದರೇನು? ಸ್ವರಾಜ್ಯವನ್ನು ಹೇಗೆ ಪಡೆಯುವದು? ಇದನ್ನು ಕಲಿಸ ಲಿಕ್ಕೆ ಈ ದೇಶಗಳಲ್ಲಿ ಸಾಲೆಗಳನ್ನೇ ಹಾಕಬೇಕು. ಅದನ್ನು ಮಾಡದೆ ಒಮ್ಮೆಲೆ ಸ್ವರಾಜ್ಯ ಕೊಡಲಿಕ್ಕೆ ಸಿದ್ಧರಾದರೆ, ತೆಗೆದುಕೊಳ್ಳುವವರು ಅದನ್ನು ಹೇಗೆ ತಕ್ಕೊ ಳ್ಳಬೇಕು? ಹಸಿವಾಗದ ಮುಂಚೆಯೇ ಯಾರನ್ನಾದರೂ ಎಲೆಯ ಮೇಲೆ ಕುಳ್ಳಿರಿ ಸಿದರೆ, ಹೀಗೆಯೇ ಆಗತಕ್ಕದ್ದು.

ಜೋ:—ಸ್ವರಾಜ್ಯದ ಹಸಿವು ಮನುಷ್ಯಮಾತ್ರರ ಹೊಟ್ಟೆಯಲ್ಲಿ ಯಾವಾ ಗಲೂ ಜಾಗೃತವಾಗಿರುತ್ತದೆ.

ಮಿ:—ಸರಿ. ಸರಿ. ಅಂದಮೇಲೆ ಅವರೆದುರಿಗೆ ಎಲೆ ಮಾತ್ರ ಒಡಿಸಿಡ ಬೇಕು; ಆದರೆ ಉಣ್ಣಲಿಕ್ಕೆ ಒತ್ತಾಯಪಡಿಸಿದರೆ ಅವರು ಗೊಂದಲಕ್ಕೀಡಾಗು ವರು. ತಮ್ಮ ಇಚ್ಛೆಯಿಂದ ಉಣ್ಣುವದೇ ಸ್ವರಾಜ್ಯವು! ಅದರಂತೆಯೇ ಉಣ್ಣು ವ ಪದಾರ್ಥಗಳ ಬಗ್ಗೆಯಾದರೂ ಅತಿಥಿಗಳಿಗೇ ಏಕೆ, ಮನೆಯ ಯಜಮಾನನಿಗೆ ಕೂಡ ಇಂದೇನು ಅಡಿಗೆ ಮಾಡಲಿ? ಎಂದು ಯಾರೂ ಕೇಳುತ್ತಿರುವದಿಲ್ಲ; ಅಂದ ಮೇಲೆ ಹೇಗೆ ಮಾಡಲಿ? ಎಂಬದನ್ನಂತೂ ಕೇಳರೇ ಕೇಳರು!

ಜೋ:—ಹಾಗಾದರೆ ಇಚ್ಛಾಭೋಜನವೆಂಬದು ಜಗತ್ತಿನಲ್ಲಿ ಇಲ್ಲವೇ ಇಲ್ಲೆಂದೆನ್ನುತ್ತೀಯೇನು?

ಮ:—ಇಚ್ಛಾಭೋಜನ ಮಾಡಿಸುವದು ಐಶ್ವರ್ಯತೆಯ, ಶ್ರೀಮಂತಿಕೆಯ, ಗರ್ವದ ಒಂದು ಲಹರಿಯ ಬಗೆಯಾಗಿದೆಯಷ್ಟೇ. ಇದಕ್ಕೆ ವಿರುದ್ಧವಾಗಿ ಯಜ ಮಾನನ ಹೊಟ್ಟೆಯ ಮಗನ ಮಾಂಸದ ಅಡಿಗೆ ಕೇಳುವ ವರೆಗೆ ಇಚ್ಛಾಭೋಜ ನದ ಬೇಡಿಕೆಯಾದದ್ದನ್ನು ಶಿವಲೀಲಾಮೃತ ಗ್ರಂಥದಿಂದ ಗೊತ್ತೇ ಆಗುವದು. 'ನನ್ನಂತಹ ದಾತೃವು ಜಗತ್ತಿನಲ್ಲಿ ಆಗಲಿಲ್ಲ' ಎಂಬ ಗರ್ವದ ಭಾವನೆಯಿಂದ ಇಚ್ಛಾಭೋಜನ ಮಾಡಿಸುವವನು ಜಗತ್ತಿಗೆ ಆಹ್ವಾನವ ಕೊಡುತ್ತಾನೆ; ಮತ್ತು ತಿನಸುಗೂಳಿಗಳೊಳಗೆ ಯಾರು ನುರಿತ ಜಟ್ಟಿಗಳಾಗಿರುವರೋ, ಅವರೇ ಆ ಆಹ್ವಾ ನವನ್ನು ಸ್ವೀಕರಿಸುತ್ತಾರೆ. ತಾತ್ಪರ್ಯವಿಷ್ಟೇ, ಆ ಅಹಂಕಾರದ ಯುದ್ಧದಲ್ಲಿ ಸಾತ್ವಿಕಭಾವವೇ ಇರುವದಿಲ್ಲ. ನೀವು ನಿಮ್ಮ ಜಾಹೀರಸಾಮೆಯಲ್ಲಿ ಸ್ವರಾ ಜ್ಯದ ಯಾವ ಹಕ್ಕು ಬೇಕು, ಕೇಳಿಕೊಳ್ಳಿರೆಂದು ಸಭೆ ಕೂಡಿಸಿದುದು ಕೆಲ ಮಟ್ಟಿಗೆ ಮೇಲಿನ ಆಹ್ವಾನವನ್ನು ಹೋಲುವದಿಲ್ಲವೆ? ಆ ಆಹ್ವಾನ ಕೊಡುವಾಗ ನೀವು ನಿಮ್ಮ ಪ್ರಜೆಗಳ ಸತ್ಪಾತ್ರತೆಯನ್ನೇನು ಪರೀಕ್ಷಿಸಿದಿರಿ? ತಮಗೆ ತಕ್ಕ ಅಧಿ ಕಾರಗಳಾವವು ಬೇಕೆಂಬದನ್ನು ಕೇಳುವ ಜ್ಞಾನವು ನಿಮ್ಮ ಪ್ರಜೆಗಳಿಗಿಲ್ಲೆಂಬದು ಸಿದ್ಧವಾಗಿ ಹೋಯಿತು; ಅಲ್ಲದೆ ಕಾಮ್ರೇಡ್ ಡಂಬಿಯ ಪ್ರಲಾಪಗಳನ್ನು ನೀವು

ಕೇಳಿಕೊಂಡಿದ್ದರೆ, ಸ್ವರಾಜ್ಯ ಇಚ್ಛಾಭೋಜನದ ಆಹ್ವಾನವನ್ನು ಹಿಂದೆಗೆದುಕೊಳ್ಳ ಬೇಕೆಂದು ನಿಮಗಾದರೂ ಅನಿಸದಿರುತ್ತಿದ್ದಿಲ್ಲ. ಆದರಿಂದ ಮಹಾರಾಜರೇ, ಇನ್ನು ನಿಮ್ಮ ಈ ಲಹರಿಗಳು ಸಾಕಾದವು.

ಜೋ: —ಆದಿರಲಿ. ಲಹರಿಯೆಂಬ ಸೌಮ್ಯ ಶಬ್ದವನ್ನು ಪಯೋಗಿಸಿಯೇ ನೀನು ನನ್ನ ನಿಂದೆಯನ್ನು ಮುಗಿಸಿದುದು ನನ್ನ ಭಾಗ್ಯವೆಂದೆನ್ನಬೇಕು; ಆದರೆ ಮನೋಹರಾ, ಧನ್ಯವಿದೆ ನಿಮ್ಮ ಪ್ರಜೆಗಳಿಗೆ! ನಾನು ಇಷ್ಟು ಎಚ್ಚರಿಕೆಯಿಂದ ನಡೆಯುತ್ತಿದ್ದರೂ ನನ್ನನ್ನು ಲಹರಿಯ ಸ್ವಭಾವದವನೆಂದು ಆಕ್ಷೇಪಿಸಿದಿರಿ! ನಾನು ಇದುವರೆಗೆ ಯಾವ ಲಹರಿಗಳನ್ನು ಮಾಡಿದೆನೆಂಬದನ್ನು ಹೇಳು ನೋಡೋಣ? ನಾನು ಇನ್ನೂ ಲಗ್ನ ಮಾಡಿಕೊಂಡಿರಲಿಕ್ಕಿಲ್ಲ; ಆದರೆ ನಾನೇನೂ ವಿಜಾತೀಯ ಪಶು-ಪಕ್ಷಿಗಳ ಲಗ್ನಮಾಡಿಸಿ ಮಿಶ್ರಪ್ರಜೆಗಳನ್ನುಂಟುಮಾಡುವ ಪ್ರಯೋಗವನ್ನು ಪ್ರಾರಂಭಿಸಿರುವದಿಲ್ಲ! ನಾನು ಸ್ವತಃ ಸಾದಾ ಪೋಷಾಕು ಧರಿಸುತ್ತಿರಬಹುದು; ಆದರೆ ಕತ್ತೆಯ ಕೊರಳಲ್ಲಿ ನವರತ್ನಗಳ ಮಾಲೆ ಹಾಗು ಬೆನ್ನ ಮೇಲೆ ಜರತಾರಿಯ ಝೂಲ ಹಾಕಿಸಿ, ಅವುಗಳ ಮೇಲೆ ಅಂತಃಪುರದ ಸ್ತ್ರೀಯರನ್ನು ಬತ್ತಲೆಯಿಂದ ಕೂಡ್ರಿಸಿ ಅವರ ಮೆರವಣಿಗೆಯನ್ನು ರಾಜಧಾನಿಯೊಳಗಿಂದ ಹೊರಡಿಸಿರುವದಿಲ್ಲ. ನಾನು ದಿವಾಣಸಾಹೇಬರಿಗೆ ಬೊಗ್ಗಿ ನಮಸ್ಕರಿಸುತ್ತಿರಬಹುದು; ಆದರೆ ನನ್ನ ಖುಷಿ-ಮೋಜಿನವರಿಂದ ನನ್ನ ಸಮಕ್ಷ ಅವರ ತಾಯಿ-ತಂಗಿಗಳನ್ನು ಧ್ವರಿಸುವ ಅವರ ವಿಷಯದ ಲಾವಣಿಗಳನ್ನು ಹೇಳಿಸಿರುವದಿಲ್ಲ. ನಾನು ಸಿಟ್ಟಾಗಿ ಯಾರ ಮೈಮೇಲೆಯೂ ಏರಿ ಹೋಗುವದಿಲ್ಲೆನ್ನುವದು ಅರಸರಿಗೆ ಒಪ್ಪತಕ್ಕ ಮಾತಾಗಿರಲಿಕ್ಕಿಲ್ಲೆಂಬದು ನಿಜ; ಆದರೆ ದಿವಾಣಖಾನೆಯಲ್ಲಿ ಕಚ್ಚುವ ನಾಯಿ ಇಲ್ಲವೆ ಹುಲಿಯ ಮರಿಗಳನ್ನು ಇರಿಸಿಕೊಂಡು, ಭೆಟ್ಟಿಗೆ ಬಂದವರಿಗೆ ಅವುಗಳಿಂದ ಕಚ್ಚಿಸಿ ಗಾಯ ಬೇರೆ ಗೊಳಿಸುವದಿಲ್ಲವಷ್ಟೇ? ನಾನು ಸ್ವತಃ ಪರಸ್ತ್ರೀಯರ ಕಡೆಗೆ ನೋಡದಿರುವದು ಒಂದು ವೇಳೆ ನನ್ನ ಅರಸುತನಕ್ಕೆ ಒಪ್ಪುತ್ತಿರಲಿಕ್ಕಿಲ್ಲ; ಆದರೆ ನಾನು ಮೋಟರಿನಲ್ಲಿ ಪುಂಡರನ್ನು ಕುಳ್ಳಿರಿಸಿ, ಅವರಿಂದ ದಾರಿಯಲ್ಲಿ ಹೋಗಿ-ಬರುವ ಸುಂದರ ಸ್ತ್ರೀಯರನ್ನು ಜುಲುಮಿನಿಂದ ಹಿಡಿಸಿಕೊಂಡೊಯ್ದು, ಅವರನ್ನು ಭ್ರಷ್ಟಗೊಳಿಸಿ ಕಟ್ಟಡವಿಯಲ್ಲಿ ಬಿಟ್ಟು ಬಿಡುತ್ತಿರುವದಿಲ್ಲ. ನಾನು ಸ್ವಂತಕ್ಕಾಗಿ ಪ್ರಜೆಗಳ ಹೆಚ್ಚು ದುಡ್ಡನ್ನು ವೆಚ್ಚ ಮಾಡುತ್ತಿರಲಿಕ್ಕಿಲ್ಲ; ಆದರೆ ಪಾರಿವಾಳಗಳ ವಿವಾಹ ಮಾಡಲಿಕ್ಕೆ ಲಕ್ಷಗಟ್ಟಲೆ ಹಣವನ್ನು ಹಾಳು ಮಾಡುತ್ತಿರುವದಿಲ್ಲ. ನಾನು ಸ್ವತಃ ಒಮ್ಮೊಮ್ಮೆ ಉಪವಾಸ ಮಾಡುತ್ತಿರುವೆನು; ಆದರೆ ಸಜ್ಜನ ಶಾಕಾಹಾರಿಗಳಾದ ಅಭ್ಯಾಗತರನ್ನು ಊಟಕ್ಕೆ ಕರೆದು, ಅವರಿಗೆ ತಿಳಿಯದಂತೆ ಗೋಮಾಂಸವನ್ನು ಉಣಬಡಿಸಿ, ದುಷ್ಟತನದಿಂದ ಅದನ್ನು ಬೈಲಿಗೆಳೆದು, ಮೇಲೆ ಖೊಖ್ಖೊಕ್ಕೆಂದು

ನಗುತ್ತಿರುವದಿಲ್ಲ. ನನ್ನ ಸಲುವಾಗಿ ನನ್ನ ಚಾಕರನು ಶ್ರಮವಹಿಸಿದರೂ ನಾನು ಆತನಿಗೆ ಕೊಡಬಾರದ ಪ್ರತಿಫಲವನ್ನು ಕೊಡುತ್ತಿರಬಹುದು; ಆದರೆ ನಾನು ಆತನ ಹೆಂಡತಿಯನ್ನೋಡಿಸಿ, ಬೊಜ್ಜಾಟವಾಯಿತೆಂದರೆ "ಅವಳ ಬೆಲೆಯನ್ನೆಷ್ಟು ಕಳಿಸಲಿ?" ಎಂಬ ಅವಮಾನಕಾರಕ ನಿರೂಪವನ್ನಂತೂ ಆತನಿಗೆ ಕಳಿಸುವದಿಲ್ಲ! ನನ್ನಲ್ಲಿಯ ಲಹರಿಗಳ ಆರೋಪಗಳಿಗೆ ಈ ಉತ್ತರವು ಸಾಕಾದೀತು. ಇರಲಿ.

ನನ್ನ ಪ್ರಜೆಗಳಿಗೆ ಸ್ವರಾಜ್ಯವು ಹೇಗೆ ಬೇಕೆಂಬದನ್ನು ಹೇಳ ಬರದಿದ್ದರೆ ನಾನು ಅವರಿಗೆ ದೋಷಕೊಡುವದಿಲ್ಲ; ಆದರೆ ನಾನು ಅದನ್ನು ಅವರಿಗೆ ಕೇಳುವ ಬಗ್ಗೆ ನೀನು ನನ್ನನ್ನು ಲಹರಿಯುವನೆಂದೆನ್ನಬೇಡ. ಅವರ ಅಜ್ಞಾನವನ್ನು ಬೈಲಿಗೆಳೆಯುವ ಅಥವಾ ಅವರನ್ನು ನಾಚಿಸುವ ಉದ್ದೇಶವು ನನ್ನದಿರಲಿಲ್ಲ; ಅಲ್ಲದೆ 'ಬೇಕಾದ್ದನ್ನು ಬೇಡಿಕೊಳ್ಳಿರಿ' ಎಂದು ಆಹ್ವಾನ ಮಾಡುವಾಗ ನನ್ನ ಅಹಂಕಾರ ಇಲ್ಲವೆ ಆಢ್ಯತೆಗಳು ಕಾರಣೀಭೂತವಾಗಿದ್ದವೆಂಬ ನಿನ್ನ ಅಂಬೋಣವೂ ಯೋಗ್ಯವಾಗಿಲ್ಲ. ಯಾಕಂದರೆ, ರಾಜ್ಯದ ಮೇಲಿನ ಸ್ವತ್ವಬುದ್ಧಿಯ ನಿವೃತ್ತಿಯ ಪುರಾವೆಯನ್ನು ನಾನು ಬೇರೆ ರೀತಿಯಿಂದ ಹೇಗೆ ತಿಳಿಸಬರುತ್ತಿತ್ತು? ಯಾವನೊಬ್ಬ ಸತ್ತಾಧೀಶನು ಈ ಸ್ವತ್ವನಿವೃತ್ತಿಗೆ ಮನಸ್ಸಿನಲ್ಲಿ ನಿಜವಾಗಿಯೂ ಸಿದ್ಧನಾದನೆಂದರೆ, ಆತನ ಕರ್ತವ್ಯವು ಮುಗಿಯುತ್ತದೆ. ಅರಸರುಗಳು, ಸಂಸ್ಥಾನಿಕರು ಇವರಿಗೆ ತಾವು ಪ್ರಜೆಗಳಿಗೆ ಸ್ವರಾಜ್ಯ ಕೊಡಲಿಕ್ಕೆ ಸಿದ್ಧವಾಗುವದೆಂದರೆ ಪದಭ್ರಷ್ಟವಾಗದಿರಲಿಕ್ಕೆ ಯೋಗ್ಯ ಉಪಾಯನಾಗಿದೆಯೆಂಬದು ತಿಳಿಯುವದಿಲ್ಲ. ನಾನಂತೂ ಹೇಳಿ ಕೇಳಿ ರಾಜ್ಯಪದವನ್ನು ನಷ್ಟಗೊಳಿಸಲಿಕ್ಕೆ ಕೂಡ ಸಿದ್ಧನಿರುತ್ತೇನೆಂಬದು ನಿನಗೆ ಗೊತ್ತೇ ಇದೆ. ರಾಜ್ಯವನ್ನು ಕೊಟ್ಟುಬಿಡುವದಕ್ಕಿಂತ ಅದನ್ನಿಟ್ಟುಕೊಂಡು ಆಡಳಿತ ಚನ್ನಾಗಿ ನಡಿಸುವದೇ ಕಠಿಣವಿದೆ. ಸ್ವರಾಜ್ಯವಿರದಿರುವ ವರೆಗೆ ಅದನ್ನು ಸಂಪಾದಿಸಲಿಕ್ಕೆ ಎಷ್ಟು ಶ್ರಮಪಡಬೇಕಾಗುವದೋ, ಅದು ದೊರೆತ ಮೇಲೆ ಅದನ್ನು ಸುರಾಜ್ಯವನ್ನಾಗಮಾಡುವದಕ್ಕಾಗಿ ಜನರು ಅಷ್ಟು ಶ್ರಮವನ್ನು ಮಾಡಿದರೆ, ಈ ಭೂಲೋಕದಲ್ಲಿಯೇ ನಂದನವನವಾದೀತು! ಆದರೆ ಇಲ್ಲದ ಜೀನಸಿನ ಬಗ್ಗೆ ಆಕಾಂಕ್ಷೆತಾಳುವದು ಪ್ರಜೆಗಳ ಮನುಷ್ಯ ಧರ್ಮವು ಹೇಗಿದೆಯೋ, ಅದರಂತೆಯೇ ಸ್ವಾರ್ಥವು ಸಿದ್ಧವಾಗಿರಲಿಕ್ಕೆ ಅದನ್ನು ತ್ಯಜಿಸಲಿಕ್ಕೆ ಸಿದ್ಧವಾಗುವದೇ ನಾನು ರಾಜಧರ್ಮವೆಂದು ತಿಳಿಯುತ್ತೇನೆ.

ತಾವಾಗಿ ಪ್ರಾರಂಭಿಸಿದ ಸತ್ಕಾರ್ಯವನ್ನು ಕೊನೆ ಮುಟ್ಟಿಸಿ ಫಲದ್ರೂಪಗೊಳಿಸುವದು ಮಹಾರಾಜರಿಗೆ ಪ್ರಾಪ್ತವೇ ಆಗಿತ್ತಲ್ಲದೆ ಉತ್ಸಾಹದ್ದೂ ಆಗಿತ್ತು. ಪ್ರಜೆಗಳು ರಾಜನಿಗೆ ನಜರಾಣೆ ಕೊಡಬೇಕು; ರಾಜನು ಅದಕ್ಕೆ ಹಸ್ತಸ್ಪರ್ಶವನ್ನು ಮಾಡಿ ಆ ನಜರಾಣೆ ತಂದವನಿಗೆ ದೇಕಾರವೆಂದು ಅದನ್ನೇ ತಿರುಗಿ ಕೊಡಬೇಕು.

ಇದಕ್ಕೆ ವಿರುದ್ಧವಾದ ಪ್ರಕಾರವೇ ಆ ದರಬಾರದಲ್ಲಿ ನಡೆಯಿತು. ಪ್ರಜೆಗಳನ್ನೇ ರಾಜನೆಂದು ತಿಳಿದು ಮಹಾರಾಜರು ಅವರಿಗೆ ಸ್ವರಾಜ್ಯದ ನಜರಾಣೆಯನ್ನು ಕೊಟ್ಟರು; ಆದರೆ ಪ್ರಜೆಗಳು ಅದನ್ನೇ ರಾಜನಿಗೆ ತಿರುಗಿ ಕೊಟ್ಟರು! ಅದರಿಂದ ಏನು ಕೊಡಬೇಕು, ಯಾವುದನ್ನು ಕಾದಿಡಬೇಕು? ಎಂಬದರ ನಿರ್ಣಯ ಮಾಡುವ ಜವಾಬುದಾರಿಯು ತಿರುಗಿ ಮಹಾರಾಜರ ಮೇಲೆಯೇ ಬಿದ್ದಿತು. ಆ ನಿರ್ಣಯ ಮಾಡುವದಕ್ಕೆಂದು ಆತನು ಮನೋಹರನನ್ನು ಕರೆಸಿಕೊಂಡನು; ಆದರೆ ಆತನು: "ಈ ನಿರ್ಣಯದ ಕೆಲಸ ಮಾಡಲಿಕ್ಕೆ ಸಭೆಯ ಅಧ್ಯಕ್ಷರೇ ಬೇಕು'' ಎಂದೆನ್ನಲು, ಹೀಗೆ ಪರಸ್ಪರವಾಗಿ, ಆದರೆ ಮನಸ್ಸಿನಿಂದ ಪ್ರಿಯವಾಗಿದ್ದ ಸೂಚನೆಯನ್ನು ಮಹಾರಾಜರು ಆ ಕೂಡಲೆ ಮನ್ನಿಸಿದರು; ಮತ್ತು: "ನಾಳೆ ಬೆಳಿಗ್ಗೆ ಒಂಬತ್ತು ಗಂಟೆಗೆ ಪ್ರಭಾಕರನೊಡನೆ ವಿಮಲಾಬಾಯಿಸಾಹೇಬರನ್ನು ಅರಮನೆಗೆ ಕರೆತರುವದಕ್ಕಾಗಿ ನೀನು ಸ್ವತಃ ನನ್ನ ಸ್ವಂತದ ರಥವನ್ನು ತಕ್ಕೊಂಡು ಹೋಗು'' ಎಂದು ಮನೋಹರನಿಗೆ ಹೇಳಿದರು.

ooo ooo ooo ooo

ಮರುದಿನ ಬೆಳಿಗ್ಗೆ ಮನೋಹರನು ಭಾವೂಸಾಹೇಬರ ಮನೆಗೆ ಹೋಗುವಷ್ಟರಲ್ಲಿ ಭಾವೂಸಾಹೇಬರು ಹಾಸಿಗೆಯಿಂದೆದ್ದು ಕುಳಿತಿದ್ದರು. ಬಲಗಡೆಗೆ ಕುಳಿತಿದ್ದ ವಿಮಲೆಯು ಕಿತ್ತಳೆ ಹಣ್ಣಿನ ಹೋಳಿಕೆಗಳನ್ನು ಸುಲಿ ಸುಲಿದು ಅವರ ಕೈಗೆ ಕೊಡುತ್ತಿದ್ದಳು. ಪ್ರಭಾಕರನು ಭಾವೂಸಾಹೇಬರ ಮೈಮೇಲೆ ಹಣ್ಣಿನ ರಸ ಬಿದ್ದರೆ ಒರಿಸಲಿಕ್ಕೆಂದು ಕರವಸ್ತ್ರವನ್ನು ಹಿಡಿದು ಎಡಗಡೆಗೆ ಸಜ್ಜಾಗಿ ಕುಳಿತಿದ್ದನು; ಮತ್ತು ಮಾಯಿಸಾಹೇಬರಾದರೂ ಮಡಿಯಿಂದಿದ್ದ ಮೂಲಕ, ಹಾಸಿಗೆಯನ್ನು ಬಿಟ್ಟು ದೂರದಲ್ಲಿ ನಡು ಮನೆಯ ಬಾಗಿಲಲ್ಲಿ ಒಂದು ಫಡಕಿನ ಮರೆಗೆ ನಿಂತು, ಪತಿರಾಜರ ಆ ಕುಟುಂಬವತ್ಸಲತೆಯನ್ನು ನೋಡುತ್ತಿದ್ದರು!

ಮನೋಹರನು ಒಳಗೆ ಕಾಲಿಟ್ಟ ಕೂಡಲೆ ಆ ಸುಂದರ ಚಿತ್ರಪಟವನ್ನು ಸಹಜವಾಗಿ ಕುಸ ಮುದುಡಿಕೊಳ್ಳಬೇಕಾಯಿತು. ಮಾಯಿಸಾಹೇಬರು ಒಳಗೆ ಹೋದರು. ವಿಮಲೆ-ಪ್ರಭಾಕರರಿಬ್ಬರೂ ಎದ್ದು ನಿಂತರು; ಆದರೆ ಇಲ್ಲಿಯೇ ಕುಳಿತು ಕೆಲ ಕ್ಷಣ ಮಾತಾಡೋಣವೆಂದು ಮನೋಹರನು ಅನ್ನಲು, ಅವರು ಖುರ್ಚಿಯನ್ನು ಮುಂದೆ ಸರಿಸಿದರು. ಮನೋಹರನು ಅದರ ಮೇಲೆ ಕುಳಿತ ಮೇಲೆ, ವಿಮಲೆಯು ಭಾವೂಸಾಹೇಬರಿಗೆ ಆತನ ಗುರ್ತು ಮಾಡಿ ಕೊಟ್ಟಳು. ಪ್ರಭಾಕರನು ನಿಜವಾಗಿಯೂ ನಿರಪರಾಧಿಯು; ಅದರಿಂದ ನಿರ್ದೋಷಿಯೆಂದು ಆತನನ್ನು ನಿರಂತರವಾಗಿ ಬಂಧಮುಕ್ತ ಮಾಡಲಾಗಿತ್ತು; ಮತ್ತು ಚೌಕಶಿಗೆ ಅಂಜಿ ದಿವಾಣಸಾಹೇಬರು ಇರುಳಿನಲ್ಲಿಯೇ ಮೋರೆಗೆ ಮಸಿ ಬಡ

ಕೊಂಡು ಓಡಿ ಹೋಗಿದ್ದರೆಂಬ ಸಂಗತಿಗಳನ್ನು ಈ ಮೊದಲೇ ವಿಮಲೆಯು ಬಗೆ ಬಗೆಯ ಪ್ರೇಮಲ ಭಾಷಣದಿಂದ ಕೇಳಿಕೊಂಡಿದ್ದ ಆ ವೃದ್ಧನು ಭ್ರಮವಿಕಾರ ದಿಂದ ಅರ್ಧ-ಮರ್ಧ ಗುಣಹೊಂದಿದ್ದನು; ಮತ್ತು ಆ ಎಲ್ಲ ಸಂಗತಿಗಳಿಗೆ ಅಲ್ಪ-ಸ್ವಲ್ಪ ಕಾರಣೀಭೂತನಾದವನು ತನ್ನ ಭೆಟ್ಟಿಗೆ ಬಂದಿದ್ದ ಮನೋಹರಪಂತನೇ ಆಗಿರುವನೆಂಬ ಮಾಹಿತಿಯು ದೊರೆಯಲು, ಭಾವೂಸಾಹೇಬರು ಪ್ರಸನ್ನ ಮುಖ ದಿಂದ ಎರಡೆರಡು ಸಾರೆ ಕೈಗಳನ್ನೆತ್ತಿ ಆತನಿಗೆ ನಮಸ್ಕರಿಸಿದರು.

ಮ:—ಭಾವೂಸಾಹೇಬರೇ, ತಾವು ಭಾಗ್ಯಶಾಲಿಗಳಿರುತ್ತೀರಿ. ಪ್ರಭಾಕರ ಪಂತ ಹಾಗು ವಿಮಲಾಬಾಯಿಯಂಥ ಅಲೌಕಿಕ ಎರಡು ರತ್ನಗಳು ನಿಮ್ಮ ಉದರದಲ್ಲಿ ಜನಿಸಿರುತ್ತವೆ. ಅದರಿಂದ ನೀವು ಧನ್ಯರಾಗಿರುತ್ತೀರಿ.

ಭಾ: ನಿಜವಿದೆ; ಆದರೆ ರತ್ನಗಳು ಎಲ್ಲಿ ಹುಟ್ಟುತ್ತವೆಯೋ ಅಲ್ಲಿಯ ಉಸುಕು-ಮಣ್ಣುಗಳ ಖಣಿಗೆ ಅದರ ತಿಳುವಳಿಕೆಯು ಸ್ವಂತಕ್ಕೆಲ್ಲಿರುತ್ತದೆ? ರತ್ನಗಳ ಶೋಧವನ್ನು ಬೇರೆಯವರೇ ಮಾಡಬೇಕಾಗುತ್ತದೆ; ಮತ್ತು ಅವುಗಳ ತೇಜವನ್ನೂ ಬೇರೆಯವರೇ ಪ್ರಕಟಗೊಳಿಸಬೇಕಾಗುತ್ತದೆ.

ಮ:—ಆ ಮೇಲಾದರೂ ಆ ಖಣಿಯು ಕೀರ್ತಿಯು 'ವಜ್ರದ ಖಣಿ' ಎಂ ದಾಗುವದಾದರೂ ಯಥಾರ್ಥವಿರುವದಲ್ಲವೇ?

ಮನೋಹರನ ಆ ಸ್ತುತಿಪಾಠಕ್ಕೆ ನಾಚಿ ವಿಮಲೆಯು: "ಅಪ್ಪಾ ಇವರು ದರಬಾರದ ಜನರು! ಜನರನ್ನು ಕಡ್ಡಿಯ ಗಿಡದ ಮೇಲೆ ಏರಿಸಲಿಕ್ಕೆ ಒಳ್ಳೇ ಕುಶಲ ರಾಗಿರುತ್ತಾರೆ" ಹೀಗೆಂದು ಹೇಳಿ, ತಮ್ಮಗಳ ಪ್ರಶಂಸೆಯ ನಿರಾಕರಣ ಮಾಡಿ, ವಿಷಯ ಬದಲಿಸಲಿಕ್ಕೆಂದು ಅವಳು ಮತ್ತೆ:-"ಆದರೆ ಪ್ರಾಯವ್ಹೇಟ ಸೆಕ್ರೆಟರಿ ಸಾಹೇಬರ ಆಗಮನವೇಕಾಯಿತೆಂಬದು ಇನ್ನೂ ತಿಳಿಯಲಿಲ್ಲವಲ್ಲ?"

ಮ:—ಸುದ್ದಿ ಹೇಳುವವನು ತಂದ ಸುದ್ದಿಯನ್ನು ಹೇಳದಿದ್ದರೆ ನಡೆಯು ವದೆಂತು? ನಿಮ್ಮಿಬ್ಬರನ್ನು ಅರಮನೆಗೆ ಕರೆತರಲಿಕ್ಕೆಂದು ಮಹಾರಾಜರೇ ತಮ್ಮ ರಥ ಕೊಟ್ಟು ನನ್ನನ್ನು ಕಳುಹಿಸಿರುವರು.

"ಅದೇತಕ್ಕೆ?" ಎಂದು ವಿಮಲೆಯು ಒಳ್ಳೇ ಆಶ್ಚರ್ಯಭರದಿಂದ ಕೇಳಲು,

ಮ:—ಪ್ರಭಾಕರಪಂತರ ಸಂಬಂಧದ ಹನ್ನೆರಡು ವರ್ಷಗಳ, ಅಂದರೆ ಇಲ್ಲಿಂದ ಫರಾರಿಯಾಗಿ ಹೋದಂದಿನಿಂದ ತಿರುಗಿ ಬರುವವರೆಗಿನ ಎಲ್ಲ ಸಂಗತಿ ಗಳನ್ನು ಮಹಾರಾಜರು ಸ್ವಸ್ಥ ಚಿತ್ತದಿಂದ ಕೇಳಿಕೊಳ್ಳಬೇಕಾಗಿದೆಯಂತೆ; ಹಾಗು ನಿನ್ನಿನ ಪ್ರಜಾಪ್ರತಿನಿಧಿ ಸಭೆಯ ಭಾಷಣ-ಸೂಚನೆಗಳ ನಿಷ್ಕರ್ಷ ತೆಗೆದು, ಮುಂ ದಿನ ಸ್ವರಾಜ್ಯ ಪದ್ಧತಿಯ ಕೆಲ ರೂಪ-ರೇಷೆಗಳನ್ನು ನಿಮ್ಮ ಸಲಹೆಯಿಂದ ಮಾಡ ಬೇಕೆಂದು ಮಹಾರಾಜರ ಇಚ್ಛೆಯಿದೆ. ಅದಕ್ಕಾಗಿ ನೀವಿಬ್ಬರೂ ಬರಬೇಕು.

ಆವೆರಡೂ ಹೇತುಗಳು ಸರಳ, ಸ್ಪಷ್ಟ ಹಾಗು ಸ್ವಾಭಾವಿಕಗಳಿದ್ದ ಮೂಲಕ ಯಾರೂ ಇಲ್ಲೆನ್ನುವಂತಿರಲಿಲ್ಲ. ಆ ಮೇಲೆ ಮನೋಹರನು ಬೇಡ ಬೇಡ ವೆಂದೆನ್ನುತ್ತಿದ್ದರೂ ಆತನಿಗೆ ಚಹ ಕೊಟ್ಟನಂತರ ಅವರು ಮೂವರೂ ರಥವನ್ನಾರೋಹಿಸಿ ಅರಮನೆಯ ಕಡೆಗೆ ಸಾಗಿದರು.

---

## ೨೫ ಸಾಕಿದ ಗಿಳಿಗೆ ಸ್ವಾತಂತ್ರ್ಯದಾನ.

ದರಬಾರು ಮುಗಿದ ದಿವಸ ರಾತ್ರಿಯಲ್ಲಿ ಹೆಚ್ಚಾಗಿ ಮಳೆ ಬಿದ್ದು ಹವೆಯು ತಂಪಾಗಿತ್ತು. ಮರುದಿನ ನೋಡಿದತ್ತೆಲ್ಲ ರವ್ಯ ಪ್ರಸನ್ನತೆಯೇ ಗೋಚರವಾಗುತ್ತಿತ್ತು. ನಿರಭ್ರವಾದ ಆಕಾಶದೊಳಗಿನ ಬಾಲರವಿಯ ಸೌಮ್ಯ ತೇಜವು ಪ್ರಾಣಿಮಾತ್ರರಿಗೆ ಸುಖವನ್ನೂ ಆನಂದವನ್ನೂ ಬೀರುತ್ತಿತ್ತು. ಅರಮನೆಯ ಸುತ್ತಲಿನ ಪುಷ್ಪವಾಟಿಕೆಯಲ್ಲಿ, ಗಿಡ-ಮರಗಳ ದಟ್ಟಣೆಯೊಳಗಿಂದ ಹಾಗು ಬಳ್ಳಿಗಳ ಗುಂಪಿನೊಳಗಿಂದ ಪಕ್ಷಿಗಳು ಮನಃಪೂತವಾಗಿ ಸಂಚರಿಸುತ್ತಿದ್ದವು. ಅವುಗಳ ಅಸ್ಫುಟ ಸಂಭಾಷಣಗಳೂ ಪ್ರಶ್ನೋತ್ತರಗಳೂ ಪರಸ್ಪರವಾಗುತ್ತಿದ್ದು, ಪ್ರೇಮಪಾಶದೊಳಗೆ ಸಿಕ್ಕಿದ್ದ ಅವುಗಳೊಳಗಿನ ಯಾವುದೊಂದು ಪಕ್ಷಿಯು ಭಾವಗೀತವನ್ನೂ, ಏಕಾಕಿಯಾಗಿದ್ದ ಪಕ್ಷಿಯು ಸ್ವಾತಂತ್ರ್ಯಗೀತವನ್ನೂ ಹಾಡುತ್ತಿರುವಂತೆ ತೋರುತ್ತಿತ್ತು.

ಎಂಟು-ಎಂಟೂಕಾಲು ಗಂಟೆಯಾಗಿರಬಹುದು. ಜೋಜಿಗರಾಯನು ತನ್ನ ಖಾಸ ದಿವಾಣಖಾನೆಯಲ್ಲಿ ಪದಚಾಲನೆ ಮಾಡುತ್ತಿದ್ದನು. ನಡುನಡುವೆ ಏನಾದರೂ ಸೂಚಿಸಿದಂತೆ ಇಲ್ಲವೆ ನೆನಪಾದಂತೆ ಆಗಿ, ಆತನು ಇತ್ತಣ ಜೀನಸನ್ನು ಅತ್ತ, ಅತ್ತಣದನ್ನು ಇತ್ತ ಇಡುತ್ತಿದ್ದನು. ದಿವಾಣಖಾನೆಯೊಳಗಿನ ಎಲ್ಲ ಸಾಮಾನುಗಳ ಕಡೆಗೆ ಒಮ್ಮೆ ಅದರ ಒಂದು ತುದಿಗೆ ನಿಂತು, ಇನ್ನೊಮ್ಮೆ ಇನ್ನೊಂದು ತುದಿಗೆ ನಿಂತು ನೋಡುತ್ತಿದ್ದನು; ಆದರೆ ಅವನು ಅವುಗಳನ್ನು ಸ್ವಂತದ ಉತ್ಸಾಹಕ್ಕೆಂದು ನೋಡುತ್ತಿರದೆ, ಅವುಗಳನ್ನು ಯಾರೊಬ್ಬರು ನೋಡಿದರೆ, ಅವರ ಕಣ್ಣಿಗೆ ಅವು ಹೇಗೆ ಕಂಡಾವೆಂಬ ವಿಷಯವಾಗಿ ಆತನ ಮನಸ್ಸಿನಲ್ಲಿ ಯೋಚನೆ ನಡೆದಿತ್ತು; ಅಂತೆಯೇ ಅವನು ಅವುಗಳ ಕಡೆಗೆ ಗೋಣು ತಿರುತಿರುವಿ ಬೇರೆಯವರ ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದನು. ಸ್ವಂತದ ದೃಷ್ಟಿಯಿಂದ ಯಾವುದೊಂದು ಆರಾಸ ಮಾಡುವದು ಸುಲಭವು; ಆದರೆ ಬೇರೆಯವರ ಅಭಿರುಚಿಗಳ ಕಲ್ಪನೆಯನ್ನು ಮನದಲ್ಲಿ ತಂದು, ಅದಕ್ಕನುಗುಣವಾಗಿ ಆರಾಸವಾಗಿದೆಯೋ ಇಲ್ಲವೋ ಎಂಬದರ ಕಲ್ಪನೆ ಮಾಡುವದು ತುಸ ಕಠಿಣ ಕೆಲಸವಲ್ಲವೆ? ಆ ದಿವಾಣಖಾನೆಯೊಳಗಿನ ಆಗಿನ ಆರಾಸವು ಈ ಬಗೆಯದಾಗಿತ್ತು:

ದಿವಾಣಖಾನೆಯ ನಟ್ಟನಡುವೆ ಒಂದು ದೊಡ್ಡ ಸಿಸವಿಯ ಕಟ್ಟಿಗೆಯ ದುಂಡು ಮೇಜು ಇದ್ದಿತು. ಅದರ ಮೇಲೆ ಸೂಕ್ಷ್ಮವಾಗಿ ಕಸೂತಿ ತೆಗೆದ ಹುರಿಕಟ್ಟಿನ ಚಾದರಿತ್ತು. ಅದು ಅತ್ತಿತ್ತ ಸರಿದಾಡಬಾರದೆಂದು ಅದರ ನಾಲ್ಕೂ ಮೂಲೆಗಳಲ್ಲಿ ತೂಗ ಬಿಟ್ಟಿದ್ದ ಭಾರವುಳ್ಳ ಸುಂದರ ಕಾಜಿನ ಗುಂಡುಗಳಿದ್ದವು, ಮೇಜಿನ ಒಂದು ಕಡೆಗೆ ಬೆಳ್ಳಿಯ ಬಹು ಮೂಲ್ಯವಾದ ಕಲಾಕುಸರಿಯ ದೌತಿ-ಲೆಕ್ಕಣಿಕೆಗಳೂ, ಸಮೀಪದಲ್ಲಿಯೇ ಬರೆಯಲಿಕ್ಕೆ ಬೇಕಾಗುವ ಎಲ್ಲ ಸಾಹಿತ್ಯವೂ ಇದ್ದವು. ಚಿನ್ನದ ಕಟ್ಟಿನಲ್ಲಿಟ್ಟಿದ್ದ ಸುಂದರವಾದ ಕ್ಯಾಲೆಂಡರವಿತ್ತು. ಟೇಬಲ್ಲಿನ ಮಧ್ಯಭಾಗದಲ್ಲಿ ಆಗ ತಾನೆ ಅರಳಿದ ಕೆಂಡಸಂಪಿಗೆಯ ಗುಚ್ಛಗಳನ್ನು ಚುಚ್ಚಿದ್ದ ಸುಗಂಧಪೂರ್ಣವಾದ ಹಳೇ ಮಾದರಿಯ ಭಾರವುಳ್ಳ ಚೀನೀ ಫ್ಲಾವರ ಪಾಟವಿತ್ತು. ಮೇಜಿನ ಒಂದು ಕಡೆಯ ಗೋಡೆಯ ನಟ್ಟನಡುವೆ ತೂಗಬಿಟ್ಟಿದ್ದ 'ತಾಯಿ'ಯ ಫೋಟೋದ ಮೇಲೆ ದೇಶೀ ಗುಲಾಬೀ ಹೂವಿನ ಉದ್ದನ್ನ ಮಾಲೆಯು. ಫೋಟೋದ ಕಾಲ್ಗಡೆಗೆ ಚಂದನದ ಕಟ್ಟಿಗೆಯ ಸ್ಟೂಲಿನ ಮೇಲೆ ಚಿನ್ನದ ಮುಲಾಮಿನ ಕಮಲದ ಛಿದ್ರಗಳಲ್ಲಿ ಸಿಗಸಿಟ್ಟಿದ್ದ ಮೊಳ ಮೊಳ ಉದ್ದನ್ನ ಹೊತ್ತಿಸಿದ ಸೀರಾದ ಸೌಗಂಧಿಕ ಊದಿನ ಕಡ್ಡಿಗಳು. ಆ ದುಂಡು ಮೇಜಿನ ಸುತ್ತಲೂ ಇಟ್ಟಿದ್ದ ಮಖಮಲದ ಗಾದಿಯ ಐದು ಖುರ್ಚಿಗಳು. ದಿವಾಣಖಾನೆಯ ಎರಡೂ ಮಗ್ಗಲಿನ ಕಿಟಕಿಗಳು ತೆರೆದಿದ್ದರಿಂದ ಅವುಗಳೊಳಗಿಂದ ಬರುವ ತಂಪು ಗಾಳಿ; ಮತ್ತು ಕಿಟಕಿಗಳ ಜಾಯಿಗೇ ಇದ್ದಂತಿದ್ದು, ಒಳಗಿನ ಮನುಷ್ಯರಿಗೆ ಕುಳಿತಲ್ಲಿಂದಲೇದರ್ಶನವಾಗುವ ಸೃಷ್ಟಿಸೌಂದರ್ಯವು.

ಆ ದುಂಡುಮೇಜಿನ ಸುತ್ತಲೂ ಇದ್ದ ಐದು ಖುರ್ಚಿಗಳಲ್ಲಿ ಒಮ್ಮೆ ಒಂದರ ಮೇಲೆ, ಇನ್ನೊಮ್ಮೆ ಇನ್ನೊಂದರ ಮೇಲೆ ಹೀಗೆ ಐದೂ ಖುರ್ಚಿಗಳ ಮೇಲೆ ಒಮೊಮ್ಮೆ ಕುಳಿತು, ಎದುರಿಗಿನ ದೃಶ್ಯವು ಹೇಗೆ ಕಾಣಿಸುತ್ತದೆಂಬದನ್ನು ಜೋಜಿಗರಾಯನು ಪರೀಕ್ಷಿಸಿದನು. ಈ ಖುರ್ಚಿಗಳ ಮೇಲೆ ಕೂಡ್ರತಕ್ಕವರು ಬಂದ ಮೇಲೆ ಯಾರನ್ನು ಯಾವ ಖುರ್ಚಿಯ ಮೇಲೆ ಕೂಡ್ರಿಸಬೇಕೆಂಬ ಯೋಜನೆಯನ್ನು ಆಗ ಆತನು ತನ್ನ ಮನಸ್ಸಿನಲ್ಲಿ ಮಾಡುತ್ತಿದ್ದರೂ ಮಾಡುತ್ತಿರಬಹುದಾಗಿತ್ತು. ಅಲ್ಲಿಯ ಸಾಮಾನುಗಳ ಮೇಲೆ ಧೂಳವು ಇರಲಿಲ್ಲೆಂದೂ ಅನ್ನಬಹುದು; ಆದರೂ ಆಳನ್ನು ಬೇಕಂತ ಕೂಗಿ ಕರೆದು ಅವನು ಆತನಿಗೆ ಆ ಎಲ್ಲ ಸಾಮಾನುಗಳನ್ನು ಮತ್ತೊಮ್ಮೆ ಚೆನ್ನಾಗಿ ಒರೆಸ ಹೇಳಿದನು. ಜೋಜಿಗರಾಯನಿಗೆ ಉಡುಪು-ತೊಡಪುಗಳ ಡೌಲು ಇಲ್ಲವೆ ಕನ್ನಡಿಯಲ್ಲಿ ಆಗಾಗ್ಗೆ ಮೋರೆ ನೋಡಿ ತೀಡಿ ಒರಸಿಕೊಳ್ಳುವ ಚಟವಿರಲಿಲ್ಲ; ಆದರೆ ಇಂದು ಆತನು ಅತ್ತಿತ್ತ ದಿಟ್ಟಿಸಿ ನೋಡಿ ಮೈಯೊಳಗಿನ ಶರ್ಟನ್ನು ಕೊಡವಿ, ತಲೆಯ ಮೇಲಿನ ಟೊಪ್ಪಿಗೆಯನ್ನು ಚೆನ್ನಾಗಿರಿಸಿ, ಒಮ್ಮೆಯೇ ಕನ್ನಡಿ

ಯಲ್ಲಿ ಹಣಿಕಿ ಹಾಕಿದನು.

ಇಂದು ಜೋಜಿಗರಾಯನ ಭೆಟ್ಟಿಗೆ ಯಾರು ಬರಲಿರುವರೆಂಬದರ ಕಲ್ಪನೆಯು ವಾಚಕರಿಗಿದ್ದೇ ಇದೆ. ಈ ಮೊದಲೊಮ್ಮೆ ವಿಮಲೆಯು ಹೊರಗಿನ ದಿವಾಣಖಾನೆಯಲ್ಲಿ ಆತನನ್ನು ಕಂಡಿದ್ದಳು; ಆದರೆ ಆಗ ಅವಳು ವಕೀಲಿಯ ಸನದು ಕೇಳ ಬಂದ ಅರ್ಜದಾರಳೆಂದು ಬಂದಿದ್ದಳು. ಈ ಮಧ್ಯೆ ಎಷ್ಟೋ ಸಂಗತಿಗಳು ಘಟಿಸಿದವು. ಇಂದು ಅವಳು ಪುನಃ ಭೆಟ್ಟಿಗೆ ಬರುವಾಗ ಅವಳ ದರ್ಜೆಯೂ ಮರ್ಯಾದೆಯೂ ಎಷ್ಟೋ ಪಾಲು ಹೆಚ್ಚಾಗಿತ್ತು. 'ಅರ್ಜದಾರಳೆತ್ತ, ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷಳೆತ್ತ? ಮಹಾರಾಜರಿಗೆ ಸರಿಸಮಾನವಾದ ಅವಳ ಯೋಗ್ಯತೆಯು! ಹಲವು ಕೆಲಸಗಳಲ್ಲಿ ವಿಮಲೆಯ ಬುದ್ಧಿತೇಜವು ಪ್ರಕಟವಾಗಿ, ಅದು ಜೋಜಿಗರಾಯನ ಕಣ್ಣುಗಳನ್ನು ಕುಕ್ಕಿಸುವಷ್ಟು ಪ್ರಖರವಾಗಿತ್ತು. ಸ್ವಾಭಿಮಾನಕ್ಕೆ ಅವಶ್ಯವಾಗಿದ್ದ ಅಹಂಕಾರವು ಆತನಲ್ಲಿ ಇದ್ದಿತು; ಆದರೆ ಪ್ರೇಮದ ಬೀಜವು ಮನಸ್ಸಿನಲ್ಲಿ ಅಂಕುರಿಸಿತೆಂದರೆ, ಆ ಮೇಲೆ ಬೆಳೆಯುವ ಪ್ರೇಮವೃಕ್ಷದ ಬೇರುಗಳು ಆ ಅಹಂಕಾರದ ಎಲ್ಲ ಹಸಿಯನ್ನು ಮೆಲ್ಲಮೆಲ್ಲನೆ ಹೀರಿಕೊಳ್ಳುತ್ತಿರುವಂತೆ, ವಿಮಲೆಯ ಸಂಬಂಧದಲ್ಲಂತೂ ಜೋಜಿಗರಾಯನ ಅಂಕಾರವು ಕಿಂಬಹುನಾ ಸ್ವಾಭಿಮಾನವು ನಷ್ಟವಾಗಿ, ಆತನು ಮನಸ್ಸಿನಲ್ಲಿ ಆಕೆಯ ಅಧೀನನಾಗಿದ್ದನು. ಅಂಥ ಆ ತನ್ನ ಪ್ರಣಯದೇವತೆಯು ತನ್ನ ಮನೆಗೆ ತನ್ನ ಭೆಟ್ಟಿಗೆ ಬರುವದರಿಂದ, ಆ ಭೆಟ್ಟಿಯಲ್ಲಿ ಆಕೆಯೊಡನೆ ಏನು ಮಾತಾಡಬೇಕು, ಹೇಗೆ ಮಾತಾಡಬೇಕು? ಎಂಬ ಯೋಚನೆಯಿಂದ ಆತನು ಸಹಜವಾಗಿಯೇ ಗೊಂದಲಕೊಳ್ಳಗಾಗಿದ್ದನು.

ಆದರೆ ಆ ಭೆಟ್ಟಿಯ ಕಾಲಕ್ಕೆ ಮಾತನಾಡುವ ಮುಖ್ಯ ವಿಷಯವು ಮೊದಲೇ ಗೊತ್ತಾಗಿತ್ತು. ಕೇವಲ ಆ ವಿಷಯಕ್ಕೆ ಯಾವ ಹರಿ-ಟೊಂಗಗಳು ಚಿಗಿಯುವವೋ ಎಂಬದು ಬೇರೆಯಾಗಿತ್ತು. ಅಂತೆಯೇ ಎಂಟೂಮುಕ್ಕಾಲು ಗಂಟೆಯಾದ ಕೂಡಲೆ ಜೋಜಿಗರಾಯನು ಮುನ್ನಾದಿನದ ಪ್ರ. ಪ್ರ. ಸಭೆಯ ಕಾಗದ ಪತ್ರಗಳನ್ನು ತಕ್ಕೊಂಡು ಅವುಗಳನ್ನು ತಿರುತಿರುವಿ ನೋಡುತ್ತ, ಆ ದುಂಡುಮೇಜಿನ ಬಳಿಯ ಒಂದು ಕುರ್ಚಿಯ ಮೇಲೆ ಕುಳಿತನು; ಆದರೆ ಆತನ ಲಕ್ಷ್ಯವೆಲ್ಲ ಕಾಗದಗಳ ಮೇಲಿನ ಶಬ್ದಗಳಿಗಿಂತ ವಿಮಲೆಯು ಯಾವ ತನ್ನ ರಥದಲ್ಲಿ ಕುಳಿತು ಬರತಕ್ಕವಳಿದ್ದಳೋ ಅದರ ಗಾಲಿಗಳ ಶಬ್ದದ ಕಡೆಗೇ ಹೆಚ್ಚಾಗಿದ್ದಿತು. ಒಂಬತ್ತಕ್ಕೆ ಸರಿಯಾಗಿ ಆ ರಥವು ಅರಮನೆಯ ಮಹಾದ್ವಾರಕ್ಕೆ ಬಂದು ನಿಂತಿತು. ಅದರೊಳಗಿಂದಿಳಿದ ಮನೋಹರ, ವಿಮಲೆ ಮತ್ತು ಪ್ರಭಾಕರರು ಮೆಟ್ಟಿಲುಗಳನ್ನೇರಿ ಮೇಲೆ ಬಂದರು. ಜೋಜಿಗರಾಯನು ಎದ್ದು ನಿಂತು ಅವರೆಲ್ಲರ ಸ್ವಾಗತವನ್ನು ಮಾಡಿದನು. ಖುರ್ಚಿಗಳ ಮೇಲೆ ಕೂಡ್ರುವಾಗ ಜೋಜಿಗರಾಯನೆದುರಿಗೆ ವಿಮ

ಲೆಯೂ, ಮನೋಹರನೆದುರಿಗೆ ಪ್ರಭಾಕರನೂ ಕುಳಿತುಕೊಳ್ಳುವ ಯೋಜನೆಯನ್ನು ಮನೋಹರನು ಒಳ್ಳೇ ಚಾಪಲ್ಯದಿಂದ, ಆದರೆ ಯಾರ ಲಕ್ಷ್ಯದಲ್ಲಿಯೂ ಬರದಂತೆ ಮಾಡಿದನು.

ಇಂದು ಜೋಜಿಗರಾಯನು ತಾನಾಗಿಯೇ ಮಾತಿಗೆ ಪ್ರಾರಂಭಿಸಿದನು. ಅವನು: ''ವಿಮಲಾಬಾಯಿ, ಪ್ರಭಾಕರಪಂತರೇ, ನಿಮ್ಮೊಡನೆ ಈ ಮೊದಲು ಯಾವ ಕಾರಣದಿಂದ ನನಗೆ ಮನಬಿಚ್ಚಿ ಮಾತನಾಡಲಿಕ್ಕೆ ಬರುತ್ತಿರಲಿಲ್ಲವೋ ಇಂದು ಅದು ಶಕ್ಯವಾಗಿರುವ ಬಗ್ಗೆ ನನಗೆ ವಿಶೇಷ ಪ್ರಕಾರದ ಆನಂದವಾಗುತ್ತದೆ. ಮುಂಚೆ ನ್ಯಾಯ ವಿಷಯಕ ರಾಜಕರ್ತವ್ಯದಿಂದ ನನ್ನ ಹಲ್ಲು ಗಿಟಕರದಿದ್ದವೆಂದರೂ ಅನ್ನಬಹುದು! ನಾನು ನನ್ನ ಪದ್ಧತಿಯಿಂದ ಗುಪ್ತ ಚೌಕಶಿ ಮಾಡಿದ್ದರಲ್ಲಿ ಪ್ರಭಾಕರಪಂತರೇ, ನಿಮ್ಮ ಮೇಲಿನ ಎಲ್ಲ ಆರೋಪಗಳು ಖೊಟ್ಟಿ ಹಾಗು ಕೃತ್ರಿಮಗಳಿದ್ದವೆಂಬುದು ನನಗೆ ಗೊತ್ತೇ ಆಗಿತ್ತು; ಆದರೆ ಈ ಪ್ರಕರಣವನ್ನು ಹೇಗೆ ನಿಕಾಲೆ ಮಾಡಬೇಕಾಗಿತ್ತೋ, ಅದು ನೀವು ಧೈರ್ಯದಿಂದ ಜೋಧ್ಯಪುರಕ್ಕೆ ಬಂದದ್ದರಿಂದಲೇ ಆಯಿತು. ನಿಮ್ಮನ್ನು ಸೆರೆಮನೆಯಲ್ಲಿರಿಸುವ ಶಿಷ್ಟಾಚಾರವು ಕಾಯಿದೆಯಿಂದ ನನಗೆ ಅಪರಿಹಾರ್ಯವಾಗಿತ್ತು; ಮತ್ತು ಪುನರ್ವಿಚಾರಣೆಯ ಆಗ್ರಹವು ಬರಿಯ ನ್ಯಾಯದಾನದ್ದೇ ಇದ್ದಿತೆಂತಲ್ಲ; ಆದರೆ ದಿವಾಣಸಾಹೇಬರು ಫಿರ್ಯಾದಿಯ ಸಾಕ್ಷಿದಾರರೆಂದು ಕೋರ್ಟಿನಲ್ಲಿ ಬಾಯಿತೆರೆದೊಡನೆಯೇ, ಅವರ ಹಲ್ಲು ಅವರ ಗಂಟಲಿಗೇ ಗಾಣವಾಗುವ ಯೋಗವು ಅದರಲ್ಲಿದ್ದಿತು. ಅಂತೆಯೇ ನಿಮ್ಮ ತುರಂಗವಾಸವು ನಾಲ್ಕು ದಿನ ಹೆಚ್ಚಿದರೂ ಅಡ್ಡಿಯಿಲ್ಲೆಂದು ನಾನು ಮನಸ್ಸಿನಲ್ಲಿ ನಿರ್ಧರಿಸಿದ್ದೆನು; ಆದರೆ ಆ ಅಗ್ನಿದಿವ್ಯವನ್ನು ಮಾಡಲಿಕ್ಕೆ ದಿವಾಣಸಾಹೇಬರು ತಳವೂರಿ ನಿಲ್ಲಲಿಲ್ಲ; ಓಡಿಹೋದರು. ಮೊಗಲಾಯಿಗೆ ಓಡಿಹೋದದರಾದ್ದರಿಂದ ನಿಜವಾದ ನ್ಯಾಯವು ಹೇಗಿದ್ದಿತೆಂಬುದರ ಬಗ್ಗೆ ನಿಮ್ಮ-ನನ್ನ ವೈರಿಗಳಿಗೂ ಅನುಮಾನವುಂಟಾಗಲಿಕ್ಕೆ ಆಸ್ಪದವುಳಿಯಲಿಲ್ಲ. ಇಂದು ಸ್ವತಂತ್ರ ನಾಗರಿಕರೆಂದು ನಾನು ನಿಮ್ಮ ಸ್ವಾಗತವನ್ನಂತೂ ಮಾಡಿಯೇ ಮಾಡುತ್ತೇನೆ; ಆದರೆ ಹಿಂದಿನ ಕಾಲದ ಕಠಿಣ ಪ್ರಸಂಗಗಳಲ್ಲಿ ನೀವು ನಾಗರಿಕ ಸ್ತ್ರೀಯರ ಮಾನಕಾಯುವ ಕೆಲಸವನ್ನು ಕೈಯಲ್ಲಿ ಶಿರವನ್ನು ಧರಿಸಿಕೊಂಡು ಮಾಡಿರುವ ಬಗ್ಗೆ ನಾನು ನಿಮ್ಮನ್ನು ಎಷ್ಟು ಹೊಗಳಿದರೂ ಕಡಿಮೆಯೇ ಇದೆ.''

ಆ ಮೇಲೆ ಮನೋಹರನು ಪ್ರಭಾಕರನ ಸಂಗತಿಯನ್ನು ಪ್ರಾರಂಭದಿಂದ ಕೇಳಿಕೊಳ್ಳುವ ಮೊದಲನೇ ಕೆಲಸಕ್ಕೆ ತೊಡಗಿದನು. ಅದನ್ನು ಹೇಳುವಾಗ ಹಗುರ ಬಾಯಿ-ಮನಸ್ಸುಗಳುಳ್ಳ ಪ್ರಭಾಕರನು ಹಳೇ ಕಾಲದ ದುಷ್ಕೃತ್ಯಗಳ ಚಿತ್ರಗಳನ್ನು ಒಳ್ಳೇ ಭವ್ಯವಾಗಿ ಚಿತ್ರಿಸಿದ್ದರಿಂದ, ನಡುನಡುವೆ ಜೋಜಿಗರಾಯನು

ಉದ್ವೇಗದಿಂದಲೂ, ವಿಮಲೆಯು ಸ್ತ್ರೀಲಜ್ಜೆಯಿಂದಲೂ ತಲೆಕೆಳಗೆ ಹಾಕಬೇಕಾಗುತ್ತಿತ್ತು; ಆದರೆ ಫರಾರಿಯಾದ ಬಳಿಕ ಪ್ರಭಾಕರನು ತನ್ನ ವೊಗಲಾಯಿಯೊಳಗಿನ ಅನುಭವಗಳನ್ನು ಹೇಳುತ್ತಿರುವಾಗ ಅದ್ಭುತ ರಸವು ಚೆನ್ನಾಗಿ ಸಾಧಿಸಿತು; ಮತ್ತು ಜೋಜಿಗರಾಯ-ಮನೋಹರರೊಡನೆ ವಿಮಲೆಯೂ ಸಂಕೋಚವನ್ನು ತ್ಯಜಿಸಿ, ಗಟ್ಟಿಯಾಗಿ ನಗುತ್ತಿದ್ದಳು.

ಪ್ರಭಾಕರನ ವೃತ್ತಾಂತವು ಹೇಳಿ ಮುಗಿದ ಬಳಿಕ ಮಹಾರಾಜರು ಕುಳಿತ ಸ್ಥಳದಿಂದೆದ್ದು ಪ್ರಭಾಕರನ ಬಳಿಗೆ ಹೋಗಿ ಆತನ ಹೆಗಲ ಮೇಲೆ ಕೈಯಿಟ್ಟು:— ರಾಜಸತ್ತೆಗೆ ಬೇಕಾದಷ್ಟು ಆಧಾರಸ್ತಂಭಗಳಿರುತ್ತವೆ; ಕೇವಲ ದುಡ್ಡಿನಿಂದಲೂ ಆ ಕೆಲಸವಾಗುತ್ತದೆ; ಆದರೆ ಪ್ರಜೆಗಳ ಮಾನ-ಮರ್ಯಾದೆಯನ್ನು ರಾಜನ ವಿರುದ್ಧ, ಆತನಿಗೆ ಪ್ರತೀಕಾರವನ್ನುಂಟುಮಾಡಿ, ಸಂಬಾಳಿಸುವ ಕೆಲಸವನ್ನು ಆತ್ಮಸ್ಫೂರ್ತಿಯಿಂದಲೂ, ಧೈರ್ಯದಿಂದಲೂ ಮೈಮೇಲೆ ತೆಗೆದುಕೊಳ್ಳುವ ನಿಮ್ಮಂತಹ ಜನರಿಗೆ ಪ್ರಜೆಗಳೇನು ಕಾಣಿಕೆ ಕೊಡಬೇಕು?

"ಕಾಣಿಕೆಯೆ!" ಪ್ರಭಾಕರನು ನಕ್ಕು:-"ಕಾಣಿಕೆಯನ್ನಾವ ಮಗನು ಬೇಡುತ್ತಾನೆ? ಆದರೆ ನನ್ನಂತಹ ಒಬ್ಬ ಪರಕೀಯ ಮನುಷ್ಯನು ಇವರು ಕೇವಲ ತಮ್ಮ ನಾಗರಿಕ ಭಗಿನಿಯರೆಂದು ಅವರ ಮಾನ ಕಾಯುವದಕ್ಕೆ ಎಷ್ಟು ಸ್ವಾರ್ಥತ್ಯಾಗ ಮಾಡಲಿಕ್ಕೆ ಸಿದ್ಧನಾಗುವನೋ, ಅಷ್ಟು ಸ್ವಾರ್ಥತ್ಯಾಗವನ್ನು ಸ್ವಂತದ ಹೆಂಡಿರು-ಮಕ್ಕಳ ಸಲುವಾಗಿ ಮಾಡಲಿಕ್ಕೆ ಪ್ರತಿಷ್ಠಿತರೆನಿಸಿಕೊಳ್ಳುತ್ತಿರುವ ನಾಗರಿಕರು ಸಿದ್ಧರಾಗದಿರುವದು ಆಶ್ಚರ್ಯವಲ್ಲವೆ? ನನ್ನ ಮೇಲೆ ಆರೋಪ ಮಾಡಿದುದು ಖೊಟ್ಟಿಯಿತ್ತಾದರೂ, ಮಹಾರಾಜ, ನಾನು ಬಹು ಕೆಡಕು ಮನುಷ್ಯನಿರುವದರಿಂದ, ಯಾವ ಳೊಬ್ಬ ಕುಲಸ್ತ್ರೀಯ ಅವಮರ್ಯಾದೆಮಾಡುವಾಗ ಒಬ್ಬೊನೊಬ್ಬ ರಾಜಾಧಿಕಾರಿಯು ಕಂಡರೂ ಆತನ ಕೊಲೆಯು ನನ್ನಿಂದಾಗಲಿಕ್ಕಿಲ್ಲೆಂದು ನಾನು ಹೇಳಲಾರೆನು."

ಕಡೆಗೆ ಆತನು ತಾಲೀಮಿನ ವೇಳೆಯಾಯಿತೆಂದು ಹೊರಡಲಿಕ್ಕೆ ಅಪ್ಪಣೆ ಕೇಳಿದನು; ಆದರೆ ಮಹಾರಾರಾಜರು ಆತನನ್ನು ಆಗ ಹೋಗಗೊಡದೆ:"ಹಾಗಾದರೆ ಸ್ವರಾಜ್ಯ ಘಟನೆಯ ಕೆಲಸದಲ್ಲಿ ನೀವು ನಮಗೇನೂ ನೆರವಾಗಲಾರಿರಾ?"

ಅದಕ್ಕೆ ಪ್ರಭಾಕರನು ನಕ್ಕು:— "ಆ ಘಟನೆ-ಗಿಟನೆಗಳು ನನಗೇನೂ ತಿಳಿಯುವದಿಲ್ಲ. ಅದನ್ನೆಲ್ಲ ಇತ್ತ ಕೇಳಿಕೊಳ್ಳಿರಿ!!" ಹೀಗೆಂದು ಹೇಳಿ, ಅವನು ತನ್ನ ತಂಗಿಯ ಕಡೆಗೆ ಬೊಟ್ಟು ಮಾಡಿ ತೋರಿಸಿದನು; ಹಾಗು "ಇವಳನ್ನು ಗಂಡಸನ್ನಾಗಿ ನಿರ್ಮಿಸಿ, ಈಕೆಯ ಕೈಯಲ್ಲಿ ದೇವರು ಯಾವುದೊಂದು ರಾಜ್ಯವನ್ನು ಕೊಟ್ಟಿದ್ದರೆ, ಇವಳು ಸ್ವರಾಜ್ಯವನ್ನೂ ಸುರಾಜ್ಯವನ್ನೂ ಕೂಡಿಯೇ ಸಂಬಾಳಿಸುತ್ತಿದ್ದಳು.

ಮನೋಹರನು ಆ ಸಂಧಿಯನ್ನು ಕಳೆದುಕೊಳ್ಳುವನೇ? ಅವನು: "ರಾಜ್ಯದಾಡಳಿತವು ಕೈಸೇರಲಿಕ್ಕೆ ಗಂಡಸರ ಜನ್ಮವೇ ಏತಕ್ಕೆ ಬೇಕು? ಇದುವರೆಗೆ ಅನೇಕ ಜನ ಸ್ತ್ರೀಯರು ರಾಜ್ಯಗಳನ್ನಾಳಿ ಕೀರ್ತಿಗಳಿಸಿರುತ್ತಾರೆ. ಇನ್ನು ಇದರಲ್ಲಿ ಸ್ವಾರ್ಥವಿದೆಯೆಂದೆನಿಸಿದರೆ, ಅವರು ಆ ಕೀರ್ತಿಯ ಲಾಭವನ್ನು ಕೊಟ್ಟು ಯಾವನೊಬ್ಬ ಭಾಗ್ಯವಂತ ಪುರುಷನನ್ನು ಸಹಕಾರಿಯಾದ ಅಂಶಭಾಗಿಯನ್ನಾಗಿ ಮಾಡಿಕೊಂಡರೆ ತೀರಿತು."

ಸೂಕ್ಷ್ಮತನದ ಕಡೆಗೆ ಒಲಿಯುವ ಆ ಸಂಭಾಷಣದ ಮರ್ಮವು ಧ್ಯಾನದಲ್ಲಿ ಬರುವಷ್ಟು ತನ್ನ ಅಣ್ಣನು ಮಾರ್ಮಿಕನಿಲ್ಲೆಂಬದನ್ನು ಮನದಂದು, ವಿಮಲೆಯು ತುಸ ಖೇದಗೊಂಡಳು!

ಮತ್ತೆ ಏನಾದರೂ ಮಾತಾಡಬೇಕೆಂದು ಮಹಾರಾಜರು:—"ವಿಮಲಾಬಾಯಿ, ಪ್ರಭಾಕರನಂತಹ ಅಣ್ಣನು ಲಭಿಸಿದ ನಿಮ್ಮ ಸದ್ಭಾಗ್ಯವನ್ನು ಯಾರು ಎಷ್ಟೆಂದು ವರ್ಣಿಸುವರು? ಇಂಥ ಬಗೆಯ ಸುಶಿಕ್ಷಣ, ಚಾರಿತ್ರ್ಯ, ಮಾತಾ-ಪಿತೃಪ್ರೇಮ, ಬಂಧುಪ್ರೇಮ ಇವೆಲ್ಲ ಗುಣಗಳಿಂದ ನನಗಿಂತ ಶ್ರೇಷ್ಠರಾಗಿರುವ ನಿಮ್ಮೊಡನೆ ಈ ಮೊದಲು ನಾನು ಹೆಚ್ಚು ಮನಬಿಚ್ಚಿ ಮಾತನಾಡದಿರಲಿಕ್ಕೆ ಈ ನ್ಯಾಯದಾನದ ಪ್ರಕರ್ಣವೇ ಕಾರಣವಾಗಿತ್ತೆಂದು ನೀವು ನನ್ನನ್ನು ಕ್ಷಮಿಸಬಹುದಲ್ಲವೇ?"

ಮಹಾರಾಜರ ಆ ವಿನಯದಿಂದ ವಿಮಲೆಯ ಮೈಯಲ್ಲಿ ಸಂಚಾರವಾದಂತಾಗಿ, ಏನು ಉತ್ತರ ಕೊಡಬೇಕೆಂಬದು ಅವಳಿಗೆ ಸೂಚಿಸದಾಯಿತು. ಕಡೆಗೆ ಅವಳು: "ಇದರಲ್ಲಿ ಕ್ಷಮೆಯು ಏತಕ್ಕಾಗಿ? ದೊಡ್ಡಿಸ್ತಿಕೆಯ ಅಡಚಣಿಗಳೂ ಅನನುಕೂಲತೆಗಳೂ ಯಾರಿಗಾದರೂ ಬಿಟ್ಟದ್ದುಂಟೇ? 'ಯಾರಲ್ಲಿ ದೊಡ್ಡಿಸ್ತಿಕೆಯಿದೆಯೋ ಅವರಿಗೆ ಹಲವು ಕಠಿಣ ಯಾತನೆಗಳು' ಎಂದು ಸಂತ ತುಕಾರಾಮನು ಹೇಳಿರುವನು; ಹಾಗು ಶೆಕ್ಸಪಿಯರನಾದರೂ 'Uneasy lies the head that wears a crown' ಹೀಗೆಂದು ಅಂದಿದ್ದಾನೆ; ಆದರೂ ನಮ್ಮ ಮಹಾರಾಜರು ಸಂಸ್ಥಾನದ ತಿಜೋರಿಯೊಳಗಿನ ರಾಜಮುಕುಟವನ್ನು ಎಂದೂ ತಲೆಯ ಮೇಲಿರಿಸಿಕೊಂಡಿಲ್ಲ! ಇಷ್ಟೇ ಅಲ್ಲ, ಅದನ್ನು ಹೊರಗೆ ತೆಗೆದು ಯಾರ ಕಣ್ಣಿಗೂ ಬೀಳಗೊಟ್ಟಿಲ್ಲ."

ಜೊ:—ಮತ್ತು ಈ ದಿನ ನೀವೀರ್ವರೂ ನನ್ನ ಸ್ವರಾಜ್ಯದ ಯೋಜನೆಯನ್ನು ಪಾಸು ಮಾಡಿದಿರೆಂದರೆ, ಆ ಮುಕುಟವನ್ನು ಒಮ್ಮೆಲೆ ಹೊರ ತೆಗೆದು, ನಾನು ಅದನ್ನು ಹರಳು-ಕಲ್ಲಿನ ವ್ಯಾಪಾರಸ್ತರ ಕಡೆಗೆ ಮುರಿಸಲಿಕ್ಕೆ ಕೊಡುವವನಿರುತ್ತೇನೆ. ಅದು ಕೇವಲ ತಲೆಶೂಲಿಯನ್ನೆಬ್ಬಿಸುವಷ್ಟು ಭಾರವಾಗಿದೆ; ಅಲ್ಲದೆ ಅದು ತನ್ನೊಳಗಿನ ರಾಜಕೀಯ ಪಾಪಗಳ ವ್ಯಾಧಿಯಿಂದ ಬುದ್ಧಿವಂತ

ಅರಸನಿಗೆ ಹುಚ್ಚು ಕೂಡ ಹಿಡಿಸೀತು!

ಮ:—ಮಹಾರಾಜರೆ, ನಿಮಗೆ ಬರ್ಕನ "What is majesty but a jest when deprived of its externals" ಸುಭಾಷಿತವು ಗೊತ್ತಿದೆಯೇ? Majesty ಈ ಶಬ್ದದೊಳಗಿನ M and Y ಈ ಆದ್ಯಂತ ಅಕ್ಷರಗಳನ್ನು ತೆಗೆದು ಬಿಟ್ಟಿತೆಂದರೆ, ರಾಜಪದವಿದು ಕೇವಲ ಚೇಷ್ಟೆ ಯುಳಿಯುತ್ತದೆ!

ಜೋ:—ಬರ್ಕನ ಅಂಬೋಣವು ಸರಿಯಿದೆ; ಆದರೆ ಯಾವ ರಾಜರು ಹಾಗಿದ್ದಾರೆಯೋ ಅವರ ಮಟ್ಟಿಗೇ ಅದು. ನಾನು ಹೆಸರಿನಿಂದ ರಾಜನಾಗಿದ್ದರೂ ಕೇವಲ ಆ ಪದದ ಬಲದಿಂದ ವಿಭೂತಿಮತ್ತ್ವದ ಹಕ್ಕು ಹೇಳುವವನಲ್ಲ. ಇದಕ್ಕೆ ವಿರುದ್ಧವಾಗಿ ನನ್ನಲ್ಲಿ ನಿಜವಾಗಿಯೂ ದೊಡ್ಡಿಸ್ತಿಕೆಯಿದ್ದರೆ, ಈ ರಾಜಮುಕುಟವನ್ನು ಚೆಲ್ಲಿಕೊಟ್ಟರೂ ಅದು ನನ್ನಲ್ಲಿ ಕಂಡೇ ಕಾಣುವದು.

ವಿಮಲೆ:—ಮಹಾರಾಜರು ರಾಜಮುಕುಟವನ್ನು ಹರಳುಕಲ್ಲಿನ ವ್ಯಾಪಾರಸ್ಥರ ಕಡೆಗೆ ಮುರಿಸಲಿಕ್ಕೆ ಕಳಿಸುವ ಹೇತುವನ್ನು ದರಬಾರದಲ್ಲಿ ಜಾಹೀರ ಮಾಡಿದಾಗಲೇ ಅದು ಕಂಡುಬಂದಿದೆ! ಬರ್ಕನ ಸುಭಾಷಿತವನ್ನು ಮಹಾರಾಜರು ಈ ಮೊದಲೇ ಸುಳ್ಳುಗೆಡವಿರುತ್ತಾರೆ. ರಾಜರ ಮುಕುಟಕ್ಕಿಂತ ಅವರ ಮಿದುಳಿನ ಬೆಲೆಯೇ ಹೆಚ್ಚಿರಬೇಕು. ನೆಪೋಲಿಯನ್ ಬೋನಾಪಾರ್ಟನ ರಾಜಮುಕುಟವನ್ನು ಕಾಲಿಲೆ ತುಳಿಯುವ ಆತನ ಶತ್ರುಗಳು, ಆತನ ಮಿದುಳನ್ನು ತೆಗೆದುಕೊಂಡು, ಅದೊಂದು ಅದ್ಭುತ ವಸ್ತುವೆಂದು ಮ್ಯುಝಿಯಮ್ಮಿನಲ್ಲಿರಿಸಿದರೆಂದು ನಾನು ಮೊನ್ನೆ ಯಾತರಲ್ಲಿಯೋ ಓದಿರುತ್ತೇನೆ.

ಮ:—ಆದರೆ ರಾಜಮುಕುಟವು ರಾಜಚಿಹ್ನವಾಗಿದೆ; ಅದನ್ನು ಮುರಿಸುವದೆಂದರೆ ರಾಜಪದವನ್ನು ಸ್ಪಷ್ಟವಾಗಿ ನಾಶಪಡಿಸುವಂತಲ್ಲವೆ?

ಜೋ:—ಆದರೆ ಮನಸ್ಸಿನ ಸಿದ್ಧತೆಯು ಅಷ್ಟು ಆಗದ ಹೊರತು ಪ್ರಜೆಗಳು ಕೇಳಿದ್ದನ್ನು ಕೊಡುವ ಜಾಹಿರನಾಮೆಯೊಳಗಿನ ನನ್ನ ಪ್ರತಿಜ್ಞೆಯು ಸಫಲವೆಂತಾಗಬೇಕು?

ವಿ:—ಮಹಾರಾಜರೆನ್ನುವದೇ ಸರಿಯಿದೆ. ನಮ್ಮ ಹೆಣ್ಣುಮಕ್ಕಳ ಅಡಿಗೆಯ ಮನೆಯ ರೀತಿಯಾದರೂ ಹೀಗೆಯೇ ಇದೆ. ಅತಿಥಿ ಅಭ್ಯಾಗತರನ್ನು ಊಟಕ್ಕೆ ಕರೆದಾಗ ಅವರು ಸಾಕುಸಾಕೆನ್ನುವ ವರೆಗೆ ಉಣ ಬಡಿಸುವ ಸಿದ್ಧತೆಯು ಸುಗೃಹಿಣಿಯದಿರಬೇಕಾಗುತ್ತದೆ. ನಾಲ್ಕೇ ತುತ್ತಿನಷ್ಟು ನೀಡಿದ ಕೂಡಲೆ ಆತನು ಬಹುಶಃ ಸಾಕುಸಾಕೆನ್ನ ಹತ್ತುವದುಂಟು; ಆದರೆ ಬಡಿಸುವವಳು ಕೈಯೊಳಗಿನ ಪಾತ್ರೆಯನ್ನು ಸೂಸಮಟ ತುಂಬಿಯೇ ಅಡಿಗೆಯ ಮನೆಯಿಂದ ಹೊರಹೊರಡಿಸಬೇಕು. "ಇನ್ನು ಸ್ವಲ್ಪ ಬಡಿಸಿರಿ" ಎಂಬ ಶಬ್ದಗಳನ್ನು ಅಭ್ಯಾಗತರಿಗೆ ಉಚ್ಚರಿಸ

ಹಚ್ಚುವವಳು ಗೃಹಿಣಿಯೆಂಥವಳು? ಅಂಥವಳಿಗೆ ಹೋಟಲಿನವಳೆನ್ನಬಹುದು.

ಮ:—ಆದರೆ ರಾಜಪದವನ್ನು ನಾಶಗೊಳಿಸುವ ಅಧಿಕಾರವು ರಾಜನಿಗೂ ಇಲ್ಲವಲ್ಲ! ಆ ಬಗ್ಗೆ ಏನು ಮಾಡಬೇಕು?

ಜೋ:—ಅದೇಕಂತೆ? ಆಸ್ತಿಯನ್ನು ನಾಶಪಡಿಸುವ ಹಕ್ಕಿರದಿದ್ದರೆ ಅದರ ಮೇಲಿನ ಸ್ವಾಮಿತ್ವದ ಹಕ್ಕಿನ ಸಂಪೂರ್ಣತೆಯೇ ಆಗುವದಿಲ್ಲ.

ಮ: ಆದರೆ ರಾಜಪದದ ಸ್ಥಿತಿಯು ಬೇರೆ ಇದೆ. ಪ್ರಜೆಗಳು ಅದನ್ನು ಕಾಯಬೇಕೆಂದರೆ, ಅದನ್ನು ನಾಶಪಡಿಸಲಿಕ್ಕೆ ರಾಜನಿಗೂ ಅಧಿಕಾರವಿರುವದಿಲ್ಲ.

ಜೋ:—ಹಾಗಾದರೆ ಪ್ರಜೆಗಳು ಅದನ್ನು ಸಂತೋಷದಿಂದ ಸಂರಕ್ಷಿಸಲಿ; ಆದರೆ ಆ ಮೇಲೆ ನನ್ನನ್ನು ರಾಜನೆಂದು ಅಂಸುವ ಹಕ್ಕನ್ನು ಅವರು ತಮ್ಮ ಕಡೆಗೇ ತಕ್ಕೊಳ್ಳಬೇಕು.

ಮ:—ಅದಿರಲಿ. ಯಾವುದರ ರುಚಿ ತಕ್ಕೊಳ್ಳಬೇಕು, ಯಾವುದನ್ನು ಕಾದಿಡಬೇಕು ಇವುಗಳ ಜ್ಞಾನವು ಹೆಣ್ಣುಮಕ್ಕಳಷ್ಟು ಗಂಡಸರಿಗಿರುತ್ತಿರುವ ದಿಲ್ಲೆಂಬದು ನನಗೆ ಮಾನ್ಯವಿದೆ. ಉಣ್ಣುವವರನ್ನು ತೃಪ್ತಿಗೊಳಿಸುವದಲ್ಲದೆ, ತುಂಬಿದ ಪಾತ್ರೆಯನ್ನೂ ಅಡಿಗೆಯ ಮನೆಗೊಯ್ಯುವ ಗೃಹಿಣಿಯರಂತೆ ಪ್ರಜೆಗಳಿಗೆ ಏನು ಕೊಡಬೇಕು, ರಾಜನು ಏನು ಇಟ್ಟುಕೊಳ್ಳಬೇಕು ಇವುಗಳ ನಿರ್ಣಯವನ್ನು ಇನ್ನು ಮೇಲೆ ವಿಮಲಾಬಾಯಿಯವರೇ ಮಾಡಬೇಕು! ಸಭೆಯ ಅಧ್ಯಕ್ಷಳೆಂದು ಪ್ರಜೆಗಳ ಮುಖವಾಗುವ ಮಾನವು ಅವರಿಗೆ ಲಭಿಸಿದ್ದೇ ಇದೆ; ಮತ್ತು ಮಹಾರಾಜರಾದರೂ ತಮ್ಮ ಮುಖವನ್ನು ಇವರಿಗೆ ಅರ್ಪಿಸಿರುತ್ತಾರೆ. ಅಂದರೆ ತಮ್ಮ ಪತಿಯಿಂದ ಮಾತಾಡುವ ಅಧಿಕಾರವನ್ನು ಇವರಿಗೆ ಕೊಟ್ಟು ಬಿಟ್ಟಿರುತ್ತಾರೆ. ಅದರಿಂದ ಎರಡೂ ಪಕ್ಷಗಳ ಸಮಾಧಾನವನ್ನು ಹೇಗೆ ಮಾಡಬೇಕೋ ಅದನ್ನು ಇವರೇ ಚೆನ್ನಾಗಿ ಮಾಡಬಲ್ಲರು.

ಜೋ:—ಈ ಕಲ್ಪನೆಯು ನನಗೆ ಸಮ್ಮತವಾಗಿದೆ. ಪ್ರಜೆಗಳ ಮುಖದಂತೆ ನನ್ನ ಮುಖವೂ ಅಂದರೆ, ನನ್ನ ಪ್ರತಿನಿಧಿಗಳೂ ವಿಮಲಾಬಾಯಿಯವರಾಗುತ್ತಿದ್ದರೆ ನಾನು ನನ್ನ ಅಧಿಕಾರವನ್ನು ಇವರಿಗೆ ಸಂತೋಷದಿಂದ ಸಮರ್ಪಿಸುತ್ತೇನೆ; ಅಲ್ಲದೆ ಇದರಲ್ಲಿ ಇನ್ನೊಂದು ವಿಶೇಷ ಕಾರಣವಿದೆ.

ಮ:—ಅದೇನಿರಪ್ಪಾ! ಇಂದು ನಿಮಗೆ ಬಹಳ ಸಂಗತಿಗಳು ನೆನಪಾಗ ಹತ್ತಿದವೆನ್ನಬೇಕು!

ಜೋ:—ಸ್ವರಾಜ್ಯಪ್ರಾಪ್ತಿಯ ದೃಷ್ಟಿಯಿಂದ ನನ್ನ ರಾಜ್ಯದೊಳಗಿನ ಪ್ರಜೆಗಳಿಗೆ ಇಂದು ಇದು ವಸಂತಾಗಮನವೇ ಸರಿ; ಮತ್ತು ವಸಂತಪ್ರಾಪ್ತವಾಯಿತೆಂದರೆ ಅರುಣೋದಯವನ್ನು ಜಾಹೀರ ಪಡಿಸುವ ಕೆಲಸವು ಹುಂಜದಿಂದ-

ಗಂಡು ಕೋಳಿಯಿಂದ-ಹೋಗಿ ಅದು ಹ್ಯಾಟಿಗೆ-ಹೆಣ್ಣು ಕೋಳಿಗೆ-ಬರುತ್ತದೆಂಬದು ಪ್ರಸಿದ್ಧವಿಲ್ಲವೆ?

ಮ:—ಭಲೆ! ಭಲೆ! ನಿಮ್ಮ ಜಾಹೀರನಾಮೆಯು ಮೇರೆಗೆ ಸರ್ವಸ್ವವನ್ನು ಕೊಡುವ ಉದಾರತನವೆಲ್ಲ ನಿಮ್ಮದು; ಮತ್ತು ನಾಳಿನ ಯೋಜನೆಯಲ್ಲಿ ಕಂಡು ಬರುವ ಕಾದಿಡುವ ಕೃಪಣತನವು ಮಾತ್ರ ವಿಮಲಾಬಾಯಿಯವರದು. ಮಹಾರಾಜ, ಇದು ನಿಮ್ಮ ಸ್ವಾರ್ಥೀ ಧೂರ್ತತನದ ಆಟವಿದೆಯಲ್ಲವೆ?

ಜೋ:—ಮನೋಹರ! ನನಗೆ ಯಾರೂ ಉದಾರನೆನ್ನದಿದ್ದರೂ ನಡೆದೀತು; ಆದರೆ ಉದಾರತನದ ವೇಷ ಧರಿಸುವ ಕೃಪಣ ಇಲ್ಲವೆ ಅಪ್ರಮಾಣಿಕನೆಂದು ನನಗಾರೂ ಅನ್ನಬಾರದೆಂಬದಿಷ್ಟೇ ನನ್ನ ಆಕಾಂಕ್ಷೆಯಿರುತ್ತದೆ. ನನ್ನ ತ್ಯಾಗದ ಪರೀಕ್ಷೆಯನ್ನು ಯಾರಾದರೂ ಮಾಡಬಂದರೆ ನಾನದನ್ನು ಸಿದ್ಧಪಡಿಸೇನು. ರಾಜಮುಕುಟವನ್ನು ಮುರಿಸುವ ಬಗ್ಗೆ ನಾನು ಆಗಲೆ ಹೇಳಿದೆನು. ಈ ಬೈಠಕಿಯಲ್ಲಿಯೇ ಮನೋಹರ, ನೀನಾಗಲಿ ವಿಮಲಾಬಾಯಿಯವರಾಗಲಿ ಸ್ವರಾಜ್ಯದಾನದ ಯಾವ ಯೋಜನೆಯನ್ನು ಪ್ರಜೆಗಳ ಇಚ್ಛೆಗನುಸಾರವಾಗಿ ಕಾಗದದ ಮೇಲೆ ಬರೆಯುವಿರೋ, ಅದರ ಮೇಲೆ ನಾನು ನನ್ನ ಸಹಿ ಮಾಡುತ್ತೇನೆ; ಆದರೆ ಮನೋಹರಾ, ನೀನು ಕೃಪಣಶಿರೋಮಣಿಯು! ಅದರಿಂದ ನೀನು ಪ್ರಜೆಗಳಿಗೇನನ್ನೂ ಕೊಡದೆ, ಎಲ್ಲವನ್ನೂ ಕಾದಿಡುತ್ತೀ ಎಂಬದು ನನಗೆ ತಿಳಿದಿದ್ದೇ ಇದೆ. ವಿಮಲಾಬಾಯಿಯವರು ನಿನಗಿಂತ ಎಷ್ಟೋ ಪಾಲು ಹೆಚ್ಚು ಉದಾರರಾಗಿರುತ್ತಾರೆ. ಅವರು ಪ್ರಜೆಗಳಿಗೆ ಏನಾದರೂ ಹಕ್ಕುಗಳನ್ನು ಖಂಡಿತವಾಗಿಯೂ ಕೊಡುವರು. ನಿಮ್ಮಗಳ ಅಂಜಿಕೆಯೆನಿಸುವದೆಂದು ನಾನೇ ಆ ಯೋಜನೆಯನ್ನು ಬರೆಯಲಾಗುವದಿಲ್ಲ. ಅದಿಲ್ಲದಿದ್ದರೆ, ಸ್ವರಾಜ್ಯದ ಯೋಜನೆಯನ್ನು ಬರೆಯಲಿಕ್ಕೆ ನೀವಿಬ್ಬರೂ ಮನಬಿಚ್ಚಿ ನನಗೆ ಅನುಜ್ಞೆಯನ್ನಿತ್ತರೆ, ನನ್ನ ಮನಸ್ಸಿನಲ್ಲಿ ಪ್ರಜೆಗಳಿಗೆ ಏನು ಮತ್ತು ಎಷ್ಟು ಕೊಡಬೇಕಾಗಿದೆಯೆಂಬದು ಈಗಿಂದೀಗಲೇ ನಿಮ್ಮ ನಿದರ್ಶನಕ್ಕೆ ಬಂದೀತು; ಮತ್ತು ಅದರ ಲಾಕ್ಷಣಿಕ ಆದರೆ ದೃಶ್ಯಕಲ್ಪನೆಯು ನಿಮಗೆ ಬರಬೇಕೆಂದು....

ಇಷ್ಟು ಹೇಳಿ ಮಹಾರಾಜರು ಖುರ್ಚಿಯಿಂದ ಎದ್ದರು. ಕಿಟಕಿಯ ಬಳಿಯಲ್ಲಿ ತೂಗಗಟ್ಟಿದ್ದ ಹಿತ್ತಾಳಿಯ ಪಂಜರದ ಕದವನ್ನು ಅವರು ಎತ್ತಿಹಿಡಿದರು. ಅದರೊಳಗಿನ ಪಂಚರಂಗಿಯ ಗಿಳಿಯನ್ನು ಕೈಯಲ್ಲಿ ತಕ್ಕೊಂಡು, ಹೂವಿನ ಹಾರವನ್ನು ಹಾಕಿದ್ದ 'ತಾಯಿ'ಯ ಫೋಟೋದ ಕಡೆಗೆ ಒಮ್ಮೆ ನೋಡಿದರು; ಹಾಗು ಆ ಗಿಳಿಯನ್ನು ಮುಷ್ಟಿಯಲ್ಲಿ ಹಿಡಿದು ಕಿಟಕಿಯೊಳಗಿಂದ ಹಾರಿ ಹೋಗುವದಕ್ಕೆಂದು ಹೊರಗೆ ಬೀಸಿಬಿಟ್ಟರು.

ಈ ಎಲ್ಲ ಸಂಗತಿಗಳು ಅಭಾವಿತ ರೀತಿಯಿಂದ ಒಂದೇ ಕ್ಷಣದಲ್ಲಿ ಘಟಿಸಿ

ದ್ದರಿಂದ, ಅಲ್ಲಿದ್ದ ಬೇರೆಯವರು ಕೌತುಕಾಸ್ಪದ ದೃಷ್ಟಿಯಿಂದ ಚೋಜಿಗರಾಯನ ಕಡೆಗೆ ನೋಡುವದರ ಹೊರತು ಬೇರೆ ಏನು ಮಾಡಬರುವಂತಿತ್ತು? ಆದರೆ ಪ್ರಭಾಕರನಿಗೆ ಇಷ್ಟೊತ್ತಿನ ಮೇಲೆ ಆ ಪ್ರಸಂಗದಲ್ಲಿ ಬಾಯಿ ಬಂದಿತು. ಅವನು ತನ್ನ ಬಲಗೈಯಿಂದ ಎಡಗೈಯ ಮೇಲೆ ಗಟ್ಟಿಯಾಗಿ ಚಪ್ಪಾಳೆ ಬಡಿದು, ಆನಂದದಿಂದ ಗರ್ಜಿಸಿ:-“ವಾಹವ್ವಾ, ವಾಹವ್ವಾ! ಬಹದ್ದರ ಮಹಾರಾಜ! ತಮ್ಮ ಅಂತಃಕರಣವು ನಿಜವಾದ ಅರಸನಿಗೆ ಒಪ್ಪುಬಹುದಾಗಿದೆ. ಸ್ವರಾಜ್ಯದಾನದ ಕಲ್ಪನೆ ಮಾಡುವಾಗ ಸಮೀಪದಲ್ಲಿಯೇ ಪ್ರೀತಿಯದೆಂದು ಪಂಜರದಲ್ಲಿ ಗಿಳಿಯನ್ನು ಸೆರೆಯಿರಿಸುವದು ಕೃತ್ರಿಮತನದ ಪುರಾವೆಯೇ ಆಗುತ್ತಿತ್ತು. ಯಾವನು ಯಃಕಶ್ಚಿತವಾದ ಗಿಳಿಗೆ ಸ್ವಾತಂತ್ರ್ಯವನ್ನು ಕೊಡುವದಿಲ್ಲವೋ, ಆತನು ಪ್ರಜೆಗಳಿಗೇನು ಕೊಟ್ಟಾನೆಂಬದು ತಿಳಿದದ್ದೇ ಇದೆಯೆಂದು ನಾನಾದರೂ ಮನಸ್ಸಿನಲ್ಲಿ ಅನ್ನದೆ ಇರುತ್ತಿದ್ದಿಲ್ಲ.”

ಮ:—ವಿಮಲಾಬಾಯಿ, ನಮ್ಮ ಮಹಾರಾಜರಿಗೆ ಅವರ ಸ್ವಾತಂತ್ರ್ಯ ಪ್ರಿಯತೆಯಲ್ಲಿ ನಿಮ್ಮ ಅಣ್ಣನು ಒಳ್ಳೇ ಜೊತೆಗಾರನಾಗಿರುವದು ನಿಜ!

ಚೋ:'-ವಿಕ್ಷಿಪ್ತತನದಲ್ಲಿ' ಎಂದು ನಿನ್ನ ಮನಸ್ಸಿನಲ್ಲಿ ಅನ್ನುವದಿದ್ದೀತು; ಆದರೆ ಮಾತಿಗೆ ತುಸ ಗಿಲೀಟು ಹಚ್ಚಿರುವದೇ ನಮ್ಮ ಮೇಲಿನ ನಿನ್ನ ಕೃಪೆಯು!

ಆದರೆ ಆ ಇಬ್ಬರು ಮಿತ್ರರನ್ನೂ ಸಾವರಿಸಿಕೊಳ್ಳಲಿಕ್ಕೆಂದು ವಿಮಲೆಯು: “ಈ ಸ್ವಭಾವಭೇದವು ಗೆಳೆಯ-ಗೆಳೆಯರಲ್ಲಿ ಚೆನ್ನಾಗಿ ಒಪ್ಪುತ್ತದೆ. ನಮ್ಮ ಅಣ್ಣನಿಗೆ ಯಾರಾದರೂ ವಿಕ್ಷಿಪ್ತನೆಂದರೆ, ನಾನು ಅದರ ಅರ್ಥವನ್ನು 'ಲೋಕೋತ್ತರ'ವೆಂದು ಮಾಡುತ್ತೇನೆ. ಲೋಕೋತ್ತರವಾದಂಥ ದೊಡ್ಡ ಕಾರ್ಯಗಳು ಘಟಿಸಬೇಕಾಗಿದ್ದರೆ, ಸ್ವಭಾವದಲ್ಲಿ ಇಂಥ ಸ್ವಲ್ಪ ವಿಕ್ಷಿಪ್ತತನವು ಇರದಿದ್ದರೆ ನಡೆಯುವದಿಲ್ಲ. ತೀರ ಸರಳ ರೇಷೆಗಿಂತ ಸ್ವಲ್ಪ ವಕ್ರ [ಕರ್ವ್ಹ] ರೇಷೆಯೇ ಸೌಂ-ದರ್ಯ ಪ್ರಕಟಿಸುವದಕ್ಕೆ ಹೆಚ್ಚು ಉಪಯುಕ್ತವಾಗುತ್ತದೆಂದು ಅನ್ನುತ್ತಾರೆ!

ಮನೋಹರನು ತುಸ ಖೇದಜನಕ ಸ್ವರದಿಂದ:—ನಮ್ಮ 'ತಾಯಿ'ಯು ಬಹು ದಿವಸದಿಂದ ಸಂರಕ್ಷಿಸಿ, ನಿಮ್ಮ ಸ್ವಾಧೀನಪಡಿಸಿದ್ದ ಗಿಳಿಯನ್ನು ಮಹಾರಾಜ, ನೀವು ಇಂದು ಹೀಗೆ ಬಿಟ್ಟುಬಿಟ್ಟೀರೆಂದು ನನಗನಿಸಿರಲಿಲ್ಲ.

ಚೋ:—ಏನೋ ಮನೋಹರ, ಪ್ರೇಮವೇ ಮೋಹವೆಂದೆನ್ನುವರಲ್ಲ! ಅದೇ ಇದು. ಇದುವರೆಗೆ ಆ ಗಿಳಿಯ ಕಡೆಗೆ ನೋಡಿ ನನಗೆ ನನ್ನ ತಾಯಿಯ ನೆನಪಾಗುತ್ತಿತ್ತೆಂದೇ ನಾನದನ್ನಿಟ್ಟಿದುದು ನಿಜವು; ಆದರೆ ಇಂದೇ ಬೆಳಿಗ್ಗೆ ಮುಚ್ಚಲ್ಪಟ್ಟ ಪಂಜರದೊಳಗಿನ ಗಿಳಿಯ ಕಡೆಗೆ ನೋಡಿ ನನಗೆ ಹೇಗೆ ತಾಯಿಯ ನೆನಪಾದೀತೋ, ಹಾಗೆಯೇ ಈ ಪಂಜರವನ್ನು ನೋಡಿಯೂ ಏಕಾಗಬಾರದೆಂದು

ಮನಸ್ಸಿನಲ್ಲಿ ಅನಿಸಿತು. ಭೋಗದಂತೆ ಯೋಗವೂ ಸತ್ಪ್ರವೃತ್ತಿಗೆ ಉಪಯೋಗ ವಾಗುತ್ತದೆ. ಅವೆರಡರಲ್ಲಿಯೂ ತ್ಯಾಗವನ್ನೇ ಅವಲಂಬಿಸುವದು ಹೆಚ್ಚು ಶ್ರೇಯಸ್ಕರವಾಗಿಲ್ಲವೇ? ನನ್ನ ತಾಯಿಯ ಪ್ರೇಮವು ಆ ಗಿಳಿಯ ಮೇಲಿದ್ದಿಲ್ಲವೆಂದು ನಾನು ಯಾವ ಬಾಯಿಂದ ಅಂದೇನು? ಅದಕ್ಕೆ ಹಣ್ಣು-ಕಾಳು-ನೀರು-ಕೊಡದ ಹೊರತು ಅವಳೆಂದೂ ಅನ್ನಗ್ರಹಣ ಮಾಡಲಿಲ್ಲೆಂಬದು ನನಗೆ ಚೆನ್ನಾಗಿ ಗೊತ್ತಿದೆ; ಆದರೆ ಅವಳು ಅದರ ಮೇಲಿನ ಪ್ರೇಮದ ಪ್ರತಿಫಲವನ್ನು ಅದನ್ನು ಬಂದಿವಾಸದಲ್ಲಿಟ್ಟು ಪಡೆಯಲಿಲ್ಲವೇನು? ಸಾಕಿದ ಪ್ರಾಣಿಗಳ ಮೇಲೆ ಪ್ರೇಮ ಮಾಡಬೇಕು; ಹಾಗು ನಾನು ಅದನ್ನು ಮಾಡುತ್ತಿರುತ್ತೇನೆ; ಆದರೆ ಆ ಪ್ರಾಣಿ-ಪ್ರಾಣಿಗಳಲ್ಲೂ ಭೇದವಿದ್ದೇ ಇದೆಯಲ್ಲವೆ? ಕಾಲಿನಿಂದ ದೂಡಿದರೂ ಬೆಕ್ಕು ಕಡಿಯುವದಿಲ್ಲ; ಅಂದರೆ ಅಂಥ ಚರ್ಮಗೆಟ್ಟ ಪ್ರಾಣಿಗೆ ಪಂಜರವನ್ನು ಅದಾರು ಕೊಡುವರು? ಅದೂ ಪ್ರೇಮದ ವಿಷಯವೇ ಆಗಿದ್ದರೂ, ಓಡಿ ಹೋಗುವ ಅಂಜಿಕೆಯಿಲ್ಲ; ಆದರೆ ಗಿಳಿಯು ಪ್ರೇಮದ ವಿಷಯವಾಗಿದ್ದರೂ ಅದು ಹಾರಿ ಹೋಗುತ್ತದೆ. ನಮ್ಮ ಪ್ರೇಮಕ್ಕಿಂತ ಅದಕ್ಕೆ ಸ್ವಸ್ವಾತಂತ್ರ್ಯವೇ ಹೆಚ್ಚು ಪ್ರಿಯವಾಗಿರುವದರಿಂದ, ನಾವು ಅದನ್ನು ಪಂಜರದಲ್ಲಿರಿಸುವದಿಲ್ಲವೆ? ಆದರೆ ಇದೆಂಥ ನ್ಯಾಯವು?

ಇಷ್ಟರಲ್ಲಿ ಮೋಜೇನಾಯಿತೆಂದರೆ, ಜೋಜಿಗರಾಯನು ಕಿಟಕಿಯ ಹೊರಗೆ ಹಾರಿಸಿ ಬಿಟ್ಟಿದ್ದ ಗಿಳಿಯು ಕಿಟಕಿಯೊಳಗಿಂದ ಮರಳಿ ಬಂತು; ಆದರೆ ಅದು ಮತ್ತೆ ಪಂಜರದೊಳಗೆ ಹೊಗದೆ, ಹೂವಿನ ಮಾಲೆ ಹಾಕಿದ್ದ ಫೋಟೋದ ಕಟ್ಟಿನ ಮೇಲೆ ಹೋಗಿ ಕುಳಿತಿತು; ಮತ್ತು 'ಜೋಜಿಗಾ, ಜೋಜಿಗಾ' ಎಂಬ ಶಬ್ದದಿಂದ ಕೂಗತೊಡಗಿತು. ಎಲ್ಲರೂ ಆಶ್ಚರ್ಯ ಚಕಿತರಾದರು. ಅದನ್ನು ಕಿಟಕಿಯೊಳಗಿಂದ ಹಾರಿಸಿದ ಕೂಡಲೆ ಅದು ಮೊಟ್ಟಮೊದಲು ದೂರದ ಗಿಡಕ್ಕೆ ಹೋಗಿ, ಅಲ್ಲಿಂದ ಮುಂದೆ ಮತ್ತೆಲ್ಲಿಗಾದರೂ ಹೋದೀತು; ಹಿಂದಿರುಗಿ ಬರಲಾರದೆಂದು ಅವರೆಲ್ಲರ ಮನಸ್ಸಿನ ಖಾತ್ರಿಯಾಗಿತ್ತು. ಆದರಿಂದ ನಡೆದ ಸಂಗತಿಯ ಅರ್ಥವೇನು ಮಾಡಬೇಕೆಂಬದು ಅವರಿಗೆ ತಿಳಿಯದಾಯಿತು. ಆಗ ಪ್ರಮಾಣಿಸಿಯೇ ನೋಡಬೇಕೆಂದು ಜೋಜಿಗರಾಯನು ಫೋಟೋದ ಬಳಿಗೆ ಹೋಗಿ ಗಿಳಿಯನ್ನು ಕೈಮೇಲೆ ಕೂಡ್ರಿಸಿಕೊಂಡು ಪ್ರೇಮದಿಂದ ಅದನ್ನು ಚುಂಬಿಸಿದನು. ಆ ಮೇಲೆ ತೆರೆದ ಬಾಗಿಲದೊಳಗಿಂದ ಅದನ್ನು ಪಂಜರದೊಳಗಿರಿಸಿದರೆ ಅದು ಇರುವದೇನೆಂಬದನ್ನು ನೋಡುವ ಸಲುವಾಗಿ, ಜೋಜಿಗರಾಯನು ಪಂಜರದ ಕಡೆಗೆ ಹೋದನು; ಆದರೆ ಗಿಳಿಯು ಸರ್ಕಸ್ಸಿನೊಳಗಿನ ಶ್ವಾಪದಗಳಂತೆ ಒಳಗಂತೂ ಪ್ರವೇಶಿಸಲೇ ಇಲ್ಲ; ಮತ್ತು ತನ್ನ ರೆಕ್ಕೆಗಳನ್ನು ಕಸುಪಿನಿಂದ ಫಡಫಡಿಸುತ್ತ ಜೊಂಬಿ

ನಿಂದ ಜೋಜಿಗರಾಯನ ಕೈಯನ್ನು ಗಟ್ಟಿಯಾಗಿ ಹಿಡಿಯಿತಷ್ಟೇ; ಚೆನ್ನಾಗಿ ಕಚ್ಚಲಿಲ್ಲ. ಇದನ್ನು ಕಂಡು ಎಲ್ಲರೂ ಕೌತುಕದಿಂದ ನಗಹತ್ತಿದರು. ಪ್ರಭಾಕರನ ನಗೆಯು ತಡೆಯದ್ದರಿಂದ ಆತನು ಚಪ್ಪಾಳೆ ಹೊಡೆದು:—ಜೀತೇ ರಹೋ ಪಠ್ಠೆ! ಸ್ವಾತಂತ್ರ್ಯ ಪ್ರೇಮ, ಋಣಾನುಬಂಧುತ್ವ, ಕೃತಜ್ಞತೆ ಇವುಗಳನ್ನು ನೀನು ಚೆನ್ನಾಗಿ ವ್ಯಕ್ತಪಡಿಸಿದೆ.

ಮನೋಹರನು ನಕ್ಕು:—ಆದರೆ ಇದಕ್ಕೆ ಮನುಷ್ಯರ ಸಹವಾಸವು ಪ್ರಿಯವಾಗಿದ್ದರೆ ಇದು ಪಂಜರದಲ್ಲಿರುವದೇ ಇಷ್ಟವಾಗಿದೆ! ಇಲ್ಲದಿದ್ದರೆ ಇದನ್ನು ಬೆಕ್ಕು ತಿಂದು ಬಿಟ್ಟೀತಲ್ಲ! ಅದರ ಗತಿಯೇನು? ಪಂಜರದಲ್ಲಿ ಗಿಳಿಯನ್ನಿಡುವದು ಸೆರೆಯಿರಿಸುವದೆಂದೆನಿಸಿದರೂ ನಿಜವಾಗಿಯೂ ಅದನ್ನು ಪ್ರೇಮಪೂರ್ವಕ ಸಂರಕ್ಷಿಸುವುದೇ ಆಗುವದು.

ಇಷ್ಟರಲ್ಲಿ ಜೋಜಿಗರಾಯನ ಪ್ರೀತಿಯ ಬೆಕ್ಕು ಅಲ್ಲಿಗೆ ಅಕಲ್ಪಿತವಾಗಿ ಬಂತು. ಆ ಕೂಡಲೆ ಗಿಳಿಯನ್ನು ಕಂಡು ಬೆಕ್ಕೂ, ಬೆಕ್ಕನ್ನು ಕಂಡು ಗಿಳಿಯೂ ಎರಡೂ ಕಕ್ಕಾವಿಕ್ಕಿಯಾದವು! ಇನ್ನು ಮುಂದೇನಾಗುವದೆಂಬದನ್ನು ನೋಡುವ ಸಲುವಾಗಿ ಎಲ್ಲರೂ ಉತ್ಸುಕರಾಗಿ ಸುಮ್ಮನೆ ಕುಳಿತರು. ಎಂದೂ ಕೈಗೆ ಸಿಗದ ಗಿಳಿಯನ್ನು ಕಂಡು, ಬೆಕ್ಕು ಜೋಜಿಗರಾಯನ ಮುಂಗೈ ಮೇಲೆ ಹಾರುವ ಸಿದ್ಧತೆಗೆ ತೊಡಗಿತು; ಆದರೆ ಅದನ್ನು ಗಂಡು ಗಿಳಿಯೂ ಮುಂಗೈಯಿಂದ ಹಾರಿ ದಿವಾಣಖಾನೆಯೊಳಗಿನ ಎತ್ತರವಾದ ಗೂಟದ ಮೇಲೆ ಹೋಗಿ ಕುಳಿತು. "ಜೋಜಿಗಾ, ಜೋಜಿಗಾ!" ಎಂಬ ಶಬ್ದದಿಂದ ಕೂಗಹತ್ತಿತು. ತಾನು ಬೆಕ್ಕಿನ ಫಜೀತಿಯನ್ನು ಹೇಗೆ ಮಾಡಿದೆನೆಂಬ ಆನಂದದಿಂದಲೇ ಅದು ಹಾಗೆ ಕೂಗಿಕೊಳ್ಳುತ್ತಿರುವದೆಂದು ನೋಡಿದವರಿಗೆ ಅನಿಸುವಂತಿತ್ತು! ಬೆಕ್ಕು ಫಜೀತಿಗೊಂಡು ಹತಾಶವಾಗಿ ಜೋಜಿಗರಾಯನ ಮೋರೆಯ ಕಡೆಗೆ ನೋಡಹತ್ತಿತು. ಆ ಕೂಡಲೆ ಆತನು ಎದ್ದು, ಆ ಹಿತ್ತಾಳಿಯ ಪಂಜರವನ್ನೇ ತೆಗೆದು, ಕಿಟಕಿಯೊಳಗಿಂದ ಹೊರಗೆ ಬೀಸಿ ಬಿಟ್ಟು:--ಮನೋಹರ, ಮೊದಲು ನಾನು ಗಿಳಿಯನ್ನು ಹೊರಗೆ ಬಿಟ್ಟಿದ್ದರೂ ಅದು ಹಿಂದಿರುಗಿ ಬಂದದ್ದನ್ನು ಕಂಡು, ಅದಕ್ಕೆ ಸ್ವಾತಂತ್ರ್ಯವೇ ರುಚಿಸುವದಿಲ್ಲೆಂಬ ಖೊಟ್ಟಿಕಲ್ಪನೆಯಾಗಿತ್ತು; ಅದರಿಂದ ಅದನ್ನು ಮತ್ತೆ ಪಂಜರದೊಳಗಿರಿಸಬೇಕೆಂಬ ಮೋಹವು ನನಗುಂಟಾಯಿತು. ಈಗ ಆ ಪಂಜರವನ್ನೇ ತೆಗೆದೊಗೆದದ್ದರಿಂದ ಈ ಗಿಳಿಯ ಹಾಗು ನನ್ನ ಮೋಹಗಳಿಗೆ ಸ್ಥಳವೇ ಉಳಿಯಲಿಲ್ಲವಷ್ಟೇ? ಸಂಸ್ಥಾನೀ ಪ್ರಜೆಗಳಿಗೆ ಸ್ವಾತಂತ್ರ್ಯಕೊಡುವ ನನ್ನ ಮಾತು ಮನಮುಟ್ಟಿ ನಿಜವಾದದ್ದಿದೆಯೋ, ತೋರಿಕೆಯ ಕೃತ್ರಿಮತನದ್ದಿದೆಯೋ ನೀನೇ ಹೇಳು." ಅನ್ನಲು, ಮನೋಹರನು ನಿರುತ್ತರನಾದನು.

## ೨೬ ಸತ್ಯಸಂಕಲ್ಪ!

ಮಹಾರಾಜರು ವಿಮಲೆಯನ್ನುದ್ದೇಶಿಸಿ:—ವಿಮಲಾಬಾಯಿ, ನಾನು ಸ್ವರಾಜ್ಯದಾನದ ಜಾಹೀರನಾಮೆ ತೆಗೆದ ಬಗ್ಗೆ, ಸ್ವರಾಜ್ಯದ ನಿರ್ಣಯಕ್ಕೆಂದು ಸಭೆ ಕೂಡಿಸಿದ ಬಗ್ಗೆ ಮತ್ತು ಸಭೆಯ ಮುಖಾಂತರ ರಾಜಕೀಯ ಸುಧಾರಣೆಗಳ ಚರ್ಚೆಮಾಡಿಸಿದ ಬಗ್ಗೆ ಇವೆಲ್ಲ ನನ್ನ ಕೇವಲ ಲಹರಿಯ ಆಟಗಳೇ! ಎಂದು ನಮ್ಮ ಮನೋಹರರಾಯನಿಗನಿಸುತ್ತದೆ. ಅದಕ್ಕೆ ಕಪಟ ಇಲ್ಲವೆ ಕೃತ್ರಿಮವೆಂಬ ಕಠೋರ ಹೆಸರು ಇಡದಿರುವದು ನನ್ನ ಮೇಲಿನ ಆತನ ಕೇವಲ ಮಿತ್ರ ಪ್ರೇಮದ ಉಪಕಾರವೆಂದೇ ಅನ್ನಬೇಕಾಗುತ್ತದೆ; ಆದರೆ ನಿಮಗಂತೂ ಹಾಗನಿಸುವ ದಿಲ್ಲವಷ್ಟೇ? ಈ ಕೆಲಸದಲ್ಲಿ ನಾನು ನಿಮ್ಮ ಪ್ರೇಮದ-ಅಲ್ಲಲ್ಲ ತಪ್ಪಿದೆನು-ಪ್ರಾಂಜಲ ಉದ್ಗಾರಗಳನ್ನು ಕೇಳುವ ಇಚ್ಛೆಯುಳ್ಳವನಾಗಿದ್ದೇನೆ,''

ಮ:—''ನಾನು ಹಾಗೇಕನ್ನಬಾರದು? ಈಗ ಕುಳಿತಿರಲಿಕ್ಕೇ ನೋಡಿರಿ, ಪ್ರಾಂಜಲ ಮತ್ತು ಪ್ರೇಮ ಶಬ್ದಗಳ ಅದಲು-ಬದಲುಗಳನ್ನು ಮಹಾರಾಜರೇ, ನೀವು ಎಷ್ಟು ಚಾಲಾಕಿಯಿಂದ ಮಾಡಿದಿರೆಂಬದನ್ನು! ನಿಮ್ಮ ಅರಸರುಗಳ ಭಾಷೆ ಯಲ್ಲಿ ಯಾರು ವಿಶ್ವಾಸವಿಡಬೇಕು?''

ವಿಮಲೆಯು ಪ್ರೌಢತನದಿಂದ ನಕ್ಕು:—ಮನೋಹರಪಂತರ ಪ್ರೇಮ ದಿಂದಲೇ ಅವರ ಮಾತಿನಲ್ಲಿ ಪ್ರಾಂಜಲತನವಿರುತ್ತಿರುವದಿಲ್ಲ.

ಇಷ್ಟರೊಳಗೆ ಪ್ರಭಾಕರನಿಗೆ ಆಕಳಿಕೆ ಬಂದಿತು. ಅದರ ಕಾರಣವು ತನಗೆ ತಿಳಿಯಿತೆಂಬದನ್ನು ಭಾಸಿಸುವ ಸಲುವಾಗಿ ಮನೋಹರನು ಕೈಯಿಂದ ಚಿಟುಕು ಬಾರಿಸಿ, ಬಾಯಿಂದ ಗಟ್ಟಿಗಟ್ಟಿಯಾಗಿ 'ಕೃಷ್ಣಕೃಷ್ಣ' ಎಂದಂದನು! ಬಳಿಕ ಪ್ರಭಾಕರನನ್ನುದ್ದೇಶಿಸಿ ಆತನು ''ಪ್ರಭಾಕರಪಂತರೇ, ತಾಲೀಮಿಗೆ ಹೊರಡುವ ಅಪ್ಪಣೆಯನ್ನು ನೀವು ಆಗಲೇ ಕೇಳಿಕೊಂಡಿರುತ್ತೀರಿ. ನಡೆಯಿರಿ. ನಾನೇ ನಿಮ್ಮನ್ನು ಕಳಿಸಿ ಬರುತ್ತೇನೆ. ಮಹಾರಾಜರು ರಾಜ್ಯದ ಒಡೆಯರು. ಅವರು ಪ್ರಜೆಗಳಿಗೆ ರಾಜ್ಯವನ್ನು ಹಂಚಿಕೊಡುವವರು; ಮತ್ತು ವಿಮಲಾಬಾಯಿಯವರು ಪ್ರಜಾ ಪ್ರತಿನಿಧಿಗಳೆಂದು ಇವರು ಅದನ್ನು ಹಂಚಿಕೊಳ್ಳುವವರು! ಈ ಕೆಲಸಗಳಲ್ಲಿ ನಮ್ಮ-ನಿಮ್ಮಗಳ ಸಂಬಂಧವೇನಿದೆ? ಪ್ರಜೆಗಳ ಕೊತವಾಲಿಯನ್ನು ಪ್ರೇಮ ಕ್ಕೆಂದು ಮಾಡುವ ಬಿಟ್ಟಿಯ ಫೌಜದಾರರು ನೀವು; ಮತ್ತು ರಾಜಮಿತ್ರನ ಖಾ ಸಗೀ ಚಿಟ್ಣೀಸಿಯನ್ನು ಪ್ರೇಮಕ್ಕೆಂದು ಮಾಡುವ ಬಿಟ್ಟಿಯ ಪ್ರಾಯವ್ಹೇಟ ಸೆಕ್ರೆ ಟರಿಯು ನಾನು! ನಮ್ಮಗಳಿಗೆ ಪ್ರೇಮದ ಆನಂದದ ಹೊರತು ಈ ರಾಜ್ಯ ಹಂ ಚುವ ಕೆಲಸದಲ್ಲಿ ಬೇರೆ ಸ್ವಾರ್ಥವೇನೂ ಇರದ್ದರಿಂದ ಲಾಭವೂ ಇಲ್ಲ. ಹಾಗಾ ದರೆ ನಡೆಯಿರಿನ್ನು, ನಾವು ನಮ್ಮ ಕಾಲವನ್ನು ಈ ರುಕ್ಷ ಆಡಳಿತದಲ್ಲಿ ಪುಕ್ಕಟೆ

ಯೇಕೆ ಕಳೆಯಬೇಕು? ನಾನು ನಿಮ್ಮನ್ನು ತಾಲೀಮುಖಾನೆಗೆ ಕಳಿಸಿ, ಹಿಂದಿರುಗಿ ಬರುವಾಗ ಹಾಗೆಯೇ ತಂತಿಯ ಕಚೇರಿಗೆ ಹೋಗಿ ಒಂದು ಅರ್ಜಂಟ ತಂತಿಯನ್ನು ಪೊಲಿಟಿಕಲ್ ಏಜಂಟರಿಗೆ ಕಳಿಸಬೇಕಾಗಿರುವದನ್ನು ಕೊಟ್ಟು ಬರುವೆನು.''

ಹೀಗೆಂದು ಹೇಳಿ ಖುದ್ದ ಮನೋಹರನೂ ಆತನ ಸೂಚನೆಯ ಮೇರೆಗೆ ಪ್ರಭಾಕರನೂ ಎದ್ದರು; ಹಾಗು ಅಟ್ಟವನ್ನಿಳಿಯಹತ್ತಿದರು. ಆಗ ಮಹಾರಾಜರು ನಕ್ಕು:-ಆಯುತಕಾಲಕ್ಕೆ ಮೋಸಪಡಿಸುವದೇ ಪ್ರಾಯವ್ಹೇಟ ಸೆಕ್ರೆಟರಿಯ ಕೆಲಸವು! ಅದನ್ನು ಪಾಲಿಸದಿದ್ದರೆ ನೀನೆಂಥ ಪ್ರಾ. ಸೆಕ್ರೆಟರಿಯು? ಇಲ್ಲಿ ಕುಳಿತು ಚರ್ಚೆಯಲ್ಲಿ ನಮಗೆ ನೆರವಾಗುವದನ್ನು ಬಿಟ್ಟು, ನೀನು ಹೊರಟೆಯೆಲ್ಲಿಗೆ?

ಮನೋಹರನು ಮೋರೆಯನ್ನು ಹಿಂದಿರುಗಿಸಿ ನಕ್ಕು:-"ಯಾರ ಕೆಲಸವೋ ಅವರಿಗೇ ಅದು ತಿಳಿಯುತ್ತದೆ. ನನ್ನ ಕೆಲಸವನ್ನು ನಾನು ಮಾಡುತ್ತೇನೆ. ನಿಮ್ಮ ಕೆಲಸವನ್ನು ನೀವು ಮಾಡಿರಿ. ನಾನು ತಕ್ಕ ವೇಳೆಗೆ ಮತ್ತೆ ಬಂದೇ ಬರುತ್ತೇನೆ."

ಮನೋಹರನು ಎಂಥ ಖೋಡಿ ಮುತ್ಸಾಳನವನು! ಜೋಜಿಗರಾಯ-ವಿಮಲೆ ಇವರಿಬ್ಬರನ್ನೇ ಅಲ್ಲಿ ಬಿಟ್ಟು, ಪ್ರಭಾಕರನನ್ನು ಜೊತೆಗೆ ಕರಕೊಂಡು ಹೊರಟೇ ಹೋದನು; ಮತ್ತು ತೀರ ಕಡಿಮೆಯೆಂದರೆ ಆತನು ಮುಕ್ಕಾಲು ತಾಸಾದರೂ ಬರುವ ಸಂಭವವಿರಲಿಲ್ಲ; ಯಾಕಂದರೆ, ತಂತಿಯ ಕಚೇರಿಯು ೧೦|| ವರೆಯ ಹೊರತು ತೆರೆಯುತ್ತಿರಲಿಲ್ಲ. ಅಲ್ಲಿ ಉಳಿದಿದ್ದ ಇಬ್ಬರಿಗೂ ಸಂಸ್ಥಾನೀ ಸ್ವರಾಜ್ಯದಾನದಂತಹ ವ್ಯಾಪಕ ವಿಷಯವು ಚರ್ಚಿಸಲಿಕ್ಕಿತ್ತೆಂದು ವಿಹಿತವಾಯಿತು. ಇಲ್ಲದಿದ್ದರೆ ಅವರು ಆಗ ಏನು ಮಾಡಬೇಕು? ಪರಸ್ಪರರ ವಿಷಯವಾಗಿ ಆದರ ಬುದ್ಧಿಯಿಂದ ಪರಸ್ಪರರ ಮನಸ್ಸುಗಳು ತುಂಬಿತುಳುಕುತ್ತಿದ್ದುದರಿಂದ, ಸ್ವಲ್ಪ ಮರವಾದರೂ ಪ್ರಣಯ ಭಾವನೆಯಿಂದ ಆರ್ದ್ರಗೊಂಡ ಯಾವುದೊಂದು ಉದ್ಗಾರವು ಇಲ್ಲವೆ ಶಬ್ದವು ಅವರ ಬಾಯಿಂದ ಹೊರಬೀಳತಕ್ಕದ್ದು; ಹಾಗು ಈ ವಿಶೇಷ ಬಗೆಯ ಎಚ್ಚರಿಕೆಯಿಂದ ಅವರಬ್ಬರಲ್ಲಿ ನಿಜವಾಗಿಯೂ ಕೆಲಹೊತ್ತಿನ ವರೆಗೆ ಮೌನವು ನೆಲೆಸಿದ್ದಿತು. ಇನ್ನು ಬಾಯಿಂದ ಮಾತನಾಡದೆ ಅವರು ಪರಸ್ಪರರ ಕಡೆಗೆ ನೋಡಬೇಕೆಂದರೂ ತೊಂದರೆ; ನೋಡದಿದ್ದರೂ ತೊಂದರೆ! ನೋಡಹತ್ತಿದರೆ ಕಣ್ಣುಗಳು ನಾಲಿಗೆಗಿಂತ ಹೆಚ್ಚು ಮಾತಾಡುವಂಥವು; ನೋಡುವದನ್ನು ಬಿಟ್ಟರೆ ಬೇಕಂತಲೇ ದೃಷ್ಟಿ ತಪ್ಪಿಸಿದಂತಾಗುತ್ತದೆ. ಮೇಲೆ ನೋಡಬೇಕೆಂದರೆ, ಅಂತಃಕರಣವು ಬೈಲಿಗೆ ಬೀಳುತ್ತದೆ. ತಲೆತಗ್ಗಿಸಿ ಕುಳಿತರೆ ಅಂಜುಬುರುಕತನವು ಪ್ರಕಟವಾಗುತ್ತದೆ. ಮೇಜಿನ ಮೇಲೆ ಅಂಥ ಯಾವ ಚಿತ್ರ-ಸಾಮಾನುಗಳೂ ಇರದ್ದರಿಂದ, ಅವುಗಳನ್ನು ಹೊರ ಹೊರಳಿಸಿ ನೋಡುವದಕ್ಕೆಂದು ದೃಷ್ಟಿಯನ್ನು ಕೆಳಗಿರಿಸಲಿಕ್ಕೂ ಲಕ್ಷ್ಯವು ಬೇರೆ ಕಡೆಗಿದೆಯೆಂದು ತೋರಿಸಲಿಕ್ಕೂ

ಬರುವಂತಿರಲಿಲ್ಲ. ಪ್ರತಿಯೊಬ್ಬರೂ ಎರಡನೆಯವರೇ ಮೊದಲು ಏನಾದರೂ ಮಾತಾಡಬೇಕು; ಆ ಮೇಲೆ ತಾನು ಮಾತಾಡಬೇಕೆಂಬ ಇಚ್ಛೆಯುಳ್ಳವರಾಗಿದ್ದರು; ಆದರೆ ಇಬ್ಬರೇ ಹಾಜರಿರುವಾಗ ಇಬ್ಬರೂ ಅದನ್ನೇ ಯೋಚಿಸಿದರೆ, ಸಂಭಾಷಣಕ್ಕೆ ಹೇಗೆ ಪ್ರಾರಂಭವಾಗಬೇಕು? ವಿಮಲೆಯನ್ನು ತಾನೇ ಕರೆಸಿಕೊಂಡಿರುವದರಿಂದ, ಎಷ್ಟು ಅಡಚಣಿಯುಂಟಾದರೂ ಅದನ್ನೆಲ್ಲ ಸಹಿಸಿ, ಎಲ್ಲ ತಪ್ಪು-ಒಪ್ಪುಗಳನ್ನು ಒಪ್ಪಿಕೊಂಡು, ಸಂಭಾಷಣಕ್ಕೆ ತಾನೇ ಪ್ರಾರಂಭಿಸಬೇಕೆಂಬದನ್ನು ನಿರ್ಧರಿಸಿಕೊಂಡು, ಕಡೆಗೆ ಜೋಜಿಗರಾಯನು:—ವಿಮಲಾಬಾಯಿ, ಇನ್ನು ನೀವು ನಿಮ್ಮ ಸಲಹೆಯನ್ನು ಕೊಡುವಿರಷ್ಟೇ?

ವಿ:—ನನಗೆ ತಿಳಿದಷ್ಟು ನಾನು ಹೇಳುತ್ತೇನೆ; ಆದರೆ ರಾಜಕಾರಣದ ಅನುಭವವು ನನಗಿಲ್ಲ. ಆದ್ದರಿಂದ ನಾನು ಸೂಚಿಸುವದು ಯೋಗ್ಯವಿದ್ದೀತೋ ಇಲ್ಲವೋ ಈ ಬಗ್ಗೆ ಆತ್ಮವಿಶ್ವಾಸವೆನಿಸುವದಿಲ್ಲ. ಹೇಗಾದರೂ ತಮ್ಮ ಮಾತೇ ಬೇರೆ.

ಜೋ:—ಅದು ಹೇಗೆ? ವಿ:—ಏನಿಲ್ಲೆಂದರೂ ನನಗಿಂತ ಮೂರು-ನಾಲ್ಕು ಹೆಚ್ಚು ಮಳೆಗಾಲಗಳನ್ನು ತಾವು ಕಂಡಿರುತ್ತೀರೆನ್ನಲು, "ಬುದ್ಧಿವಂತಿಕೆಯು ವಯಸ್ಸನ್ನವಲಂಬಿಸಿದ್ದರೆ ವಯಸ್ಸಿನ ವರ್ಷ ಹಾಗು ಬುದ್ಧಿಮತ್ತೆಗಳ ಕೋಷ್ಟಕವನ್ನು ಬಾಲಪಾಠಗಳಲ್ಲಿ ಕೊಡುತ್ತಿದ್ದಿಲ್ಲವೆ?" ಜೋಜಿಗರಾಯನು ಅಂದನು. "ಆದರೆ ವಯಸ್ಸನ್ನು ಬಿಟ್ಟರೂ ರಾಜ್ಯಪದದ ಅಧಿಕಾರಿಗಳೆಂಬ ನಾತೆಯಿಂದ ನನಗಿಂತ ತಮ್ಮ ಅನುಭವವಾದರೂ ಹೆಚ್ಚಾಗಿದೆಯಲ್ಲವೆ?" ವಿಮಲೆಯು ಈ ಪ್ರಶ್ನೆಗೆ "ನನಗೆ ಅದೂ ಮಾನ್ಯವಿಲ್ಲ; ಯಾಕಂದರೆ ರಾಜಪದದ ಮೇಲಿನ ಜೀವನವು ಕಟ್ಟಿನಲ್ಲಿ ಕೂಡ್ರಿಸಿದ ಚಿತ್ರದಂತಿರುತ್ತದೆ. ಅದಕ್ಕೆ ನಾಲ್ಕೂ ಕಡೆಯಿಂದ ಹೆಚ್ಚಾಗಿ ಬಿಗುವಿರುವದರಿಂದ ಅದರ ಚಲನವಲನದ ಶಕ್ತಿಯೆಲ್ಲ ನಷ್ಟವಾಗಿ ಬಿಟ್ಟಿರುತ್ತದೆ. ವಿಮಲಾಬಾಯಿ, ಇದಕ್ಕೆ ವಿರುದ್ಧವಾಗಿ ನಿಮ್ಮಂತಹ ಸ್ತ್ರೀಯರ ಜೀವನವು ಕಸುವಿನ ನೆಲದಲ್ಲಿ ಸ್ವತಂತ್ರವಾಗಿ ಹುಟ್ಟುವ ಗಿಡಬಳ್ಳಿಗಳಂತಿದೆ. ಒಳಗೆ ಬುದ್ಧಿಗೂ ಭಾವನೆಗೂ ಜೀವನದ ಹಸಿಯು ಎತ್ತ ದೊರೆತೀತೋ, ಅತ್ತ ಕಡೆಗೆ ನಿಮ್ಮ ಅಂತಃಕರಣದ ಬೇರುಗಳು ಹಬ್ಬುವವು; ಮತ್ತು ಹೊರಗೆ ಯಾವ ಕಡೆಗೆ ರೋಗರಹಿತವಾದ ಬಿಸಿಲಿನ ಉಣ್ಣತೆಯು ಹತ್ತಿತೋ ಅತ್ತ ಕಡೆಗೆ ನಿಮ್ಮ ಸತ್ಪ್ರವೃತ್ತಿಯ ಅಂಕುರಗಳು ಹರಿಬಿದ್ದಾವು. ನಾನು ನಿಮ್ಮ ಮನೆತನದ ಸಂಗತಿಗಳನ್ನು ಉಲ್ಲೇಖಿಸಬಾರದು; ಆದರೂ ನಿಮ್ಮ ತಾಯಿ-ತಂದೆ ಮತ್ತು ಅಣ್ಣ ಆ ಮೂರು ಸ್ವಭಾವದ ಮೂರು ಜನರ ಕುಟುಂಬದಲ್ಲಿ ನೀವು ಯಾವ ಸುಂದರ ಏಕೀಕರಣವನ್ನು ಯಶಸ್ವೀ ರೀತಿಯಿಂದ ಮಾಡಿರುವಿರೋ, ಅದರ ಮೇಲಿಂದ ಯಾವುದೊಂದು ರಾಜ್ಯದಾಡಳಿತವನ್ನು ಮಾಡಿ, ಅದರೊಳಗಿನ ಹಲವು ಪರಸ್ಪರ ವಿರೋಧೀ ವರ್ಗಗಳ ಹಿತ

ಗಳ ಏಕೀಕರಣವನ್ನು ಮಾಡುವ ಮುತ್ಸದ್ದಿತನವು ನಿಮ್ಮಲ್ಲಿರುತ್ತದೆಂದು ಯಾರಾದರೂ ಅಂದಾರು.''

ವಿ:—ಬೇರೆಯವರು ಬೇಕಾದರೆ ಹಾಗನ್ನಲಿ; ಆದರೆ ಶ್ರೇಯಸ್ಸಿನ ಆ ದೊಡ್ಡ ಭಾಗವನ್ನು ತಕ್ಕೊಳ್ಳಲಿಕ್ಕೆ ನಾನು ಸಿದ್ಧಳಾಗಿಲ್ಲವಲ್ಲ! ಯಾಕಂದರೆ, ನನ್ನ ಕುಟುಂಬದೊಳಗಿನ ಮೂರು ಜನರ ಸ್ವಭಾವಗಳು ಮೂರು ಬಗೆಯಾಗಿದ್ದರೂ ಅವರು ತಮ್ಮ ತಮ್ಮ ಪರಿಯಿಂದ ನನ್ನನ್ನು ಎಷ್ಟು ಪ್ರೀತಿಸುತ್ತಾರೆಂಬದರ ಪೂರ್ಣ ಕಲ್ಪನೆಯು ತಮಗೆ ಇರಲಿಕ್ಕಿಲ್ಲ. ಆ ಪ್ರೇಮದ ಮೂಲಕವೇ ನನಗೆ ಅವರ ಮಧುರ ಏಕೀಕರಣಗೊಳಿಸಬರುತ್ತದೆ; ಮತ್ತು ತಮ್ಮೆದುರಿಗಿರುವ ರಾಜಕಾರಣದ ವಿಷಯದಲ್ಲಾದರೂ ಅದೊಂದೇ ಮರ್ಮವಿದೆ. ತಮ್ಮ ಪ್ರಜೆಗಳೊಳಗಿನ ಎಲ್ಲ ವರ್ಗದವರ ಪ್ರೇಮವು ಇಂದಿಗೆ ತಮ್ಮ ಮೇಲೆ ಸಂಪೂರ್ಣವಾಗಿರುತ್ತದೆ. ಅದಕ್ಕನುಗುಣವಾಗಿ ಅವರಿಗೋಸ್ಕರ ಸರ್ವಸ್ವವನ್ನು ತ್ಯಾಗಮಾಡಲಿಕ್ಕೆ ತಾವೂ ಸಿದ್ಧರಾಗಿರುತ್ತೀರಿ. ಈ ಬಗೆಯು ಇಬ್ಬಣದ ಸಿದ್ಧತೆಯು ಕಾಯಮವಾಗಿದ್ದರೆ, ತಮ್ಮ ಜೋಧ್ಯಪುರ ಸಂಸ್ಥಾನದಲ್ಲಿ ಸ್ವರಾಜ್ಯ-ಸುರಾಜ್ಯಗಳ ಸುಂದರವಾದ ಏಕೀಕರಣವಾದೀತು. ರಾಜ್ಯಘಟನೆಯಲ್ಲೇನಿದೆ? ಸ್ನಿಗ್ಧವಾದ ಸುಗಂಧದ ಮೇಣದ ಉಂಡಿಯು ಕೈಯಲ್ಲಿ ಸಿದ್ಧವಾಗಿತ್ತೆಂದರೆ, ಬೇರೆ ಬೇರೆ ಅಚ್ಚು ಪಡೆಗಳೊಳಗಿಂದ ವಿಧವಿಧದ ಗೊಂಬೆಗಳನ್ನು ಮಾಡುವದು ಬಹು ಸುಲಭವಾದ ಕೆಲಸವಾಗಿದೆ. ರುಚಿವೈಚಿತ್ರ್ಯದ ಸಮಾಧಾನಕ್ಕೆಂದೇ ಬೇರೆ ಬೇರೆ ಅಚ್ಚು ಪಡೆ ಮಾಡುವದಿದ್ದ ಮೂಲಕ ಅವುಗಳನ್ನು ಆಗಾಗ್ಗೆ ಬದಲಿಸಲೂ ಶಕ್ಯವಿದೆ!

ಜೋ:—ಹಾಗಾದರೆ ಇಂದಿನ ಹೊಸ ವ್ಯವಹಾರಕ್ಕೆಂದು ತಾವು ಸ್ವರಾಜ್ಯದಾನದ ಯಾವ ಮಾದರಿಯ ಶಿಫಾರಸನ್ನು ನನಗೆ ಬರೆದುಕೊಡುತ್ತೀರಿ?

ವಿ:—ಆ ಮಾದರಿಯ ಹತ್ತಿಪ್ಪತ್ತೇ ಅಂಗಗಳಿರುತ್ತವೆ; ನಾನು ಅವುಗಳನ್ನು ಕಣ್ಣು ಮುಚ್ಚಿಯೂ ತಮಗೆ ಹೇಳುವದು ಶಕ್ಯವಿದೆ.

''ಹಾಗಾದರೆ ಹೇಳಿರಿ ನೋಡೋಣ''ಎಂದು ಜೋಜಿಗರಾಯನು ಅಂದ ಕೂಡಲೆ, ವಿಮಲೆಯು ಕಣ್ಣುಗಳ ಮೇಲೆ ಕೈಯಿಟ್ಟುಕೊಂಡು ಬಾಯಿಂದ ಹೇಳಹತ್ತಿದಳು. ಜೋಜಿಗರಾಯನು ಅವುಗಳನ್ನು ಒಂದು ಕಾಗದದಲ್ಲಿ ಟಿಪ್ಪಣಿಮಾಡಿಕೊಳ್ಳಹತ್ತಿದನು. ಪೂರ್ವಕಾಲದಲ್ಲಿ ಪ್ರಜ್ಞಾಪ್ರತಿಭಾಮಂಡಿತರಾದ ವ್ಯಾಸರ ಎದುರಿಗೆ ಗಣಪತಿಯು ಲಘುಲೇಖನದ ಕೆಲಸಕ್ಕೆಂದು ಕುಳಿತದ್ದನ್ನು ನಾವು ಪುರಾಣಗಳಲ್ಲಿ ಓದುವೆವು; ಆದರೆ ಇಂದು ಸರಸ್ವತಿಯು ಮುಖಕಮಲದಿಂದ ಹೊರಹೊರಡುವ ಉದ್ಗಾರಗಳನ್ನು ಗಣ-ಪತಿ (ರಾಜನು) ಯು ಲಘುಲೇಖಕನಾಗಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದನೆಂದು ಅನ್ನಬೇಕಾಗುವದಿಲ್ಲವೇ? ಮತ್ತು ನಿಜ

ವಾಗಿಯೂ ಮಹತ್ವದ ಸಂಗತಿಯನ್ನು ಜ್ಞಾಪಿಸಿಕೊಂಡು ಕೂಡಿಸಿ ಹೇಳಬೇಕಾಗಿದ್ದಾಗ ಹೇಳುವವನಿಗಿಂತ ಬರೆಯುವವನ ಕೆಲಸವು ಬಹು ತೀವ್ರವಾಗುತ್ತದೆ. ಅದರಿಂದ ನಡುನಡುವೆ ಸಿಗುವ ಬಿಡುವಿನ ವೇಳೆಯಲ್ಲಿ ವಿಮಲೆಯು ತನ್ನ ಕಣ್ಣ ಮೇಲೆ ಕೈ ಇಟ್ಟ ಸಂಧಿಯನ್ನು ಸಾಧಿಸಿ, ಜೋಜೆಗರಾಯನಿಗೆ ಆಕೆಯ ಮುಖದ ಕಡೆಗೆ ಸ್ವಸ್ಥವಾಗಿ ಕುಳಿತು ನೋಡಲಿಕ್ಕೆ ಸಿಗುತ್ತಿತ್ತು; ಮತ್ತು ಹಾಗೆ ಮಾಡುತ್ತಿರುವಾಗ ಅವಳ ಬುದ್ಧಿಮತ್ತೆಯ ಕೌತುಕವನ್ನು ವಿಶೇಷ ಮಾಡಬೇಕೋ, ಅವಳ ಚಿತ್ತಾಕರ್ಷಕ ಸುರೂಪದ ಕೌತುಕವನ್ನು ಹೆಚ್ಚು ಮಾಡಬೇಕೋ ಎಂಬ ವಿಚಾರವು ಆತನ ಮನಸ್ಸಿನಲ್ಲಿ ಕ್ಷಣಕ್ಷಣಕ್ಕೂ ಉಂಟಾಗುತ್ತಿತ್ತು. ಇರಲಿ. ಟಿಪ್ಪಣೆಯನ್ನೆಲ್ಲ ಮಾಡುವದಾದ ಬಳಿಕ ಜೋಜೆಗರಾಯನು ಆ ಕಾಗದವನ್ನು ಅವಳಿಗೆ ಓದಿ ತೋರಿಸಿದನು. ಅದು ಸರಾಸರಿ ಇಪ್ಪತ್ತು ಕಲಮುಗಳ ಯಾದಿಯಾಗಿತ್ತು. ಆ ಕಲಮುಗಳನ್ನು ಹೇಳುವದಾದ ಬಳಿಕ ವಿಮಲೆಯು ಕಣ್ಣಮೇಲಿನ ಕೈ ತೆಗೆದಳು; ಆದರೆ ಜೋಜೆಗರಾಯನು ಮಾತ್ರ ಅವಳ ಮುಖದಲ್ಲಿ ನೆಟ್ಟ ತನ್ನ ದೃಷ್ಟಿಯನ್ನು ಈಗ ಹೊರಳಿಸಿಕೊಳ್ಳಲಿಲ್ಲ. ತನ್ನ ಮುಖದ ಮೇಲಿನ ಆಶ್ಚರ್ಯದ ನಗುವನ್ನು ಪ್ರಾಂಜಲವಾಗಿ ಪ್ರಕಟಗೊಳಿಸಲಿಕ್ಕೆಂದು ಆತನು ಕೊಂಚ ಅಚ್ಚೆಯಿಂದಲೇ: "ನಿಮಗೆ ಇದೆಲ್ಲ ಹೇಗೆ ಸೂಚಿಸಿತು? ಹಾಗು ಬಂದರ ಹಿಂದೊಂದರಂತೆ ಕೂಡಿಸಿ ಹೇಳಲಿಕ್ಕೆ ಹೇಗೆ ಬಂದಿತೆಂಬದು ದೇವರಿಗೇ ಗೊತ್ತು!" ಎಂದಂದನು; ಆದರೆ ಸಕಾರಣತೆಯು ಆಶ್ಚರ್ಯಕ್ಕೂ ಅದ್ಭುತದ ಬುದ್ಧಿಗೂ ರಾಮಬಾಣ ಔಷಧವಾಗುತ್ತದೆಂಬದು ಗೊತ್ತಿದ್ದ ಮೂಲಕ, ವಿಮಲೆಯಾದರೂ ತುಸ ಅಚ್ಚೆಯ ನುಡಿಯಿಂದಲೇ: "ಇಶ್ಶ! ಇದರಲ್ಲಿ ದೇವರೇತಕ್ಕೆ ಬರಬೇಕು? ಆತನಿಂದ ಆಯುತ ಕಾಲಕ್ಕೆ ನನಗೇನೂ ಸಂದೇಶ ಬರಲಿಲ್ಲ; ಇಲ್ಲವೆ ದಿವ್ಯಪ್ರೇರಣೆಯಾಗಲಿಲ್ಲ. ಓದಿ ನೆನಪಿದ್ದದ್ದನ್ನು ಅತ್ತಿತ್ತಣದಿಂದ ಕೂಡಿಸಿ ಹೇಳಿದೆನಿಷ್ಟೇ; ಆದರೆ ತಮ್ಮ ರಾಜಕುಮಾರ ಕಾಲೇಜದ ಅಭ್ಯಾಸಕ್ರಮದಲ್ಲಿಯೂ ಇಂಥ ವಿಷಯವಿಟ್ಟಿರಲಿಕ್ಕೇ ಬೇಕೆಂದು ನಾನನ್ನುತ್ತೇನೆ."

"ವಿಮಲಾಬಾಯಿ!" ಜೋಜೆಗರಾಯನು ಖೇದದರ್ಶಕ ದನಿಯಿಂದ:- "ನಿಮಗೆ ಏನು ಹೇಳಲಿ? ರಾಜಕಾರಣದ ಕಾಲೇಜದಲ್ಲಿ ರಾಜಕಾರಣವನ್ನು ಕಲಿಸುತ್ತಾರೆ; ಆದರೆ ಆ ಅಭ್ಯಾಸದ ಶ್ರೇಷ್ಠ ಗ್ರಂಥವು ಮ್ಯಾಕವ್ಹೇಲಿಯ 'ಪ್ರಿನ್ಸ' ಎಂಬದು. ಸಾಮ್ರಾಜ್ಯಶಾಹಿಯ ಸಾಲೆಯಲ್ಲಿ ಕಲಿಸಲ್ಪಟ್ಟ ನಾವು ಹುಡುಗರೆಂದರೆ, ರಾಜಕುಮಾರರು! ನಮಗೆ ನಿಜವಾದ ರಾಜಧರ್ಮವನ್ನೂ ಪ್ರಜಾವಾತ್ಸಲ್ಯತೆಯನ್ನೂ ಯಾರು ಮತ್ತು ಏಕೆ ಕಲಿಸುವರು? ನಿಮ್ಮ ಮಾತೇ ಬೇರೆ. ನೀವು ಓದಿಕೊಂಡಿರುವ ರಾಜಕಾರಣವು ಸ್ವಂತದ ಇಚ್ಛೆಯಿಂದ, ಸ್ವತಂತ್ರ ಬುದ್ಧಿಯಿಂದ,

ಜನರ ವಿಷಯದ ನಿಮ್ಮಲ್ಲಿಯ ಹುಟ್ಟ ಔದಾರ್ಯದಿಂದ! 'ಪ್ರಜೆ'ಗಳ ವಿಷಯವಾಗಿ ಸ್ತ್ರೀಯರ ಹೃದಯದಲ್ಲಿ ನೈಸರ್ಗಿಕವಾಗಿಯೇ ವಾತ್ಸಲ್ಯವಿರುತ್ತದೆ. ಅಂತೆಯೇ ನೀವು ಪ್ರಜೆಗಳ ಕಲ್ಯಾಣದ ದೃಷ್ಟಿಯಿಂದ ಆಲೋಚಿಸಿದಿರಿ; ಮತ್ತು ಓದಿಕೊಂಡದ್ದರೊಳಗಿಂದ ಪ್ರಜಾಹಿತಪರವಾದಂತಹ ಯೋಗ್ಯ ರಾಜಧರ್ಮದ ಕಲ್ಪನೆಯನ್ನೇ ಮನಸ್ಸಿನಲ್ಲಿ ಒಟ್ಟುಗೂಡಿಸಿದಿರಿ; ಆದರೆ ನೀವು ರಾಜ್ಯಘಟನೆಯ ಯಾವ ಕಲಮುಗಳನ್ನು ಹೇಳಿದಿರೋ ಅವು "ಲೋಕಶಾಹಿಯ ವಿಜಯ!" ಎಂದು ಯಾವ ಆಧುನಿಕ ನವಜವಾನನೂ ಅಭಿಪ್ರಾಯಪಡಲಿಕ್ಕಿಲ್ಲೆಂಬದನ್ನು ನೆನಪಿಡಿರಿ."

ವಿ: ನವಜವಾನರ ವಿಚಾರಸರಣಿಯು ನನಗೆ ಚೆನ್ನಾಗಿ ಗೊತ್ತಿದೆ. ಅವರ ಒಬ್ಬ ಪ್ರತಿನಿಧಿಯಾದ ಕಾಮ್ರೇಡ ಡಂಬಿಯು ದರಬಾರದ ಸಭೆಯಲ್ಲಿದ್ದನಲ್ಲ! ಅವನು ಏನೇನು ಪ್ರಲಾಪ ನಡಿಸಿದ್ದನೆಂಬದು ತಮ್ಮ ಕಿವಿಯ ವರೆಗೆ ಬಂದಿದ್ದೀತು ಅವಿಚಾರದಿಂದ ಬಾಯಿಗೆ ಬಂದಂತೆ ಬೊಗಳುವ ಚಟವೇ ಆ ನವಜವಾನರಿಗೆ ಬಿದ್ದುಬಿಟ್ಟಿದೆ! ಅವರ ಮಾನಸಿಕ ಔದಾರ್ಯದ ಹಾರಿಕೆ, ಅವರ ದಿಟ್ಟತನ ಇವುಗಳ ಬಗ್ಗೆ ನಾನು ಕೌತುಕವನ್ನೇ ಮಾಡುತ್ತೇನೆ; ಆದರೆ ಅವರು ತುಸ ಸಾವಕಾಶವಾಗಿ ಕೆಲಸ ಮಾಡಹತ್ತಿದರೆ ಜನರ ಮೇಲೆ ಉಪಕಾರವಾದೀತು. ಸದ್‌ಭಾವನೆಯ ಮದ್ದಿನ ಸ್ಫೋಟವು ಮನಸ್ಸಿನಲ್ಲಾದಂತೆ ಅವರು ಮಾತಾಡುವದೇನೋ ನಿಜವು; ಆದರೆ ನೆರೆಯ ಗಡಂಗದೊಳಗಿಂದ ಹೊರಬಿದ್ದವರ ಬಾಯಿಂದ ಹೊರಡುವಂತಹ ಶಬ್ದಗಳೇ ಅವರ ಬಾಯಿಂದ ಹೊರಡುತ್ತಿರುವವೆಂಬದೂ ನಿಜವೇ. ಪ್ರತಿಭೆಯ ರತ್ನವಾದರೂ ಅದನ್ನು ಪ್ರಜ್ಞೆಯ ಸಾಣೇಕಲ್ಲ ಮೇಲೆ ತಿಕ್ಕಿದಾಗಲೆ ಅದರಲ್ಲಿ ರಮ್ಯವಾದ ತೇಜವುಂಟಾಗುತ್ತದೆಂಬದು ನವಜವಾನರಿಗೆ ಹೊಳೆಯಿತೆಂದರೆ ವಿಹಿತವಾದೀತು. ಅರಸರುಗಳಲ್ಲಿಯ ಹೇಡಿತನವು ಅವರಿಗೆ ಕಾಣುತ್ತದೆ; ಮತ್ತು ಅದು ನಿಜವೂ ಆಗಿದೆ; ಆದರೆ ಲೋಕಶಾಹಿಯೂ ತನ್ನ ಹೇಡಿತನವನ್ನು ಯುರೋಪ-ಅಮೇರಿಕೆಗಳಲ್ಲಿ ಜಗಜ್ಜಾಹೀರ ಪಡಿಸಿರುವದರಿಂದ, ಇನ್ನು ಈ ಘಾತುಕ ಆಟವನ್ನು ಸಾಕುಮಾಡಬೇಕು; ಇಲ್ಲವೆ ಇದಕ್ಕೆ ಆತಂಕವನ್ನಾದರೂ ಉಂಟು ಮಾಡಬೇಕು, ಎಂದು ಅತ್ತ ಕಡೆಯ ಸುಜ್ಞರಿಗೆ ಅನಿಸಹತ್ತಿದೆ. ನಾನು ಹೇಳಿದಂತೆ ತಾವು ಟಿಪ್ಪಣಿ ಮಾಡಿಕೊಂಡ ಕಲಮುಗಳಲ್ಲಿ ಲೋಕಶಾಹಿಯ ಉತ್ತಮವಾದ ಹಾಗು ಸದ್ಯದಲ್ಲಿ 'ಪೆಟೆಂಟ'ವೆಂದು ಗೊತ್ತಾದ ಸ್ವರೂಪವಿರಲಿಕ್ಕಿಲ್ಲ; ಆದರೆ ರಾಜಧರ್ಮದ ಹಾಗು ಪ್ರಜಾಹಿತದ ಏಕೀಕರಣವು ಅದರಲ್ಲಿ ಬಹು ಚೆನ್ನಾಗಿ ಆಗಿದೆಯೆಂದು ನನ್ನ ಅಲ್ಪ ಬುದ್ಧಿಗಂತೂ ಅನಿಸುತ್ತಿದೆ.

ಜೋ:—ಅಂದಮೇಲೆ ನನಗಾದರೂ ಹೆಚ್ಚಿಗೆ ಏನು ಬೇಕಾಗಿದೆ? ಅದಿ

ರಲಿ. ಇನ್ನು ನೀವು ನಮ್ಮ ಸಂಸ್ಥಾನದ ಪ್ರಜೆಗಳ ಅಧಿಕೃತ ಪ್ರತಿನಿಧಿಗಳೆಂದು ಈ ಯಾದಿಯ ಮೇಲೆ ಸಹಿಯ ಸಲುವಾಗಿ ನೀವು ನಿಮ್ಮ ಹೆಸರನ್ನು ಬರೆಯಬೇಕಲ್ಲ!

"ಹೋ, ಅದಕ್ಕೇನು ಪ್ರತಿಬಂಧ?" ಎಂದು ಹೇಳಿ ವಿಮಲೆಯು ಆ ಕಾಗದವನ್ನು ಜೋಜಿಗರಾಯನಿಂದ ತಕ್ಕೊಂಡು, ಅದರ ಮೇಲೆ ಸಹಿ ಮಾಡಿದಳು. ಕೂಡಲೆ ಜೋಜಿಗರಾಯನೂ ಅದನ್ನು ತಿರುಗಿ ಇಸಕೊಂಡು ವಿಮಲೆಯ ಸಹಿಯ ಬಳಿಯಲ್ಲಿ ತನ್ನ ಸಹಿಯನ್ನೂ ಮಾಡಿದನು! ಈಗ ಜೋಜಿಗರಾಯನ ಹರ್ಷವು ಆತನ ಮೋರೆಯ ಮೇಲೆ ಒಡೆದು ಕಾಣಹತ್ತಿತು. ಅದೇ ಭರದಲ್ಲಿ ಆತನು:—

"ಅಂದರೆ ಈ ಒಪ್ಪಂದದ ಕಲಮುಗಳನ್ನು ಅಮಲಿನಲ್ಲಿ ತರಲಿಕ್ಕೆ ಇನ್ನು ನಾವೂ ನೀವೂ ಕೂಡಿಯೇ ವ್ಯಕ್ತಿಶಃ ಪರಸ್ಪರರಿಗೆ ಜಾಮೀನದಾರರೆಂದು ಬದ್ಧರಾಗಿರುತ್ತೇವೆ! ಅದರಿಂದ ಈ ಕಾಗದದ ಮೇಲಿನ ಸಹಿಗಳಂತೆ ನಮ್ಮ-ನಿಮ್ಮಗಳ ಸಹಚರ್ಯವೂ ಅಖಂಡವಾಗಿರಬೇಕಲ್ಲವೆ? ನಾನು ಸಂಸ್ಥಾನಿಕನೂ ಪ್ರಜೆಗಳ ಕಾರಭಾರಿಯೂ ಎಂದು ಜೋಧ್ಯಪುರ ಬಿಟ್ಟು ಹೊರಹೊರಡುವಂತಿಲ್ಲ; ಆದರೆ ಇನ್ನು ಮುಂದೆ ನಿಮಗಾದರೂ ಅದೇ ಬಂಧನವನ್ನು ಪಾಲಿಸಬೇಕಾದೀತು. ತಿಳಿಯಿತೆ? ಲಕ್ಷ್ಯದಲ್ಲಿಡಿರಿ. ಜಾಮೀನುದಾರನು ಯೋಗ್ಯನು; ಆದರೆ ಹಾಜರಿರದಿದ್ದರೆ ಆತನ ಜಾಮೀನನ್ನು ಹೇಗೆ ಪಡಕೊಳ್ಳುವದು! ನಾನು ಅರಮನೆಯನ್ನು ಬಿಟ್ಟು ನದೀತೀರದ ಮಾವಿನ ತೋಪಿನಲ್ಲಿ ಕಟ್ಟಿಸಿದ ಗುಡಸಲಿಗೆ ಹೋಗಿ ಇರತಕ್ಕವನಿದ್ದೇನೆ. ಅದರ ಬಳಿಯಲ್ಲಿ ಬೇಕಾದರೆ ನಿಮಗೂ ಅಂಥದೇ ಒಂದು ಗುಡಸಲು ಕಟ್ಟಿಸಿಕೊಡಲಾದೀತು."

ಈಗ ಮಾತ್ರ ಜೋಜಿಗರಾಯನ ಅಂತಸ್ಥ ಗೂಢಭಾವನೆಯು ವಿಮಲೆಗೆ ಮಸಕುಮಸಕಾಗಿ ಕಾಣತೊಡಗಿತು; ಆದರೆ ನಿಜವಾಗಿ ಹೇಳುವದೇನಂದರೆ, ರಾಜಪದಸ್ಥ, ಸುಂದರ, ಉದಾರ, ಸುವಿಚಾರ, ಸುಶಿಕ್ಷಿತನಾದ ಆ ತರುಣನನ್ನು ಕಂಡು ವಿಮಲೆಯ ಮನಸ್ಸಿನಲ್ಲಾದರೂ ಅದೇ ಬಗೆಯ ಭಾವನೆಯು ಹುಟ್ಟಿರಲಿಕ್ಕಿಲ್ಲೆಂದು ಬೇರೆಯವರಾದರೂ ಅದೇಕೆ ತಿಳಿಯಬೇಕು?

ಶ್ರೀಮಂತಿಕೆಗೆ ಇಲ್ಲವೆ ರಾಜಪದಕ್ಕೆ ಮೋಹಿಸಿ ಲೋಭಿಸುವಂತಹ ಪ್ರಾಕೃತ ಸ್ತ್ರೀಯು ಅವಳಾಗಿರಲಿಲ್ಲ; ಆದರೆ ಇತ್ತೀಚೆಗಿನ ಪ್ರಭಾಕರನ ಪ್ರಕರಣವು ಪ್ರಾರಂಭವಾದಾಗಿನಿಂದ ಜೋಜಿಗರಾಯನ ಯಾವ ಉತ್ಸಾಹವರ್ಧಕ ಚರಿತ್ರವನ್ನು ವಿಶೇಷವಾಗಿ ರಾಜಪದವು ಲಭಿಸಿದ್ದರೂ ಅದನ್ನು ತ್ಯಜಿಸುವ ಸಿದ್ಧತೆಯನ್ನು ಅವಳು ನೋಡಿದ್ದಳೋ, ಅದು ಅವಳ ಮನಸ್ಸನ್ನು ಆಕರ್ಷಿಸಿಬಿಟ್ಟಿದ್ದರೆ ಜೋಜಿಗವೇನು? ವಿಮಲೆಯು ಮರ್ಯಾದಶೀಲಳಾಗಿದ್ದರೂ ಸೌಭಾಗ್ಯಕಾಂಕ್ಷಿಣಿಯಾಗಿದ್ದಳು.

ಪ್ರಣಯಭಾವನೆಗಳನ್ನಡಗಿಸುವುದರಲ್ಲಿ ಸ್ತ್ರೀಯರನ್ನು ಯಾರೂ ಹಿಮ್ಮೆಟ್ಟ

ಲಾರರೆಂಬಂತೆ, ಮಾವಿನ ತೋಪಿನೊಳಗಿನ ಗುಡಸಲದ ಬಳಿಗೆ ಬೇರೆ ಗುಡಸಲು ಕಟ್ಟಿಸಿಕೊಡುವ ಸೂಕ್ಷ್ಮ ಕಲ್ಪನೆಯ ಆಟವನ್ನು ಜೋಜಿಗರಾಯನ ಮೇಲೆಯೇ ಹೊರಳಿಸಲಿಕ್ಕೆಂದು ವಿಮಲೆಯು ನಕ್ಕು: "ತಮ್ಮ ಕಲ್ಪನೆಯು ತುಸ ತಪ್ಪೆನ್ನ ಬೇಕು! ಪರರಾಷ್ಟ್ರದ ವಕೀಲರ ನಾತೆಯಿಂದ ನಾನೀ ಒಪ್ಪಂದದ ಮೇಲೆ ಸಹಿ ಮಾಡಿರುತ್ತೇನೆ. ಅಂದಮೇಲೆ ಪರರಾಷ್ಟ್ರದ ವಕೀಲರು ಹೀಗೆ ಒಬ್ಬರ ಬಳಿಯಲ್ಲೊಬ್ಬರೆಲ್ಲಿಯಾದರೂ ವಾಸಿಸಿರುವುದುಂಟೇ? ಮಿತ್ರರೆನಿಸಿಕೊಳ್ಳುವ ರಾಷ್ಟ್ರಗಳೂ ಕೂಡ ಮನಸ್ಸಿನಲ್ಲಿ ವೈರ, ಅದಿಲ್ಲದಿದ್ದರೆ ಸಂಶಯಗ್ರಸ್ತ ಇಲ್ಲವೆ ಸಾವಧವಾಗಿರುತ್ತವೆ. ಒಂದು ರಾಷ್ಟ್ರದ ವಕೀಲನ ನಿವಾಸದಲ್ಲಿ ನಡೆದ ಕಂತ್ರಾಟಗಳು ಬೇರೆಯವರ ಕಣ್ಣಿಗೆ ಬೀಳಬಾರದೆಂದು ವಕೀಲರ ನಿವಾಸಸ್ಥಾನಗಳು ದೂರ ದೂರದಲ್ಲಿಯೇ ನಿರ್ಮಿಸಲ್ಪಡುತ್ತವೆ; ಹಾಗು ಪಹರೆಗಳನ್ನಿಟ್ಟು ಸಂರಕ್ಷಿಸುತ್ತಿರುವದಿಲ್ಲವೆ?"

ಈ ಉತ್ತರದಿಂದ ಜೋಜಿಗರಾಯನು ತುಸ ಗೊಂದಲಕ್ಕೀಡಾದನು; ಆದರೆ ಈಗೀಗ ಆತನು ತುಸ ದಿಟ್ಟನಾಗುತ್ತ ನಡೆದಿದ್ದನು. ಅದರಿಂದ ವಿಮಲೆಯ ಮಾತಿನ ಮುಯ್ಯಕ್ಕೆಮುಯ್ಯ ತೀರಿಸುವದಕ್ಕೆಂದು ಆತನು:—"ಛೇ, ಛೇ! ಪರರಾಷ್ಟ್ರೀಯ ರಾಜಕಾರಣದ ನಿಜವಾದ ರಹಸ್ಯವು ನಿಮಗೆ ಗೊತ್ತೇ ಇಲ್ಲವೆನ್ನಬೇಕು. ಮನಸ್ಸಿನಲ್ಲಿ ಸಾವಧತನವಿದ್ದರೂ ತಮ್ಮಲ್ಲಿ ಶತ್ರುತ್ವವಂತೂ ಇಲ್ಲವೇ ಇಲ್ಲ; ಆದರೆ ಸಾಶಂಕೆಯೂ ಇಲ್ಲೆಂಬ ವೇಷ ತೋರಿಸುವ ಸಲುವಾಗಿ ಎಷ್ಟೋ ಕಡೆಗೆ ಪರರಾಷ್ಟ್ರದ ವಕೀಲರೂ ಅಂಬೆಸೆಡರ ಕೌಂಸಲರೂ ಎರಡು ಬೇರೆ ಬೇರೆ ಮನೆಗಳಲ್ಲಿ ಕೂಡ ವಾಸಿಸದೆ, ಒಂದೇ ನಿವಾಸದಲ್ಲಿದ್ದು, ಒತ್ತಟ್ಟಿಗೇ ಊಟ-ಪಾಟಗಳನ್ನು ಕೂಡ ಮಾಡುತ್ತಿರುತ್ತಾರೆ. ಅಂತೆಯೇ ಗುಡಸಲದ ಬಳಿಯಲ್ಲಿ ಬೇರೆ ಗುಡಸಲ ಕಟ್ಟಿಸುವ ಸೂಚನೆಯನ್ನು ಬೇಕಾದರೆ ಹಿಂದಕ್ಕೆ ತೆಗೆದುಕೊಳ್ಳುತ್ತೇನೆ; ಮತ್ತು ಒಂದೇ ಗುಡುಸಲನ್ನು ನಾವಿಬ್ಬರೂ ವಕೀಲರು ಆಶ್ರಯಿಸಬೇಕೆಂದು ಸೂಚಿಸುತ್ತೇನೆ. ರಾಷ್ಟ್ರರಾಷ್ಟ್ರಗಳಲ್ಲಾದರೂ ವಿಶ್ವಾಸದಿಂದಲೇ ವಿಶ್ವಾಸವೂ, ಸ್ನೇಹದಿಂದಲೇ ಸ್ನೇಹವೂ, ಪ್ರೇಮದಿಂದಲೇ ಪ್ರೇಮವೂ ಬೆಳೆಯುವವಲ್ಲವೆ? ಜೋಧ್ಯಪುರ ಸಂಸ್ಥಾನದ ಪ್ರಜೆ ಹಾಗು ರಾಜ ಇವರುಗಳ ಒಪ್ಪಂದದ ಕಲಮುಗಳು ಅಬಾಧಿತವಾಗಿ ಅಮಲಿನಲ್ಲಿರಬೇಕು, ಪರಸ್ಪರರ ಜಾಮೀನು ಪರಸ್ಪರರಿಗೆ ಕೂಡಲೆ ದೊರಕಬೇಕು. ಇದಕ್ಕಾಗಿ ನಾನು ಸೂಚಿಸಿರುವ ಮಾರ್ಗವು ಇಷ್ಟವಾಗಿಲ್ಲೇನು? ದೇವಾ, ನನ್ನ ಹಣೆಯಲ್ಲಿ ಬರೆದಿರುವುದೇ ಅಕಲ್ಪಿತವಾಗಿ ಘಟಿಸುತ್ತದೇನು?"

ಈ ಪ್ರಶ್ನೆಗೆ ಯೋಗ್ಯ ಉತ್ತರವು ವಿಮಲೆಗೆ ಸೂಚಿಸಲೊಲ್ಲದು. ಮೊದಲು

ಅವಳು ಕೇವಲ ಸ್ತ್ರೀಧರ್ಮಕ್ಕನುಗುಣವಾಗಿ ನಾಚಿ ತಲೆತಗ್ಗಿಸಿದಳು; ಆದರೆ ಆಕೆಯು ಒಳ್ಳೇ ಬುದ್ಧಿಶಾಲಿನಿಯಾದ್ದರಿಂದ ಜೋಜಿಗರಾಯನ ಕಡೆಯ ಶಬ್ದಗಳೊಳಗಿಂದಲೇ ವಿರುದ್ಧ ಪ್ರಶ್ನೆಯನ್ನೆತ್ತಿಕೊಂಡು ತುಸ ಆಶ್ಚರ್ಯವನ್ನು ಬೀರಿ, ಅವಳು:—"ಮಹಾರಾಜರೇ, ತಾವಂದಂತೆ ನಿಜವಾಗಿಯೂ ತಮ್ಮ ವಿಶ್ವಾಸವು ಹಣೆಬರಹದಲ್ಲಿದೆಯೋ? ಮತ್ತು ತಮ್ಮ ಹಣೆಯಲ್ಲಿ ಏನು ಬರೆದಿದೆಯೆಂಬುದನ್ನಾದರೂ ತುಸ ಕೇಳಿಕೊಳ್ಳೋಣ! ಸಂಸ್ಥಾನಿಕರ ಜೋಧ್ಯದ ಮಾದರಿಯೆಂದು ತಮ್ಮ ಕೀರ್ತಿಯಾಗುವ ಯೋಗವು ತಮ್ಮ ಜನ್ಮಪತ್ರಿಕೆಯಲ್ಲಿ ಬರೆದಿದ್ದರೆ, ಅದು ಮಾತ್ರ ಸಟಿಯಾದ ಯೋಗವು ಕಂಡು ಬರುತ್ತದೆ ಕಾರಣ ಪ್ರಜಾಪ್ರೇಮದ ದೃಷ್ಟಿಯಿಂದ ತಾವು ನಿಜವಾಗಿಯೂ ಜೋಜಿಗದವರಾಗಿ ತೋರುತ್ತೀರಿ. ಈ ಪಟ್ಟಣದ ಹೆಸರನ್ನು ಜೋಧ್ಯಪುರವೆಂದು ಪ್ರಾರಂಭದಲ್ಲಿ ಯಾರು ಮತ್ತು ಏಕೆ ಇಟ್ಟರೆಂಬುದು ಗೊತ್ತಿಲ್ಲ; ಆದರೆ ಎಷ್ಟೋ ಸಮಯಗಳಲ್ಲಿ ಮನುಷ್ಯನ ಪ್ರೌಢಾವಸ್ಥೆಯಲ್ಲಿ ಪ್ರಕಟವಾಗುವ ಗುಣಗಳೂ ಮತ್ತು ಅವುಗಳ ಪತ್ತೆಯೇ ಇಲ್ಲದಾಗ ಕೇವಲ ಪ್ರೀತಿಯಿಂದ ತೊಟ್ಟಿಲದೊಳಗಿನ ಕೂಸೆಂದು ಇಟ್ಟ ಅವನ ಹೆಸರೂ ಇವುಗಳು ಆಶ್ಚರ್ಯಕಾರಕವಾಗಿ ಹೊಂದುತ್ತವೆ. ಅದರಂತೆಯೇ ಈ ಪಟ್ಟಣದ್ದಾದರೂ ಆದೀತು."

ಅದಕ್ಕೆ ಜೋಜಿಗರಾಯನು ಒಳ್ಳೇ ಉತ್ಸಾಹದಿಂದ:—ವಿಮಲಾಬಾಯಿ, ಜನ್ಮಪತ್ರಿಕೆಗಳಲ್ಲಿ ಶಾಬ್ದಿಕ ಕೋಟಿಗಳಿರುತ್ತಿರುವದಿಲ್ಲ; ಆದರೆ ಅದರಲ್ಲಿ ಕೇವಲ ಯೋಗಗಳು ಮಾತ್ರ ದಿಗ್ದರ್ಶಿತವಾಗಿರುತ್ತವೆ. ನನ್ನ ಪತ್ರಿಕೆಯಲ್ಲಿ ಬರೆದಿರುವ ಯೋಗಗಳಲ್ಲಿ ಎರಡಂತೂ ಕೇವಲ ಅನುಭವಕ್ಕೆ ಬಂದುದರಿಂದ, ಒಂದು, ಎರಡು, ಮೂರು ಈ ಕ್ರಮದಂತೆಯೇ ಏಕಾಗಲೊಲ್ಲದು, ಅದರಲ್ಲಿ ಬರೆದಿರುವ ಮೂರನೇ ಯೋಗವಾದರೂ ನಿಜವಾದೀತೆಂದೆನಿಸುತ್ತಿತ್ತು. ಅದು ಹೇಗೆ ಅನುಭವಕ್ಕೆ ಬಂದೀತೆಂಬುದರ ಕಲ್ಪನೆಯು ನನಗೆ ಮೊನ್ನೆ ಮೊನ್ನೆಯವರೆಗೂ ಇರಲಿಲ್ಲ; ಆದರೆ ನಿಮ್ಮ ಪ್ರಭಾಕರಪಂತರು ನಿಮ್ಮ ಮನೆಗೆ ಗುಪ್ತವೇಷದಿಂದ ಪ್ರವೇಶ ಮಾಡುತ್ತಿರುವ ಸ್ಥಳದಲ್ಲಿ, ಅದೇ ಕಾಲಕ್ಕೆ ನಾನೂ ಗುಪ್ತ ವೇಷದಿಂದ ನಿಮ್ಮನ್ನು ಮೊಟ್ಟಮೊದಲು ಸಂದರ್ಶಿಸಿದೆನು. 'ಒಮ್ಮೆಲೆ ಹೊರಟು ಹೋಗು' ಎಂದು ನೀವು ಆಗ ನನ್ನನ್ನು ಬೆದರಿಸಿ ಹೇಳಿದುದು ನಿಮಗೆ ಸ್ಮರಿಸುತ್ತಿದೆಯೆ? ಆ ನಿಮ್ಮ ಪ್ರಥಮ ದರ್ಶನದಿಂದಲೂ ತೇಜಸ್ವೀ ವರ್ತನದಿಂದಲೂ ನನ್ನ ಪತ್ರಿಕೆಯೊಳಗಿನ ಮೂರನೇ ಯೋಗವೂ ಒದಗಿ ಬರುವದೆಂದು ನನಗೆ ಅನಿಸಹತ್ತಿತು. ಇತ್ತ ನೋಡಿರಿ; ನಾನು ನನ್ನ ಜನ್ಮಪತ್ರಿಕೆಯನ್ನೇ ನಿಮಗೆ ತೋರಿಸುತ್ತೇನೆ. ದೈವಲಿಖಿತದ ಮೇಲಿನ ನನ್ನ ವಿಶ್ವಾಸವು ಯೋಗ್ಯವೋ-ಅಯೋಗ್ಯವೋ ಎಂಬದು

ತಿಳಿದೀತು, ಹೀಗೆಂದು ಹೇಳಿ, ಜೋಜಿಗರಾಯನು ಬೀರಿನ ಕೀಲಿ ತೆಗೆದು ಅದರೊಳಗಿನ ತನ್ನ ಜನ್ಮಪತ್ರಿಕೆಯನ್ನು ತಂದು ವಿಮಲೆಯ ಎದುರಿಗೆ ಮಡಿಕೆ ಬಿಚ್ಚಿ ಇಟ್ಟನು. ಅದನ್ನು ಓದಬೇಕೋ-ಓದಬಾರದೋ ಎಂಬ ಸಂಶಯವು ಅವಳಿಗುಂಟಾಯಿತು; ಆದರೆ ಓದದಿರುವದು ಉದ್ಧಾಮತನದ್ದಾದೀತೆಂದು ತುಸ ಕೌತುಕ ಬುದ್ಧಿಯಿಂದಲೇ ಅವಳು ಅದನ್ನೋದಿದಳು. ಆ ಪತ್ರಿಕೆಯೊಳಗಿನ ಸಂಗತಿಯು ಹೀಗಿದ್ದಿತು: "ಚಿಕ್ಕಂದಿನಲ್ಲಿ ಮಾತೃವಿಯೋಗವಾದೀತು; ಆದರೆ ಆ ದುಃಖವು ಒಬ್ಬ ಮಾತೃಸಮಾನ ಸ್ತ್ರೀಯಿಂದ ನಿವಾರಣವಾದೀತು. ರಂಕನಾದವನು ರಾಜನಾಗುವಂತಹ ಬಲಿಷ್ಠಯೋಗವಿದೆ; ಆದರೆ ಭೋಗಕ್ಕಿಂತ ತ್ಯಾಗದ ವೃತ್ತಿಯು ಪ್ರಬಲವಾದೀತು. ಮಾತೃ-ಪಿತೃ ಪ್ರೇಮವುಳ್ಳ ವಿಮಲ ಚಾರಿತ್ರ್ಯದ ವಿದುಷೀ ಸ್ತ್ರೀಯಳೊಡನೆ ಅದ್ಭುತ ರೀತಿಯಿಂದ ಭೆಟ್ಟಿಯ ಯೋಗವುಂಟಾಗಿ ಅವಳೊಡನೆ ವಿವಾಹವಾದೀತು; ಮತ್ತು ಇಡೀ ಜನ್ಮದಲ್ಲಿ ಅವಳಿಂದ ಒಳ್ಳೇ ಸೌಖ್ಯವುಂಟಾಗಿ, ಕೈಕೊಂಡ ಕೆಲಸದಲ್ಲಿ ಸಹಾಯವಾದೀತು."

ಪತ್ರಿಕೆಯೊಳಗಿನ ಫಲವನ್ನು ವಿಶೇಷವಾಗಿ 'ವಿಮಲ'ವೆಂಬ ಶಬ್ದವನ್ನೋದಿ ವಿಮಲೆಯು ನಿಜವಾಗಿಯೂ ಬೆದರಿದಳು. ಕಾಗದ, ಮಸಿಗಳ ಮೇಲಿಂದ ಆ ಪತ್ರಿಕೆಯು ಇಪ್ಪತ್ತೈದು ವರ್ಷಗಳ ಮುಂಚೆ ಬರೆದಂತೆ ಹಳೆಯದಾಗಿ ಕಾಣಿಸುತ್ತಿತ್ತು. ಇಂದಿನ ಅಕಲ್ಪಿತ ಪ್ರಸಂಗಕ್ಕಾಗಿ ಅದನ್ನು ಬೇಕಂತ ಕೃತ್ರಿಮವಾಗಿ ಮಾಡಿದೆಯೆಂದು ತಿಳಿಯಲಿಕ್ಕೆ ಯಾವ ಕಾರಣವೂ ಇರಲಿಲ್ಲ. ಇನ್ನು ಆ ಪತ್ರಿಕೆಯು ನಿಜವೆಂದರೆ, ಅದರೊಳಗಿನ ಉಲ್ಲೇಖವು ಹೆಸರನ್ನು ಬಿಟ್ಟುಬಿಟ್ಟರೂ ವರ್ಣನ ಮತ್ತು ಪರಿಸ್ಥಿತಿಗಳ ಮೂಲಕ ತನ್ನನ್ನೇ ಅಡರುವಂತಿತ್ತು! ಅದನ್ನು ಕೊಡವಿಬಿಡಲಿಕ್ಕೆ ಒಂದರೆ ನೋಡಿಬಿಡಬೇಕೆಂದು ವಿಮಲೆಯು ನಕ್ಕು, ಬೇಕಂತ ತುಸ ಮೂಗು ತಿರುವಿದಂತೆ ಮುರುಕ ಮಾಡಿ: "ಲಾಕ್ಷಣಿಕ ದ್ವಯಾರ್ಥದ ಭಾಷೆ ಯೋಜಿಸುವದೇ ಜ್ಯೋತಿಷದ ಮುಖ್ಯ ಮಂತ್ರವಾಗಿದೆ. ಫಲಜ್ಯೋತಿಷದ ಲೋಕಭ್ರಮದ ಬಾಧೆಯನ್ನು ನಾನು ತಮಗೆ ಸಹಸಾ ಆಗಗೊಡುವದಿಲ್ಲ. ಆದರೂ ಕೂಡ ವಿಷಯವೇ ಹೊರಟದ್ದರಿಂದ ನಾನೊಂದು ಮಾತು ಕೇಳಬೇಕೆಂದಿರುತ್ತೇನೆ!"

ಉತ್ಸುಕತೆಯಿಂದ ಜೋಜಿಗರಾಯನು:—ಅವಶ್ಯವಾಗಿ ಕೇಳಿರಿ; ನಾನಾದರೂ ಪ್ರಾಯಶಃ ಜ್ಯೋತಿಷಕ್ಕಿಂತ ತರ್ಕಬುದ್ಧಿಯನ್ನೇ ಹೆಚ್ಚಾಗಿ ಮನ್ನಿಸುತ್ತೇನೆ; ಆದರೆ ನ್ಯಾಯಾಧೀಶನು ತನ್ನ ಎದುರಿಗೆ ಬಂದಿರುವ ಎಲ್ಲ ಪುರಾವೆಯ ಬಗ್ಗೆ ವಿಚಾರ ಮಾಡಲೇಬೇಕಲ್ಲವೇ?

ವಿ:—ನಾನು ಕೇಳುವದಿಷ್ಟೇ, "ರಂಕನು ರಾಜನಾಗುವ ಬಲಿಷ್ಠಯೋ

ಗವು; ಆದರೆ ಭೋಗಕ್ಕಿಂತ ತ್ಯಾಗದ ವೃತ್ತಿಯು ಪ್ರಬಲ" ಎಂಬ ಜ್ಯೋತಿಷ್ಯನ ಭವಿಷ್ಯವು ತಮ್ಮ ವಿಷಯದಲ್ಲಿ ನಿಜವಾಯಿತೆಂಬ ಸರ್ಟಿಫಿಕೇಟನ್ನು ನಾನು ಬಹುಮಾನಪೂರ್ವಕವಾಗಿ ಕೊಟ್ಟೇನು;' ಆದರೆ ಮಾತೃವಿಯೋಗವಾದೀತು; ಹಾಗು ಆ ದುಃಖವು ಒಬ್ಬ ಮಾತೃತುಲ್ಯ ಸ್ತ್ರೀಯಿಂದ ಪರಿಹಾರವಾದೀತೆಂಬ ಈ ಭವಿಷ್ಯದ ಗತಿಯೇನು? ತಮ್ಮ ಹಿಂಬದಿಗೆ ಆ ಹೂಮಾಲೆ ಹಾಕಿದ ಫೋಟೋ ಯಾರದದು? ತಮ್ಮ ಜನಕ ತಾಯಿಯದೊ? ಇಲ್ಲವೆ ಅವಳ ಸ್ಥಳವನ್ನು ಪ್ರೇಮದಿಂದ ಆಕ್ರಮಿಸಿರುವ ಆ ಎರಡನೇ ಸ್ತ್ರೀಯಳದೊ? ಈ ಫೋಟೋದ ಮುಖಭಾವದಲ್ಲಿ ನಿಜವಾದ ತೇಜಸ್ವಿತೆಯೂ ಸದ್ಗುಣಗಳೂ ತುಂಬಿ ತುಳುಕಿರುತ್ತವೆ.

ಈ ಪ್ರಶ್ನೆಯನ್ನು ಕೇಳಿ ಅದರ ಉತ್ತರ ಕೊಡಲಿಕ್ಕೆ ಜೋಜಿಗರಾಯನಿಗೆ ಒಳ್ಳೇ ಹುರುಪು ಉಂಟಾಯಿತು, ವಿಮಲೆಯು ಫೋಟೋ ನಿರೀಕ್ಷಿಸುತ್ತಿರುವಾಗಲೇ ಜೋಜಿಗರಾಯನು ಆ ಫೋಟೋದ ಎದುರಿಗೆ ಹೋಗಿ ನಿಂತುಕೊಂಡನು. ಫೋಟೋದ ಕಟ್ಟಿನ ಕೆಳಬದಿಗೆ ತಲೆಹಚ್ಚಿ ಮೂರುಸಾರೆ ನಮಸ್ಕರಿಸಿ, ವಿಮಲೆಯ ಕಡೆಗೆ ಮೋರೆ ಮಾಡಿ ನಿಂತು:-"ವಿಮಲಾಬಾಯಿ, ಈ ಪತ್ರಿಕೆಯೊಳಗಿನ ನನ್ನ ರಾಜಯೋಗದಂತೆಯೇ ಮಾತೃಸುಖದ ಯೋಗವಾದರೂ ಶಬ್ದಶಃ ಸಟಿಯಾಯಿತು. ನನ್ನ ಹಡೆದವ್ವನು ನನ್ನ ಚಿಕ್ಕಂದಿನಲ್ಲಿಯೇ ಗತಿಸಿದಳು. ಅವಳ ನೆನಪೆಂದರೆ ನನಗೆ ಒಳ್ಳೇ ಅಭಿಮಾನಾಸ್ಪದವಾಗಿದೆ; ಆದರೆ ಬೇಗನೆ ಅವಳಿಗೆ ಮರಣವು ಪ್ರಾಪ್ತವಾಗಲು, ಅವಳು ನನ್ನನ್ನು ಈ ಫೋಟೋದೊಳಗಿನ ಈ ಸಾಕು ತಾಯಿಯ ಉಡಲಲ್ಲಿ ಹಾಕಿದಳು. ಅಂದಿನಿಂದ ಈ ಮಹಿಮಳು ನನ್ನನ್ನು ಕೇವಲ ಹೊಟ್ಟೆಯ ಮಗನಂತೆ ಪಾಲನ-ಪೋಷಣ ಮಾಡಿದಳಲ್ಲದೆ, ನನ್ನ ಭಾವೀ ರಾಜ್ಯಪದದ ಸ್ವಪ್ನವು ಅವಳಿಗೆ ಮೊದಲೇ ಬಿದ್ದಿತ್ತೆಂಬಂತೆ ದೊಡ್ಡಿಸ್ತಿಕೆ, ಸ್ವಾಭಿಮಾನ, ಸಿರಿವಂತಿಕೆಯ ತ್ಯಾಗ ಮಿಶ್ರಿತವಾದ ಉಪಭೋಗ ಮುಂತಾದ ಎಲ್ಲ ಸದ್ಗುಣಗಳ ಶಿಕ್ಷಣವನ್ನು ಅವಳು ನನಗೆ ಒಳ್ಳೇ ಆಸ್ಥೆಯಿಂದ ಕೊಟ್ಟಳು. ನನ್ನ ನಿಜವಾದ ರಾಜಕುಮಾರ ಕಾಲೇಜದ ಕೋರ್ಸೆಂದರೆ ನಾನು ಈ ಮಹಾಮಹಿಮಳ ಮನೆಯಲ್ಲಿ ಕಳೆದ ದಿನಗಳೇ. ಇವಳೇ ಮನೋಹರನ ಹಡೆದವ್ವನು. ಆತನು ಬಹಿರಂಗದಲ್ಲಿ ನನ್ನೊಡನೆ ಪ್ರಾ. ಸೆಕ್ರೆಟರಿಯ ನಾತೆಯಿಂದ ನಡೆಯುತ್ತಿದ್ದರೂ, ಮನೋಮನವಾಗಿ ಆತನು ನನ್ನ ಅಣ್ಣನಾಗಿದ್ದಾನೆ. ಜನ್ಮಕೊಡದಿದ್ದ ಸ್ತ್ರೀಯ ಮೇಲೂ ಪ್ರತ್ಯಕ್ಷ ತಾಯಿಯಂತೆ ಪ್ರೇಮವನ್ನು ಹೇಗೆ ಮಾಡಬರುತ್ತದೆಂಬದರ ಅನುಭವವು ವಿಮಲಾಬಾಯಿ, ಖುದ್ದ ನಿಮಗಿರುವಂತೆ ನನಗೂ ಇದೆ. ನೀವೂ ನಾನೂ ಸಹಾನುಭವಿಗಳಾದ್ದರಿಂದಲೇ ಇಡೀ ಜನ್ಮವನ್ನು ಸಹಾನುಭವಿಗಳಾಗಿಯೇ ಕಳೆಯಬೇಕೆಂದು ನನ್ನ ಇಚ್ಛೆಯಿದೆ" ಹೀಗೆಂದು ನುಡಿದು, ಆತನು ಮತ್ತೆ

ಮೊದಲಿನಂತೆ ವಿಮಲೆಯು ಎದುರಿಗಿನ ಖುರ್ಚಿಯ ಮೇಲೆ ಬಂದು ಕುಳಿತನು.

ಮೇಜಿನ ಮೇಲೆ ಕಣ್ಣೆದುರಿಗಿದ್ದ ಜೋಜಿಗರಾಯನ ಜನ್ಮಪತ್ರಿಕೆಯನ್ನು ವಿಮಲೆಯು ಪುನಃ ಪುನಃ ಮನಸ್ಸಿನಲ್ಲಿಯೇ ಓದುತ್ತಿದ್ದಳು. ಅದನ್ನು ಕಂಡು ಜೋಜಿಗರಾಯನು:-"ವಿಮಲಾಬಾಯಿ, ಪತ್ರಿಕೆಯೊಳಗಿನ ಎರಡು ಭವಿಷ್ಯಗಳು ನಿಜವಾದ ಬಳಿಕ ಮೂರನೆಯದಾದರೂ ಸಟಿಯಾಗುವದೋ-ಇಲ್ಲವೋ ಹೇಳಿರಿನ್ನು! ಮತ್ತು ಅದನ್ನು ಮಾಡುವದು ಕೇವಲ ನಿಮ್ಮ ಕೈಯಲ್ಲೇ ಇದೆ. ಮನುಷ್ಯನಲ್ಲಿ ಹುಟ್ಟ ನಂಬಿಗೆಯ ಕೆಲಕೆಲವು ಸಂಗತಿಗಳು ಇರುತ್ತವೆ. ಹುಟ್ಟಿದಂದಿನಿಂದ ನನ್ನ ನಂಬಿಗೆಯಿರುವದೇನಂದರೆ, ನನ್ನ ಜೀವನ ನೌಕೆಯು ಯಾವಳೊಬ್ಬ ಸತ್ಪ್ರವೃತ್ತ ಪ್ರೇಮಲ ನಿಃಸ್ವಾರ್ಥೀ ಸ್ತ್ರೀಯ ಸ್ಫೂರ್ತಿಯ ಅನುಕೂಲ ಗಾಳಿಯಿಂದಲೇ ನಡೆಯಬೇಕಾಗಿದೆ. ಆಯುಷ್ಯದ ಪೂರ್ವಭಾಗದಲ್ಲಿ ಆ ಮಹಾನುಭಾವಳು ಈ ನನ್ನ ನಂಬಿಗೆಯನ್ನು ಸಟಿಯಾಗ ಮಾಡಿದಳು; ಮತ್ತು....''ಇಷ್ಟು ಶಬ್ದಗಳು ಹೊರಬೀಳುತ್ತಿರುವಷ್ಟರಲ್ಲಿ ಜೋಜಿಗರಾಯನ ಕಂಬನಿಗಳು ಹರಿಯ ಹತ್ತಿದವು. ಅದೇ ಭಾವನೆಯಲ್ಲಿ ಆತನು ತನ್ನ ತಲೆಯನ್ನು ಮೇಜಿನ ಮೇಲಿದ್ದ ವಿಮಲೆಯ ಡಬ್ಬುಗೈಯ ಮೇಲಿಟ್ಟನು; ಮತ್ತು ಆತನ ಕಣ್ಣೀರಿನಿಂದ ಅವಳ ಕೈಯೂ ಅದರ ಕೆಳಗಿನ ಪತ್ರಿಕೆಯ ಮೂಲೆಯೂ ಹಸಿಯಾದವು.

ಪ್ರೇಮಲ ಕೃತಜ್ಞತೆಯ ಆ ದೃಶ್ಯವನ್ನು ಕಂಡು ವಿಮಲೆಯ ಅಂತಃಕರಣವು ಉಕ್ಕಿಬಂದಿತು. ಅವಳ ಕಣ್ಣೊಳಗಿಂದಲೂ ನೀರು ಹರಿಯತೊಡಗಿದವು. ಅವಳು ಜೋಜಿಗರಾಯನ ತಲೆಯ ಕೆಳಗಿನ ತನ್ನ ಕೈಗಳನ್ನು ಮೆಲ್ಲನೆ ತೆಗೆದುಕೊಂಡು:--"ಮಹಾರಾಜ, ಪತ್ರಿಕೆಯು ತೊಯ್ದೀತಲ್ಲ?'' ಎಂದೆನ್ನಲು, ಜೋಜಿಗರಾಯನು ತಲೆಯನ್ನೆತ್ತಿ: "ನನ್ನ ಪತ್ರಿಕೆಯ ಪೂಜೆಗೆ ಇದಕ್ಕೂ ಹೆಚ್ಚಿನ ಮಂಗಲಕರವಾದ ಬೇರೆ ಯಾವ ಅಭಿಷೇಕವನ್ನು ನಾನು ಮಾಡೇನು?'' ಎಂದು ಹೇಳಿ, ಆಕೆಯ ಗಲ್ಲಗಳ ಮೇಲಿನ ಅಶ್ರುಪ್ರವಾಹದ ಗುರುತನ್ನೂ ನೋಡಿ "ಆದರೆ ನಿಮ್ಮ ಕಣ್ಣೊಳಗಿಂದಲೂ ಈ ಪತ್ರಿಕೆಯ ಮೇಲೆ ಮಂಗಲಾಭಿಷೇಕದ ನಾಲ್ಕು ಹನಿಗಳು ಬಿದ್ದಿರುತ್ತವೆಂದು ತೋರುತ್ತದೆ. ಒಟ್ಟಿನಲ್ಲಿ ನನ್ನ ಅಂತಃಕರಣವು ತನ್ನ ಗುಪ್ತಸಂದೇಶವನ್ನು ನಿಮಗೆ ತಿಳಿಸಿ, ಖಾತ್ರಿಮಾಡಿಕೊಟ್ಟಿತೆಂಬಂತೆ ತೋರುತ್ತಿದೆ. ಹಾಗಾದರಿನ್ನು ನನ್ನ ಮೂರನೇ ಭವಿಷ್ಯವೂ ನಿಜವಾಗುವದೆನ್ನಿರಿ. ಇನ್ನು ಮಾತ್ರ ನಾನು ಧನ್ಯನಾದುದು ನಿಜವು!''

ಈ ಕಟ್ಟಕಡೆಯ ಸಂಭಾಷಣವು ನಡೆದಿರುವಾಗಲೇ ಮನೋಹರನು ಯಾವಾಗ ಅಟ್ಟವನ್ನೇರಿ ಬಂದಿದ್ದನೆಂಬದು ಅವರಿಬ್ಬರಿಗೂ ಗೊತ್ತಾಗಿರಲಿಲ್ಲ. ವಿಮಲೆಯ ಕೈ ಮೇಲೆ ಜೋಜಿಗರಾಯನು ತಲೆಯೂರಿದ್ದನ್ನು ಕಂಡು ಆತನು ತುಸ

ಮರೆಗಾಗಿದ್ದನು; ಆದರೆ ಜೋಜಿಗರಾಯನ ಧನ್ಯತೆಯ ಉದ್ಗಾರದಿಂದ ಸಂಭಾಷಣವು ಮುಗಿಯಿತೆಂದು ತಿಳಿದು, ಆತನು ಮುಂದೆ ಬಂದು, ಚಪ್ಪಾಳೆ ಬಡಿದು: "ಮಹಾರಾಜರೇ, ಇನ್ನೂ ಅಪೂರ್ಣವೋ-ಸಂಪೂರ್ಣವೋ?" ಎಂದಂದನು.

ಆ ಪ್ರಶ್ನೆಯ ಮರ್ಮವು ಜೋಜಿಗರಾಯ-ವಿಮಲೆಯರಿಬ್ಬರಿಗೂ ಹೊಳೆಯಿತು. ವಿಮಲೆಯು ಸಹಜವಾಗಿಯೇ ತುಸ ನಾಚಿಕೊಂಡಳು. ಜೋಜಿಗರಾಯನು:—"ಅಣ್ಣಾ, ಇದೆಲ್ಲ ಪ್ರಾಯವ್ಹೇಟ ಸೆಕ್ರೆಟರಿಗಳ ಕಂತ್ರಾಟವು! ಅಣ್ಣನು ತಮ್ಮನ ಹಿತವನ್ನು ಎಷ್ಟು ಹಾಗು ಹೇಗೆ ಮಾಡಬೇಕೆಂಬದಕ್ಕೆ ಅಳತೆಯಿರುವದೇ?"

---

## ೨೭ ಸಂಸ್ಥಾನೀ ಸ್ವರಾಜ್ಯದ ಮೊದಲನೇ ಮುಕ್ಕಾಮು.

ವಿಮಲೆಯ ಸಂಬಂಧದ ಪ್ರೇಮಾಕಾಂಕ್ಷೆಯು ಸಫಲವಾದದ್ದರಿಂದ ಜೋಜಿಗರಾಯನು ಸ್ವಂತದ ಬಗ್ಗೆ ಧನ್ಯತೆಯ ಉದ್ಗಾರಗಳನ್ನಂತೂ ಹೊರಡಿಸಿದನು; ಆದರೆ ಮನೋಹರನಿಗಾದರೂ ಅವುಗಳನ್ನು ಬೇರೆ ದೃಷ್ಟಿಯಿಂದ ಸ್ವಂತದ ಬಗ್ಗೆ ಯಥಾರ್ಥತೆಯಿಂದ ಹೊರಡಿಸಬರುತ್ತಿತ್ತು. ಯಾಕಂದರೆ, ಸಂಸಾರದಲ್ಲಿ ಧನ್ಯತೆಯೆನಿಸುವಂಥ ಯಾವ ಕೆಲ ಸಂಗತಿಗಳಿರುತ್ತವೆಯೋ, ಅವುಗಳಲ್ಲಿ ಸ್ವಂತಕ್ಕನುರೂಪಳಾದ ವಧುವು ದೊರಕುವದರೊಡನೆಯೇ, ತುಲ್ಯಗುಣರಾದಂಥ ಬೇರೆ ವಧು-ವರರ ವಿವಾಹಗಳನ್ನು ಕೂಡಿಸಿಕೊಡುವ ಶ್ರೇಯಸ್ಸು ದೊರಕುವ ಸಮಾವೇಶವನ್ನೂ ಮಾಡಬರುತ್ತದೆ. "ಸಮಾನಯನ್ ತುಲ್ಯಗುಣಂ ವಧುವರಂ ಚಿರಸ್ಯ ವಾಚ್ಯಂ ನ ಗತಃ ಪ್ರಜಾಪತಿಃ" ಹೀಗೆಂದು ಕಾಲಿದಾಸನು ಅಂದೇ ಬಿಟ್ಟಿದ್ದಾನೆ. ಆ ಕೆಲಸವು ಬ್ರಹ್ಮದೇವನಿಗೇ ಗಡಚಾಗಿರಲು, ಮನುಷ್ಯರ ಪಾಡೇನು? ಇರಲಿ. ಜೋಜಿಗರಾಯನು ಪ್ರಜೆಗಳಿಗೆ ಸ್ವರಾಜ್ಯ ಕೊಡುವ ಸಿದ್ಧತೆ ಮಾಡಿರಲು, ವಿಮಲೆಯಂತಹ ವಧುವನ್ನು ಆತನಿಗೆ ದೊರಕಿಸಿಕೊಟ್ಟು, ಆತನ ಯೋಗ್ಯತೆಗೆ ತಕ್ಕ ಪ್ರತಿಫಲವನ್ನು ತಾನೂ ಕೊಟ್ಟೆನೆಂದು ಮನೋಹರನಿಗನಿಸಿತು; ಆದರೆ ಈ ಅರಿವನ್ನು ತೋರಗೊಡದೆ, ಆತನು ಜೋಜಿಗರಾಯನನ್ನುದ್ದೇಶಿಸಿ: "ಮಹಾರಾಜರೇ, ಇನ್ನು ನೀವು ನನ್ನ ಬಂಧುಪ್ರೇಮದ ಸ್ತುತಿಯನ್ನೇಕೆ ಮಾಡಲಾರಿರಿ? ಆದರೆ ಅದು ಎಲ್ಲ ರೀತಿಯಿಂದಲೂ ಸ್ವಾರ್ಥ ಮೂಲಕವೇ ಆಗಿದೆ; ಅದಿರಲಿ. ನೀವು ಪ್ರಜಾಪ್ರೇಮದ ಯೋಜನೆಯನ್ನು ನಿಶ್ಚಯಿಸತಕ್ಕವರಿದ್ದಿಲ್ಲ! ಅದರದೇನಾಯಿತು? ಅಥವಾ ಸ್ವಂತದ ಕಾರ್ಯಸಾಧನೆಯಲ್ಲಿ ಅದು ಮರೆತೇ ಬಿಟ್ಟಿತೋ?"

ಜೋ:—ಭಲೆ! ಭಲೆ! ಅದೇಕಂತೆ. ನಾನು ಆ ಯೋಜನೆಯನ್ನು ಸ್ವ-ಹಸ್ತದಿಂದ ಕಾಗದದ ಮೇಲೆ ಪ್ರತ್ಯಕ್ಷ ಬರೆದಿರುತ್ತೇನೆ. ಅದನ್ನು ನೋಡೆಂದರೆ

ಗೊತ್ತಾದೀತು. ಇದನ್ನು ಮತ್ತೊಮ್ಮೆ ಓದಿ ಕೊನೆಯ ನಿಷ್ಕರ್ಷವೆಂದು ಇದರ ಕೆಳಗೆ ನಾನು ರಾಜನೆಂದೂ ವಿಮಲಾಬಾಯಿಯವರು ಪ್ರಜಾಪ್ರತಿನಿಧಿಗಳೆಂದೂ ನಮ್ಮಿಬ್ಬರ ಸಹಿಗಳೂ ಆಗಿರುತ್ತವೆ. ನೀನು ಈ ಕಾಗದವನ್ನೊಮ್ಮೆ ಓದಿಯೇ ಬಿಡು; ಅಂದರೆ ನಿನಗೂ ನಮ್ಮ ಯೋಜನೆಯು ತಿಳಿದೀತು.'' ಹೀಗೆಂದು ಹೇಳಿ ಜೋಜಿಗ ರಾಯನು ಸ್ವರಾಜ್ಯ ಘಟನೆಯ ಆ ಯಾದಿಯನ್ನು ಮನೋಹರನ ಕೈಗಿತ್ತನು. ಮನೋಹರನು ಅದನ್ನು ಗಟ್ಟಿಯಾಗಿ ಓದಿದನು. ಆ ಕಾಗದದಲ್ಲಿ ಬರೆದ ರಾಜ್ಯಘಟನೆಯ ಕಲಮುಗಳು ಹೀಗಿದ್ದವು:-

೧) ಸಂಸ್ಥಾನ ಸಂರಕ್ಷಣದ ಜವಾಬುದಾರಿಯು ಕಟ್ಟಕಡೆಗೆ ಮುಖ್ಯವಾಗಿ ರಾಜರ ಮೇಲೆಯೇ ಇರುತ್ತಿರುವದರಿಂದ, ಜವಾಬದಾರಿಯ ಕೆಲಸಗಳಲ್ಲಿ ಎಲ್ಲ ಶ್ರೇಷ್ಠ ಅಧಿಕಾರಿಗಳು ರಾಜನ ಕಡೆಗೇ ಇರಬೇಕು. ಇದಕ್ಕೆ ವ್ಯತಿರಿಕ್ತವಾಗಿ ಬೇರೆ ಕೆಲಸಗಳಲ್ಲಿಯ ಜವಾಬುದಾರಿಯನ್ನು ರಾಜನು ಪ್ರಜಾಪ್ರತಿನಿಧಿಗಳ ಮೇಲೆಯೇ ಹೊರಿಸಬೇಕು.

೨) ಈ ಪ್ರತಿನಿಧಿಗಳನ್ನು ರಾಜನೇ ತನ್ನ ಇಚ್ಛೆಯ ಪ್ರಕಾರ ನೇಮಿಸಬೇಕು. ಮಾತ್ರ ಅವರು ರಾಜ್ಯದಾಡಳಿತದಲ್ಲಿ ಕಾರ್ಯಕುಶಲರಾಗಿರಬೇಕು; ಆದರೆ ಮೇಲಿನ ಗುಣಗಳಿಗಿಂತಲೂ ಅವರಲ್ಲಿಯ ನಿಃಸ್ವಾರ್ಥತೆಯೇ ಹೆಚ್ಚು ಮಹತ್ವದ್ದಾಗಿದೆ.

೩) ಈ ಪ್ರತಿನಿಧಿಗಳನ್ನು ಮೊದಮೊದಲು ಸಂಬಳಿಲ್ಲದೆ ನೇಮಿಸಬೇಕು; ಮತ್ತು ಅವರಿಗೆ ಪ್ರತಿಫಲವನ್ನೇ ಕೊಡುವದಾದರೆ, ಅದನ್ನು ಅವರು ಸೇವಾ ನಿವೃತ್ತರಾಗುವ ಕಾಲಕ್ಕೆ ಅವರ ಕಾರ್ಯಬಾಹುಲ್ಯ ಹಾಗು ಅವರ ವಿಷಯದ ಲೋಕಮತ ಇವುಗಳನ್ನು ಮನದುಂದು ಇನಾಮು ಎಂದು ಕೊಡಬೇಕು.

೪) ಪ್ರಜೆಗಳೊಳಗಿನ ಯಾವನೊಬ್ಬನು ರಾಜ್ಯದಾಡಳಿತದ ಯಾವುದೊಂದು ಕೆಲಸವನ್ನು ಮೈಮೇಲೆ ತಕ್ಕೊಂಡು ಮಾಡಿತೋರಿಸುತ್ತೇನೆಂದರೆ, ಆತನಿಗೆ ಅದನ್ನು ಮಾಡಲಿಕ್ಕೆ ಯಾವಾಗಲೂ ಅವಕಾಶ ಕೊಡಬೇಕು; ಆದರೆ ಆ ಕೆಲಸವನ್ನು ಸಂಬಳಿಲ್ಲದೆ ಮಾಡುವದೇ ಆತನ ಸಾರ್ವಜನಿಕ ಹಿತಬುದ್ಧಿಯ ಪರೀಕ್ಷೆಯೆಂದು ತಿಳಿಯತಕ್ಕದ್ದು.

೫) ಪ್ರತಿಯೊಂದು ಖಾತೆಯ ಕಚೇರಿಯಲ್ಲಿ ತಜ್ಞ ಹಾಗು ಅನುಭವಸ್ಥರಾದಂಥ ಮುಖ್ಯ ಮುಖ್ಯ ಎರಡು-ಮೂರು ಜನ ಗುಮಾಸ್ತರನ್ನಾದರೂ ದಿನದ ವ್ಯವಹಾರ ಸಂಬಾಳಿಸಲಿಕ್ಕೆಂದಿಡಬೇಕು.

೬) ಲಂಚ-ರುಸುವತ್ತಿನ, ಜುಲುಮೆ-ಜಬರಿಗಳ ಚೌಕಶಿಗಳನ್ನು ಸಾದಾ ಫಿರ್ಯಾದಿಯಿಂದಲೂ ಮಾಡಬೇಕು; ಮತ್ತು ಗುಪ್ತೆಗಾರನಿಗೆ ನೆನಪು ಉಳಿಯುವ

ಹಾಗೆ ಹಾಗು ಜನರಿಗೆ ಬೆದರಿಕೆ ಹುಟ್ಟುವಂತೆ ಕಠಿಣ ಶಾಸನವನ್ನೀಯಬೇಕು.

೭) ನ್ಯಾಯದಾನದ ಕೆಲಸದೊಳಗಿನ ಕೊನೆಯ ನಿರ್ಣಯವನ್ನು ರಾಜನೇ ತನ್ನ ಕೈಯಲ್ಲಿಟ್ಟುಕೊಳ್ಳಬೇಕು; ಆದರೆ ಕೈಕೆಳಗಿನ ಅಧಿಕಾರಿಗಳು ತಂತಮ್ಮ ಅಧಿಕಾರಗಳನ್ನು ಬಜಾಯಿಸುತ್ತಿರುವಾಗ ಅವುಗಳಲ್ಲಿ ಕೊಂಚವೂ ಹೆಚ್ಚು-ಕಡಿಮೆ ಮಾಡಕೂಡದು.

೮) ಪ್ರತಿ ಮೂರು ತಿಂಗಳಿಗೊಮ್ಮೆ ನಾಲ್ಕು ದಿನ ದರಬಾರು ಕೂಡಿಸಿ, ರಾಜನು ಜಾಹೀರ ನಿಮಂತ್ರಣ ಕೊಟ್ಟು ಯಾರಿಗೇನಾದರೂ ತಕರಾರು ಕೊಡುವದಿದ್ದರೆ ಹೇಳಲಿಕ್ಕೆ ಕರೆಯಬೇಕು; ಮತ್ತು ಪ್ರತಿಯೊಂದು ಖಾತೆಯ ಅಧಿಕಾರಿಗಳನ್ನು ಹಾಜರಿರಿಸಿ, ಅವರ ಎದುರಿಗೆ ಕಾಗದ-ಪತ್ರಗಳನ್ನು ನೋಡಿ ಚೌಕಶಿ ಮಾಡಬೇಕು.

೯) ಕಾಯಿದೆಯ ಆಧಾರದ ಹೊರತು ಯಾರ ವ್ಯಕ್ತಿ ಸ್ವಾತಂತ್ರ್ಯ, ಧರ್ಮ, ರೂಢಿ, ಖಾಸಗೀ ವ್ಯವಹಾರ, ಆಸ್ತಿ-ಪಾಸ್ತಿ ಇವುಗಳಲ್ಲಿ ರಾಜನು ಕೈಹಾಕಬಾರದು.

೧೦) ಕಾಯಿದೆಯನ್ನು ಮಾಡುವ ಹಾಗು ಕರ ಕೂಡ್ರಿಸುವ ಕೆಲಸಗಳನ್ನು ಲೋಕಮತವನ್ನು ಅಜಮಾಯಿಸದ ಹೊರತು ಮಾಡಬಾರದು.

೧೧) ಪಂಚಾಯತಿ ಪದ್ಧತಿಯಿಂದ ನಿರ್ಣಯಗೊಳಿಸಬರುವಷ್ಟು ಆಡಳಿತವನ್ನೆಲ್ಲ ಆ ಪದ್ಧತಿಯಿಂದಲೇ ಸಾಗಿಸಬೇಕು.

೧೨) ಸರಕಾರೀ ಹಣದಿಂದ ಯಾವ ದೇವಸ್ಥಾನಕ್ಕೂ ಧರ್ಮಕೃತ್ಯಗಳಿಗೂ ಉತ್ಸವಗಳಿಗೂ ಸಹಾಯ ಮಾಡಬಾರದು. ಶಕ್ಯವಾದಷ್ಟು ಹೆಚ್ಚು ದುಡ್ಡನ್ನು ಶಿಕ್ಷಣಕ್ಕೆ ವಿನಿಯೋಗಿಸಬೇಕು.

೧೩) ಪ್ರತಿ ಮೂರು ವರ್ಷಕ್ಕೊಮ್ಮೆ ಸಂಸ್ಥಾನದ ಹೊರಗಿನ ಯಾವನೊಬ್ಬ ತಜ್ಞ, ವಿದ್ವಾನ್ ಲೆಕ್ಕ-ಪತ್ರ ಬಲ್ಲ ಅನುಭವಸ್ಥ ಮನುಷ್ಯನನ್ನು ಕರೆಯಿಸಿ, ಆತನಿಂದ ಸಂಸ್ಥಾನದ ಲೆಕ್ಕ-ಪತ್ರ ಜಮಾಖರ್ಚು ಹಾಗು ಆಡಳಿತಗಳನ್ನು ಪರೀಕ್ಷಿಸಿಕೊಳ್ಳಬೇಕು.

೧೪) ರಾಜನು ಸ್ವಂತಕ್ಕೆ ಸಂಸ್ಥಾನದ ನೌಕರನೇ ಎಂದು ತಿಳಿದು, ಖರ್ಚಿಗೆಂದು ಸಂಬಳ ಗೊತ್ತು ಮಾಡಿಕೊಳ್ಳಬೇಕು; ಮತ್ತು ಅದರಲ್ಲಿಯೇ ತನ್ನ ಕೌಟುಂಬಿಕ ಹಾಗು ನೈಮಿತ್ತಿಕ ಖರ್ಚುಗಳನ್ನು ಸಾಗಿಸಬೇಕು.

೧೫) ರಾಜನ ಹಿರಿಯ ಮಗನ ಹೊರತು ರಾಜಮನೆತನದೊಳಗಿನ ಇತರರಾರಿಗೂ ಸಂಬಳ ಗೊತ್ತುಮಾಡಿ ಕೊಡಬಾರದು.

೧೬) ದರಬಾರ ಇಲ್ಲವೆ ಸಂಸ್ಥಾನ ಇವುಗಳು ರಾಜವ್ಯಕ್ತಿಗಿಂತ ಭಿನ್ನ

ವೆಂದು ತಿಳಿದು ಅವುಗಳ ಸಂರಕ್ಷಣಕ್ಕಾಗಿಯೂ, ನಿತ್ಯದ ರಾಜ್ಯದಾಡಳಿತಕ್ಕಾಗಿಯೂ ಹಾಗು ಬೇರೆ ಕೆಲಸಗಳಿಗಾಗಿಯೂ ಖಜೀನ ಹಣವನ್ನು ಗೊತ್ತು ಮಾಡಿಡಬೇಕು.

೧೭) ರಾಜನು ಪ್ರತಿ ಐದು ವರ್ಷಗಳಿಗೆ ರಾಜಪದದ ರಾಜೀನಾಮೆ ಕೊಡಬೇಕು; ಮತ್ತು ಪ್ರಜೆಗಳು ಮತ್ತೆ ಆತನನ್ನು ಅಥವಾ ಬೇರೆ ಯಾವನೊಬ್ಬನನ್ನು ಆತನ ಸ್ಥಳಕ್ಕೆ ನೇಮಿಸಬೇಕು.

೧೮) ಈ ಆಯ್ಕೆಯನ್ನು ಮಾಡುವ ಸಲುವಾಗಿ ಸಂಸ್ಥಾನದೊಳಗಿನ ಐವತ್ತೇ ಜನ ಸಂಭಾವಿತ ಜನರ ಹೆಸರಿನ ಪಟ್ಟಿಯನ್ನು ಪಂಚಾಯತಿಗಳ ಮುಖಾಂತರ ಸಿದ್ಧಪಡಿಸತಕ್ಕದ್ದು.

೧೯) ಆ ಐವತ್ತು ಜನರಿಗೇ ಲೋಕಮತ ಪ್ರಕಟಿಸುವ ಅಧಿಕಾರವಿರಬೇಕು; ಹೊಸ ಕಾಯಿದೆ, ಕರಪಟ್ಟಿ, ಲೋಕಹಿತದ ಯೋಜನೆ ಮುಂತಾದ ವಿಷಯಗಳ ಬಗ್ಗೆ ವರ್ಷದಲ್ಲೊಮ್ಮೆ ಆ ಪ್ರಜಾಪ್ರತಿನಿಧಿ ಮಂಡಳದ ಮುಖಾಂತರ ಲೋಕಮತವನ್ನು ಅಜಮಾಯಿಸತಕ್ಕದ್ದು.

೨೦) ರಾಜನು ರಾಜ್ಯಪದದ ಮೇಲಿರುವಾಗ ಖಾಸಗೀ ವ್ಯಾಪಾರೋದ್ಯೋಗ ಇಲ್ಲವೆ ಹಣಗಳಿಸುವ ಬೇರೆ ಯಾವ ಕಾರ್ಯವನ್ನೂ ಮಾಡಕೂಡದು. ಇದರಂತೆಯೇ ಸಂಸ್ಥಾನಿಕನು ಲೋಕ ಸಭೆಯ ಒಪ್ಪಿಗೆಯ ಹೊರತು ಸಂಸ್ಥಾನದ ಸೀಮೆಯ ಹೊರಗೆ ಸ್ವಂತದ ಖಾಸಗೀ ಇಲ್ಲವೆ ಬೇರೆ ಯಾವ ಬಗೆಯ ಆಸ್ತಿ-ಪಾಸ್ತಿಗಳನ್ನೂ ಸಂಪಾದಿಸಕೂಡದು.''

ಆ ಯೋಜನೆಗಳನ್ನೋದಿ ಮನೋಹರನು ತಲೆಯನ್ನಲ್ಲಾಡಿಸಿ:-ಇದೆ; ಈ ಯೋಜನೆಯು ನಿಮ್ಮ ಸಂಕಲ್ಪದಂತೆ ಉದಾರವಾದದ್ದೇ ಇದೆ! ಈ ಯೋಜನೆಯನ್ನು ಅಮಲಿನಲ್ಲಿ ತಂದುಕೊಂಡು ಸ್ವರಾಜ್ಯವನ್ನನುಭೋಗಿಸುವ ಜಾಣತನವನ್ನೂ ಪಾತ್ರತೆಯನ್ನೂ ಈ ಸಂಸ್ಥಾನದ ಪ್ರಜೆಗಳಿಗೀಯಬೇಕೆಂದು ನಾನು ದೇವರನ್ನು ಪ್ರಾರ್ಥಿಸುತ್ತೇನೆ.

ಜೋ:—ಮನೋಹರಾ, ನನ್ನ ಪ್ರಜೆಗಳ ಪಾತ್ರತೆಯ ಬಗ್ಗೆ ನೀನು ಯಾವಾಗಲೂ ಹೀಗೆ ಶಂಕಿಸುತ್ತಿರುವದೇಕೆ?

ಮ:—ಯುರೋಪ-ಅಮೇರಿಕೆಗಳಲ್ಲಿ ಹಾಗೆ ಅನುಭವ ಬಂದಿದೆಯೆಂದು. ಮಹಾರಾಜ, ನೀವು ಸ್ವಂತದ ಮಟ್ಟಿಗೆ ನಿಃಸ್ವಾರ್ಥದ ಹೊಣೆ ಕೊಟ್ಟೀರಿ; ಆದರೆ, ನಾಳೆ ನಿಮ್ಮ ಮಗನೇ ರಾಜನಾದನೆಂದು ತಿಳಿಯಿರಿ; ಆದರೆ ಆತನ ನಿಃಸ್ವಾರ್ಥದ ಹೊಣೆಗಾರರು ನೀವಾಗಬಲ್ಲಿರಾ? ಅದರಂತೆಯೇ ಪ್ರಜೆಗಳ ಮಾತಾಗಿದೆ. ಪ್ರತಿಯೊಂದು ರಾಷ್ಟ್ರದೊಳಗಿನ ಪ್ರಜೆಗಳ ಸ್ವರಾಜ್ಯದ ಬೇಡಿಕೆಯು ಸ್ವಾರ್ಥಪರ

ವಾಗಿರುತ್ತದೆ. ಸ್ವರಾಜ್ಯವನ್ನು ಮೋಕ್ಷಕ್ಕಾಗಿ ಪಡೆಯುವದಿರುವದಿಲ್ಲೆಂಬದು ಒಪ್ಪಿಗೆ; ಅದನ್ನು ಇಹಲೋಕದ ಅಭ್ಯುದಯ-ಉತ್ಕರ್ಷಗಳಿಗಾಗಿಯೇ ಪಡೆಯ ಬೇಕಾಗುತ್ತದೆ; ಆದರೆ ರಾಜಸತ್ತೆಯು ಯಾವಾತನಿಗೆ ಅಲ್ಪವಾದರೂ ಲಭಿಸು ವದೋ, ಅದರಿಂದ ತಾನೊಬ್ಬ ಪ್ರತಿರಾಜನೇ ಆದೆನೆಂದು ತಿಳಿದು ಸಾಮಾನ್ಯ ಪ್ರಜಾಜನರು ಸ್ವಾರ್ಥ ಬುದ್ಧಿಯಿಂದ ಉಪಭೋಗಿಸುತ್ತಾರೆ; ಹಾಗು ಒತ್ತಾಯ ದಿಂದ ಉಪಯೋಗಿಸುತ್ತಾರೆ. ಸ್ವಾರ್ಥ ಮತ್ತು ಲೋಭಗಳು ರಾಜನ ರೂಪ ದಿಂದ ಒಂದೇ ಮುಖದಿಂದ ತಿನ್ನುತ್ತಿದ್ದರೆ, ಪ್ರಜೆಗಳ ಅನೇಕ ಮುಖಗಳಿಂದ ಅನೇಕ ವಿಧವಾಗಿ ತಿನ್ನಹತ್ತುತ್ತವೆ. ಅದರಿಂದ ಒಂದೇ ಮುಖದಿಂದ ತಿನ್ನುವದೇ ವಿಹಿತವೆಂದೆನಿಸುತ್ತದೆ.

ಜೋ:—ಇಲ್ಲ; ನನಗೆ ಹಾಗೆನಿಸುವದಿಲ್ಲ. ಪ್ರಜೆಗಳು ನೂರು ಮುಖ ಗಳಿಂದ ತಿಂದರೂ ಸ್ವತಃ ಯಾವ ಧನ-ಧಾನ್ಯಗಳನ್ನು ಹುಟ್ಟಿಸಿ, ಕರಗಳ ರೂಪ ದಿಂದ ರಾಜನಿಗೆ ಕೊಡುವರೋ ಅದರೊಳಗಿಂದಲೇ ಅವರು ತಿನ್ನುತ್ತಾರೆ; ಆದರೆ ಅದಕ್ಕೆ ವಿಪರೀತವಾಗಿ ರಾಜನು ತನ್ನ ಶ್ರಮದಿಂದ ಅದೆಷ್ಟು ಹಣ ಗಳಿಸುತ್ತಾನೆ? ಕರಪಟ್ಟಿಗಳನ್ನ ಕೊಡುವ ಯೋಗ್ಯತೆಯ ಮೇಲೆಯೇ ಮತಗಳನ್ನು ಅವಲಂಬಿಸಿ ಟ್ಟರೆ, ಆ ಮತದಾರರ ಲಿಸ್ಟಿನಲ್ಲಿ ರಾಜನ ಹೆಸರು ಬಂದಿತೋ ಇಲ್ಲವೋ ಸಂಶ ಯಾಸ್ಪದವೇ ಆದೀತು. ನನ್ನ ಅಂಬೋಣವಿಷ್ಟೇ, ಪ್ರಜೆಗಳೇ ಎಲ್ಲವನ್ನು ಗಳಿಸ ಬೇಕು; ರಾಜನಾಗಿ ಕೂಡ್ರುವವನು ಅದನ್ನೆಲ್ಲ ತನ್ನೊಬ್ಬನ ಇಚ್ಛೆಯಿಂದ ಖರ್ಚು ಮಾಡಬೇಕು; ಇಲ್ಲವೆ ತಿಂದು ಹಾಕಬೇಕೆಂಬ ಶ್ರಮವಿಭಾಗವು ಅನ್ಯಾ ಯದ್ದೇ ಅಲ್ಲವೇನು?

ವಿ: "ಒಬ್ಬನ ಇಚ್ಛೆಯಾದರೂ ನ್ಯಾಯವೇ ಆದೀತು; ಆದರೆ ಆ ಒಬ್ಬ ನು ಸ್ವಂತದ ವ್ಯಕ್ತಿಯ ದೃಷ್ಟಿಯಿಂದ ನಿಃಸ್ವಾರ್ಥಿಯಾಗಿರಬೇಕು" ಮನುಷ್ಯನ ಕೈಯಿಂದ ತಪ್ಪು ಆಗತಕ್ಕದ್ದೇ. ರಾಜಶಾಹಿಯಲ್ಲಿ ರಾಜನಿಂದ ತಪ್ಪಾಗುವಂತೆ, ಲೋಕಶಾಹಿಯಲ್ಲಿ ಲೋಕಪ್ರತಿನಿಧಿಗಳಿಂದಲೂ ತಪ್ಪಾದಾವು; ಆದರೆ ಯಾವಾ ಗಲೂ ಆಡಳಿತವು ಸ್ವಾರ್ಥದಿಂದಲೇ ಕೆಡುವಂತೆ, ಅಜ್ಞಾನದಿಂದ ಕೆಡುವದಿಲ್ಲ. ಇದುವರೆಗೆ ಅರಸರಿಗೆ ದೊರೆತ ಸಂಧಿಯು ಜನರಿಗಾದರೂ ದೊರೆಯಬೇಡವೇ? ಸ್ವಾರ್ಥವಿರಹಿತವಾದ ಸ್ವಾಮಿತ್ವವನ್ನು ರಾಜರು ಸಂಬಾಳಿಸಿಕೊಂಡರೆ, ಜನರು ಅದನ್ನು ಅವರಿಗೆ ಸಂತೋಷದಿಂದ ಕೊಟ್ಟಾರು. ಆಡಳಿತದ ಇಲ್ಲದ ಉಸಾಬರಿಯು ನಿಜವಾಗಿಯೂ ಯಾರಿಗೆ ಬೇಕಾಗಿದೆ? ನಿಃಸ್ವಾರ್ಥಿಯೂ ಕರ್ತವ್ಯನಿಷ್ಠನೂ ಆದ ರೈಲಿನ ಡ್ರಾಯವ್ಹರನ ಮೇಲೆ ಇಲ್ಲವೆ ಉಗೆಹಡಗದ ಕಪ್ತಾನನ ಮೇಲೆ ಭರವಸೆ ಯಿಟ್ಟು, ಸಾವಿರಾರು ಜನರು ಆನಂದದಿಂದ ಆಟವಾಡುತ್ತ ಪ್ರವಾಸ ಮಾಡು

ತ್ತಾರೆ. ಆ ನಿಃಸ್ವಾರ್ಥತೆಯನ್ನೂ, ಆ ಕರ್ತವ್ಯದಕ್ಷತೆಯನ್ನೂ ಅರಸರುಗಳು ಇದುವರೆಗೆ ತೋರಿಸಿದ್ದರೆ, ಲೋಕಶಾಹಿಯು ಬಂಡಿನ ನಿಶಾನೆಯು ಎಂದೂ ತಲೆ ಎತ್ತುತ್ತಿರಲಿಲ್ಲ! ಆದರೆ ಮಹಾರಾಜರು ನಿಃಸ್ವಾರ್ಥರಾದ್ದರಿಂದ ನಾನು ಈ ರಾಜ್ಯ ಘಟನೆಯಲ್ಲಿ ಸಂಪೂರ್ಣ ಲೋಕಶಾಹಿಯನ್ನು ನಿರ್ಮಿಸದೆ, ಮರ್ಯಾದಿತ ರಾಜ ಸತ್ತೆಯ ಯೋಚನೆಯನ್ನಿಟ್ಟಿದ್ದೇನೆ. ಲೋಕಶಾಹಿಯ ಬಗ್ಗೆ ಮಹಾರಾಜರಷ್ಟು ದುರ್ದಮ ವಿಶ್ವಾಸವು ನನ್ನ ಮನಸ್ಸಿನಲ್ಲಿರದಿದ್ದರೂ ಮನೋಹರಪಂತರೇ, ನಿಮ್ಮಷ್ಟು ಅವಿಶ್ವಾಸವೂ ನನ್ನಲ್ಲಿರುವದಿಲ್ಲ.

ಮ:—ಅಂದರೆ ನಿಮ್ಮಿಬ್ಬರ ಜೊತೆಯಿಂದ ಈ ರಾಜ್ಯದಾಡಳಿತವು ಬಲಿಷ್ಠ ವಾದ ಬ್ರೆಕ್ಕುಗಳುಳ್ಳ ಮೋಟರಿನಂತಾಗುವದೆನ್ನಬೇಕು! ಮೋಟರಿನಲ್ಲಿ ಮಲಗಿ ಸ್ವಸ್ಥಚಿತ್ತದಿಂದ ಮಲಗಲಿಕ್ಕೆ ನನಗೆ ಅನಾಯಾಸವಾಗಿ ಅನುಕೂಲತೆಯಾಯಿತು.

ಜೋ:—ನಾನು ನಿನ್ನನ್ನು ಸುಮ್ಮನೆ ಕೂಡ್ರಗೊಟ್ಟಾಗಲ್ಲವೆ ನೀನು ನಿದ್ದೆ ಮಾಡುವದು? ತೆರವಾಗಿರುವ ದಿವಾಣಪದವನ್ನು ಇನ್ನು ಮೇಲೆ ನೀನೇ ಸಂಭಾಳಿಸ ಬೇಕು. ನಾವಿಬ್ಬರೂ ರಾಜ್ಯಘಟನೆ ನಿರ್ಮಿಸುವ ಶ್ರಮವಹಿಸಿರುತ್ತೇವೆ; ಅದರ ಅಮಲು ನಡಿಸುವ ಶ್ರಮವನ್ನು ನೀನೇ ವಹಿಸಬೇಕು. ಹನ್ನೆರಡು ವರ್ಷಗಳ ಆಗ್ರಹದ ಆಳಿಕೆಯ ನಂತರ ನಾನು ನೇಮಿಸಿದ ಹೊಸ ದಿವಾಣನು ಎಷ್ಟು ದೊಡ್ಡ ಮನುಷ್ಯನಾಗಿರುತ್ತಾನೆಂಬದು ಜನರಿಗೆ ತಿಳಿದು ಹೋಗಲಿ! ಆದರೆ ಮನೋ ಹರ, ನೀನು ಸಂಬಳವನ್ನೆಷ್ಟು ತಕ್ಕೊಳ್ಳುತ್ತೀ?

ಮ:—ರಾಜನಿಗೆಷ್ಟು ಸಂಬಳವೋ ಆ ಮಾನದಿಂದಲೇ ದಿವಾಣನಿಗೆ. ರಾ- ಜನೇ ಫಕೀರನಾದ ಬಳಿಕ ದಿವಾಣನಿಗಾದರೂ ಸಂಬಳದ ಜರೂರಿಯೇಕೆ? ನೀವು ಬೇಗನೆ ಲಗ್ನವಾಗಿ ಸಂಸಾರ ಹೂಡುವವರಾದ್ದರಿಂದ ನಿಮಗೇನಾದರೂ ಬೇಕಾ ದೀತು. ನಾನು ಆಜನ್ಮ ಲಗ್ನವಾಗದಿರುವ ನಿಶ್ಚಯ ಮಾಡಿರುವನಾದ್ದರಿಂದ, ನನ ಗೊಬ್ಬನಿಗೆ ಏನು ಹಿಡಿಯಬೇಕಾಗಿದೆ? ಅತ್ತಿಗೆಯವರ ಕೈಯ ಸುಗ್ರಾಸ ಭೋಜನ ವನ್ನು ದಿನಾಲು ಉಣ್ಣುವೆನೆಂದರೆ ಆಯಿತು. ನನ್ನನ್ನು ಅಣ್ಣಾನೆನ್ನುವ ಮಹಾರಾ ಜರು, ಭಾವನೆನ್ನುವ ರಾಣೀಸಾಹೇಬರು ಮತ್ತು ಅವರ ಕೃಪೆ ಹಾಗು ಪ್ರೇಮ ಈ ಸಂಬಳಗಳೇ ನನಗೆ ಅಖಂಡವಾಗಿ ದೊರೆಯಹತ್ತಿದರೆ, ನಾನು ಸಂತೋಷದಿಂದ ದಿವಾಣನಾದೇನು; ಆದರೆ ನನಗೂ ಒಬ್ಬ ಖಾಸ ಸಹಾಯಕನು ಬೇಕು. ಭಾನು ವನ್ನೇ ಆ ಕೆಲಸಕ್ಕೆ ಸೇರಿಸಿಕೊಳ್ಳುವ ಅಪ್ಪಣೆಕೊಡಿರೆಂದರೆ ತೀರಿತು. ಆತನಾ ದರೂ ತನ್ನ ಜನತಾಪ್ರೇಮವನ್ನು ಚೆನ್ನಾಗಿಯೇ ವ್ಯಕ್ತಪಡಿಸಿರುತ್ತಾನೆ. ಆತನು ಮನೆಯಿಂದ ಉಂಡುಟ್ಟು ಸುಖಪುರುಷನಾಗಿದ್ದಾನೆ. ಅದರಿಂದ ಆತನು ಪ್ರಜೆಗಳ ಕೆಲಸವನ್ನು ಪುಕ್ಕಟೆಯಾಗಿಯೂ ಉತ್ಸಾಹದಿಂದಲೂ ಮಾಡುವನು. ದಿವಾಣನಿಗೆ

ಫೌಜದಾರನಾದರೂ ಅಂಥವನೇ ಬೇಕಾಗುತ್ತದೆ. ಆ ಕೆಲಸಕ್ಕೆ ನಮ್ಮ ಬಲ ಭೀಮಸೇವಕರಾದ ಪ್ರಭಾಕರಪಂತರು ತಕ್ಕವರಾಗಿದ್ದಾರೆ. ಇನ್ನುಳಿಯಿತು, ಸುಭೇದಾರನ ಪ್ರಶ್ನೆಯು?

ಅದಕ್ಕೆ ವಿಮಲೆಯು ನಕ್ಕು:—"ದತ್ತಕದ ಪ್ರಕರ್ಣದಲ್ಲಿ ಆ ಬಡವನ ಫಜೀತಿಯಾಗಿದೆ. ಅದರಿಂದ ಓಡಿಹೋಗಿರುವ ಮಾಜಿ ದಿವಾಣಸಾಹೇಬರ ಹತ್ತಿಪ್ಪತ್ತು ಸಾವಿರದ ಆಸ್ತಿಯನ್ನು ಟ್ರಂಕು-ಪೆಟ್ಟಿಗೆಗಳಲ್ಲಿ ತುಂಬಿ ಸರಕಾರೀ ಪಹರೆಯಲ್ಲಿ ಅರಮನೆಯೊಳಗೆ ತಂದಿರಿಸಿದ್ದನ್ನು ಹಾಗೆಯೇ ಆ ಸುಭೇದಾರನಿಗೆ ಕೊಟ್ಟು ಬಿಟ್ಟರೆ ಮುಗಿಯಿತು; ಆದರೆ ಆತನು ಲಫಂಗನೂ ಜಗಳಗಂಟನೂ ಆಗಿ ರುವದರಿಂದ, ಕೆಲ ದಿನ ಸಂಸ್ಥಾನದಿಂದ ಹೊರಟು ಹೋಗುವ ಕಿವಿಮಂತ್ರವನ್ನು ಆತನಿಗೆ ಹೇಳಬೇಕು. ಆತನು ಸುಖ-ಸಮಾಧಾನದಿಂದ ಹೊರಟು ಹೋಗು ತ್ತಾನೆ" ಇಷ್ಟು ಅಂದು ನಕ್ಕು, ಅವಳು ಮತ್ತೆ "ಸುಭೇದಾರ ಸಾಹೇಬರು ನನ್ನ ಆಪ್ತಕೋಟಿಯೊಳಗಿನವರಿರುತ್ತಾರೆ. ಅದರಿಂದ ಅವರ ಹಿತದ ಬಗ್ಗೆ ನಾನು ಎಚ್ಚರಪಡಲೇ ಬೇಕು."

"ಅಲ್ಲ" ಎಂದಂದು, ಮನೋಹರನು:—ಇಷ್ಟೇ ಅಲ್ಲ, ದಿವಾಣಸಾಹೇ ಬರು ಶಿರಸ್ತೆದಾರರಿಗೆ ಬರೆದ ಪತ್ರವನ್ನು ದಾರಿಯಲ್ಲಿ ಹಿಡಿದು ತನ್ನ ಬುದ್ಧಿವಂತಿ ಕೆಯನ್ನು ತೋರಿಸಿರುತ್ತಾನೆ. ಆ ಪತ್ರದಿಂದ ನಮ್ಮ ಕೆಲಸಕ್ಕೆ ಬಹು ಉಪಯೋಗ ವಾಯಿತು. ಹೆರವರು ಬಾಯಿಂದ ಮಾಡಿದ ಹಲವು ಆರೋಪಗಳಿಗಿಂತ ಮನುಷ್ಯ ನು ತನ್ನ ಕೈಯಿಂದ ಬರೆದ ಅಕ್ಷರಗಳೇ ಆತನನ್ನು ನಿಜವಾಗಿ ಕೊಲ್ಲುತ್ತವೆ! ನಾನು ದಿವಾಣಸಾಹೇಬರಿಗೆ ಪಿಸ್ತೂಲು ತೋರಿಸಿ ಅಂಜಿಸದಿದ್ದರೂ, ಆ ತಮ್ಮ ಪತ್ರವು ನಮ್ಮ ಕೈಸೇರಿದ್ದನ್ನು ಕಂಡು, ಅವರು ಅಂದಿನ ರಾತ್ರಿ ತಾವಾಗಿಯೇ ತಮ್ಮ ಕಾಲಿಗೆ ಬುದ್ಧಿಹೇಳದಿರುತ್ತಿರಲಿಲ್ಲ.

ಜೋ: ಮನೋಹರಾ, ಎಲ್ಲವೂ ವಿಹಿತವಾಗಿ ಅವರವರ ಮನಸ್ಸಿನಂ ತಾಯಿತು.

ಮ:—ಆದರೆ ಮಹಾರಾಜ, ನಿಮ್ಮ ಈ ಹೊಸ ಘಟನೆಗಳಿಗೆ ಹಾಗು ಯೋಜನೆಗಳಿಗೆ ಖಾಲಸಾ ಇಲಾಖೆಯೊಳಗಿನ ಹಾಗು ಸಂಸ್ಥಾನಗಳೊಳಗಿನ ಲಬ್ಧ ಪ್ರತಿಷ್ಠಿತ ಮುದುಕ ಜನರು ಏನು ಹೆಸರಿಟ್ಟಾರೆಂಬದು ನಿಮಗೆ ಗೊತ್ತಿದೆಯೆ?

ಜೋ:—ಅವರಿಡುವ ಹೆಸರನ್ನು ಕಟ್ಟಿಕೊಂಡು ನಾವೇನು ಮಾಡಬೇ ಕಾಗಿದೆ? ಆದರೆ ಆ ಬಗ್ಗೆ ನಿನ್ನ ಕಲ್ಪನೆಯಾದರೂ ಏನಿದೆಯೆಂಬದನ್ನು ಕೇಳಿ ಕೊಳ್ಳೋಣ.

ಮ:—ಅವರಿಡುವ ಹೆಸರು ಜೋಜಿಗಡೆ ಇದ್ದೀತು. ಇದೊಂದು

ಜೋದ್ಯಪುರದೊಳಗಿನ 'ಗದ್ಧೇ ಪಂಚವಿಂಶತಿಯ ಆಟವು' ಎಂದಂದಾರು.

ಜೋ:—ಹಾಗಂದರೇನೋ?

ಮ:—ಹೊಸ ಸಂಸ್ಥಾನಿಕರು, ಹೊಸ ರಾಣೇಸಾಹೇಬರು, ಹೊಸ ದಿವಾಣರು, ಹೊಸ ನಾಯಬ ದಿವಾಣರು, ಹೊಸ ಪೋಲೀಸ ಸಾಹೇಬರು ಇವರೆಲ್ಲರೂ ೨೫-೩೦ ವರ್ಷಗಳ ನವಜವಾನ ಉಡಾಳ ಟವ್ಪುಗಳೇ! ಇವರು ಮಾಡಿದ ಲೋಕಶಾಹಿಯ ಆಟವಿದು! ಮೊದಲಿನ ಇಪ್ಪತ್ತೈದರ ವಯಸ್ಸಿನ ಭರದಲ್ಲಿ ಮಾಡಿದ ಕೃತ್ಯಗಳು ಕತ್ತೆಯಂಥವೇ ಇರತಕ್ಕವು! ಅಂತೆಯೇ 'ಗದ್ಧೇ ಪಂಚವಿಂಶತಿ' ಎಂಬ ಹೆಸರು ಬಿದ್ದಿದೆ.

ಜೋ:—ನೀನೂ ಒಬ್ಬ ಪ್ರಸಿದ್ಧ ಕತ್ತೆಯು ನಮ್ಮೆಲ್ಲರ ಜೊತೆಗಿರುವದೊಂದು ವಿಹಿತವೇ; ಆದರೆ ಸದ್ಗೃಹಸ್ಥಾ, ಇಂಥ ಪ್ರಸಂಗಗಳಲ್ಲಿ ನೀನು ನಮ್ಮನ್ನು ಕಾಪಾಡುವದನ್ನು ಬಿಟ್ಟು, ನಿಂದಕರ ಸಮರ್ಥನೆಯನ್ನೇ ಮಾಡುತ್ತಿರುವ ಹಾಗೆ ನುಡಿಯುವೆಯಲ್ಲ? ಅದಿರಲಿ. ಬೆಳೆದ ಗಡ್ಡಗಳಲ್ಲಿಯೇ ರಾಜಕಾರಣದ ಜಾಣತನವಿದ್ದರೆ, ನಾನು ಕೃತ್ರಿಮ ಗಡ್ಡ-ಮೀಸೆಗಳನ್ನು ಹಚ್ಚಿಕೊಂಡು ದರಬಾರದಲ್ಲಿ ಕೂಡ್ರುಹತ್ತುವೆನೆಂದರೆ ತೀರಿತು.

ಮ:—ಆದರೆ ಬಿಳಿಯ ಗಡ್ಡಗಳು ವೃದ್ಧಾಪ್ಯದ ಗುರ್ತೆಂದು ಪಕ್ಕದಲ್ಲಿ ಕೂಡ್ರುವ ರಾಣೇಸಾಹೇಬರಿಗೆ ಸೇರಲಿಕ್ಕಿಲ್ಲಲ್ಲ! ಅದರ ಗತಿಯೇನು? ಒಂದು ವೇಳೆ ಕರಿಯ ಗಡ್ಡಗಳಿದ್ದರೆ ನಡೆದೀತು; ಆದರೆ ಅವುಗಳನ್ನು ಹಚ್ಚಿಕೊಂಡು ಪಟ್ಟಣದಲ್ಲಿ ಗಸ್ತಿ ತಿರುಗುವ ಲಹರಿಯು ನಿಮಗೆ ಉಂಟಾಗಹತ್ತಿತೆಂದರೆ, ರಾಣಿಯರ ತರುವಾಯ ರಾಣಿಯರನ್ನು ಆಕ್ರಮಿಸಿ ಮನೆಗೆ ತಂದೀರಿ! ಅದಂತೂ ಆದ್ಯ ರಾಣೇಸಾಹೇಬರಿಗೆ ಕೊಂಚವೂ ರುಚಿಸಲಿಕ್ಕಿಲ್ಲ! ತಾತ್ಪರ್ಯವೇನಂದರೆ, ನೀವು ಆ ಗಡ್ಡ-ಮೀಸೆಗಳ ಗೊಂದಲದಲ್ಲಿ ಸ್ವಲ್ಪವೂ ಬೀಳದಿರುವದೇ ಯೋಗ್ಯವು. ತರುಣರಿಗೆ ಹೆಸರಿಡುವ ಜನ್ಮಸಿದ್ಧ ಹಕ್ಕು ವೃದ್ಧರಿಗಿರುತ್ತದೆ. ಅದನ್ನು ಕಸಿದುಕೊಂಡು ಅವರನ್ನೇಕೆ ದುಃಖಿಗಳನ್ನಾಗ ಮಾಡಬೇಕು? ಈ ನಿಮ್ಮ ಸ್ವರಾಜ್ಯ ದಾನಕ್ಕೆ ಅವರು 'ಗದ್ಧೇ ಪಂಚವಿಂಶತಿಯ ಆಟ'ವೆಂದನ್ನಲೊಲ್ಲರೇಕೆ? ನೀವು ಯೋಜಿಸಿರುವ ಸ್ವರಾಜ್ಯ ದಾನದ ಆಟಕ್ಕೆ ಮೋಸದಿಂದ ಕದಾಚಿತ್ ತಡೆಯುಂಟಾಗುವ ಸಂಭವವಿದ್ದರೂ, ಅದು ಉಬ್ಬಿನ ಆಟವಾಗಿದೆ. ಅದು ನಮಗೂ ನಿಮಗೂ ಕೂಡಿಯೇ ಭೂಷಣಪ್ರದವಾಗಿದೆಯೆಂಬದನ್ನು ಪ್ರಾಂಜಲತನದಿಂದ ನಾನೂ ಒಪ್ಪುತ್ತೇನೆ; ಅದರಿಂದ ಪ್ರಾರಂಭವಾಗಲಿನ್ನು ಆ ಆಟಕ್ಕೆ?

ಜೋ—ನಾನಾದರೂ ಅದನ್ನೇ ಅನ್ನುತ್ತೇನೆ. ಅದರಿಂದ ನೀನು ಈ ಹೊಸ ರಾಜ್ಯಘಟನೆಯನ್ನು ಜಾಹೀರನಾಮೆಯ ಮೂಲಕ ಕೂಡಲೆ ಪ್ರಕಟ

ಗೊಳಿಸು. ನಾನು ಬೇಗನೆ ನನ್ನ ಹೊಸ ಗುಡುಸಲಿಗೆ ಹೋಗತಕ್ಕವನಿರುತ್ತೇನೆಂಬದು ಪ್ರಜೆಗಳಿಗೆ ಗೊತ್ತಾದದ್ದೇ ಇದೆ; ಮತ್ತು ನಾನು ನನ್ನ ಸ್ವಂತಕ್ಕೆ ಎಷ್ಟು ಸ್ವಲ್ಪ ಸಂಬಳ ಗೊತ್ತು ಮಾಡಿಕೊಳ್ಳುತ್ತೇನೆಂಬುದು ಅವರಿಗೆ ಬೇಗನೆ ತಿಳಿದೀತು. ನನ್ನ ಸ್ವರಾಜ್ಯದಾನದ ಕಲ್ಪನೆಯನ್ನು ಯಶಸ್ವೀಯಾಗಮಾಡಲಿಕ್ಕೆ ನಿನ್ನ ಹಾಗು ವಿಮಲಾಬಾಯಿಯ ಸಹಾಯವು ಕಾರಣವಾದದ್ದಕ್ಕೆ ನಾನು ನಿಮಗೆ ಚಿರಋಣಿಯಾಗಿರುತ್ತೇನೆ.

ಇಷ್ಟು ಮಾತು-ಕಥೆಗಳಾದ ನಂತರ ಜೋಜಿಗರಾಯನು ವಿಮಲಾಬಾಯಿಗೆ ಮನೆಗೆ ಹೋಗಲಪ್ಪಣೆ ಕೊಟ್ಟನು; ಹಾಗು ಅವಳನ್ನು ತನ್ನ ಸ್ವಂತದ ರಥದಲ್ಲಿಯೇ ಮನೆಯ ವರೆಗೆ ತಲುಪಿಸಿ ಬರಲಿಕ್ಕೆ ಮನೋಹರನಿಗೆ ಸೂಚಿಸಿದನು. ವಿಮಲೆಯಾದರೂ ಮಹಾರಾಜರಿಗೆ ಒಲೆನೋಟದಿಂದೊಮ್ಮೆ ನಮಸ್ಕರಿಸಿ ಹೊರಟು ಹೋದಳು.

ಮರುದಿನ ಮುಂಜಾನೆ ಮನೋಹರನು ಭಾವೂಸಾಹೇಬರ ಮನೆಗೆ ಹೋದನು. ಅವರ ಪ್ರಕೃತಿಯು ಮತ್ತಿಷ್ಟು ಸುಧಾರಣೆ ಹೊಂದಿ, ಇಂದು ಅವರು ಚೆನ್ನಾಗಿ ಮಾತಾಡಹತ್ತಿದ್ದರು. ಅವರು ಪ್ರಭಾಕರ-ವಿಮಲೆಯರನ್ನು ಕೂಗಿ ಮನೋಹರಪಂತರು ಬಂದರೆಂದು ಹೇಳಿದರು. ಅವರಲ್ಲಿ ಪ್ರಭಾಕರನೊಬ್ಬನೇ ಬಂದನು; ವಿಮಲೆಯು ಬರಲಿಲ್ಲ. ಕೆಲಕ್ಷಣಗಳ ನಂತರ ಮನೋಹರನು:—ಭಾವೂಸಾಹೇಬರೇ, ನಾನು ಒಂದು ಮಹತ್ವದ ಕೆಲಸಕ್ಕೆಂದು ನಿಮ್ಮ ಬಳಿಗೆ ಬಂದಿರುತ್ತೇನೆ. ಭಾ:—ಅದೇನು? ಮ:—ಮೊದಲು ತಮ್ಮ ಅಪ್ಪಣೆ ಪಡೆದು ನಾನೊಂದು ಪ್ರಶ್ನೆ ಕೇಳತಕ್ಕವನಿದ್ದೇನೆ. ಕೇಳಲೋ?

ಭಾ:—ಅವಶ್ಯವಾಗಿ ಕೇಳಿರಿ; ಅದಕ್ಕೆ ಅಪ್ಪಣೆಯೇತಕ್ಕೆ?

ಮ:-ನೀವು ಸಂಸ್ಥಾನದ ಅತ್ಯಂತ ರಾಜನಿಷ್ಠ ಪ್ರಜೆಗಳೆಂದು ಪ್ರಖ್ಯಾತಿಯಿದೆ!

ಭಾ:—ಪ್ರಖ್ಯಾತಿಯೇತರದು? ಆದರೆ ನನ್ನ ಮನಸ್ಸಿನಿಂದ ನಾನು ಅತ್ಯಂತ ರಾಜನಿಷ್ಠನಿರುತ್ತೇನೆಂದು ನನಗೆನಿಸುವದು ನಿಜ!

ಮ:—ಮಾಜಿ ದಿವಾಣಸಾಹೇಬರ ಹಾಗು ಗತಿಸಿದ ಮಹಾರಾಜರ ಪ್ರತಿಯೊಂದು ಆಜ್ಞೆಯನ್ನು ಕೇವಲ ರಾಜನಿಷ್ಠೆಯ ಭಾವನೆಯಿಂದ ನೀವು ವಂದ್ಯವಾಗಿ ತಿಳಿಯುತ್ತಿದ್ದಿರೆಂದು ಜನರಾಡುವ ಮಾತು ನಿಜವೇ? ರಾಜನಿಷ್ಠೆಯು ಭೂಷಣಾಸ್ಪದವಾದ ಗುಣವು. ಅದಕ್ಕೆ ಸಂಶಯವಿಲ್ಲ; ಮತ್ತು ನಾನು ಕೇಳುವಪ್ರಾದರೂ ಚಲೋ ಮನಸ್ಸಿನಿಂದ, ಕಿಂಬಹುನಾ ಕೌತುಕಬುದ್ಧಿಯಿಂದೆಂದು ತಿಳಿಯಿರಿ.

ಭಾ:—ನಿಜ ಸಂಗತಿಯು ಹೀಗಿದೆ. ಮನೋಹರಪಂತರೇ, ನಾವು ಪೂರ್ವ ಕಾಲದ ಜನರು! ಒಂದೇ ಮಾರ್ಗದವರು! ರಾಜನು ನಮಗೆ ದೇವರಂತೆ

ತೋರತಕ್ಕವನು; ಮತ್ತು ದಿವಾಣರೆಂದರೆ ಉಪದೇವರು; ಆದರೂ ದೇವರ ಕೋಟಿಯೊಳಗಿನವರೇ! ಅದರಿಂದ ಅವರ ಅಪ್ಪಣೆಗಳನ್ನು ನಿಷ್ಠೆಯಿಂದ ಪಾಲಿಸುವದು ಕರ್ತವ್ಯವೇ ಎಂದು ನಾವು ತಿಳಕೊಳ್ಳುವದು ಸ್ವಾಭಾವಿಕವಲ್ಲವೆ?

ಮ:—ಆ ಬಗ್ಗೆ ನಾನು ನಿಮಗೆ ಕೊಂಚವೂ ದೋಷಕೊಡುವದಿಲ್ಲ; ಆದರೆ ಇನ್ನೊಂದು ಪಶ್ನೆಯೇನಂದರೆ, ನಿಮ್ಮ ರಾಜನಿಷ್ಠೆಯು ಕೇವಲ ವ್ಯಕ್ತಿಗತವಾಗಿರದೆ, ತತ್ತ್ವತಃ ಪಟ್ಟಕ್ಕೂ ಅಧಿಕಾರಕ್ಕೂ ಸಂಬಂಧಿಸಿದುದೇ ಎಂದು ತಿಳಿಯಬೇಕಲ್ಲವೆ?

ಭಾವೂಸಾಹೇಬರು ಗಟ್ಟಿಯಾಗಿ ನಕ್ಕು:—ಅದನ್ನು ಹೇಳಬೇಕೇತಕ್ಕೆ? ಸದ್ಯಕ್ಕೆ ಪಟ್ಟದ ಮೇಲಿರುವವನೇ ರಾಜನು! ಒಂದು ರಾಜವ್ಯಕ್ತಿಯು ಗತಿಸಿದರೆ ಪಟ್ಟವು ಹೇಗೆ ಲೋಪವಾಗುವದಿಲ್ಲವೋ, ಅದರಂತೆಯೇ ನಮ್ಮ ರಾಜನಿಷ್ಠೆಯು!

ಮ:—ಹಾಗಾದರೆ ಜೋದ್ಯಪುರ ಸಂಸ್ಥಾನದ ಗತಿಸಿದ ಮಹಾರಾಜರ ಅಪ್ಪಣೆಯನ್ನು ನೀವು ಮನ್ನಿಸುತ್ತಿದ್ದಂತೆಯೇ ಹೊಸ ಜೋಜಿಗಮಹಾರಾಜರ ಆಜ್ಞೆಯನ್ನು ಮನ್ನಿಸುವವರೇ!

ಭಾವೂಸಾಹೇಬರು ಮನಃಪೂರ್ವಕವಾಗಿ ಅಗತ್ಯತೆಯನ್ನು ತೋರಿಸಿ:—ಓಹೋ! ಅದನ್ನು ಹೇಳಬೇಕೇತಕ್ಕೆ?

ಮ:—ಹಾಗಾದರೆ ಹೊಸ ಮಹಾರಾಜರು ನೇಮಿಸಿದ ಹೊಸ ದಿವಾಣನೆಂಬ ನಾತೆಯಿಂದ ಮಹಾರಾಜರ ಆಜ್ಞೆಯುಲ್ಲ, ನಮ್ರ ಬಿನ್ನಹವೆಂದು ನಾನು ನಿಮಗೆ ತಿಳಿಸುವದೇನಂದರೆ, ರಾಜಪದದ ಅರ್ಧ ಪಾಲನ್ನು ಮಹಾರಾಜರು ನಿಮ್ಮ ಸುರೂಪ, ಸದ್ಗುಣಸಂಪನ್ನ ಕನ್ಯೆಯಾದ ವಿಮಲಾಬಾಯಿಯವರಿಗೆ ಕೊಡುವದನ್ನು ಗೊತ್ತುಮಾಡಿರುತ್ತಾರೆ. ಇದಕ್ಕೆ ನೀವು ಮಾನ್ಯತೆಯನ್ನೀಯಬೇಕು.

ಮುದುಕನು ಗೊಂದಲಕ್ಕೀಡಾದನು. ಈ ಕೂಟ ಪ್ರಶ್ನೆಯು ಆತನ ಮಸ್ತಮಿದುಳಿನಲ್ಲಿ ಒಮ್ಮೆಲೆ ಸೇರದಾಯಿತು. ಆಗ ಆತನು:—ಮನೋಹರಪಂತರೇ, ಕ್ಷಮಿಸಿರಿ; ಆದರೆ ನೀವು ಇದನ್ನು ತುಸ ಬಿಚ್ಚಿ ಹೇಳಿದರೆ ಈ ಮುದುಕನ ಮೇಲೆ ಉಪಕಾರವಾದೀತು.

ಮ:—ಒಳ್ಳೇದು. ವಿವರಿಸಿಯೇ ಹೇಳುತ್ತೇನೆ. ಮಹಾರಾಜರು ತಮ್ಮ ಲಗ್ನ ಮಾಡಿಕೊಳ್ಳುವದನ್ನು ಗೊತ್ತು ಮಾಡಿದ್ದು, ನಿಮ್ಮ ವಿಮಲಾಬಾಯಿಯವರಿಗೇ ತಮ್ಮ ರಾಜ್ಞೀಪದವನ್ನು ಕೊಡಬೇಕೆಂದು ನಿರ್ಧರಿಸಿರುತ್ತಾರೆ. ಇನ್ನು ವರಪಕ್ಷದವರೇ ಹೋಗಿ ಹೆಣ್ಣನ್ನು ಕೇಳುವ ಪರಿಪಾಠವು ಈ ದೇಶದಲ್ಲಿಲ್ಲ; ಇದಕ್ಕೆ ವಿಪರೀತವಾಗಿ ತಮ್ಮ ಮಗಳನ್ನು ರಾಜನಿಗೆ ಕೊಡುವದೆಂದರೆ,

ಸಾಹಸದ ಹಾಗು ಯೋಗ್ಯತೆ ಮೀರಿದ ಕೆಲಸವಾಗುವದು; ಆದರೆ ಇವೆರಡೂ ಅಡಚಣೆಗಳನ್ನು ಕಟ್ಟುನಿಟ್ಟಾಗಿ ಸಂಬಾಳಿಸ ಹತ್ತಿದರೆ, ಅರಸರುಗಳಿಗೆ ಅವಿವಾಹಿತ ರಾಗಿರುವ ಪ್ರಸಂಗವೇ ಬಂದೀತು; ಅಂತೆಯೇ ಮಹಾರಾಜರು ಈ ರೂಢಿ ತಪ್ಪಿಸುವ ಯೋಜನೆಯನ್ನು ಮಾಡಿ, ನನ್ನನ್ನು ನಿಮ್ಮ ಬಳಿಗೆ ಕಳಿಸಿರುತ್ತಾರೆ. ವಿಮಲಾಬಾಯಿಯವರ ತಂದೆ ಈ ನಾತೆಯಿಂದ, ಅವರಿಗೆ ರಾಣೀಪದ ದೊರಕು ವದಕ್ಕಿಂತ ಹೆಚ್ಚಿನ ಮತ್ತಾವ ಸದ್ಭಾಗ್ಯವನ್ನು ತಾವಾದರೂ ಚಿಂತಿಸತಕ್ಕವರು? ಅಂತೆಯೇ ತಾವು ಸಮ್ಮತಿಯನ್ನಿತ್ತರೆ ತೀರಿತು. ಮಿಕ್ಕ ಸಿದ್ಧತೆಯೆಲ್ಲ ಇದ್ದೇ ಇದೆ.

ಆ ಮುದುಕನಿಗೆ ರಾಜಾಜ್ಞೆಯ ಅರ್ಥವು ಈಗ ಚೆನ್ನಾಗಿ ತಿಳಿಯಿತು. ಆತನ ರಾಜನಿಷ್ಠೆಯು ಚೆನ್ನಾಗಿಯೇ ಫಲದ್ರೂಪಗೊಂಡಿತು! ಆತನ ಅಂತಃಕರಣವು ಉಕ್ಕಿ ಬಂತು. ಕೂಡಲೆ ಆತನು ವಿಮಲೆಯನ್ನು ಗಟ್ಟಿಯಾಗಿ ಕೂಗಿ ಕರೆದನು. ಇದುವರೆಗೆ ತಂದೆಯ ಕೂಗನ್ನು ಕೇಳಿದೊಡನೆಯೇ ಅವಳು ಓ ಕೊಡದ ಪ್ರಸಂ ಗವು ಬಹುಶಃ ಇಂದೇ ಮೊದಲಿನದಾಗಿತ್ತು; ಆದರೆ ಇಂದು ಅವಳು ಒಮ್ಮೆಲೆ ಹೊ ರಗೆ ಬರುವದೆಂತು? ಮನೋಹರಸಂತರ ಸವಾರಿಯು ಬಂದದ್ದರ ಗೂಢವನ್ನು ತಿಳಿದೊಡನೆಯೇ ಅವಳು ನೆಟ್ಟಗೆ ಒಳಗೆ ಹೋಗಿ ಮಾಯಿಸಾಹೇಬರ ಕೊರಳಿಗೆ ತೆಕ್ಕೆಬಿದ್ದು ಕಣ್ಣೀರು ಸುರಿಸಹತ್ತಿದ್ದಳು: "ತಂಗೀ, ವಿಮಲಕ್ಕಾ! ನಿನಗೇನಾ ಯಿತೇ, ಕಣ್ಣೀರು ಹಾಕಲಿಕ್ಕೆ? ನೀನು ಕಣ್ಣೀರು ಹಾಕಿದ್ದನ್ನು ನಾನು ಇಂದೇ ನೋಡಿದ್ದು!" ಎಂದು ಮಾಯಿಸಾಹೇಬರು ಕೇಳಿದರು.

ಹೆಣ್ಣು ಹುಡಿಗಿಗೆ ತನ್ನ ದುಃಖದಂತೆ ಸುಖವನ್ನೂ ಮನಬಿಚ್ಚಿ ಹೇಳಲಿಕ್ಕೆ ಲೋಕದಲ್ಲಿರುವ ಒಂದೇ ಸ್ಥಾನವೆಂದರೆ ತಾಯಿಯು. ಅದರಿಂದ ಅರಮನೆಯೊ ಳಗೆ ನಡೆದ ಸಂಗತಿಯನ್ನೆಲ್ಲ ವಿಮಲೆಯು ಮಾಯಿಸಾಹೇಬರಿಗೆ ತಿಳಿಸಿದಳು. ಅದನ್ನು ಕೇಳಿ ಅವರಿಗೂ ಭರತಿಯುಂಟಾಗಿ, ಅವರ ಕಣ್ಣೊಳಗಿಂದಲೂ ನೀರು ಹರಿಯಹತ್ತಿತು. ಅವರು ಸನಾತನೀ ಸ್ತ್ರೀ ಬುದ್ಧಿಗನುಗುಣವಾಗಿ ಹುಡುಗಿಯ ತಲೆಯ ಮೇಲೆ ಲಟಕು ಮುರಿದು, ದೃಷ್ಟಿ ಕೂಡ ತೆಗೆದರು!

ಇಷ್ಟರಲ್ಲಿ ಭಾವೂಸಾಹೇಬರು ಆಕೆಯನ್ನು ಮತ್ತೆ ಕರೆದರು; ಮತ್ತು ಪ್ರಭಾಕರನೂ ಅವಳನ್ನು ಕರೆಯಲಿಕ್ಕೆಂದು ನಡುಮನೆಗೆ ಬಂದನು. ಆಗ ವಿಮಲೆ-ಮಾಯಿಸಾಹೇಬರಿಬ್ಬರೂ ಹೊರಗೆ ಬಂದರು. ಭಾವೂಸಾಹೇಬರು ವಿಮಲೆ ಯನ್ನು ಹತ್ತರ ಕರೆದು ಸಮೀಪದಲ್ಲಿ ಕುಳ್ಳಿರಿಸಿಕೊಂಡು:—"ತಂಗೀ, ನಿನ್ನನ್ನು ಕೇಳದೆ ಮಾಡಿರುವ ಸಂಗತಿಯು ಇಂದೇ ಮೊದಲಿನದು" ಎಂದರು.

ವಿಮಲೆ:—ಅಪ್ಪಾ, ಅಂಥದೇನನ್ನು ಮಾಡಿದಿರಿ?

ಭಾ:—ವೃದ್ಧಾಪ್ಯದಲ್ಲಿ ವರಾನ್ವೇಷಣ ಮಾಡುವ ನನ್ನ ಶ್ರಮಗಳು ಉಳಿ

ದವು. ಖುದ್ದ ಮಹಾರಾಜರೇ ನಿನ್ನನ್ನು ಈ ಸಂಸ್ಥಾನದ ಅರ್ಧಭಾಗಿದಾರಳನ್ನಾಗ ಮಾಡುವದನ್ನು ಯೋಜಿಸಿ, ನನಗೆ ಹಾಗೆಂದು ಆಜ್ಞಾಮಾಡಿರುತ್ತಾರೆ; ಮತ್ತು ನಾನು ನಿನ್ನನ್ನು ಕೇಳದೆ, ಅದಕ್ಕೆ ಒಪ್ಪಿಗೆಯನ್ನಿತ್ತಿರುತ್ತೇನೆ. ನಿನ್ನ ಸಮ್ಮತಿ ದೊರೆತೊಡನೆಯೇ ಮಹಾರಾಜರಿಗೆ ಹೇಳಿ ಕಳಿಸುತ್ತೇನೆ; ಅಂದರೆ ಅವರೇ ನಮ್ಮ ಮನೆಗೆ ಚಹಕ್ಕೆ ಬಂದಾರು. ದೇವರು ನನಗೆ ಎಲ್ಲ ಬಗೆಯಿಂದಲೂ ಸಹಾಯ ಮಾಡುವದನ್ನೇ ನಿರ್ಧರಿಸಿರುವಂತೆ ತೋರುತ್ತದೆ! ಇಷ್ಟು ಹೇಳಿ, ಭಾವೂಸಾಹೇಬರು ಮಾಯಿಸಾಹೇಬರನ್ನುದ್ದೇಶಿಸಿ:-"ಕೇಳಿತೇನು? ನಿಮ್ಮ ಹುಡುಗಿಗೆ ನಿಮ್ಮ ಸಮ್ಮತಿ ಬೇಕಾಗಿದ್ದೀತೆಂದು ಇವಳು ಮಾತಾಡಲೊಲ್ಲಳು"

ಗಂಡನ ಮುಖದ ಇಷ್ಟು ಪ್ರೇಮದ ಶಬ್ದವನ್ನು ಬಹು ದಿನಗಳ ನಂತರ ಕೇಳಿದ್ದರಿಂದ ಮಾಯಿಸಾಹೇಬರು ಪಡಸಾಲೆಯ ಮೇಲೆ ಗಟ್ಟಿಯಾಗಿ ಮಾತ ನಾಡದಿರುವ ಕಟ್ಟನ್ನು ಇಡೀ ಜನ್ಮದಲ್ಲಿ ಇಂದೇ ಪ್ರಥಮದಲ್ಲಿ ಮುರಿದರು; ಮತ್ತು ಎಲ್ಲರಿಗೂ ಕೇಳಬರುವಷ್ಟು ಗಟ್ಟಿದನಿಯಿಂದ:— "ತಾವು ಕೊಟ್ಟಿರುವ ಸಮ್ಮತಿಯೇ ನನ್ನ ಹಾಗು ಈಕೆಯ ಸಮ್ಮತಿಯಾಗಿದೆ. ಇವಳು ಅಂಥ ಗುಣ ಮಣಿಯೇ ಆಗಿರುತ್ತಾಳೆ. ಇವಳು ರಾಜನ ರಾಣಿಯಾಗುವಳೆಂಬ ಭವಿಷ್ಯವನ್ನು ನಾನು ಮನಸ್ಸಿನಲ್ಲಿ ಮೊದಲೇ ಮಾಡಿಟ್ಟಿದ್ದೆನು."

ಭಾವೂಸಾಹೇಬರು ನಕ್ಕು:-"ನಿನ್ನ ಭವಿಷ್ಯವು ನಿಜವಾಗಲಿಕ್ಕೆ ನೀನೊಳ್ಳೇ ಪ್ರಸಿದ್ಧ ಜ್ಯೋತಿಷಳೇ ಆದೆಯೇನು?

ಮಾಯಿಸಾಹೇಬರು ತುಸ ಚೇಷ್ಟೆಯ ದನಿಯಿಂದ:-ನಾನು ಎಂಥ ಹುಚ್ಚ ಜ್ಯೋತಿಷಳೇ ಆಗಿದ್ದರೂ, ತಮಗೆ ದತ್ತಕದ ಭವಿಷ್ಯ ಹೇಳುವ ಪ್ರಖ್ಯಾತ ಜ್ಯೋತಿಷ್ಯನಿಗಿಂತಲೂ ಎಷ್ಟೋ ಪಾಲು ಮೇಲಾಗಿರುತ್ತೇನೆ! ಆದರೆ ಇನ್ನು ಸುಮ್ಮನೆ ಕಾಲಹರಣ ಮಾಡಕೂಡದು. ಮಹಾರಾಜರನ್ನು ನಮ್ಮ ಮನೆಗೆ ಕರೆತರುವ ದಕ್ಕೆಂದು ಅರಮನೆಗೆ ಪ್ರಭಾಕರನನ್ನೇ ಕಳಿಸಬೇಕು.

ಪ್ರಭಾಕರನು ಸಂತೋಷದಿಂದ ಪೋಷಾಕು ಧರಿಸಿಕೊಂಡು ಮನೋಹರನೊಡನೆ ಮಹಾರಾಜರನ್ನು ಕರೆತರಲಿಕ್ಕೆ ಹೊರಟು ಹೋದನು. ಅವರು ಹೋದ ಮೇಲೆ ಮನೆಯಲ್ಲಿ ಎಷ್ಟು ಗಡಿಬಿಡಿಯುಂಟಾಗಿದ್ದೀತೆಂಬದನ್ನು ವರ್ಣಿಸಲು ಅದಾರು ಸಮರ್ಥರಾದಾರು? ಭಾವೂಸಾಹೇಬರು ಹಾಸಿಗೆ ಬಿಟ್ಟೇಳು ವಂತಿರಲಿಲ್ಲ; ಆದರೂ ಮಾಯಿಸಾಹೇಬರು ದಾಸ-ದಾಸಿಯರನ್ನು ಕರೆದು ದೊಡ್ಡ ಹಾಲಿನಲ್ಲಿ ಕೂಡ್ರಲಿಕ್ಕೆ ರತ್ನಗಂಬಳಿ ಮುಂತಾದವುಗಳನ್ನು ಹಾಸಿಸಿದರು. ಲೋಡು ತಕ್ಕೆಗಳನ್ನಿಡಿಸಿದರು. ಮೇಜಿನ ಮೇಲೆ ಗಂಜಿಯ ಚಾದರಗಳನ್ನು ಹಾಸಿಸಿದರು; ಹಾಗು ಫೋಟೋ-ಕನ್ನಡಿಗಳ ಮೇಲೆಯೂ ಬೀರುಗಳ ಮೇಲೆಯೂ

ಅರಿವೆಯಿಂದ ಒರಸಿಸಿದರು. ಊದಿನ ಕಡ್ಡಿಗಳನ್ನು ಹಚ್ಚಿಸಿ, ಹೂವಿನ ಗುಚ್ಛಗಳನ್ನಿರಿಸಿಸಿದರು. ಆಗ ವಿಮಲೆಯು ಎಲ್ಲಿಯೂ ಸುಳಿದಾಡುತ್ತಿರಲಿಲ್ಲ. ಅವಳು ಮಾಯಿಯನ್ನು ಕುರಿತು:-"ಮಾಯಿ, ಇಷ್ಟೇಕೆ ಸಿದ್ಧತೆಗೊಳಿಸುವೆ? ಅವರಿಗೆ ಒಣಡೌಲು ಅಷ್ಟೊಂದು ರುಚಿಸುವದಿಲ್ಲ. ಅಪ್ಪಾಸು ಹಾಗು ನೀನು ಇಬ್ಬರೂ ಮನೆಯನ್ನು ಯಾವಾಗಲೂ ಒಳ್ಳೇ ಚೊಕ್ಕವಾಗಿಟ್ಟಿರುತ್ತಿರುವದನ್ನು ಕಂಡು, ಅವರು ನಿಮ್ಮನ್ನು ಸ್ತುತಿಸುವರೋ ಇಲ್ಲವೋ ನೋಡು." ಎನ್ನಲು, ಮಾಯಿಸಾಹೇಬರು ಮೆಲ್ಲನೆ ವಿಮಲೆಯ ಗಲ್ಲ ಹಿಂಡಿ:-"ಸಾಕು-ಸಾಕು. ಈಗಲೇ ಅಳಿಯಂದಿರ ಶಿಫಾರಸು ಹೇಳಹತ್ತಿದಳು! ತಂಗೀ, ನೀನು ಏನು ಮಾಡಿದರೂ ನಡೆದೀತು; ಆದರೆ ಅತ್ತೆಯ ಮನೆಯ ಬೇರೆಯವರ ವ್ಯಂಗ ತೆಗೆಯುವದರ ಕಡೆಗೇ ಅಳಿಯಂದಿರ ಸೂಕ್ಷ್ಮದೃಷ್ಟಿಯು ಯಾವಾಗಲೂ ಇರುತ್ತದೆ ನಡೆ, ಹೋಗೋಣ. ಅವರು ಇಷ್ಟರಲ್ಲಿಯೇ ಒರಬಹುದಾಗಿದೆ. ಮಹಾರಾಜರ ಚಹ, ಉಪಾಹಾರದ ಸಿದ್ಧತೆ ಮಾಡಬೇಕು."

ಭಾವೂಸಾಹೇಬರು ಕುಳಿತಲ್ಲಿಯೇ ತಮ್ಮ ಮಾಸಿದ ಅರಿವೆಗಳನ್ನು ತೆಗೆದಿಟ್ಟು, ಗಂಜಿಯ ವಸ್ತ್ರ-ಪ್ರಾವರಣಗನ್ನು ಧರಿಸಿದರು. ಮೈಮೇಲೆ ಶಾಲು ಹೊದ್ದುಕೊಂಡರು. ವಿಮಲೆಯು ಬಹಿರಂಗದಲ್ಲಿ ಸ್ವಚ್ಛತೆ-ಸಿದ್ಧತೆಗಳನ್ನು ಉಪೇಕ್ಷಿಸಿದರೂ, ತಾನು ಸ್ವತಃ ಲಗುಬಗನೆ ಬಚ್ಚಲಮನೆಗೆ ಹೋಗಿ ಮೈತೊಳಕೊಂಡು, ಹೊಸ ಸೀರೆಯನ್ನುಟ್ಟು, ತಲೆ ಬಾಚಿಕೊಂಡು, ಹಣೆಯ ಮೇಲೆ ಬಿದಿಗೆಯ ಚಂದ್ರಮನಂತೆ ಕುಂಕುಮವನ್ನಿಟ್ಟು, ಗಂಜಿಯ ಕರವಸ್ತ್ರವನ್ನು ಟೊಂಕಕ್ಕೆ ಸಿಗಿಸಿಕೊಂಡು, ಕೊರಳೊಳಗಿನ ಒಂಟೆಳೆ ಸರ ಮೊದಲಾದವುಗಳನ್ನು ಸರಿಪಡಿಸಿಕೊಂಡು, ಕಣ್ಣೆದುರಿಗೆ ಒಂದು ವೃತ್ತಪತ್ರವನ್ನು ಹಿಡಕೊಂಡು ಭಾವೂಸಾಹೇಬರ ಮಂಚದ ಒಂದು ಕಡೆಗೆ ಖುರ್ಚಿಯ ಮೇಲೆ ಬಂದು ಕುಳಿತುಕೊಂಡಳು. ಆಗ ಅವಳು ಓದುತ್ತಿದ್ದಳೋ, ಮಾನಸಿಕ ಗೌರೀಹರನ ಪೂಜೆ ಮಾಡುತ್ತಿದ್ದಳೋ ಎಂಬದನ್ನು ಆ ಹರನೇ ಬಲ್ಲನು!

ಮುಂದೆ ಅರ್ಧ ತಾಸಿನಲ್ಲಿಯೇ ಹೆಬ್ಬಾಗಿಲಿಗೆ ರಥವು ಬಂತು. ಮಹಾರಾಜರು ಅದರೊಳಗಿಂದಿಳಿದು ಮನೋಹರ-ಪ್ರಭಾಕರರೊಡನೆ ಒಳಗೆ ಹೋಗಿ ಭಾವೂಸಾಹೇಬರ ಮಂಚದ ಎದುರಿಗಿನ ಖುರ್ಚಿಗಳ ಮೇಲೆ ಕುಳಿತರು. ವಿಮಲೆಯ ಖುರ್ಚಿಯು ಅದಕ್ಕೆ ವಿರುದ್ಧದಿಸೆಯಲ್ಲಿದ್ದಿತು. ಮಾಯಿಸಾಹೇಬರು ತಮ್ಮ ನಿತ್ಯದ ಸ್ಥಳದಲ್ಲಿ ಅಂದರೆ, ನಡುಮನೆಯ ಬಾಗಿಲ ಮರೆಗೆ ನಿಂತುಕೊಂಡರು.

ಆಗ ಭಾವೂಸಾಹೇಬರು:-"ಎದ್ದು ನಿಂತು ಮಹಾರಾಜರ ಸ್ವಾಗತ ಮಾಡುವಷ್ಟು ಶಕ್ತಿಯು ನನಗಿಲ್ಲದ್ದರಿಂದ, ಮಹಾರಾಜರು ನನ್ನನ್ನು ಕ್ಷಮಿಸಬೇಕು"

ಎಂದು ಕೈಮುಗಿದು ಹೇಳಿದರು.

ಜೋ:—ಇದರಲ್ಲಿ ಕ್ಷಮೆಯ ಅವಶ್ಯಕತೆಯೇನು? ನೀವು ಬಹಳ ಅಶಕ್ತರಾಗಿದ್ದರಂತೆ. ಎದ್ದು ಕೂಡ್ರಲಿಕ್ಕೆ ಬರಹತ್ತಿದುದು ಪ್ರಕೃತಿಯ ಸುಧಾರಣೆಯ ಲಕ್ಷಣವೇ ಆಗಿದೆ, ಎಂದು ಹೇಳಿ, ಜೋಜಿಗರಾಯನು ಸೂಕ್ಷ್ಮನಿರೀಕ್ಷಣಕ್ಕೆಂದು ಕುಳಿತಲ್ಲಿಂದಲೇ ಅತ್ತಿತ್ತ ಹೊರಳಿ ನೋಡಿದನು; ಮತ್ತು ಮನೆಯೊಳಗಿನ ವ್ಯವಸ್ಥೆ-ಸ್ವಚ್ಛತೆಗಳನ್ನು ಕಂಡು ಆತನ ಮನಸ್ಸಿನ ಮೇಲಾದ ಅನುಕೂಲ ಅಭಿಪ್ರಾಯವು ಮುಖಲಕ್ಷಣದಿಂದ ಸ್ಪಷ್ಟವಾಗಿ ತೋರಹತ್ತಿತು.

ಆ ಸಮಯವನ್ನು ಸಾಧಿಸಿ ಮನೋಹರನು:-"ಮಹಾರಾಜರು ಈ ಮನೆಯ ಮುಂಭಾಗವನ್ನು ಎಂದೂ ನೋಡಿರಲಿಲ್ಲ. ಹಿತ್ತಲ ಕಡೆಯ ದಾಗಿಲು ಹಾಗು ಅದರೊಳಗಿಂದ ತುಳಸೀಕಟ್ಟೆಯ ಅಂಗಳ ಇವುಗಳನ್ನಷ್ಟೇ ಒಮ್ಮೆ ನೋಡಿದ್ದರು."

ಇದನ್ನು ಕೇಳಿ ಭಾವೂಸಾಹೇಬರ ಹೊರತು ಮಿಕ್ಕವರೆಲ್ಲರೂ ನಗಹತ್ತಿದರು; ಯಾಕಂದರೆ ಶ್ರಾವಣ ಬಹುಳ ಅಮಾಸಿಯ ರಾತ್ರಿಯಲ್ಲಿ ನಡೆದ ಎಲ್ಲ ವೃತ್ತಾಂತವು ಉಳಿದವರಿಗೆಲ್ಲ ವಿವರವಾಗಿ ಗೊತ್ತಾಗಿದ್ದಿತು. ಅಂತೆಯೇ ಭಾವೂಸಾಹೇಬರು ಕಕ್ಕಾವಿಕ್ಕಿಯಾಗಿ:—"ಅದು ಯಾವಾಗ ಹಾಗು ಹೇಗೆ ಘಟಿಸಿತೆಂಬದು ನನಗೆ ನೆನಪಾಗಲೊಲ್ಲದಲ್ಲ!" ಆಗ ಪ್ರಭಾಕರನು ಮುಂದುವರಿದು ಅಂದಿನ ರಾತ್ರಿಯಲ್ಲಿ ನಡೆದ ಅದ್ಭುತ ಸಂಗತಿಗಳನ್ನೆಲ್ಲ ಭಾವೂಸಾಹೇಬರಿಗೆ ವಿವರಿಸಿ ಹೇಳಿದನು.

ಬಳಿಕ ಭಾವೂಸಾಹೇಬರು:—"ಹೀಗೆಯೊ! ವೇಷಾಂತರ ಧರಿಸಿ ಬಂದ ಮಹಾರಾಜರನ್ನು ನಾನು ಆಗ ಗುರ್ತಿಸದಿದ್ದದ್ದು ನಿಜವಾಗಿಯೂ ನನ್ನ ತಪ್ಪಲ್ಲ; ಆ ಬಗ್ಗೆಯೂ ಕ್ಷಮಿಸಬೇಕೆಂದು ನಾನು ಮಹಾರಾಜರನ್ನು ಬೇಡಿಕೊಳ್ಳುತ್ತೇನೆ."

ಅದಕ್ಕೆ ಮನೋಹರನು ನಕ್ಕು:—"ನಿಜವಿದೆ. ಧಾತುವಿನ ಪಾತ್ರೆಯೂ ಮಣ್ಣಿನ ಪಾತ್ರೆಯೂ ಒಂದಕ್ಕೊಂದು ತಾಕಲಾಡಿದರೆ, ಮಣ್ಣಿನ ಪಾತ್ರೆಯೇ ಒಡೆಯಬೇಕಾಗುತ್ತದೆ! ಒಬ್ಬ ಅಳಿಯನ ಮಾವನಾಗುವುದೆಂದರೆ, ಮಾಡದಿದ್ದ ನೂರು ತಪ್ಪುಗಳನ್ನು ಪದರಿನಲ್ಲಿ ಕಟ್ಟಿಕೊಳ್ಳಲಿಕ್ಕೆ ಸಿದ್ಧವಾಗಬೇಕು, ಆದರೆ ಇನ್ನು ಆ ಅಪ್ರಿಯ ಮಾತುಗಳನ್ನು ಬಿಟ್ಟುಬಿಡೋಣ. ಪ್ರಭಾಕರಪಂತರೇ, ಇನ್ನು ಚಹದ-ಮಧುಪರ್ಕದ ಸಿದ್ಧತೆಯಾಗಲಿ!"

ಭಾ:—ಏನಂದರಿ? ಬರಿಯ ಚಹದ ಮಧುಪರ್ಕವೇನು?

ಮ:—ಈ ಹೊಸ ಮನ್ವಂತರದ ಅಳಿಯಂದಿರಿಗೆ ಚಹದ ಮಧುಪರ್ಕದ ಹೊರತು ನಡೆಯುವದಿಲ್ಲ! ಅದಕ್ಕೇನು ಮಾಡಬೇಕು? ಇಂದು ಇವರು ಮುಂಚೆಯ ದಾಗಿಲಿನಿಂದ ಹಗಲಿನಲ್ಲಿ ಬಂದರೆಂದು ಭಾವೀ ಜಾಮಾತರಿಗೆ ಈ ಚಹದ ಮಧುಪರ್ಕವಾದರೂ ದೊರಕಿತು; ಆದರೆ ಆ ರಾತ್ರಿಯಲ್ಲಿ ಪ್ರಭಾಕರಪಂತರು

ಮನೆಯೊಳಗೆ ಬಂದ ನಂತರ ಅವರಿಗೂ ವೇಷಾಂತರ ತಾಳಿದ್ದ ಮಹಾರಾಜರಿಗೂ ಅನಪೇಕ್ಷಿತವಾಗಿ ಗಂಟು ಬಿದ್ದಿದ್ದರೆ, ಅಂದು ಇವರಿಗೆ ಯಾವ ಮಧುಪರ್ಕ ಸಿಗುತ್ತಿತ್ತೆಂಬದನ್ನು ಅದಾರು ಹೇಳಬೇಕು? ಆದರೆ ಸಾಹಸದ ಹೊರತು ಶ್ರೀಯ ಪ್ರಾಪ್ತಿಯಿಲ್ಲೆಂಬದು ಗೊತ್ತಿದ್ದದ್ದೇ ಇದೆ! ಇನ್ನು ಮುಂದೆ ಮಹಾರಾಜರು ವೇಷಾಂತರ ತಾಳಿ ರಾತ್ರಿ-ಅಪರಾತ್ರಿಗಳಲ್ಲಿ ಪಟ್ಟಣದೊಳಗೆ ಸಂಚರಿಸದಂತೆ ವಿಮಲಾಬಾಯಿಯವರು ಎಚ್ಚರಪಟ್ಟಾರು. ಅದನ್ನು ನಾವೇಕೆ ಹೇಳಬೇಕು?

ಜೋ:—ಸರಿ-ಸರಿ. ಇನ್ನು ಸ್ವರಾಜ್ಯ ದಾನ ಮಾಡಿ ಪ್ರಜಾಪ್ರತಿನಿಧಿ ಸಭೆಯನ್ನು ನಾನು ನಿರ್ಮಿಸಿರುವೆನೆ. ಅದರಿಂದ ಪ್ರಜೆಗಳ ಸುಖ-ದುಃಖಗಳು ಆ ಸಭೆಯ ಮುಖಾಂತರ ಹಗಲಲ್ಲೇ ನನಗೆ ಕಂಡುಬರುವವು. ಅಂದಬಳಿಕ ರಾತ್ರಿಯಲ್ಲಿ ಗಸ್ತಿಗೆ ಹೊರಡುವ ಅವಶ್ಯಕತೆಯೇನು? ಆ ದಿನವಾದರೂ ಅಂಥ ಚಮತ್ಕಾರದ ಪ್ರಸಂಗವುಂಟಾಗಲಿಕ್ಕೆ ಕದಾಚಿತ್ ಆ ಅಮಾಸಿಯ ಮುಹೂರ್ತವೇ ಕಾರಣವಾಗಿರಲಿಕ್ಕಿಲ್ಲೆಂದು ಯಾರು ಹೇಳಬೇಕು?

ಮ:—ನಡೆದ ಸಂಗತಿಗಳ ಮೇಲಿಂದ ನಾನಂತೂ ಆ ಅಮಾಸಿಯ ಮುಹೂರ್ತಕ್ಕೆ ಹೆಸರಿಡಲಾರೆನು. ಹುಣ್ಣಿವೆಗಿಂತ ಅಮಾಸಿಗೇ ಸಮುದ್ರಕ್ಕೆ ಭರತಿಯುಂಟಾಗುತ್ತದಂತೆ! ಅಮಾಸಿಗೇ ಸಮುದ್ರದ ಮೇಲಿನ ಸೂರ್ಯ-ಚಂದ್ರರ ಆಕರ್ಷಣವು ಪರಮೋಚ್ಚ ಕೋಟಿಗೆ ಮುಟ್ಟುತ್ತದೆ.

ವಿಮಲೆಯು ಆ ವಾಕ್ಪಟುಗಳ ಬಾಯಿಗಳನ್ನು ಮುಚ್ಚುವದಕ್ಕೆಂದೋ ಏನೋ ಚಟ್ಟನೆ ಎದ್ದು ಬಂದು ಕಿಟ್ಲಿಯೊಳಗಿನ ಚಹವನ್ನು ಸುರುವಿ ಎಲ್ಲರ ಮುಂದೆಯೂ ಇಟ್ಟಳು. ಮಾಯಿೂಸಾಹೇಬರು ಉಪಾಹಾರದ ಜೀನಸಿನ ತಾಟುಗಳನ್ನಿಟ್ಟರು. ಎಲ್ಲರೂ ತಿಂದು, ಕುಡಿದು, ಅತ್ತರ ಗುಲಾಬುಗಳನ್ನು ಹಚ್ಚಿಕೊಳ್ಳುತ್ತಿರುವಷ್ಟರಲ್ಲಿ ತಾರಮನ್ನನು ಮಹಾರಾಜರ ಹೆಸರಿನ ಒಂದು ತಂತಿಯ ಕಾಗದವನ್ನು ತಂದು ಕೊಟ್ಟನು. ಅದನ್ನು ಒಡೆದು ನೋಡಲು, ಪೋಲೀಟಿಕಲ್ ಏಜಂಟರಾದ ಮಿಸ್ಟರ ಮೆಕಸ್ವಿನೀಸಾಹೇಬರು ಅದರಲ್ಲಿ ಹೀಗೆ ಬರೆದಿದ್ದರು:

“Congratulations to you on your double success. Wonder Prince must indeed be called the first Indian Raja who nobly conceived and courageously carried out the plan of giving an honest constitution to the government of his state people. God's blessings on your choosen partner, who will remain, I hope, a perpetual inspiration for good to you throughout your self-denying administration.”

“ನಿಮ್ಮ ಇಬ್ಬರಿಗೆಯ ವಿಜಯದ ಬಗ್ಗೆ ನಾನು ನಿಮ್ಮನ್ನು ಅಭಿವಂದಿಸುತ್ತೇನೆ. ನಿಮ್ಮ ಸಂಸ್ಥಾನದೊಳಗಿನ ಪ್ರಜೆಗಳಿಗೆ ಉದಾರ ಮನಸ್ಸಿನಿಂದ ರಾಜ್ಯ ಘಟನೆಗಳನ್ನು ಕೊಟ್ಟು, ಅವುಗಳನ್ನು ಧೈರ್ಯದಿಂದ ಅಮಲಿನಲ್ಲಿ ತರುವ ನೀವೇ ಮೊದಲನೇ ಹಿಂದೀ ಸಂಸ್ಥಾನಿಕರೆಂದು ನನಗನಿಸುತ್ತಿದೆ. ಅದರಿಂದ ನಿಮಗೆ **ಚೋಜಿಗರಾಯ** ಎಂಬ ಶಬ್ದವು ಚೆನ್ನಾಗಿ ಒಪ್ಪುತ್ತದೆ. ನಿಮಗೆ ಗೊತ್ತಾದ ಸಹಧರ್ಮಿಣಿಯರಿಗೆ ದೇವರ ಅನೇಕ ಧನ್ಯವಾದಗಳಿರಲಿ. ಅವರಿಂದ ನಿಮ್ಮ ಸ್ವಾರ್ಥರಹಿತವಾದ ಆಡಳಿತದಲ್ಲಿ ನಿಮಗೆ ನಿರಂತರವಾಗಿ ಇದೇ ಬಗೆಯ ಸನ್ಮಾರ್ಗದ ಪ್ರೇರಣೆಯಾಗುತ್ತಿರಲಿ!”

ಮನೋಹರ:--ಪ್ರೋ. ಎ. ರ ಆಶೀರ್ವಾದದಿಂದ ಮಹಾರಾಜರ ಸ್ವರಾಜ್ಯದಾನವು ಶಾಸ್ತ್ರೋಕ್ತವಾದಂತಾಯಿತು. ಭಾವೂಸಾಹೇಬರೇ, ಇನ್ನು ನಿಮ್ಮ ಕನ್ಯಾದಾನವಷ್ಟು ವೇದೋಕ್ತ ಆಶೀರ್ವಾದಗಳಿಂದ ಸಶಾಸ್ತ್ರವಾಗುದುಳಿಯಿತು.

ಭಾವೂಸಾಹೇಬರು:---ದೇವರ ದಯೆಯಿಂದ ಬೇಗನೆ ಅದೂ ಆದೀತು! ದೇವರ ಮಹಾಪೂಜೆಗಾಗಿ ‘ಭೋಗ’ವನ್ನರ್ಪಿಸುವ ಉಪಾಸಕನಿಗೆ ಪ್ರಸಾದವೆಂದು ದೇವರಿಂದ ಏನಾದರೂ ಸಿಕ್ಕೇ ಸಿಗುತ್ತದೆ. ಹೊಸ ಸಂಸ್ಥಾನಿಕರು ಸಂಸ್ಥಾನೀ ಪ್ರಜೆಗಳನ್ನು “ಜನತಾಜನಾರ್ದನ”ಎಂದು ತಿಳಿದು ಅವರಿಗೆ ಸ್ವರಾಜ್ಯವೆಂಬ ಬಹು ಮೂಲ್ಯ ಭೋಗವನ್ನು ಅರ್ಪಿಸಿರುತ್ತಾರೆ. ಅದಕ್ಕಾಗಿ ಅದೇ ಜನತಾಜನಾರ್ದನನ ಪ್ರಸಾದವೆಂದು ನಾನು ನನ್ನ ಪ್ರಿಯ ಕನ್ಯೆಯಾದ ವಿಮಲೆಯನ್ನು ಮಹಾರಾಜರಿಗೆ ಸಂತೋಷದಿಂದ ಅರ್ಪಿಸುತ್ತೇನೆ. ದೇವರು ಇವರಿಬ್ಬರಿಗೂ ಕೀರ್ತಿ, ಯಶ ಹಾಗು ಅಖಂಡವಾದ ಆಯುಷ್ಯ ಇವುಗಳನ್ನು ದಯಪಾಲಿಸಲಿ!



